ವಿಶೇಷ ಸಂಚಿಕೆ

# ಕನ್ನಡ ಅಧ್ಯಯನ

## ಚಳಿ-ಗಾಳಿ ಸಂಯುಕ್ತ ಸಂಚಿಕೆ

ಸಂಪಾದಕ
ರಹಮತ್ ತರೀಕೆರೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**KANNADA ADHYAYANA** (Quartely) Vol. VIII - 2 and 3
Ed. by Dr. Rahamath Tarikere

Published by
Publication Division, Prasaranga
Kannada University, Hampi
Vidyaranya 583 276

Pages : XII + 292

ತ್ರೈಮಾಸಿಕ ಪತ್ರಿಕೆ, ಸಂಪುಟ ೮, ಸಂಚಿಕೆ ೨ ಮತ್ತು ೩
(ಅಕ್ಟೋಬರ್ ೨೦೦೧ - ಮಾರ್ಚ್ ೨೦೦೨)



**ಸಲಹಾ ಸಂಪಾದಕರು**

ಡಾ. ಎಚ್ ಜೆ ಲಕ್ಕಪ್ಪಗೌಡ

**ಸಹಾಯಕ ಸಂಪಾದಕರು**

ಶಿವಾನಂದ ವಿರಕ್ತಮಠ

| | | |
|---|---|---|
| ಬಿಡಿ ಪ್ರತಿ | : | ರೂ. ೫೦.೦೦ |
| ವಾರ್ಷಿಕ ಚಂದಾ | : | ರೂ. ೧೦೦.೦೦ |
| ಪಂಚವಾರ್ಷಿಕ ಚಂದಾ | : | ರೂ. ೪೦೦.೦೦ |
| ಮುಖಪುಟ | : | ಕೆ ಕೆ ಮಕಾಳಿ |
| ಮುಖಚಿತ್ರ | : | ಆರ್ ಎಂ ಹಡಪದ್ |
| ಕೃಪೆ | : | ಲಲಿತಕಲಾ ಅಕಾಡೆಮಿ |

**ಪ್ರಕಾಶನ**

ಪ್ರಕಟಣ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಡಿ.ಟಿ.ಪಿ.**

ಸಂಧ್ಯಾ ಕಂಪ್ಯೂಟರ್ ಗ್ರಾಫಿಕ್ಸ್, ಹೊಸಪೇಟೆ

**ಮುದ್ರಕರು**

ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ

ಸೊಲ್ಲು

# ತಿಳಿವಿನ ಒಳಹರಿವಿಗಾಗಿ ಇದು

● ರಹಮತ್ ತರೀಕೆರೆ

ಕನ್ನಡ ವಿಶ್ವವಿದ್ಯಾಲಯ (೧೯೯೧, ನವೆಂಬರ್) ಆರಂಭಗೊಂಡು ಹತ್ತು ವರುಷ ತುಂಬಿವೆ. ಇದರ ನೆನಪಿಗೆ ಪ್ರಕಟವಾಗುತ್ತಿರುವ ಕನ್ನಡ ಅಧ್ಯಯನದ ವಿಶೇಷ ಸಂಚಿಕೆಯಿದು. ಇದನ್ನು ಎಂದಿನಂತೆ 'ಕನ್ನಡಿ' 'ಹಿಂದಣಹೆಜ್ಜೆ' 'ಮುಖಾಮುಖಿ' ಮುಂತಾದ ಅಂಕಣಗಳುಳ್ಳ ಮಾಮೂಲಿ ಸಂಚಿಕೆ ಮಾಡುವ ಬದಲು, ವಿಶಿಷ್ಟ ರೀತಿಯಲ್ಲಿ ರೂಪಿಸಬೇಕು ಎಂದು ಆಲೋಚಿಸಲಾಯಿತು; ಅದರಂತೆ ಕನ್ನಡ ಸಾಹಿತ್ಯ, ಕನ್ನಡ ಮಾಧ್ಯಮ ಮತ್ತು ಕನ್ನಡಿಗರ ಬದುಕಿಗೆ ಸಂಬಂಧಿಸಿದಂತೆ ನಾಲ್ಕು ವಿಷಯಗಳನ್ನು ಆರಿಸಿಕೊಂಡು, ಆಯಾ ಕ್ಷೇತ್ರಗಳಲ್ಲಿರುವವರ ಅನುಭವ ಹಾಗೂ ಚಿಂತನೆಯನ್ನು ಪಡೆದುಕೊಂಡು ಮಂಡಿಸುವುದಕ್ಕೆ ಇಲ್ಲಿ ಯತ್ನಿಸಲಾಗಿದೆ. 'ನಾನು ಮತ್ತು ನನ್ನ ಬರೆಹ' 'ಕನ್ನಡದೊಂದಿಗೆ ನನ್ನ ಅನುಸಂಧಾನ' 'ಗಡಿಬದುಕಿನ ಸಿರಿವಂತಿಕೆ ಹಾಗೂ ಕಷ್ಟಗಳು' 'ಹೊರನಾಡ ಕನ್ನಡಿಗರ ಅನುಭವ' -ಇವೇ ಆ ನಾಲ್ಕು ವಿಷಯಗಳು. ಈ ವಿಷಯಗಳು ಕ್ರಮವಾಗಿ ಸಾಹಿತ್ಯ ಸೃಷ್ಟಿಯ ಹಿನ್ನೆಲೆಗಳನ್ನು ಪಡೆಯುವ; ಕನ್ನಡ ಮಾಧ್ಯಮದಲ್ಲಿ ಅಭಿವ್ಯಕ್ತಿಯ ಬಿಕ್ಕಟ್ಟುಗಳನ್ನು ಶೋಧಿಸುವ; ದ್ವಿಭಾಷಿಕವಾದ ಗಡಿಪ್ರದೇಶಗಳಲ್ಲಿ ಬದುಕುವ ಅನುಭವವನ್ನು ಹಾಗೂ ಕರ್ನಾಟಕದಾಚೆ ವಾಸಮಾಡುವ ಕನ್ನಡಿಗರು ತಮ್ಮ ಸಾಂಸ್ಕೃತಿಕ ಗುರುತಿನ ಪ್ರಶ್ನೆಯನ್ನು ಬಗೆಹರಿಸಿಕೊಳ್ಳುವ ಬಗೆಯನ್ನು ದಾಖಲಿಸುವ ಉದ್ದೇಶವುಳ್ಳವಾಗಿವೆ.

ಅನುಭವ ಮತ್ತು ಚಿಂತನೆ ಹಂಚಿಕೊಳ್ಳುವ ಈ ಲೇಖನಮಾಲೆಯಲ್ಲಿ ಯಾರಿಗೆ ಲೇಖನ ಕೋರಬೇಕು ಎನ್ನುವುದು ಒಂದು ಪ್ರಶ್ನೆಯಾಗಿ ಎದುರಾಯಿತು. ಚರ್ಚೆಗೆಂದು ಆರಿಸಿಕೊಂಡ ವಿಷಯಗಳು ಎಷ್ಟೇ ಉಪಯುಕ್ತವಿರಲಿ, ನಾವು ಯಾರಲ್ಲಿ ಮತ್ತು ಯಾವ ರೂಪದಲ್ಲಿ ಕೇಳುತ್ತೇವೆ ಎನ್ನುವುದರ ಮೇಲೆ, ಸಿಗುವ ಜವಾಬುಗಳಲ್ಲಿ ವ್ಯತ್ಯಾಸ ಉಂಟಾಗುತ್ತದೆ. ಲೇಖಕರಾಗಿ ಒಬ್ಬ ಪುರುಷನ ಅನುಭವಕ್ಕಿಂತ ಹೆಣ್ಣಿನ ಅನುಭವ ಭಿನ್ನವಿರುತ್ತದೆ. ಕನ್ನಡದ ಮೂಲಕ ಅಭಿವ್ಯಕ್ತಿ ಮಾಡುವ ಮಾತು ಬಂದಾಗಲೂ ಅಷ್ಟೆ. ಒಬ್ಬ ವಿಜ್ಞಾನಿಯ ಅನುಭವಕ್ಕೂ ಸಮಾಜಶಾಸ್ತ್ರಜ್ಞನ ಅನುಭವಕ್ಕೂ ಭಿನ್ನತೆಯಿರಲು ಸಾಧ್ಯವಿದೆ. ಹೀಗೆಯೇ ಹೊರನಾಡ ಕನ್ನಡಿಗನಾಗಿ ಬದುಕುವ ಒಬ್ಬ ಬ್ಯಾಂಕ್ ಅಧಿಕಾರಿಗೂ ಹೋಟೆಲ್ ಮಾಣಿಗೂ ಆಗಿರುವ ಅನುಭವದಲ್ಲಿ ಅಪಾರ ಫರಕಿರುತ್ತದೆ; ನಮ್ಮ ಸಾಮಾಜಿಕ ಸ್ತರದ ವಿಭಿನ್ನ ಪದರುಗಳಲ್ಲಿ ಇರುವವರೆಲ್ಲನ್ನು ಸೇರಿಸಿದಾಗಲೇ, ಒಂದು ವಿಷಯದ ಬಹುಮುಖಿ ಆಯಾಮಗಳು ಸಿಗಲು ಸಾಧ್ಯವಿದೆ.

ಹೀಗಾಗಿ ಆದಷ್ಟೂ, ಹಲವು ಪ್ರಕಾರಗಳಲ್ಲಿ ಬರೆಯುತ್ತಿರುವ, ಅನೇಕ ವೃತ್ತಿಗಳಲ್ಲಿ

ತೊಡಗಿರುವ, ಅನೇಕ ಭಾಗಗಳಲ್ಲಿ ಬದುಕುತ್ತಿರುವ ವ್ಯಕ್ತಿಗಳನ್ನು ತಮ್ಮ ಅನುಭವ-ಚಿಂತನೆ ಹಂಚಿಕೊಳ್ಳಲು ಕೋರಲಾಯಿತು. ಒಟ್ಟು ಎಂಬತ್ತು ಜನರಿಗೆ ಕೇಳಲಾಗಿ, ಅವರಲ್ಲಿ ಸುಮಾರು ಐವತ್ತಕ್ಕೂ ಹೆಚ್ಚುಜನ ತಮ್ಮ ಬರೆಹಗಳನ್ನು ನೀಡಿದ್ದಾರೆ. ಇವರಲ್ಲಿ ಅಧ್ಯಾಪಕರು ಪತ್ರಕರ್ತರು ವಕೀಲರು ಅಧಿಕಾರಿಗಳು ವಿಜ್ಞಾನಿಗಳು ಆಕ್ಟಿವಿಸ್ಟುಗಳು ವೈದ್ಯರು ಗೃಹಿಣಿಯರು ತಂತ್ರಜ್ಞರು ಸೇರಿದ್ದಾರೆ. ಈ ಲೇಖನಗುಚ್ಛಗಳ ಒಳಗಿರುವ ಅನುಭವ ಹಾಗೂ ಚಿಂತನೆಗಳು ನಿಜಕ್ಕೂ ಅಪರೂಪದವಾಗಿವೆ. ಇವು ಸಾಹಿತ್ಯ ಚಿಂತಕರಿಗೆ, ಸಂಸ್ಕೃತಿ ಸಂಶೋಧಕರಿಗೆ, ಶಿಕ್ಷಣತಜ್ಞರಿಗೆ, ಯೋಜನೆ ರೂಪಿಸುವವರಿಗೆ, ಸಮಾಜಶಾಸ್ತ್ರಜ್ಞರಿಗೆ, ಮಾಹಿತಿಯನ್ನೂ ಒಳನೋಟಗಳನ್ನೂ ಸೂಚನೆಗಳನ್ನೂ ನೀಡಬಲ್ಲವಾಗಿವೆ. ಕರ್ನಾಟಕ ಸಂಸ್ಕೃತಿಯ ಅಧ್ಯಯನಕ್ಕೆಂದು ಹುಟ್ಟಿ, ಹಾದಿಯನ್ನು ಸೋಸುತ್ತಿರುವ, ಕನ್ನಡ ವಿವಿಗೆ ಕೂಡ ಇವು ಉಪಯುಕ್ತವಾಗಿವೆ. ಕನ್ನಡದ ಮೂಲಕವೇ ಸಂಶೋಧನೆ ಬೋಧನೆ ಬರವಣಿಗೆಯಂತಹ ಚಟುವಟಿಕೆ ಮಾಡುವುದನ್ನು ಒಂದು ತತ್ವವಾಗಿ ಪ್ರಯೋಗ ಮಾಡುತ್ತಿರುವ ಕನ್ನಡ ವಿಶ್ವವಿದ್ಯಾಲಯಕ್ಕೆ, ಕನ್ನಡಿಗರು ನೆಲೆಸಿರುವಲ್ಲೆಲ್ಲ ನಿರ್ಮಾಣಗೊಳ್ಳುವ 'ಕರ್ನಾಟಕ ಸಂಸ್ಕೃತಿ'ಯ ವಿಶಿಷ್ಟ ರೂಪಗಳ ದಾಖಲಾತಿ ಮತ್ತು ವಿಶ್ಲೇಷಣೆ ಮಾಡಲು ಹವಣಿಸುತ್ತಿರುವ ವಿಶ್ವವಿದ್ಯಾಲಯಕ್ಕೆ, ಇದರಿಂದ ಅಮೂಲ್ಯವಾದ ತಿಳಿವಿನ ಒಳಹರಿವು ಸಿಕ್ಕಿದೆ ಎಂದು ನಾನು ಭಾವಿಸುತ್ತೇನೆ.

ಇಷ್ಟಾಗಿಯೂ ಇಲ್ಲಿ ಒಂದು ಕೊರತೆ ಉಳಿದಿದೆ. ಅದೆಂದರೆ ಅನುಭವದ ಅಥವಾ 'ವಾಸ್ತವ'ದ ಇನ್ನೊಂದು ಮುಖ ಮಂಡನೆಯಾಗಿರುವುದು. ಈ ಮಾತನ್ನು ವಿವರಿಸಬೇಕು. ಲೇಖಕನಾಗಿ ಒಬ್ಬ ವ್ಯಕ್ತಿ ತನ್ನ ಅನುಭವ ಪ್ರೇರಣೆ ಏನು ಎಂದು ಹೇಳಿಕೊಳ್ಳುವಾಗ, ಅದಕ್ಕೆ ಪ್ರತಿಯಾಗಿ ತಾವು ಎಂತಹ ಸಾಹಿತ್ಯವನ್ನು ಯಾಕೆ ಓದಲು ಬಯಸುತ್ತೇವೆ ಎಂಬ ಓದುಗರ ಅನಿಸಿಕೆಯ ಇನ್ನೊಂದು ಮುಖವಿರುತ್ತದೆಯಷ್ಟೆ. ಇದೇ ರೀತಿ, ಇಂಗ್ಲಿಶ್ ಮೂಲಕ ಬೋಧಿಸುವ ಬರೆಯುವವರ ಅನುಭವದಷ್ಟೆ, ಆ ಮಾಧ್ಯಮದಲ್ಲಿ ಕಲಿಕೆ ಮಾಡುವವರ ಅನುಭವಕ್ಕೂ ಮಹತ್ವವಿದೆ. ಗಡಿಯೊಳಗೆ ಇರುವ ಕನ್ನಡಿಗರ ಅನುಭವವು 'ಸತ್ಯ'ದ ಒಂದು ಮುಖವಾದರೆ, ಇದೇ ಗಡಿಯಲ್ಲಿ ವಾಸಿಸುತ್ತಿರುವ ಮರಾಠಿಗರು ಅಥವಾ ಉರ್ದು ಭಾಷಿಕರು ಏನು ಹೇಳುತ್ತಾರೆ ಎಂಬುದು ಇನ್ನೊಂದು ಮುಖವಾಗಿದೆ. ಹೊರನಾಡಿನಲ್ಲಿ ಬದುಕುವ ಕನ್ನಡಿಗರಂತೆಯೇ ಅವರನ್ನು ಇರಿಸಿಕೊಂಡಿರುವ ಸಮಾಜಗಳು ಈ ಭಾಷಿಕ ಸಮುದಾಯದ ಬಗ್ಗೆ ಏನು ಭಾವಿಸಿವೆ ಎಂಬುದನ್ನು ತಿಳಿವ ಜರೂರಿದೆ. 'ಸತ್ಯ'ದ ಈ ಇನ್ನೊಂದು ಮುಖವು ದಾಖಲಾಗಿ ಎದುರುಬದುರಾಗಿ ಸೇರಿದಾಗಲೇ ಅನುಭವದ ಒಂದು ಸುತ್ತು ಮುಗಿಯುವುದು. ಅದು ಇಲ್ಲಿ ಸಾಧ್ಯವಾಗಿಲ್ಲ.

ದಶವಾರ್ಷಿಕ ನೆನಪಿನ ಸಂಚಿಕೆಗೆ ತಮ್ಮ ಬರೆಹಗಳನ್ನು ನೀಡಬೇಕೆಂದು ವಿನಂತಿಸಿದಾಗ, ವಿಶ್ವಾಸದಿಂದ ಒಪ್ಪಿಕೊಂಡು ಇಲ್ಲಿನ ಲೇಖನಗಳನ್ನು ಲೇಖಕರು ಬರೆದುಕೊಟ್ಟಿದ್ದಾರೆ. ತಮ್ಮ ವಿಷಯದ ಮೇಲಿನ ಬದ್ಧತೆ ಹಾಗೂ ಕನ್ನಡ ವಿಶ್ವವಿದ್ಯಾಲಯದ ಬಗೆಗಿನ ವಿಶ್ವಾಸ ಗಳಿಂದ ಅವರು ಈ ಸಹಾಯ ನೀಡಿದ್ದಾರೆ. ಅವರನ್ನು ಮೊದಲಿಗೆ ಆದರದಿಂದಲೂ ಕೃತಜ್ಞತೆಯಿಂದಲೂ ನೆನೆಯುತ್ತೇನೆ. ಮೊದಲೆರಡು ವಿಷಯಗಳಿಗೆ ಸಿಕ್ಕಷ್ಟು ಲೇಖನಗಳು

ಕೊನೆಯೆರಡು ವಿಷಯಗಳಿಗೆ ಸಿಗಲಿಲ್ಲ. ಒಪ್ಪಿಕೊಂಡ ಲೇಖಕರೆಲ್ಲ ಬರೆದಿದ್ದರೆ ಅವರು ಕೆಲಸ ಮಾಡುತ್ತಿರುವ ಕ್ಷೇತ್ರಗಳಿಗೆ ಪ್ರತಿನಿಧಿಸುವ ಅವಕಾಶ ಸಿಗುತ್ತಿತ್ತು. ಕೊನೆಯೆರಡು ವಿಷಯಗಳಿಗೆ ಲೇಖನ ಕಡಿಮೆಯಾಗಲು ಕಾರಣ, ಕನ್ನಡದಲ್ಲಿ ಬರೆಯುವವರು ಕರ್ನಾಟಕದ ಒಳಗೆ ಸಿಗುವಷ್ಟು ಜನ ಗಡಿಯಲ್ಲಿ ಮತ್ತು ಹೊರಗೆ ಸಿಗದಿರುವುದೂ ಇರಬೇಕು.

ಇಲ್ಲಿ ಶ್ರೀನಿವಾಸಜೋಕಟ್ಟೆ ಅವರ ಲೇಖನ ('ಮುಂಬಯಿಯಲ್ಲಿ ಕನ್ನಡ ಸಂಸ್ಕೃತಿ' ಎಂಬ ಹೆಸರಿನಲ್ಲಿ) ಕನ್ನಡ ಅಧ್ಯಯನಕ್ಕಾಗಿ ಬಹಳ ಮುಂಚೆ ಕೇಳಿ ಬರೆಯಿಸಿದ್ದು; ಜೆ ಎಸ್ ಸದಾನಂದ ಅವರ ಲೇಖನವು ಕೆಲವು ತಿಂಗಳುಗಳ ಹಿಂದೆ 'ಆಕೃತಿ' ಪತ್ರಿಕೆಯಲ್ಲಿ ಪ್ರಕಟವಾಗಿದ್ದು; ಈ ಎರಡೂ ಲೇಖನಗಳು ಆಯಾ ಶೀರ್ಷಿಕೆಯಡಿಯಲ್ಲಿ ಬಹಳ ಮುಖ್ಯವಾದ ವಿಚಾರಗಳನ್ನು ಹೇಳುತ್ತಿವೆ. ಆದ್ದರಿಂದ ಇಲ್ಲಿ ಅವುಗಳ ಸೇರ್ಪಡೆ ಉಚಿತವಾಗಿದೆ. ಎಚ್ ಎಸ್ ವೆಂಕಟೇಶಮೂರ್ತಿ ಹಾಗೂ ಎಚ್ ದುಂಡಿರಾಜ ಅವರು ಈ ಹಿಂದೆ ಪ್ರಕಟಿಸಿದ ಲೇಖನಗಳನ್ನೇ ಕಳಿಸಿದರು. ಅಬ್ದುಲ್ ರಶೀದ್ ಮಾತ್ರ ಲೇಖನ ಕಳಿಸದೆ, ಒಂದು ಪದ್ಯ ಕಳಿಸಿದರು. ಒಟ್ಟಾರೆ ಎಲ್ಲವೂ ಕೂಡಿ ಹೊಸಹೊಸ ಸಂಗತಿಗಳನ್ನು ತಿಳಿಸುವ, ಹೊಸ ಚಿಂತನೆಗೆ ಪ್ರೇರಿಸುವ ಮತ್ತು ಸಂವಾದಕ್ಕಾಗಿ ಆಹ್ವಾನಿಸುವ ಕೆಲಸವನ್ನು ಮಾಡುತ್ತಿವೆ. ಇವು ಪ್ರಧಾನವಾಗಿ ವೈಯಕ್ತಿಕ ಅನುಭವ ಕಥನಗಳೂ ಆಗಿರುವುದರಿಂದ, ತಮಗೆ ತಾವೇ ಸ್ವತಂತ್ರವಾದ ಆಪ್ತವಾದ ಬರೆಹಗಳೂ ಆಗಿವೆ.

ಇಲ್ಲಿನ ಬಹುತೇಕ ಲೇಖನಗಳಿಗೆ ತಲೆಬರೆಹಗಳನ್ನು ಪತ್ರಿಕೆಯೇ ಕೊಟ್ಟಿದೆ. ಲೇಖನದೊಳಗಿಂದ ಮಹತ್ವದ್ದೆನಿಸಿದ ಹೇಳಿಕೆಯನ್ನು ತೆಗೆದು ತಲೆಬರೆಹವಾಗಿಸಿದೆ. ಈ ತಲೆಬರೆಹಗಳು ಆಯಾ ಲೇಖನದ ಚಿಂತನೆಯನ್ನು ಇಡಿಯಾಗಿ ಒಳಗೊಂಡಿಲ್ಲ, ನಿಜ. ಆದರೆ ಸಾರರೂಪದಲ್ಲಿ ಆಯಾ ಲೇಖನವನ್ನು ಪ್ರತಿನಿಧಿಸುತ್ತಿವೆ. ಓದುಗರು ತಲೆಬರೆಹಗಳ ಮೂಲಕವೇ ಲೇಖನಗಳ ಬಗೆಗಿನ ತಮ್ಮ ಅಭಿಪ್ರಾಯವನ್ನು ರೂಢಿಸಿಕೊಳ್ಳುವುದಿಲ್ಲ ಎಂದು ಭಾವಿಸಿರುವೆ.

ತಿಳಿವು ಹೇಗಾದರೂ ಸರಿ, ನಮ್ಮೊಳಗೆ ಹರಿವು ಮಾಡುತ್ತಿರಬೇಕೆಂಬ ಹಂಬಲದಿಂದ ರೂಪಿಸಿರುವ 'ಕನ್ನಡ ಅಧ್ಯಯನ'ದ ಈ ವಿಶೇಷ ಸಂಚಿಕೆ ಓದುಗರಿಗೆ ಪ್ರಿಯವಾಗುವುದು ಎಂದು ನಂಬಿದ್ದೇನೆ. ಅವರು ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಿದರೆ, ಮುಂದಿನ ಸಂಚಿಕೆಯಲ್ಲಿ ಅವನ್ನು ಪ್ರಕಟಿಸಿ ಚರ್ಚೆಗೆ ಆಸ್ಪದ ಮಾಡಬಹುದು. ಈತನಕ 'ಕನ್ನಡ ಅಧ್ಯಯನ'ದಲ್ಲಿ ಪ್ರತಿಕ್ರಿಯೆಗೆಂದು ಪ್ರತ್ಯೇಕವಾದ ಕಾಲಮ್ಮು ಇರಲಿಲ್ಲ. ಮುಂದಿನ ಸಂಚಿಕೆಯಿಂದ ಅದನ್ನು ತೆರೆಯಬಹುದು. ಲೇಖನಗಳು ಚರ್ಚಾತೀತವೂ ಆಗಬಾರದು, ಚರ್ಚಾರ್ಹವಲ್ಲ ಎಂದೂ ಅನಿಸಿಕೊಳ್ಳಬಾರದು; ವಿಶೇಷ ಸಂಚಿಕೆಯ ಲೇಖನಗಳು ಖಂಡಿತವಾಗಿ ಚರ್ಚೆಗೆ ಎಳಸುವಷ್ಟು ಶಕ್ತವಾಗಿವೆ. ಭಿನ್ನಾಭಿಪ್ರಾಯ ಚರ್ಚೆ ಸಂವಾದಗಳಿಲ್ಲದ ಬೌದ್ಧಿಕ ಚಟುವಟಿಕೆ ಒಂದು ಸಾವಿದ್ದಂತೆ. ಬದುಕಲು ಮಾಡುವ ಮಿಸುಕಾಟ, ಲೋಕದ ಲಕ್ಷಾಂತರ ವಿದ್ಯಮಾನಗಳ ನಡುವೆ ಎಷ್ಟೇ ಸಣ್ಣದಿರಲಿ, ಅದಕ್ಕೆ ಮಹತ್ವ ಇದ್ದೇ ಇರುತ್ತದೆ. ಕನ್ನಡ ಅಧ್ಯಯನ ಅಂತಹ ಸಣ್ಣ ಮಿಸುಕಾಟವಾಗಿದೆ.

**ಸಂಪಾದಕ**

# ಪರಿವಿಡಿ

**ಭಾಗ ಎರಡು: ಕನ್ನಡದೊಂದಿಗೆ ನನ್ನ ಅನುಸಂಧಾನ**

**ಭಾಗ ಮೂರು: ಗಡಿಬದುಕಿನ ಸಿರಿವಂತಿಕೆ ಹಾಗೂ ಕಷ್ಟಗಳು**

**ಭಾಗ ನಾಲ್ಕು: ಹೊರನಾಡ ಕನ್ನಡಿಗರ ಅನುಭವ**

ಆಯ್ದ ಕೆಲವು ಲೇಖಕರಿಗೆ ತಮ್ಮ ಅನುಭವವನ್ನು 'ನಾನು ಮತ್ತು ನನ್ನ ಬರೆಹ' ಎಂಬ ಹೆಸರಲ್ಲಿ ಹಂಚಿಕೊಳ್ಳಬೇಕೆಂದು ಕೋರಿ ಪಡೆದ ಲೇಖನಗಳಿವು. ಅವರು ಬರೆಯುವ ಹಿಂದಿನ ಪ್ರೇರಣೆಗಳು ಯಾವುವು? ಸಾಹಿತ್ಯ ಸೃಷ್ಟಿಸುವ ಹೊತ್ತಿನ ಅವರ ತಲ್ಲಣ ಬಿಕ್ಕಟ್ಟು ಖುಷಿ ಎಂಥವು? ಬರೆಹ ಪ್ರಕಟವಾದ ಬಳಿಕ ಓದುಗಲೋಕದ ಸಂಬಂಧ ಎಂತಹದು?' ಎಂಬ ಪ್ರಶ್ನೆಗಳನ್ನಿಟ್ಟು ಬರೆಯಲು ಕೋರಲಾಗಿತ್ತು. ಈ ಬಗೆಯ ಬರೆಹಗಳು ಕನ್ನಡಕ್ಕೆ ಹೊಸವೇನಲ್ಲ. 'ನಾನೇಕೆ ಬರೆಯುತ್ತೇನೆ?' ಎಂಬ ಹೆಸರಿನಲ್ಲಿ ಹಿಂದಿನಿಂದಲೂ ಪ್ರಕಟವಾಗುತ್ತಾ ಬಂದಿವೆ. ಸಾಹಿತ್ಯ ಸಮ್ಮೇಳನಗಳಲ್ಲಿ ಈ ಉಪನ್ಯಾಸಗಳು ಸಾಕಷ್ಟು ಜನಪ್ರಿಯವಾಗಿವೆ. ಆತ್ಮಕಥನಾತ್ಮಕವಾದ ಈ ಬಗೆಯ ಬರೆಹಗಳನ್ನು ಸಾಹಿತ್ಯಕ ಪತ್ರಿಕೆಗಳು ಈಗಲೂ ಬರೆಯಿಸಿ ಪ್ರಕಟಿಸುತ್ತಾ ಬಂದಿವೆ.

ಜಾಗತೀಕರಣದ ಈ ಸಂದರ್ಭದಲ್ಲಿ ನಮ್ಮ ಲೇಖಕರು ಒಟ್ಟಾರೆ ಬರೆಹದ ಮೇಲೇ ಅನೇಕ ಆತಂಕಗಳನ್ನು ಪ್ರಕಟಿಸುತ್ತಿರುವರು. 'ತಮ್ಮ ಬರೆಹಕ್ಕೆ ಓದುಗರೇ ಇಲ್ಲ, ಹೊಸಮಾಧ್ಯಮಗಳ ಭರಾಟೆಯಲ್ಲಿ ಸಾಹಿತ್ಯ ಓದುವಿಕೆಯೇ ಕಡಿಮೆಯಾಗಿದೆ, ಈ ಹೊತ್ತು ಕನ್ನಡ ಸಾಹಿತ್ಯದಲ್ಲಿ ನಿಷ್ಕ್ರಿಯತೆಯ ಮಂಕು ಕವಿದಿದೆ, ಅದು ಚಳುವಳಿಗಳ ಕಾವು ಕಳೆದುಕೊಂಡು ಧ್ಯಾನಸ್ಥವಾಗಿದೆ, ದೊಡ್ಡಪ್ರತಿಭೆಗಳೇ ಈಗ ಇಲ್ಲವಾಗಿವೆ' ಇತ್ಯಾದಿ ಮಾತುಗಳು ಕೇಳಿಬರುತ್ತಿವೆ. ಇಂತಹ ಹೊತ್ತಲ್ಲಿ ಸಾಹಿತ್ಯ ಕುರಿತ ಅವರ ಅಭಿಪ್ರಾಯಗಳನ್ನು ತಿಳಿಯುವುದು ಅಗತ್ಯವೆನಿಸಿತು.

ಇಲ್ಲಿ 'ಸಾಹಿತ್ಯ' ಎಂದರೆ ಎಲ್ಲ ಬಗೆಯ ಬರೆಹ ರೂಪಗಳು ಎಂದೇ ತಿಳಿಯಬೇಕು. ಕನ್ನಡದಲ್ಲಿ 'ಸಾಹಿತ್ಯ' ಎಂದರೆ ಕಾವ್ಯ ಕತೆ ಕಾದಂಬರಿ ಮುಂತಾದ ಕೆಲವು ಪ್ರಕಾರಗಳಿಗೆ ಸೀಮಿತಗೊಳಿಸಿ, ಅವನ್ನು ಮಾತ್ರ 'ಸೃಜನಶೀಲ'ವೆಂದು ನಂಬಿಸಿ, ಅದರ ವ್ಯಾಖ್ಯೆಯನ್ನೆ ಕುಬ್ಜಗೊಳಿಸಲಾಗಿದೆ. ಎಷ್ಟೋ ಸಲ ಮಾನ್ಯತೆ ಪಡೆದ ಪ್ರಕಾರಗಳಲ್ಲಿ ಬರೆಯದವರನ್ನು ಲೇಖಕರೆಂದು ಪರಿಗಣಿಸುವುದೇ ಇಲ್ಲ. ಇದೊಂದು ತರಹ ಸಾಹಿತ್ಯಕ ಜಾತಿಪದ್ಧತಿ. ಯಾವುದೇ ಒಂದು ಭಾಷೆಯಲ್ಲಿ, ಆ ಭಾಷಿಕ ಸಮುದಾಯದ ಆಲೋಚನೆಯನ್ನು ಪ್ರಭಾವಿಸುವ ಅನೇಕ ಬಗೆಯ ಬರೆಹಗಾರರು ಇರುತ್ತಾರೆ. ಅವರು ತಮ್ಮ ಬರೆಹದ ಮೂಲಕ ಓದುಗರ ಅನೇಕ ಅಗತ್ಯಗಳನ್ನು ಪೂರೈಸುವ ಕೆಲಸ ಮಾಡುತ್ತಿರುತ್ತಾರೆ. ಎಲ್ಲ ಬಗೆಯ ಬರೆಹಗಳೂ ಮಾನ್ಯವೇ. ಅವು ಯಾವ ಪ್ರಕಾರದಲ್ಲಿವೆ ಎನ್ನುವುದಕ್ಕಿಂತ ಯಾವ ಸ್ವರೂಪದಲ್ಲಿದೆ ಎಂಬುದು ಮುಖ್ಯ.

ಹೀಗೆ ನಂಬಿ, ತಮ್ಮ ಅನುಭವ- ಚಿಂತನೆ ಹಂಚಿಕೊಳ್ಳಲು, ಪ್ರತಿಷ್ಠಿತ ಪ್ರಕಾರಗಳಲ್ಲಿ ಕೆಲಸಮಾಡುವ ಲೇಖಕರನ್ನು ಮಾತ್ರವಲ್ಲದೆ, ವಾಚಕರವಾಣಿ ಪತ್ರ ಬರೆಯುವವರಿಂದ ಹಿಡಿದು ಪತ್ರಕರ್ತರು 'ಜನಪ್ರಿಯ' ಲೇಖಕರ ತನಕ ಕೇಳಲಾಯಿತು. ಬರೆಹದ ವ್ಯಾಖ್ಯೆಯನ್ನು ಹೀಗೆ ವ್ಯಾಪಕಗೊಳಿಸಿದ್ದರಿಂದ, ಕನ್ನಡದಲ್ಲಿ ಬರೆಹ ಮಾಡುತ್ತಿರುವ ಕೆಲವಾದರೂ

ಒಲವುಗಳನ್ನು ಅರಿಯಲು ಸಾಧ್ಯವಾಗಿದೆ. (ಆದರೂ ಕವಿಗಳ ಡಾಮಿನೇಶನ್ ತಪ್ಪಿಸ ಲಾಗಿಲ್ಲ.) ಅವಸರದ ತೂಗುಗತ್ತಿಯ ಕೆಳಗೆ ಕುಳಿತು ಪತ್ರಿಕೆಗಳಲ್ಲಿ ಬರೆಯುವವರು, ವೈಯಕ್ತಿಕ ಅನುಭವವನ್ನು ತಣ್ಣಗೆ ಶೋಧಮಾಡಬೇಕು ಎನ್ನುವವರು, ಮನೆಯಲ್ಲಿ ಹೊತ್ತುಹೋಗದ ಕಾರಣಕ್ಕಾಗಿ ಬರೆಯುವ ಮಹಿಳೆಯರು, ಸಾಹಿತ್ಯ ಕುರಿತು ಹೇಗೆಲ್ಲಾ ಚಿಂತಿಸುತ್ತಾರೆ ಎನ್ನುವ ಕುತೂಹಲಕರ ಅಂಶಗಳು ಇಲ್ಲಿ ಪ್ರಕಟವಾಗಿವೆ.

ಇಲ್ಲಿ ಗಮನಿಸಬೇಕಾದ ಕೆಲವು ಎರಡು ಸಂಗತಿಗಳಿವೆ. ೧) ಹೆಚ್ಚಿನವರು ತಮ್ಮ ಬಾಲ್ಯದ ಅನುಭವಗಳಿಗೆ ಹೋಗಿ, ಕಷ್ಟದ ದಿನಗಳನ್ನು ನೆನಪಿಸಿಕೊಂಡು, ಅಲ್ಲಿ ಬರೆಹದ ಪ್ರೇರಣೆಗಳನ್ನು ಗುರುತಿಸಿಕೊಂಡಿರುವುದು. ೨) ಕೆಲವರು ತಾವು ವಿಶಿಷ್ಟ ವ್ಯಕ್ತಿತ್ವದವರಾಗಿದ್ದರಿಂದ ಲೇಖಕರಾಗಲು ಸಾಧ್ಯವಾಯಿತು ಎಂದು ಸೂಚ್ಯವಾಗಿ ಪ್ರಕಟಿಸಿರುವುದು. ಬರೆಹವೆಂಬ ಕ್ರಿಯೆಗೆ ಈ ಬಗೆಯ 'ಅಹಂಕಾರ' 'ಆತ್ಮರತಿ' ಅನಿವಾರ್ಯವೋ ಅಥವಾ ಅದು ನಮ್ಮ ಸಮಾಜ ಸಂದರ್ಭದಲ್ಲಿ ಮೂಡಿರುವ ವಿಶಿಷ್ಟ ವಿದ್ಯಮಾನವೋ, ಚರ್ಚಿಸುವ ಅಗತ್ಯವಿದೆ. ೩) ಲೇಖಕರು ಓದುಗರ ಸಂಬಂಧದಲ್ಲಿ ತಮಗಾದ ಅನುಭವಗಳನ್ನು ಕೆಲವೇ ಲೇಖಕರು ಹೇಳಿಕೊಂಡಿರುವುದು. ೪) ತಮ್ಮ ಬರೆಹವನ್ನು 'ವೈಯಕ್ತಿಕವಾದ ಹುಡುಕಾಟ'ಕ್ಕೆ ಬಳಸುತ್ತೇವೆ ಎನ್ನುವ ಹಾಗೂ 'ಸಮುದಾಯದ ಸುಖದು:ಖಗಳ ಮಂಡನೆ'ಗೆ ಬಳಸುತ್ತೇವೆ ಎನ್ನುವ ಲೇಖಕರ ನಡುವಿನ ವ್ಯತ್ಯಾಸ ಎದ್ದು ಕಾಣುವುದು. ಈ ಎರಡು ಬಣಗಳು ನಿರ್ದಿಷ್ಟ ಸಾಮಾಜಿಕ ಸ್ತರಕ್ಕೆ ಸೇರಿದವರಾಗಿರುವುದೂ ಮಾರ್ಮಿಕವಾಗಿದೆ. ೫) ಬರವಣಿಗೆಯ ಬಹುತೇಕ ಹಿನ್ನೆಲೆಗಳು ನೋವು ಮತ್ತು ಅಪಮಾನದ ನೆನಪುಗಳಿಂದ ಕೂಡಿರುವುದು.

ಒಂದರ್ಥದಲ್ಲಿ ಇಂತಹ ಬರೆಹಗಳು ಅನಗತ್ಯ ಅನಿಸಬಹುದು. 'ಲೇಖಕರು ಯಾಕೆ ಅಥವಾ ಹೇಗೆ ಬರೆಯುತ್ತಾರೆ ಎಂಬುದನ್ನು ತಮ್ಮ ಕೃತಿಗಳ ಮೂಲಕವೇ ಪ್ರಕಟಮಾಡಿರುವಾಗ, ಬೇರೆಯಾಗಿ ಹೇಳಿಸುವುದರಿಂದ ಏನು ಪ್ರಯೋಜನ?' -ಒಂದು ವೇಳೆ ಪ್ರತ್ಯೇಕವಾಗಿ ತಮ್ಮ ಬರೆಹದ ಬಗ್ಗೆ ಹೇಳಿದರೂ ಓದುಗರು ಅದನ್ನು ಯಾಕೆ ಒಪ್ಪಬೇಕು? ಈ ಪ್ರಶ್ನೆಗಳು ಹುಟ್ಟಿದರೆ ತಪ್ಪಲ್ಲ. ಲೇಖಕರು ಅನುಭವವಾಗಿ ಅಥವಾ ಪ್ರಣಾಳಿಕೆಯಾಗಿ ಹೇಳಿರುವ ಈ ಮಾತುಗಳನ್ನು ಅವರ ಕೃತಿ ಮೀರಿರಬಹುದು. ಆದರೂ ಈಬಗೆಯ ಬರೆಹಗಳಿಗೆ ಸ್ವತಂತ್ರವಾದ ಅಸ್ತಿತ್ವವಿದೆ. ಇವು ಕನ್ನಡದಲ್ಲಿ ಸಾಹಿತ್ಯ ಸೃಷ್ಟಿಯ ಹಿಂದಿನ ಕುತೂಹಲಕರ ಹಿನ್ನೆಲೆಗಳನ್ನು ದೊರಕಿಸಿಕೊಡುತ್ತವೆ. ನಮ್ಮ ಸಮಾಜದಲ್ಲಿ ಲೇಖಕರು-ಕಲಾವಿದರು ಎಂದರೆ, ವಿಶಿಷ್ಟ ವ್ಯಕ್ತಿಗಳು ದಾರ್ಶನಿಕರು ಸೃಜನಶೀಲ ವ್ಯಕ್ತಿಗಳು ಎಂಬ ವಿಶಿಷ್ಟೀಕರಣದ ಗ್ರಹಿಕೆ ಆಳವಾಗಿ ಬೇರೂರಿದೆ. ಇದು ಕೆಲವೊಮ್ಮೆ ಅತಿರೇಕದಲ್ಲೂ ವ್ಯಕ್ತವಾಗುತ್ತದೆ. ಇಂತಹ ಹೊತ್ತಲ್ಲಿ ಬರೆಹ ಹುಟ್ಟಿಗೆ ಕಾರಣವೂ ಅದರ ಪ್ರಸಾರಕ್ಕೆ ಗುರಿಯೂ ಆಗಿರುವ ಪರಿಸರದೊಂದಿಗೆ, ಲೇಖಕ ಸಮುದಾಯವು ಎಂತೆಂತಹ ಸಂಬಂಧ ಹಾಗೂ ನಂಬಿಕೆ ಇಟ್ಟುಕೊಂಡಿದೆ ಎಂಬುದರ ಒಂದು ಝಲಕು ಇಲ್ಲಿ ಸಿಗುತ್ತಿದೆ. ಕೃತಿಗಳನ್ನು ಓದುವಾಗ ಈ ಲೇಖನಗಳು ಸಹಾಯಕವಾಗಬಹುದು. ಆದರೆ ಇವನ್ನಿಟ್ಟುಕೊಂಡೇ ಕೃತಿ ಪ್ರವೇಶಿಸುವ ಹಠಮಾಡಬೇಕಿಲ್ಲ.

**- ಸಂಪಾದಕ**

# ಹೇಗೆ ಬರೆಯದೇ ಇರುವುದು?

● ಅಬ್ದುಲ್ ರಶೀದ್

ಇದನ್ನು ಬಹುಶಃ ಪದ್ಯದಲ್ಲಿ ಹೇಳುವುದು ಒಳ್ಳೆಯದು
ಗದ್ಯ ಅಷ್ಟು ಸರಳವಲ್ಲ ಮತ್ತು ಕಟ್ಟುಪಾಡು.
ಹಸಿವು, ಮೈಥುನ ಅಥವಾ ಸಹಜ ತಿಳುವಳಿಕೆಯಷ್ಟೆ ಕಠಿಣ.

ಏನನ್ನೂ ಹೇಳದಿರುವುದು, ಹೇಳಿದ್ದು ಏನೆಂದು
ಅರಿಯದೇ ಇರುವುದು, ಮಗುವೊಂದರ ಬೆರಳನ್ನು
ಕೈಯೊಳಗೆ ಪಡೆಯುವುದು, ಎಲ್ಲವೂ ಎಷ್ಟು ಗಂಭೀರ.

ಎಷ್ಟೊಂದು ಸುಖ ಮತ್ತು ನಿರಾಳ ಸುಮ್ಮನಿರುವುದು.

ಕನ್ನೆಯ ಲಜ್ಜೆಯ ತಡೆದು ನಿಲ್ಲಿಸುವಷ್ಟೇ ವಿಷಮ ಅವಳ
ಆತುರವ ಕಡೆಗಣಿಸುವುದು, ದೈವದ ನೆರಳಿನಂತಲ್ಲ
ಅದರ ದೇಹದ ವೈಖರಿ. ಅದನು ವಿವರಿಸುವುದು
ಎಷ್ಟು ಗಹನ ಯಾವ ಕಾರಣಕ್ಕೂ ಬೇಡವಾದದ್ದು.

ದೈವದ ನಿಜದ ಹುಟ್ಟಿನ ದೈನಂದಿನ ಪಾಡೇ
ನಗು ತರಿಸುವುದು. ಅದರ ಅಟಾಟೋಪ,
ಮಣಿಯುವಂತೆ ಹಲ್ಲು ಕಡಿದು ಅಳುವ
ಹಾಹಾಕಾರ ಮತ್ತು ಎಲ್ಲಕ್ಕು ಮಿಗಿಲು
ಅದರ ವೈಯ್ಯಾರ. ಸಾಕು ಹೋಗೆನಿಸುವುದು

ಬರೆಯುವುದು, ಪ್ರತಿಮೆಗಳ ಕಡೆಯುವುದು,
ಇರುವುದ ಹಾಗೇ ಹೇಳುವುದು,
ಕಣ್ಣಲ್ಲಿ ಕಾಡಿಗೆ ಬಿಡಿಸುವುದು, ಕುಣಿವ ಭುಜದ ಒಂದು ಸನ್ನೆ
ಕಿವಿ ಕೆಂಪೇರುವುದು ಯಾವುದು
ದೈವದ ಅಣತಿಯಂತೆ ಅಲ್ಲದಿರುವುದು?

ಹೇಗೆ ಬರೆಯದೇ ಇರುವುದು?



# ಇರಿಯದಂಥ ಬರೆಹ ಬರೆಯಬೇಕಾಗಿದೆ

● ಅಮರೇಶ ನುಗಡೋಣಿ

ನಾನು ಮತ್ತು ನನ್ನ ಬರೆಹ ಕುರಿತು ಯಾವತ್ತೂ ವಿಚಾರ ಮಾಡಿಲ್ಲ. ವಿಚಾರಮಾಡಿ ಬರೆದಿರುವ ಬೇರೆಯವರ ಲೇಖನಗಳನ್ನು ಗಮನಿಸಿದಾಗಲೂ ನನಗೆ ಇದು ಕಾಡಿಲ್ಲ. ಈಗ ಮೊದಲ ಸಲ ಯೋಚನೆ ಮಾಡುತ್ತಿದ್ದೇನೆ.

**ಚಿಕ್ಕಂದಿನಲ್ಲಿ ನಮ್ಮ ಊರು-ಮನೆ**

ನಮ್ಮ ಊರು ಬಾಳ ಸಣ್ಣದು. ಲಿಂಗಾಯತರು, ಕಾಟಗೀರರು ಮತ್ತು ಮಾದಿಗರು ಈ ಮೂರು ಗುಂಪಿನವರು ಮಾತ್ರ ಊರಲ್ಲಿದ್ದರು. ಊರು-ಕೇರಿ ಎಂಬ ಭಾಗ ಊರಲ್ಲಿತ್ತು. ಕಾಟಗೀರರು ಎಂಬ ಪದದ ಅರ್ಥ ನನಗೆ ಈಗಲೂ ಗೊತ್ತಿಲ್ಲ. ಬ್ಯಾಡರು, ವಡ್ಡರು, ಕುರುಬರು ಮತ್ತು ಕಸುಬಿನವರನ್ನು ಸೇರಿಸಿ 'ಕಾಟಗೀರ ಮಂದಿ' ಎಂದು ಅನ್ನುತ್ತಾರೆ. ಜಂಗಮರು, ಬ್ರಾಹ್ಮಣರು ಮತ್ತು ಮುಸ್ಲಿಮರು ನಮ್ಮೂರಲ್ಲಿ ಇರಲಿಲ್ಲ. (ಈಗಲೂ ಬ್ರಾಹ್ಮಣರಿಲ್ಲ). ಕಾಟಗೀರು ಮಂದಿಗೆ ತಕ್ಕಮಟ್ಟಿಗೆ ಭೂಮಿಯಿತ್ತು. ಆದರೂ ಲಿಂಗಾಯಿತರ ಮನೆತನಗಳಲ್ಲಿ ದುಡಿಯುತ್ತಿದ್ದರು. ಮಾದರ ಮಂದಿ ಮಾತ್ರ ಲಿಂಗಾಯಿತರ ಮನೆಗಳಲ್ಲಿ ದುಡಿಯುತ್ತಿದ್ದರು. 'ಮನೆ ಮಾದಿಗರಾಗಿ' ಇರುತ್ತಿದ್ದರು. ಈಗ ಇದು ಕಮ್ಮಿಯಾಗಿದೆ. ಜಂಗಮರು, ಅಗಸರು, ಕುಂಬಾರರು, ಕಂಬಾರರು ನಮ್ಮೂರಲ್ಲಿ ಇರಲಿಲ್ಲ. ಅಕ್ಕಪಕ್ಕದ ಊರುಗಳಿಂದ ಬಂದು ಕೆಲಸಮಾಡಿ ಕೊಡುತ್ತಿದ್ದರು. ಜಂಗಮರು ಪಕ್ಕದ ಗೊಲದಿನ್ನಿ ಎಂಬ ಊರಿನಿಂದ ಅಮವಾಸೆ,ಹುಣ್ಣಿಮೆ, ಹಬ್ಬ ಕಾರಣ ಕತೆಗಳಿಗೆ ತಪ್ಪದೇ ಬಂದು 'ಭಿನ್ನ ತೀರಿಸಿ - ದಕ್ಷಿಣೆ ಪಡೆದು' ಹೋಗುತ್ತಿದ್ದರು. ನಮ್ಮ ಅಪ್ಪ ಕೆಲ ಕಸುಬುದಾರರಿಗೆ ನಮ್ಮೂರಲ್ಲೇ ಬಂದಿರಲು ಹೇಳುತ್ತಿದ್ದ. ಅಕ್ಕಪಕ್ಕದ ಊರುಗಳಿಗೆ ಬಂಡಿದಾರಿಗಳೇ ಹೆಚ್ಚು. ಒಂದು 'ಡಾಂಬರು ಸಡಕು' ಮಾತ್ರ ಊರಿಂದ ಒಂದು ಹರದಾರಿ ದೂರದಲ್ಲಿತ್ತು. ಅದು ರಾಯಚೂರಿನಿಂದ ಭಾವಣಿ(ಲಿಂಗಸೂಗೂರು)ಗೆ ಹೋಗುತ್ತಿತ್ತು. ನಮ್ಮೂರಿನಿಂದ ಇದೇ ಸಡಕಿನ ಮೇಲೆ ಎಡಕ್ಕೆ ಕವಿತಾಳ, ಬಲಕ್ಕೆ ಸಿರವಾರ ಎಂಬ ದೊಡ್ಡ ಊರುಗಳಿವೆ. ನಮ್ಮೂರಿನ ಮಂದಿ ಅಲ್ಲಿ ಸಂತೆ ಮಾಡುತ್ತಿದ್ದರು. ದೊಡ್ಡ ಕೆಲಸಗಳಿದ್ದರೆ ರಾಯಚೂರಿಗೆ ಹೋಗುತ್ತಿದ್ದರು. ಊರಲ್ಲಿ ಜಗಳಜೂಟಿಗಳು ಕಮ್ಮಿ. ಇದ್ದರೂ ಸಣ್ಣವು. ಅಪ್ಪ ಬಗೆ ಹರಿಸುತ್ತಿದ್ದ. ಕೇರಿಯಲ್ಲಿ ರಾತ್ರಿ ಜಗಳ ಕಾಣಿಸಿಕೊಂಡರೂ ಬೆಳಗಾಗುವ ಹೊತ್ತಿಗೆ ತಣ್ಣಗಾಗಿರುತ್ತಿದ್ದವು. ಜಗಳ ಮುಂದುವರಿದರೆ ಅಪ್ಪನಲ್ಲಿಗೆ ಕೇರಿ ಮಂದಿ ಬರುತ್ತಿದ್ದರು. ಊರು-ಕೇರಿ ಮನೆಮಂದಿಗಳು ದೂರದ ಊರುಗಳಿಗೆ ಮದುವೆ ಸಂಬಂಧಗಳನ್ನು ಬೆಳೆಸುತ್ತಿರಲಿಲ್ಲ. ಎರಡು ಮೂರು ಹರದಾರಿ ಒಳಗೇ ಸಂಬಂಧ ಮಾಡುತ್ತಿದ್ದರು. ಒಂದೊಂದು ಸಲ ಒಂದೇ ಊರಿಗೆ ನಮ್ಮೂರಿನ ಹೆಣ್ಣುಮಕ್ಕಳು ಮದುವೆಯಾಗಿ ಹೋಗುತ್ತಿದ್ದರು. ಮಾಡಗಿರಿ ಎಂಬ ಊರಿಗೆ

ನಮ್ಮೂರಿನ ಹೆಣ್ಣುಗಳನ್ನು ಹೆಚ್ಚು ಕೊಟ್ಟಿದ್ದರು. ನಮ್ಮ ಅಕ್ಕನನ್ನು ಅದೇ ಊರಿಗೆ ಕೊಟ್ಟಿದ್ದೆವು. ಅಕ್ಕನನ್ನು ಗಂಡನ ಮನೆಗೆ ಬಿಡಲು ಬಂಡಿಯಲ್ಲಿ ಹೋಗುತ್ತಿದ್ದೆ. ಆಗ ನಮ್ಮೂರಿನ ಹೆಣ್ಣುಮಕ್ಕಳ ಮನೆಗಳಿಗೆಲ್ಲಾ ಹೋಗಿ ಮಾತಾಡಿಸಿ ಬರಬೇಕಾಗುತ್ತಿತ್ತು. ಕೇರಿಯ ಹೆಂಗಸರು ಮಾತ್ರ ಮನೆಗೆ ಬಂದು ಮಾತಾಡಿಸಿ ಹೋಗುತ್ತಿದ್ದರು.

ನಮ್ಮೂರಿಗೆ 'ಊರಾಡಲು' ಅನೇಕ ಬಗೆಯ ಜನರು ಬರುತ್ತಿದ್ದರು. ತತ್ವಪದ, ದಾಸರ ಪದಗಳು ಹಾಡುವವರು, ಫಕೀರರು, ಬುಡುಬುಡುಕೆ, ಗಂಟೆಯ್ಯಾ, ಜೋಗತಿಯರು, ವೇಷಗಾರರು, ಕರಡಿ ಆಡಿಸುವವರು, ಕೊರವಂಜಿಯವರು, ಬಾಲನಾಗಮ್ಮ ಮುಂತಾದ ಬಹು ಬಗೆಯವರು ಬೆಳಿಗ್ಗೆಯಿಂದ ಸಂಜೆವರೆಗೆ ಮನೆಮನೆ ತಿರುಗುತ್ತಲೇ ಇರುತ್ತಿದ್ದರು. ರಾತ್ರಿಯಲ್ಲಿಯೂ ದೇವಸ್ಥಾನ, ಗುಡಿ, ಅಗಸೆ ಬಳಿ ಗುಂಪುಗೂಡಿ ಊರು-ಕೇರಿಯವರು ಹಾಡಿಸುತ್ತಿದ್ದರು. ಏಕನಾದ ಕಾಯಿ, ತಂಬೂರಿ, ಚೌಡಿಕೆ ವಾದ್ಯಗಳ ಜತೆ ಹಾಡುಗಳು ಯಾವಾಗಲೂ ಊರು-ಕೇರಿಯಲ್ಲಿ ಕೇಳುತ್ತಲೇ ಇದ್ದವು. 'ಊರಾಡಲು' ಬಂದವರೆಲ್ಲ ಮನೆ ಮನೆಗಳಲ್ಲಿ ಧಾನ್ಯ, ಬಟ್ಟೆಬರೆ, ರೊಟ್ಟಿ ಪಡೆಯುತ್ತಿದ್ದರು. ಇವರನ್ನು 'ಭಿಕ್ಷುಕರು' ಎಂದು ಕರೆಯುತ್ತಿರಲಿಲ್ಲ. ನಮ್ಮ ಮನೆಯಲ್ಲಿ 'ಊರಾಡಲು' ಬರುವವರಿಗಾಗಿಯೇ ನೀಡಲು ಜ್ವಾಳ, ಸಜ್ಜೆ, ನವಣೆ, ಅಕ್ಕಿ, ಭತ್ತ ಮುಂತಾದ ಯಾವುದಾದರೊಂದು ಧಾನ್ಯದ ಚೀಲ ಪಡಸಾಲೆ ಯಲ್ಲಿರುತ್ತಿತ್ತು. ಸುಗ್ಗಿಗೆ ಅನುಗುಣವಾಗಿ ಕಾಳಿನ ಚೀಲವಿರುತ್ತಿತ್ತು. ಬಾಗಿಲಿಗೆ ಯಾರೇ 'ಊರಾಡಲು' ಬಂದರೆ, ಮನೆಯಲ್ಲಿ ಯಾರಿರುತ್ತಾರೋ ಅಂದರೆ ಜೀತದಾಳು, ಹೆಂಡೆಗಸ ಬಳಿಯುವವರು, ಮನೆಮಂದಿ ಯಾರೋ ಒಬ್ಬರು ಒಯ್ದು ನೀಡುತ್ತಿದ್ದರು. ಕೆಲವರು ಬೊಗಸೆಯಲ್ಲಿ ಒಯ್ದರೆ ತಮ್ಮ ಜೋಳುಗೆಯ ಬಾಯಿಯನ್ನು ತೆರೆಯುತ್ತಿರಲಿಲ್ಲ. ನಮ್ಮ ಅಪ್ಪ, ಅಮ್ಮನ ಇಲ್ಲವೆ ನಮ್ಮ ತಾತನ ಹೆಸರನ್ನು ಹೇಳಿ 'ಅಂಥ ಪುಣ್ಯವಂತರ ಮನೆಯಲ್ಲಿ ಮೊರಕ್ಕೆ ಬರಗಾಲ ಏನು? ಎಂದು ನೆಲಹಿಡಿಯುತ್ತಿದ್ದರು. ಪುನಃ ಮೊರದಲ್ಲಿ ಧಾನ್ಯ ಒಯ್ದರೆ ಮಾತ್ರ ಪಡೆಯುತ್ತಿದ್ದರು. 'ಊರಾಡಲು' ಬರುವವರಿಗೆ ನೀಡಲು ಒಮ್ಮೊಮ್ಮೆ ನನಗಂತೂ ಬೇಸರ ಬರುತ್ತಿತ್ತು. ಬಾಳ ಜನ ಬರುತ್ತಿದ್ದರು. ಆದರೂ ಅವರು ಊರು-ಕೇರಿಯ ಕಣ್ಣಲ್ಲಿ ಗೌರವವನ್ನು ಪಡೆದಿದ್ದರು. ಮನ ಮುಟ್ಟುವಂತೆ ಹಾಡುವವರು ಬಂದರೆ ಅಪ್ಪ ತಾಸುಗಟ್ಟಲೆ ಹಾಡ್ಸಿಸಿ, ಹಳೆ ಬಟ್ಟೆಬರೆ ಕೊಟ್ಟು ಕಳಿಸುತ್ತಿದ್ದ. ನಮ್ಮ ಮನೆಮಂದಿ ತಮ್ಮ ಬೀಗರಿಗೆ ಏನಾದರೂ ಸುದ್ದಿ ಕಳಿಸುವುದಿದ್ದರೆ 'ಊರಾಡಲು' ಬಂದವರ ಮೂಲಕವೂ ಹೇಳಿ ಕಳಿಸುತ್ತಿ ದ್ದರು. 'ಊರಾಡಲು' ಬರುವ ಅನೇಕರು ತಮ್ಮ ಧಾನ್ಯ ತುಂಬಿದ ಚೀಲಗಳನ್ನು ಊರವರ ಮನೆಗಳಲ್ಲಿ ಇಡುತ್ತಿದ್ದರು. ವಾರಗಟ್ಟಲೇ ಅಂಥವರ ಚೀಲಗಳು ನಮ್ಮ ಮನೆಯಲ್ಲಿ ಇರುತ್ತಿದ್ದವು. ಅಮ್ಮ ಅಂಥ ಚೀಲಗಳನ್ನು ಇಲಿ-ಹೆಗ್ಗಣಗಳಿಂದ ರಕ್ಷಿಸಿಡುತ್ತಿದ್ದಳು.

ನಮ್ಮೂರಲ್ಲಿ ಮಠವಿರಲಿಲ್ಲ. ಜಂಗಮರು ಬಂದರೆ ಲಿಂಗಾಯಿತರ ಮನೆಗಳಲ್ಲಿ ತಂಗುತ್ತಿದ್ದರು. ನಮ್ಮ ಮನೆಯಲ್ಲಿ ಯಾವಾಗಲೂ ಒಬ್ಬರಾದರೂ ಜಂಗಮರು ಇರುತ್ತಿ ದ್ದರು. ಜಂಗಮರಲ್ಲಿ ಎರಡು ಬಗೆಯವರಿದ್ದರು. 'ಸ್ವಾಮಿಗಳು' ಮತ್ತು 'ತಾತನವರು'

ಎಂದು ನಾವೇ ನಮ್ಮ ಮನೆಯಲ್ಲಿ ಕರೆಯುತ್ತಿದ್ದೆವು. ಯಾವುದೋ ಮಠಕ್ಕೆ ಮಠಾಧಿಪತಿಗಳಾದ ಸ್ವಾಮಿಗಳು ನಮ್ಮ ಮನೆಗೆ ಬಂದರೆ ಅಪ್ಪನಿಗೆ ಉಮೇದಿ. ಅಮ್ಮನಿಗೆ ಸಂಕಟ. ಯಾಕೆಂದರೆ ಈ ಸ್ವಾಮಿಗಳಿಗೆ ಮತ್ತವರ ಪರಿವಾರದವರಿಗೆ ಉಪಚರಿಸುವುದು ಕಷ್ಟವಾಗುತ್ತಿತ್ತು. ಸ್ವಾಮಿಗಳಿಗೆ, ಅವರ ಮರಿಸ್ವಾಮಿಗಳಿಗೆ ಉಪಚರಿಸಲು ಮನೆಮಂದಿಯೇ ಸಾಲುತ್ತಿರಲಿಲ್ಲ. ಪೂಜೆಗೆ ಸಹಾಯ ಮಾಡುವ ಮರಿಸ್ವಾಮಿಗಳಂತೂ ಗಂಧ ಬೇಕು, ಪತ್ರಿ ಬೇಕು, ಕರ್ಪೂರ ಬೇಕು ಏನೇನೋ ಕೇಳುತ್ತಿದ್ದರು. ನಮ್ಮೂರಿನಲ್ಲಿ ಅವರು ಕೇಳುವ ಸಾಮಾನುಗಳು ಸಿಗುತ್ತಿರಲಿಲ್ಲ. ಒದಗಿಸಲು ಆಗದೆ ಅಮ್ಮನಿಗೆ ಸಿಟ್ಟು ಬರುತ್ತಿತ್ತು. ಪೂಜೆ ಮುಗಿದ ಮೇಲೆ ಭರ್ಜರಿ ಊಟಬೇಕು. ಸ್ವಾಮಿಗಳು ಬಂದು ಹೋಗುವವರೆಗೆ ಅಮ್ಮನಿಗೆ ದಣಿವು ಬರುತ್ತಿತ್ತು. ಆದರೆ ಅಪ್ಪನಿಗೆ ಹಿಗ್ಗು-ಹೆಮ್ಮೆ. 'ತಾತನವರು' ಎಂದು ಕರೆಸಿಕೊಳ್ಳು ವವರು ಬಂದರೆ ಅಮ್ಮನಿಗೆ ಖುಷಿಯಾಗುತ್ತಿತ್ತು. ಯಾಕೆಂದರೆ ಅವರು ಯಾವಾಗ ಬಂದರೂ ಯಾರಿಂದಲೂ ಉಪಚಾರ ನಿರೀಕ್ಷಿಸುತ್ತಿರಲಿಲ್ಲ. ಮನೆಮಂದಿಯಲ್ಲಿ ಒಂದಾಗಿಬಿಡುತ್ತಿದ್ದರು. ಎಲ್ಲ ಕೆಲಸವನ್ನು ಅವರೇ ಮಾಡಿಕೊಳ್ಳುತ್ತಿದ್ದರು. ಅವರೇ ಬಾವಿಯಿಂದ ನೀರು ತಂದು, ಕಾಶಿಗೊಂಡು, ಜಳಕ ಮಾಡುತ್ತಿದ್ದರು. ಪೂಜೆಗೆ ಒಂದು 'ತುಂಬಿದ' ತಂಬಿಗೆ ನೀರು, ವಿಭೂತಿ ಕೊಟ್ಟರೆ ಸಾಕು, ಗಳಿಗೆ ಹೊತ್ತಿನಲ್ಲಿ ಪೂಜೆ ಮಾಡಿ ಮುಗಿಸುತ್ತಿದ್ದರು. ಅಡಿಗೆ ಯಾವುದಿರು ತ್ತದೋ ಅದನ್ನೇ ಉಂಡು, ಇಲ್ಲಿದಿದ್ದರೆ ಹಾಗೇ ತಮ್ಮ ಕೆಲಸಕ್ಕೆ ಹೋಗುತ್ತಿದ್ದರು. ಅಮ್ಮನಿಗೆ ಈ ಬಗೆಯ ಸ್ವಭಾವದ ತಾತನವರು ಬಂದರೆ ಖುಷಿ. ಗಂಡನ ಮನೆಗಳಲ್ಲಿರುತ್ತಿದ್ದ ಹೆಣ್ಣುಮಕ್ಕಳಿಗೆ ಏನಾದರೂ ಕಾಯಿಪಲ್ಯೆ, ಹಣ್ಣುಹಂಪಲ, ಕಾಳುಕಡಿ ಕಳಿಸಿಕೊಡುವುದಿದ್ದರೆ ತಾತನವರಿಂದಲೂ ಕಳಿಸುತ್ತಿದ್ದಳು. ಈ ತಾತನವರು ಅಪ್ಪನಿಗೆ 'ನಿನ್ನ ದರ್ಬಾರು ಸಾಕು ಮಾಡು' ಎಂದು ಎದುರಿಗೇ ಹೇಳುತ್ತಿದ್ದರು. ಅಪ್ಪ ಅದಕ್ಕೇನೂ ಸಿಟ್ಟುಮಾಡಿಕೊಳ್ಳುತ್ತಿರ ಲಿಲ್ಲ. ಅವರಿಗೆ ತೋರಿಸಬೇಕಾದ ಗೌರವನ್ನು ತೋರಿಸುತ್ತಿದ್ದ. ಕೇರಿಯವರು ಅದರಲ್ಲೂ ಹೆಂಗಸರು, ವಯಸ್ಸಾದವರು ಹುಣುಸೆ ಕಾರಬೇಕೆಂದು, ಮಜ್ಜಿಗೆ ಬೇಕೆಂದು, ಬಟ್ಟೆಬರೆ ಬೇಕೆಂದು ಅಮ್ಮನಲ್ಲಿಗೆ ಬರುತ್ತಿದ್ದರು. ವಯಸ್ಸಾದ ಕೇರಿಯ ಮುದುಕ-ಮುದುಕಿಯರು 'ಇನ್ನೇನು ಸಾಯ್ತಿವಿ ಒಮ್ಮೆ ನೋಡಿ ಹೋಗ್ತೀನಿ' ಎಂದು ನಮ್ಮ ಮನೆಗೆ ಬಂದು ಮಾತಾಡಿಸಿ ಉಂಡೋ ಇಲ್ಲವೆ, ಉಡಿಯಲ್ಲಿ ಕಟ್ಟಿಕೊಂಡೋ ಹೋಗುವುದನ್ನು ನಾನು ನೋಡುತ್ತಿದ್ದೆ.

ನಮ್ಮೂರಿನಲ್ಲಿ ನಮಗಿಂತಲೂ ಆಸ್ತಿವಂತರಿದ್ದಾರೆ. ಆದರೆ ಅಪ್ಪನಿಗಿದ್ದ 'ವರ್ಚಸ್ಸು' ಬೇರೆಯವರಿಗಿರಲಿಲ್ಲ. ಊರಲ್ಲಿ ಜಗಳಗಳು ಸಂಭವಿಸಿದರೆ, ಅವು ಅಪ್ಪನಲ್ಲಿಗೆ ಬರುತ್ತಿದ್ದವು. ಊರಲ್ಲಿ ಕೇರಿಮಂದಿ ಕುಡಿದು ಕೂಗಾಡುವಂತಿರಲಿಲ್ಲ. ಕೂಗಾಡಿದ್ದನ್ನು ಕೇಳಿದರೆ ಅಪ್ಪನಿಗೆ ಸಿಟ್ಟು ಬರುತ್ತಿತ್ತು. ಒಂದೊಂದು ಸಲ ಯಾರಾದರೂ ಕೇರಿಯ ಮಂದಿಯಾಗಲಿ, ಕಾಟಗೀರ ರಾಗಲಿ ಕುಡಿದು ಕೂಗಿದ್ದನ್ನು ಅಮ್ಮ ಕೇಳಿದರೆ, ತಾನೇ ಮಾಳಿಗೆ ಏರಿ, ಯಾರನ್ನಾದರೂ ಕಳಿಸಿ ಕೂಗದಂತೆ ಸುಮ್ಮನಿರಿಸಲು ಹೆಣಗಾಡುತ್ತಿದ್ದಳು. ಅಷ್ಟಾಗಿಯೂ ಕುಡಿದವನ ಕೂಗು ಅಪ್ಪನಿಗೆ ಕೇಳಿಸಿದ್ದರೆ, ಆತ ಎದ್ದೇ ಬರುತ್ತಿದ್ದ. ಅಮ್ಮ ತಡೆಯುತ್ತಿದ್ದಳು. ಎಷ್ಟೋ

ಕೇರಿಮಂದಿ ಕುಡಿದು ಬಡಿಸಿಕೊಳ್ಳುತ್ತಿದ್ದರು. ಬಡಿಸಿಕೊಂಡವನೋ, ಅವನ ಹೆಂಡತಿಯೋ ಮರುದಿನ ನಮ್ಮ ಮನೆಯಲ್ಲಿರುತ್ತಿದ್ದರು. ಅಮ್ಮ ಅವರಿಗೆ ಬುದ್ದಿ ಹೇಳಿ, ಕಾಳುಕಡಿ ಕೊಟ್ಟು ಕಳಿಸುತ್ತಿದ್ದಳು, ಅಪ್ಪ ಅದನ್ನು ನೋಡಿದರೂ ಸುಮ್ಮನಿರುತ್ತಿದ್ದ. 'ಈತನಿಗೆ ಅದ್ಯಾವಾಗ ಸಿಟ್ಟು ಬರ್ತದೋ, ಅದ್ಯಾವಾಗ ಕಕ್ಕುಲಾತಿ ಮೂಡ್ತದೋ' ಎಂದು ಮರುಗುತ್ತಿದ್ದಳು. ನಮ್ಮೂರ ಹೆಣ್ಣುಗಳನ್ನು ಮದುವೆ ಮಾಡಿಕೊಂಡ ಅಕ್ಕಪಕ್ಕದ ಊರಿನವರು, ಹೆಣ್ಣುಮಕ್ಕಳನ್ನು ಯಾವುದೋ ಕಾರಣಕ್ಕೆ ಮಧ್ಯದಲ್ಲಿ ಬಿಟ್ಟರೆ, ಅಪ್ಪನಿಗೆ ಸಿಟ್ಟು ಬಂದು, ಬಿಟ್ಟವರನ್ನು ಕರೆದುಕೊಂಡು ಹೋಗುವಂತೆ ಮಾಡುತ್ತಿದ್ದ.

ನಮ್ಮ ಮನೆಯಲ್ಲಿ ಪುರಾಣಗಳ ಪ್ರವಚನಗಳು ನಡೆಯುತ್ತಿದ್ದವು. ಅಪ್ಪನಿಗೆ ಓದಲು ಬರುತ್ತಿತ್ತು. ರಾಮಾಯಣ, ಮಹಾಭಾರತದ ಕತೆಯನ್ನು ರಾತ್ರಿ ಹೇಳುತ್ತಿದ್ದ. ದೇವತೆಗಳ ಪರವಾಗಿರುತ್ತಿದ್ದ. ರಾಕ್ಷಸರ ವಿರುದ್ಧ ಸಿಟ್ಟಿಗೇರುತ್ತಿದ್ದ. ಜೈಮಿನಿ ಭಾರತವನ್ನು ಕಂಠಪಾಠ ಮಾಡಿದ್ದ. ತತ್ವಪದಗಳನ್ನು ಹಾಡುತ್ತಿದ್ದ. ಹಾಗೆಯೇ ತನ್ನ ಕಾಲದಲ್ಲಿ ಅಕ್ಕಪಕ್ಕದ ಊರುಗಳಲ್ಲಿ ನಡೆದ ಭೀಕರ ಜಗಳಗಳನ್ನು, ತಾನು ಮಾಡಿದ ಸಾಹಸವನ್ನು ರುಚಿಕಟ್ಟಾಗಿ ಹೇಳುತ್ತಿದ್ದ. ನೂರು ನೂರು ಕೂರಿಗೆ ಭೂಮಿ ಇರುವವರ ಸೊಕ್ಕನ್ನು ಮುರಿದೆ ಎಂದು ಹೇಳುತ್ತಿದ್ದ. ವಿಚಿತ್ರವೆಂದರೆ ಈ ಜಮೀನ್ದಾರರುಗಳ ನಡುವೆ ಜಗಳ ನಡೆದರೆ, ಹೊಡೆದಾಡಿ ನೋವು-ಸಾವಿಗೆ ಗುರಿಯಾಗುವವರು ಜೀತದಾಳುಗಳು. ಆ ಜೀತದಾಳುಗಳೆಲ್ಲ ಕೆಳವರ್ಗದವರು. ಅಮ್ಮ ಈ ಜೀತದಾಳುಗಳ ಪಾಡನ್ನು ಹೇಳಿ ಮರುಗುತ್ತಿದ್ದಳು. ಅಪ್ಪನಿಗೆ ತಂಗಿ ಒಬ್ಬಾಕೆ ಇದ್ದಳು. ಆಕೆಯ ಗಂಡನ ಆಸ್ತಿಯನ್ನು ಉಳ್ಳವನೊಬ್ಬ ಕಸಿದುಕೊಂಡಿದ್ದನಂತೆ. ತಂಗಿಯ ಮೇಲಿನ ಕಕ್ಕುಲಾತಿಗೆ ಅಪ್ಪ ಆ ಜಗಳದಲ್ಲಿ ಸೇರಿಕೊಂಡು, ಸುಮಾರು ಹತ್ತು ವರ್ಷಗಳ ಕಾಲ ಹೊಡೆದಾಟ-ಬಡಿದಾಟ ಮಾಡಿ, ಕೋರ್ಟಿಗೆ ತಿರುಗಿ ನಮ್ಮ ಹಣವನ್ನು ಖರ್ಚುಮಾಡಿದನಂತೆ. ತಂಗಿಗೆ ಭೂಮಿ ಬಂತು. ಆದರೆ ಅಪ್ಪ ತನ್ನ ಭೂಮಿಯನ್ನು ಅದಕ್ಕಾಗಿ ಮಾರಿಕೊಂಡಿದ್ದನಂತೆ. ಆ ಜಗಳದಲ್ಲಿ ಗಾಯಗೊಂಡವರ ಕತೆಯನ್ನು ಅಪ್ಪ ನಮಗೆ ಹೇಳುತ್ತಿದ್ದ. ಗಾಯಗೊಂಡು ವಾಸಿಯಾದ ಅನೇಕರು ನಮ್ಮ ಮುಂದೆ ಅಪ್ಪನ ಸಾಹಸವನ್ನು ಹೆಮ್ಮೆಯಿಂದ ಹೇಳುತ್ತಿದ್ದರು. ಗಾಯಗೊಂಡು ನರಳಿದವರೆಲ್ಲ ಕೆಳವರ್ಗದವರೇ ಆಗಿರುತ್ತಿದ್ದರು.

**ಮನೆಗೆ ಬಹಿಷ್ಕಾರ, ನನ್ನ ಒಂಟಿತನ**

ನಾನು ಸಿರಿವಾರದ ಹೈಸ್ಕೂಲು ಸೇರಿ, ದಿನಾಲೂ ಊರಿಂದ ಸಿರಿವಾರಕ್ಕೆ ಸೈಕಲ್ ಮೇಲೆ ಹೋಗಿ ಬರುತ್ತಿದ್ದೆ. ಒಂದು ದಿನ ನಮ್ಮೂರವರೇ ಗುಂಪುಗುಂಪು ಜನ ಸಿರಿವಾರದ ಕಡೆ ಹೋಗುತ್ತಿದ್ದರು. ಶಾಲೆಯಿಂದ ಸೈಕಲ್ ಮೇಲೆ ಬರುತ್ತಿದ್ದ ನಾನು ಅದನ್ನು ನೋಡಿದೆ. ನನಗೇಕೋ ಭಯವಾಯಿತು. ಯಾಕೆಂದು ತಿಳಿಯಲಿಲ್ಲ. ಮನೆಗೆ ಬಂದ ಮೇಲೆ ತಿಳಿಯಿತು. ಕಾಟಗೀರ ಕುಟುಂಬ ಒಂದರ ಮೇಲೆ ಕೆಲ ಲಿಂಗಾಯಿತರು ಕೂಡಿ ಯಾವುದೋ ಕಾರಣಕ್ಕೆ ಹಲ್ಲೆ ನಡೆಸಿದ್ದರು. ಆ ಹಲ್ಲೆಯಲ್ಲಿ ಒಬ್ಬ ಕೆಳವರ್ಗದವನು ಸತ್ತಿದ್ದ. ಆ ಕುಟುಂಬದ

ಮಂದಿ ತೀವ್ರ ಆಘಾತಕ್ಕೆ ಒಳಗಾಗಿದ್ದರು. ಊರಲ್ಲಿ ಅವರದು ಚೂರು ಭೂಮಿಯೂ ಇತ್ತು. ಲಿಂಗಾಯಿತರ ಗುಂಪಿಗೆ ಅಂಜಿ ಆ ಕುಟುಂಬ ಊರನ್ನೇ ಬಿಟ್ಟಿತು. ಅಪ್ಪ ಸುಮ್ಮನಿರದೆ ಸತ್ತ ಕುಟುಂಬದ ಕಡೆ ನಿಂತು ಕೋರ್ಟಿಗೆ ಹೋದ. ಊರ ಲಿಂಗಾಯಿತರು ನಮ್ಮ ಒಂದು ಮನೆತನವನ್ನು ಒಂಟಿಮಾಡಿ ದೂರವಿಟ್ಟರು. ಅಪ್ಪನ ದರ್ಬಾರು-ವರ್ಚಸ್ಸು ಕಂಡರೆ ಆಗದವರೆಲ್ಲ ಒಂದಾದರು. ಊರಲ್ಲಿ ನಾವು ಪರಿಣಾಮಸ್ತರಿದ್ದೆವಷ್ಟೇ. ಕೋರ್ಟಿಗೆ ಹೋದ ಕಾರಣ ಎಲ್ಲ ಖರ್ಚನ್ನು ಅಪ್ಪನೇ ಮಾಡಬೇಕಾಯಿತು. ಅಪ್ಪನಿಗೆ ವಿಪರೀತ ಛಲ. ಬೆಳೆದದ್ದನ್ನೆಲ್ಲ ಕೋರ್ಟಿಗೆ ಕರ್ಚುಮಾಡಬೇಕಾಯಿತು. ಬಡತನ ಶುರುವಾಯಿತು. ಅಪ್ಪನಿಗೆ ಸುಮಾರು ಕೂರಿಗೆ ಭೂಮಿಯಿತ್ತು. ಐವತ್ತು ಕೂರಿಗೆ ಭೂಮಿಯಿದ್ದ ಅನೇಕ ರೈತರು ನಮ್ಮೂರಲ್ಲಿ, ಅಕ್ಕಪಕ್ಕದ ಊರುಗಳಲ್ಲಿದ್ದರು. ನಮ್ಮ ನಿಜಾಮ ಪ್ರಾಂತದಲ್ಲಿ ಇದು ಸಹಜ. ಆದರೆ ಮಳೆ ಪ್ರಮಾಣ ಕಮ್ಮಿ. ನೀರಾವರಿ ಸೌಲಭ್ಯ ಇಲ್ಲ. ರಾಜಕೀಯ ಸ್ಥಿತ್ಯಂತರಗಳಲ್ಲಿ ಅಭಿವೃದ್ಧಿ ಎಂಬುದೇ ಈ ನಾಡಿಗಿಲ್ಲ. ನಮ್ಮ ಕಡೆ ಭಾರೀ ಜನಪ್ರಿಯ ಗಾದೆ ಒಂದಿದೆ 'ಎಪ್ಪತ್ತು ಕೂರಿಗೆ ಭೂಮಿ ಇದ್ದರೂ ಒಪ್ಪತ್ತಿಗಿಲ್ಲ'.

ನಮಗೆ ಬಡತನ ಶುರುವಾದದ್ದೇ ತಡ ಮೂರು ಜನ ಅಣ್ಣಂದಿರು ಕಾಲೇಜು ಬಿಟ್ಟರು. ಅಮ್ಮನ ಜತೆ, ಹೊಲಗಳನ್ನು ನಾವೇ ಹರಗುವುದು, ಬಿತ್ತುವುದು, ಕಣ ಮಾಡುವುದು ಅನಿವಾರ್ಯವಾಯಿತು. ಕೇರಿಯ ಜನರೂ ನಮ್ಮ ಕೆಲಸಕ್ಕೆ ಬರಲು ಹೆದರಿದರು. ನಾನು ನೆಪಕ್ಕೆ ಮಾತ್ರ ಶಾಲೆಗೆ ಹೋಗುತ್ತಿದ್ದೆ. ಹೊಲದ ಕೆಲಸಗಳಿದ್ದರೆ ವಾರಗಟ್ಟಲೆ ಬಿಡುತ್ತಿದ್ದೆ. ಅದು ಹೇಗೋ ಎಸ್‌ಎಸ್‌ಎಲ್‌ಸಿ ಪಾಸಾಗಿ ಮುಂದೆ ಕಾಲೇಜಿಗೆ ಹೋಗದೆ ಒಕ್ಕಲುತನಕ್ಕೆ ಅಣ್ಣಂದಿರ ಜತೆ ಸೇರಿಕೊಂಡೆ. ನನ್ನ ಚಿಕ್ಕಂದಿನ ದಿನಗಳಲ್ಲೇ ಬಡತನ ಬಂದಿತು. ಊರ ಜನರ ಸಂಪರ್ಕವೇ ನಮ್ಮ ಮನೆಗೆ ಇಲ್ಲದಂತಾಯಿತು. ಪ್ರತಿಯೊಂದು ಕೆಲಸವನ್ನು ನಾವೇ ಮಾಡಬೇಕಾಯಿತು. ನಾನಂತೂ ಕಲಿತದ್ದನ್ನೆಲ್ಲ ಮರೆಯತೊಡಗಿದ್ದೆ. ಬಡಿದಾಡಿ ದುಡಿಯುವುದು, ಬೆಳೆದದ್ದನ್ನೆಲ್ಲ ಅಪ್ಪ ಕೋರ್ಟಿಗೆ ಒಯ್ಯುವುದು ಹೀಗೆ ಏಳೆಂಟು ವರ್ಷಗಳ ಕಾಲ ನಡೆಯಿತು. ನಮ್ಮ ಭೂಮಿಯಲ್ಲಿ ನಾವು ದುಡಿಯುವುದೊಂದು ಬಿಟ್ಟರೆ ಬೇರೆ ಯಾವುದರ ಕಡೆಗೆ ನಮ್ಮ ಗಮನವಿರಲಿಲ್ಲ. ಕಾಟಗೀರರು, ಕೇರಿಮಂದಿ ಮೆಲ್ಲನೆ ನಮ್ಮ ಹೊಲಗಳಿಗೆ ದುಡಿಯಲು ಬರತೊಡಗಿದರು. ಇದನ್ನು ತಡೆಯಲು ಊರವರ ಪ್ರಯತ್ನಗಳು ನಡೆದವು. ಆದರೂ ಕೇರಿಯ ಮಂದಿ ಅಪ್ಪ ಅಮ್ಮನನ್ನು ನೆನೆದು ಸಂಪರ್ಕ ಬೆಳೆಸಿದರು. ನಾನು ಹೊಲಗಳಲ್ಲಿ ಕೇರಿಮಂದಿ ಜತೆ ಸೇರಿಕೊಂಡು ದುಡಿಯತೊಡಗಿದೆ. ಕೂಡಿ ದುಡಿಯುವಾಗ 'ಮುಟ್ಟು ತಟ್ಟುವುದು ಗಮನಕ್ಕೆ ಇರುತ್ತಿರಲ್ಲ. ಚಿಕ್ಕವನಿದ್ದ ನಾನು ಕೆಲಸಕ್ಕೆ ಕರೆಯಲು ಕೇರಿಗೆ ಹೋದಾಗ ಕೇರಿಯ ಮಂದಿಯ ಗುಡಿಸಲಲ್ಲಿ ಓಡಾಡುತ್ತಿದ್ದೆ. ಹೀಗಾಗಿ ಕೇರಿ ನನಗೆ ಪರಿಚಿತವಾಯಿತು. ಅವರ ಬದುಕಿನ ಲಯ ನನಗೆ ಸಮೀಪವಾಯಿತು. ಆದರೂ ನಾನು ಒಂಟಿಯಾಗಿ ಅಲೆಯುತ್ತಿದ್ದೆ. ಹೊಲದಲ್ಲೇ ಇರುವುದು ನನಗೆ ಪರಮಸುಖವಾಗಿ ಕಂಡಿತು. ಹೊಲದಲ್ಲಿಯೇ ಇದ್ದರೂ ಒಂದು ಗುಡಿಸಲನ್ನೂ ಹಾಕಿಕೊಳ್ಳಲಿಲ್ಲ. ಬಯಲಿನಲ್ಲಿಯೇ

ಮಲಗುತ್ತಿದ್ದೆ. ನೀರಾವರಿ ಬಂದಿತ್ತು. ಕಾಲುವೆಗಳಲ್ಲಿ ಜಳಕ. ಮನೆಯಿಂದ ಹೊತ್ತಿಗೆ ಸರಿಯಾಗಿ ಅಮ್ಮ ಬುತ್ತಿ ತರುತ್ತಿದ್ದಳು. ನಾನೇ ಕೊನೆಯ ಮಗನಾದ್ದರಿಂದ ಅಮ್ಮ ಅಪ್ಪ ಬಾಳ ಜೀವ ಮಾಡುತ್ತಿದ್ದರು. ಇದರಿಂದಾಗಿ ಬಡತನ ಇದ್ದರೂ ಅದರ ಬಿಸಿ ನನಗೆ ತಟ್ಟಲಿಲ್ಲ. ಅಣ್ಣಂದಿರು ಬಡತನಕ್ಕೆ ಬೇಸತ್ತಿದ್ದರು. ಅವರ ಬೇಸರ ಕಂಡೇ ನಾನು ಸಂಕಟಪಡುತ್ತಿದ್ದೆ. ಮನೆಗೆ ಹೋಗದೆ ಹೊಲದಲ್ಲಿಯೇ ಉಳಿಯುತ್ತಿದ್ದೆ. ಮೂಡುವ, ಮುಳುಗುವ ಸೂರ್ಯ ನೆಂದರೆ ನನಗೆ ಎಲ್ಲಿಲ್ಲದ ಜೀವ. ನೋಡುವುದನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಮೂಡುವ, ಮುಳುಗುವ ಸೂರ್ಯನನ್ನು ನೋಡುತ್ತ ಕೂಡುವುದೇ ಸ್ವರ್ಗಸುಖವಾಗಿ ಪರಿಣಮಿಸಿತು.

ಇದೇ ದಿನಗಳಲ್ಲಿ ಒಂದು ಘಟನೆ ಸಂಭವಿಸಿತು. ಲಿಂಗಾಯಿತರ ಹಲ್ಲೆಯಿಂದ ಸತ್ತವನ ತಮ್ಮನೊಬ್ಬ ನಮ್ಮೂರಿಗೆ ಬಂದ. ಯಾಕೋ ಬಂದಿದ್ದ. ಅವರ ಚೂರು ಭೂಮಿಯೂ ಇತ್ತು. ಅದು ಬೀಳಾಗಿತ್ತು. ಅವನನ್ನು ಊರ ಲಿಂಗಾಯಿತರು ಹಿಡಿದು ರಾತ್ರಿಯೆಲ್ಲ 'ಚಿತ್ರಹಿಂಸೆ' ಅಂತಾರಲ್ಲ ಅದನ್ನು ಮಾಡಿದರು. ನಮ್ಮ ಮನೆಮಾಳಿಗೆ ಮೇಲೆ ಕುಳಿತು ರಾತ್ರಿಯೆಲ್ಲ ನಾನು ಅವನ ನರಳುವ ದನಿಯನ್ನು ಕೇಳಿಸಿಕೊಂಡೆ. ಅಪ್ಪ ಕೂಡ ಅಕ್ಕಪಕ್ಕದಲ್ಲಿ ನಡೆದ ಇಂಥ ಘಟನೆಗಳನ್ನು ನಮಗೆ ಹೇಳುತ್ತಿದ್ದ. ಇದನ್ನೆಲ್ಲ ನೆನೆಯುತ್ತ, ಊರಲ್ಲಿ ನಮ್ಮ ಪರಿಸ್ಥಿತಿಯನ್ನು ನೆನೆಯುತ್ತ ಒಂಟಿಯಾಗಿ ಎಂಥದೋ ನೋವನ್ನು ಅನುಭವಿಸುತ್ತಿದ್ದೆ.

**ಕೈಗೆ ಪುಸ್ತಕಗಳನ್ನಿಟ್ಟ ಆ ಪುಣ್ಯಾತ್ಮ**

ನಮ್ಮ ಸಂಬಂಧಿ ಭೀಮನಗೌಡ ಅಣ್ಣ ನನ್ನ ಒಂಟಿತನ ಕಂಡು ಒಂದು ದಿನ ಕೆಲವು ಪುಸ್ತಕಗಳನ್ನು ಕೈಗೆ ಇಟ್ಟು 'ಓದು ನೋಡಮು' ಅಂದ. ನಾನು ದುಡಿತದ ನಡುವೆ ಓದತೊಡಗಿದೆ. ಓದು ಕಷ್ಟವಾಯಿತು. ಯಾಕೆಂದರೆ ಓದೇ ನಿಂತು ಹೋಗಿತ್ತು. ಅದಕ್ಕೂ ಮೊದಲು ಶಾಲೆಗೆ ಹೋಗಿ ಕಲಿತದ್ದು ಅಷ್ಟಕಷ್ಟೇ. ದುಃಖ ಎಂದು ಬರೆಯುವ ಬದಲು ದುಕ್ಕ ಎಂದು ಬರೆದು ಅಣ್ಣಂದಿರ ಗೇಲಿಗೆ ಒಳಗಾಗಿದ್ದೆ. ಇಂಥ ತಪ್ಪುಗಳು ಆಗಾಗ ನಡೆದಿದ್ದವು. ನನ್ನ ಅವಮಾನವನ್ನೂ ಅರಿಯುವವರೂ ಯಾರೂ ಇರಲಿಲ್ಲ. 'ಓದು ಬರಲಿಲ್ಲಂದ್ರ ಬಿಡು, ಭೂಮಿ ಐತಲ್ಲ? ಈಗ ಬ್ಯಾರೆ ಚಂದ ದುಡಿತ ಕಲತಿದ್ದಿ. ನೀನು ದುಡಿದ್ರೆ ನೂರು ಮಂದಿ ಬದುಕ್ಯಾರು' ಅಂದು ಸಮಾಧಾನ ಅಮ್ಮ ಮಾಡಿದ್ದೂ ಉಂಟು. ಭೀಮನಗೌಡ ಅಣ್ಣ ಕೊಟ್ಟ ಪುಸ್ತಕಗಳನ್ನು ಮೆಲ್ಲಗೆ ಓದಿದೆ. ನನಗೆ ನೆನಪಿದ್ದಂತೆ, ರಾಮಕೃಷ್ಣ ಪರಮಹಂಸರ ವಚನವೇದ, ವಿವೇಕಾನಂದರ ಕೃತಿಶ್ರೇಣಿಯ ಎರಡು ಪುಸ್ತಕಗಳು. 'ಕರ್ತಾರನ ಕಮ್ಮಟ', 'ಕಾನೂರು ಹೆಗ್ಗಡಿತಿ' ಇದ್ದವು. 'ಕಾನೂರು ಹೆಗ್ಗಡಿತಿ' ನನಗೆ ಪ್ರಿಯವಾಯಿತು. ಕಾನೂರು ಹೆಗ್ಗಡಿತಿ ಯಾರು ಬರೆದದ್ದು? ಯಾವ ಪ್ರಕಾರದ್ದು ಎಂಬುದೇನೂ ನನಗೆ ಅರಿವಿರಲಿಲ್ಲ. ಪುಸ್ತಕದ ಮೇಲೆ ಎರಡು ಹಕ್ಕಿಗಳಿದ್ದರೂ ಆ ಹಕ್ಕಿ ನಮ್ಮೂರಲ್ಲಿ ಕಾಣಿಸುತ್ತಿರಲಿಲ್ಲ. ಕುವೆಂಪು ಎಂಬ ಅಕ್ಷರಗಳಿದ್ದರೂ ಅದು ಬರೆದ ಕವನ ಹೆಸರೆಂದು ತಿಳಿಯಲಿಲ್ಲ. ಕುವೆಂಪು ಎಂಬುದು ವ್ಯಕ್ತಿಯ ಹೆಸರೆಂಬುದು ಅರಿವಿಗೆ ಬರಲು ಸಾಧ್ಯವಿರಲಿಲ್ಲ. ಆದರೂ ಪುಸ್ತಕ ಓದಿದೆ. ಅದರಲ್ಲಿ ನಮ್ಮೂರಿತ್ತು. ಕಾಡುಮಾತ್ರ

ನಮ್ಮೂರಲ್ಲಿರಲಿಲ್ಲ. ಊರು-ಕೇರಿಗಳು ಆ ಪುಸ್ತಕದಲ್ಲಿ ಕಂಡವು. ಅಲ್ಲಿರುವ ಜನರನ್ನು ಕಂಡು ಬೆರಗಾಗುತ್ತಿದ್ದೆ. ರಾತ್ರಿ ಅಮ್ಮನ ಮುಂದೆ ದೀಗಿ ಬೆಳಕಿನಲ್ಲಿ ಓದುತ್ತಿದ್ದೆ.

ನಮ್ಮ ಅಣ್ಣ ಸಿದ್ಧರಾಮಪ್ಪ ಕಾಲೇಜು ಸೇರಿಕೊಂಡ. ಅವನು ರಾಯಚೂರಿಗೆ ಹೋಗುವಾಗ ಓದಲು ದೊಡ್ಡ ದೊಡ್ಡ ಪುಸ್ತಕ ತರಲು ಹೇಳುತ್ತಿದ್ದೆ. ಆತ ಒಮ್ಮೆ ನನ್ನ ಕಿರಿಕಿರಿಗೆ ಕಾಲೇಜು ಲೈಬ್ರರಿಯಿಂದ ಕೆಲವು ಪುಸ್ತಕ ತಂದ. 'ಜಲ್ದಿ ಜಲ್ದಿ ಓದಿ ಕೊಡು. ಇಲ್ಲಂದ್ರ ಫೈನ್ ಹಾಕ್ತಾರ' ಅಂದ. ನನಗೆ ಈಗಲೂ ಬೇಗ ಓದಲು ಬರುವುದಿಲ್ಲ. 'ದಾಟು', 'ಸಮರಸವೇ ಜೀವನ', 'ಮಲೆಗಳಲ್ಲಿ ಮದುಮಗಳು' ತಂದಿದ್ದ. ಕೊನೆಯ ಪುಸ್ತಕ ಪ್ರಿಯವಾಯಿತು. ನನ್ನ ಹದಿನೈದು ಹದಿನಾರನೇ ವಯಸ್ಸಿನಲ್ಲಿ ಇಷ್ಟವಾದ 'ಮಲೆಗಳಲ್ಲಿ ಮದುಮಗಳು' ಈ ಹೊತ್ತಿಗೂ ಪ್ರಿಯವಾಗಿಯೇ ಉಳಿದಿದೆ. ನನಗೆ ನಮ್ಮೂರ ವ್ಯಕ್ತಿಗಳು, ಮನೆಗಳು, ಓಣಿಗಳು, ಪ್ರಾಣಿಗಳು, ಹೊಲಗಳು, ಹಳ್ಳ, ಎಲ್ಲವೂ ಮರು ನೆನಪಿಗೆ ಬಂದವು. ನಾನೂ ಇದನ್ನು ಬರೆಯಬೇಕು ಅನ್ನಿಸಿತು. ಬರೆದೇ ಬಿಟ್ಟೆ. ಒಂದು ಕಾದಂಬರಿ ಅದನ್ನೇನು ಮಾಡಬೇಕು? ಮನೆಯಲ್ಲಿಟ್ಟೆ.

ಅಪ್ಪ ಸತ್ತವನ ಪರ ಕೋರ್ಟಿಗೆ ಹೋದರೂ ಕೊಂದ ಯಾರಿಗೂ ಶಿಕ್ಷೆಯಾಗಲಿಲ್ಲ. ಊರು ಯಥಾಸ್ಥಿತಿಯಲ್ಲಿಯೇ ಇತ್ತು. ನನ್ನನ್ನು ಅಪ್ಪನೇ ರಾಯಚೂರಲ್ಲಿ ತಂದು ಬಿಟ್ಟ. ನಾನು ದುಡಿಯುತ್ತ ಕಾಲೇಜಿಗೆ ಸೇರಿಕೊಂಡೆ. ರಾಯಚೂರಲ್ಲಿ ಎಸ್.ಜಿ. ಸ್ವಾಮಿ ಗೆಳೆಯನಾದ. ಆತನ ಜತೆಗೆ ಇದ್ದು ಕವಿತೆಗಳನ್ನು ಬರೆದೆ. ಸ್ವಾಮಿ ಹನಿಗವನ ಬರೆಯುತ್ತಿದ್ದ. ಇಬ್ಬರೂ ಶ್ರೀ ಶಾಂತರಸರಿಗೆ ಪರಿಚಿತರಾಗಿ ಅವರಿಂದ ಪ್ರೋತ್ಸಾಹ ಪಡೆಯುತ್ತಿದ್ದರೂ ನನಗೆ ನಿರಂತರವಾಗಿ ಕಾಲೇಜಿಗೆ ಹೋಗುವುದಾಗಲಿ, ಓದುವುದಾಗಲಿ ಆಗುತ್ತಿರಲಿಲ್ಲ. ಊರಿನ ಸಮಸ್ಯೆಗಳು, ಒಂಟಿತನ, ಕಾಲೇಜಿನ ಪಠ್ಯಪುಸ್ತಕಗಳನ್ನು ಓದುವುದೆಂದರೆ ಸಂಕಟ. ಕೇಂದ್ರ ಗ್ರಂಥಾಲಯಕ್ಕೆ ಹೋಗಿ, ಇಲ್ಲ ಶ್ರೀಶಾಂತರಸರಿಂದ ಪಡೆದು ಕೆಲ ಕಾದಂಬರಿಗಳನ್ನು ಮಾತ್ರ ಓದಿದೆ. ಬಿಎ ಮುಗಿಯಿತು. ಶ್ರೀ ಶಾಂತರಸರ ಒತ್ತಾಯದಿಂದ, ಸಹಾಯದಿಂದ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಹೋಗಿ ಎಂಎಗೆ ಸೇರಿಕೊಂಡೆ. ಅರ್ಧ ದಿನಗಳು ಗುಲಬರ್ಗಾದಲ್ಲಿ, ಅರ್ಧ ದಿನಗಳು ಊರಲ್ಲಿ ಕಳೆದು ಅದು ಹೇಗೋ ಎಂಎ ಮುಗಿಸಿದೆ. ಈಗ ನೆನೆಸಿಕೊಂಡರೆ ಕನ್ನಡ ಎಂಎ ಹೇಗೆ ಓದಿದೆ? ಏನೇನು ಓದಿದೆ? ಯಾರು ಯಾವ ಪಾಠ ಮಾಡಿದರು? ಯಾವುದೂ ನೆನಪಿನಲ್ಲಿ ಉಳಿದಿಲ್ಲ. ಸಾಹಿತ್ಯದ ವಾತಾವರಣ ಏನಾದರೂ ಸಿಕ್ಕಿದ್ದರೆ ಅದು ರಾಯಚೂರಿನ ಶ್ರೀ ಶಾಂತರಸರಲ್ಲಿ, ನಂತರ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ. ಎಂಎ ಪಾಸಾಗಿ ಕೆಲಸಕ್ಕಾಗಿ ಅಲೆದು ಸಿಂಧನೂರು, ಅಕ್ಕಲಕೋಟೆ, ಬೀದರ, ರಾಯಚೂರುಗಳಲ್ಲಿ ಒಪ್ಪೊತ್ತಿನ ಉಪನ್ಯಾಸಕನಾಗಿ ದುಡಿಯುತ್ತ ಆರೇಳು ವರ್ಷ ಮುಖ ಬಾಡಿಸಿಕೊಂಡು ಅಲೆದೆ. ಊರಿನಲ್ಲಿ ನಾನು ಅನುಭವಿಸಿದ ಬದುಕನ್ನು ನೆನೆಯುತ್ತಲೇ ಅಲೆದೆ. ಕಥಾ ಕಮ್ಮಟ ಒಂದಕ್ಕೆ, ಬಂಡಾಯ ಸಾಹಿತ್ಯ ಸಮ್ಮೇಳನ ಒಂದಕ್ಕೆ ಮಾತ್ರ ಹೋಗಿ ಬಂದೆ. ನಾನು ಯಾವುದನ್ನೂ ಸರಿಯಾಗಿ ಓದಿರದ ಕಾರಣ ಇನ್ನೊಬ್ಬರ ಮಾತುಗಳು ನನಗೆ ತಿಳಿಯಲಿಲ್ಲ. ಸುಮ್ಮನೇ ಕೇಳಿ ಬಂದೆ.

ವಿಚಿತ್ರವೆಂದರೆ ನನ್ನೂರಿನ ಬದುಕು ಕಥೆಗಳಾಗಿ ನನ್ನ ಬೆನ್ನು ಹತ್ತಿದವು. ಹೋದಲ್ಲಿ ಬಂದಲ್ಲಿ ಕಥೆಗಳೇ ಸಂಗಾತಿಗಳಾದವು. ಎಲ್ಲಿ ತಂಗುತ್ತಿದ್ದೆನೋ ಅಲ್ಲಿಯೇ ಒಂದು ಪುಟವೋ, ಅರ್ಧಪುಟವೋ ಬರೆದಿಟ್ಟುಕೊಂಡು ಇನ್ನೊಂದು ಕಡೆ ತಂಗಿದಾಗ ಪೂರ್ತಿ ಮಾಡುತ್ತಿದ್ದೆ. ೧೯೮೮ರಲ್ಲಿ ಶ್ರೀ ಶಾಂತರಸರೇ ಕಥೆಗಳನ್ನು ಓದಿ ಶಿಫಾರಸಿನ ಪತ್ರವಿರಿಸಿ ಪತ್ರಿಕೆಗಳಿಗೆ ಕಳಿಸಿದರು. ಒಂದರೆಡು ಪ್ರಕಟವಾದವು. ೧೯೯೦ರಿಂದ ಕಥಾ ಸ್ಪರ್ಧೆಗಳಿಗೆ ಕಳಿಸತೊಡಗಿದೆ. ಅಲ್ಲಿ ಬಹುಮಾನ ಪಡೆದು ಪ್ರಕಟವಾದವು. ೧೯೯೨ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದು ಕೆಲಸ ಕೇಳಿ ನಿಂತೆ. ಸಂಶೋಧನ ಸಹಾಯಕ ಎಂಬ ತಾತ್ಕಾಲಿಕ ಹುದ್ದೆಗೆ ಸೇರಿದೆ. 'ಕರ್ನಾಟಕ ಕೋಶ' ಎಂಬ ಯೋಜನೆಯಲ್ಲಿ ಕೆಲಸ ಮಾಡಲು ನಿಂತೆ. ಅದರ ಸಂಪಾದಕರು 'ಬಂಡಾಯ ಸಾಹಿತ್ಯ' ಕುರಿತು ಒಂದು ಲೇಖನ ಬರೆಯಿರಿ ಎಂದು ಹೇಳಿದರು. ನಾನು 'ಬಂಡಾಯ ಸಾಹಿತ್ಯ'ವನ್ನು ಯಾಕೆ, ಯಾವುದನ್ನೂ ಸರಿಯಾಗಿ ಓದಿಕೊಂಡಿರಲಿಲ್ಲ. ಮೂರು ದಿನ ಸಂಕಟಪಡಬೇಕಾಯಿತು. ಬರೆದೆನಾದರೂ ಅದು ವಿಶ್ವವಿದ್ಯಾಲಯದಲ್ಲಿದ್ದವರಿಗೆ ಪ್ರಿಯವಾಗಲು ಸಾಧ್ಯವೇ? ಆದರೆ ಕನ್ನಡ ವಿಶ್ವವಿದ್ಯಾಲಯದಲ್ಲಿದ್ದ ಕೆ.ವಿ.ಎನ್., ಎಚ್.ಎಸ್.ಆರ್., ಶ್ರೀನಿವಾಸರಾಜು, ರಹಮತ್ ತರೀಕೆರೆ ಮುಂತಾದವರಿಗೆ ನನ್ನ ಕಥೆಗಳು ಪ್ರಿಯವಾಗಿದ್ದವು. ನನಗೊಂದು ಕೆಲಸ ಸಿಕ್ಕಿತು. ನಿಜವಾದ ಓದು ಶುರುವಾಗಬೇಕಿತ್ತು. ಆದರೆ ಕಥೆಗಳು ಬೆನ್ನು ಬಿಟ್ಟಿರಲಿಲ್ಲ. ಆರಂಭದಲ್ಲಿ ಡಿ.ಆರ್.ನಾಗರಾಜ ನಮ್ಮ ವಿಶ್ವವಿದ್ಯಾಲಯದಲ್ಲಿ ಕಾವ್ಯ ಮೀಮಾಂಸೆ ಕುರಿತು ಉಪನ್ಯಾಸ ಮಾಡಿದರು. ಬೆಳಿಗ್ಗೆಯಿಂದ ಸಂಜೆವರೆಗೆ ನಾನು ಕುಳಿತು ಕೇಳಿದೆ. ಏನೂ ತಿಳಿಯಲಿಲ್ಲ. ಅಲ್ಲಿ ಕುಳಿತಿದ್ದೆನಾದರೂ ನನ್ನ ಕಥೆಯೊಂದು ಬೆನ್ನುಹತ್ತಿ ತನ್ನತ್ತಲೇ ಎಳೆದುಕೊಂಡಿತು. ಡಿಆರ್ ಅವರ ಉಪನ್ಯಾಸ ನನ್ನ ತಲೆಗೆ ಸೇರಲೇ ಇಲ್ಲ. ಉಪನ್ಯಾಸ ಮುಗಿಸಿ ಅವರು ಹೋದರು. ನಾನು ಕಥೆ ಬರೆದು 'ತಮಂಧದ ಕೇಡು' ಎಂದು ಹೆಸರಿಟ್ಟು, ಪ್ರಜಾವಾಣಿ ದೀಪಾವಳಿ ಕಥಾಸ್ಪರ್ಧೆಗೆ ಕಳಿಸಲು ಯೋಚಿಸಿದೆ.

ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದು ಈಗೀಗ ತಕ್ಕಮಟ್ಟಿಗೆ 'ಸಾಹಿತ್ಯ'ವನ್ನು ಓದುತ್ತಿದ್ದೇನೆ. ಹಾಗೆ ನೋಡಿದರೆ ಶ್ರೀವಿಜಯ, ಪಂಪ, ಬಸವ, ಅಲ್ಲಮ, ಅಕ್ಕ, ಕುಮಾರವ್ಯಾಸ, ಬೇಂದ್ರೆ, ಕುವೆಂಪು, ಲಂಕೇಶ, ತೇಜಸ್ವಿ ಮಹಾದೇವ ಬರೆದದ್ದು ಏನನ್ನು? ಎಂದು ಯೋಚಿಸುತ್ತಲೇ ಇದ್ದೇನೆ. ಯಾವುದೇ ಲೇಖಕ ತಾನು ಇಷ್ಟಪಡುವ ಬಾಳನ್ನು ಮತ್ತು ಇಷ್ಟಪಡದ ಬಾಳನ್ನು ಮುಖಾಮುಖಿ ಮಾಡುತ್ತ ಬಂದಿದ್ದಾನೆ ಎಂದು ನಾನು ತಿಳಿದಿದ್ದೇನೆ. ನನ್ನ ಬರೆಹವೂ ಇದೇ ಪ್ರಯತ್ನದಲ್ಲಿದೆ. ಪಂಪಭಾರತ, ಅಲ್ಲಮನ ವಚನ, ಗದುಗಿನ ಭಾರತ, 'ಮಲೆಗಳಲ್ಲಿ ಮದುಮಗಳು', 'ಕುಸುಮಬಾಲೆ' ಓದಿದರೆ ಅವು ಓದುಗರನ್ನು ಇರಿಯುವುದಿಲ್ಲ. ನನ್ನ ಬರೆಹ ಕೂಡ ಇರಿಯಬಾರದು. ಇಂಥದ್ದನ್ನು ಬರೆಯಬೇಕಾಗಿದೆ ಅಷ್ಟೆ. 'ಇರಿಯುವುದು' ಅಂದರೇನು? ನನಗೆ ಹೇಳಲು ಕಷ್ಟವಾಗುತ್ತದೆ.

# ಬರೆಹ ನನಗೆ ಜೀವ ಚೈತನ್ಯ ತುಂಬಿದೆ

● ಅರವಿಂದ ಮಾಲಗತ್ತಿ

ಬರೆಯುವುದು ನನಗೆ ಹಿಂಸೆಯಲ್ಲ. ಆದರೆ 'ನಾನು ಮತ್ತು ನನ್ನ ಬರಹ' ಎಂದು ಬರೆಯಲು ಮನಸ್ಸೇಕೋ ಹಿಂಜರಿಯುತ್ತಿದೆ. ಎಲ್ಲಿ ನನ್ನನ್ನು ನಾನು ಮರೆತು ಬಿಡುತ್ತೇನೋ ಎನ್ನುವ ಭಯ. ಗಾಳಿ ತುಂಬಿದ ಬಲೂನಿನಂತೆ ಒಡೆಯಬಹುದೇನೋ ಎನ್ನುವ ಆತಂಕ. ಹೀಗಾಗಿ ಹಿಂಜರಿಕೆ. ಆದರೆ ಸ್ನೇಹದ ಒತ್ತಾಯ ಒಂದೆಡೆ. ಬಾಳೆಗೊನೆ ಬಿಡುವುದನ್ನು ನೋಡಿ ನೋವಿಗೆ ತಾಳೆ ಹೆದರಿದರೂ ಆ ನೋವಿನಲ್ಲೂ ಸುಖವಿದೆ ಎನ್ನುವುದು ನಿಜ. ಸುಖ ಸಂಕಟದ ನಡುವೆ ನಿಂತು ಪ್ರಜ್ಞಾಪೂರ್ವಕವಾಗಿಯೇ ಬರೆಯುತ್ತೇನೆಂಬ ವಿಶ್ವಾಸದೊಂದಿಗೆ ಕಾಗದ ಕಪ್ಪು ಮಾಡುತ್ತಿರುವೆ.

ಗೆಳೆಯ, ಎಲ್ಲಿಂದ ಆರಂಭಿಸಬೇಕು ತಿಳಿಯುತ್ತಿಲ್ಲ. ಪೂರ್ವಭಾವಿ ಸಿದ್ಧತೆಗಳೇನೂ ಇಲ್ಲ. ಇದಕ್ಕಾಗಿ ಸಿದ್ಧತೆ ಬೇಕು ಎನಿಸುತ್ತಿಲ್ಲ. ನನ್ನ ಮಹಾಪ್ರಬಂಧದ ಮಾರ್ಗದರ್ಶಕರು ಹೇಳಿದ ಒಂದು ಮಾತು ಈಗಲೂ ಮನಸ್ಸಿನ ಆಳದಲ್ಲಿ ಉಳಿದಿದೆ. "ಸಿದ್ಧತೆ ಇಲ್ಲದೆ ಪಾಠ ಮಾಡಲು ತರಗತಿಗೆ ಹೋಗಬೇಡ. ಸಿದ್ಧತೆ ಮಾಡಲಾಗದಿದ್ದರೆ ರಜೆ ಹಾಕಿ ಬಿಡು." ಅವರ ವೃತ್ತಿಯ ಅನುಭವದ ಈ ಮಾತು ನನಗೆ ಭದ್ರವಾದ ಪಾಯ ಒದಗಿಸಿತು. ಹೀಗಾಗಿ ಏನೇ ಬರೆಯುವ ಅಥವಾ ಹೇಳುವ ಸಂದರ್ಭ ಬಂದಾಗ ಆ ಮಾತು ನೇರವಾಗಿ ಎದೆಗೆ ಒದೆಯುತ್ತದೆ. ಆ ಒದೆತದ ಅರಿವು ಈಗಲೂ ನನ್ನೊಂದಿಗಿದೆ.

ಬದುಕಿನ ವಾಸ್ತವದ ಅನುಭವಗಳು ನಮಗೆ ಮಿತಿಯನ್ನು ಹೇರಿ ಬಿಡುತ್ತವೆ. ಪರಿಸರ ನಮ್ಮ ಬದುಕನ್ನು ರೂಪಿಸುತ್ತದೆ ಮತ್ತು ನಿಯಂತ್ರಿಸುತ್ತದೆ ಎನ್ನುವ ಎಚ್ಚರವಿದ್ದಾಗಲೂ ಕೆಲವೊಮ್ಮೆ ಸೀಮಾರೇಖೆ ದಾಟಲಾಗದೆ ಸೋಲುತ್ತೇನೆ ಮತ್ತೆ ಒತ್ತಾಯಪೂರ್ವಕವಾಗಿ ಎಳೆದುಕೊಂಡು ಮುಂದಕ್ಕೆ ಹೋಗುತ್ತೇನೆ. ಸಾಕಷ್ಟು ಕ್ರಮಿಸಿದ್ದೇನೆಂದು ಮರಳಿ ನೋಡಿದರೆ ಇದ್ದ ಸ್ಥಾನದಲ್ಲಿಯೇ ಇದ್ದೇನೆ ಎನಿಸಿಬಿಡುತ್ತದೆ. ನನ್ನನ್ನು ನಾ ಮೀರಬೇಕೆಂಬ ಇಂಥ ಎಚ್ಚರಗಳು ನನ್ನೊಂದಿಗಿದ್ದು ನಾ ನನ್ನನ್ನು ಮೀರದೆ ಹೋದುದು ಹೇಗೆ? ಕಟುವಿಮರ್ಶೆಗೆ ನನ್ನನ್ನು ನಾನೇ ಅಪ್ಪಳಿಸಿಕೊಳ್ಳುತ್ತೇನೆ. ಅಪ್ಪಳಿಸಿದ ರಭಸಕ್ಕೆ ನೀರು ಛಿದ್ರವಾಗಿ ಹತ್ತೂ ದಿಕ್ಕಿಗೆ ಚದುರಿ ಹರಿಯದಂತೆ ಮಾಡುವವರ ಒತ್ತಾಯದ ಹಿಂದಿರುವ ಪ್ರೀತಿಯನ್ನು ಕಂಡಾಗ ಕ್ಷಣ ಸುಳಿಯ ನೀರಾಗಿ ತಿರುಗುತ್ತೇನೆ, ಮತ್ತೆ ಮುಂದೆ ಸಾಗುತ್ತೇನೆ.

ನನ್ನ ಬರಹ ನನಗೆ ಜೀವ ಚೈತನ್ಯವನ್ನು ತುಂಬಿದೆ. ನೈತಿಕತೆಯೇ ಅದರ ಬೆನ್ನೆಲುಬು ಎಂದು ಭಾವಿಸಿದ್ದೇನೆ. ವಾಸ್ತವದ ಬದುಕಿಗೂ ಸಾಹಿತ್ಯಕ್ಕೂ ಸಂಬಂಧಬೇಕು ಎನ್ನುವವ ನಾನು. ಹೀಗಾಗದಿದ್ದಲ್ಲಿ ಬರಹಕ್ಕೂ ಬದುಕಿಗೂ ಬೆಲೆ ದಕ್ಕುವುದಿಲ್ಲ. ಸಾಮಾಜಿಕ ಜವಾಬ್ದಾರಿ ಎನ್ನುವ ಪರಿಕಲ್ಪನೆಯುಳ್ಳವ ಇದರಿಂದ ಬಿಡಿಸಿಕೊಳ್ಳಲಾಗದು.

ಸೃಜನವೇ ಇರಲಿ, ಸೃಜನೇತರ ಬರಹವೇ ಇರಲಿ, ಯಾವುದಕ್ಕೂ ಧ್ಯಾನ ಬೇಕು. ಬರಹ ಎಂಬುದೇ ಬೆಳಕಿನ ಲೋಕ, ಧ್ಯಾನದ ಕಾವು ಸಿಕ್ಕಟ್ಟು ಬೆಳಕು ಶುಭ್ರತೆಯೆಡೆಗೆ ಕರೆದೊಯ್ಯುತ್ತದೆ. ಮಾನವೀಯತೆಯನ್ನರಿಯದ ಬೆಳಕು ಕತ್ತಲಿಗೆ ಸಮಾನ. ನಾವು ಜನಪರವಾಗುತ್ತಲೇ ಬರಹವನ್ನು ಜನಪರವಾಗಿಸಬೇಕು. ಅವಸರದಲ್ಲಿ ಹೆತ್ತ ಕೂಸು ಕುಟುಂಬಕ್ಕೂ ಸಮಾಜಕ್ಕೂ ಮಾರಕ. ಹೀಗೆ ಹೆರುವುದಕ್ಕಿಂತ ನಾನು ಬಂಜೆಯಾಗಿರಬಯಸುತ್ತೇನೆ. ಕಾವ್ಯ, ಕಥಾನಕ, ನಾಟಕ, ವಿಮರ್ಶೆ, ಸಂಶೋಧನೆ ಎಲ್ಲವೂ ವರ್ತಮಾನದ ಸಮಾಜಕ್ಕೆ ಮುಖಾಮುಖಿಯಾಗಬೇಕು. ಶುದ್ಧ ಸಾಹಿತ್ಯವೆಂಬುದೂ ಬೇಕು. ಆದರೆ ಸಮಾಜದ ಆರೋಗ್ಯವನ್ನು ಹದಗೆಡಿಸುವ ಸ್ವರೂಪದಲ್ಲಲ್ಲ. ಈ ಹಿನ್ನೆಲೆಯಲ್ಲಿಯೇ ಸದಾ ನನ್ನ ಲೇಖನಿ ತುಡಿಯಲು ಪ್ರಯತ್ನಿಸಿದೆ. ಆದರೆ ತುಡಿತದ ಒತ್ತಡದ ಸ್ವರೂಪದ ಬಗ್ಗೆ ಓದುಗರೇ ಹೇಳಬೇಕಲ್ಲವೆ?

ಸಾಹಿತ್ಯದ ಸಂಗಡ ಬದುಕುವುದೆಂದರೆ ಸಮಾಜದೊಂದಿಗೆ ಬದುಕುವುದೆಂದರ್ಥವಲ್ಲವೆ? ಬರಹ ಬಗೆಯುವುದಕ್ಕೆ ವಿನಾ ಭಾಗಿಸುವುದಕ್ಕಲ್ಲ. ಕೇವಲ ಮನೋಲ್ಲಾಸಕ್ಕಲ್ಲ ಅಥವಾ ಯಾಂತ್ರಿಕ ಕ್ರಿಯೆಯೂ ಅಲ್ಲ. ಸಮಾಜದ ಅರಿವುಳ್ಳ ವ್ಯಕ್ತಿಗೆ ಬರಹ ಸಾಮಾಜಿಕ ಜವಾಬ್ದಾರಿ. ಬರಹದ ಬೇರು ಸಮಾಜದಾಳಕ್ಕೆ ಇಳಿದಾಗಲೇ ಅದಕ್ಕೆ ಜೀವಂತಿಕೆ. ಮನೋಲ್ಲಾಸದ ಸ್ಪರ್ಶದ ಹೊಳಪು ದಕ್ಕದಂತೆ, ಕಲೆಗೆ ತಿರುಗಿದಂತೆ. ಸಾಹಿತ್ಯದ ಮುಖ ಕಲೆಯೆಡೆಗೆ ತಿರುಗಬೇಕೇ ವಿನಾ ಕಲೆಯಾಗಿ ನಿಲ್ಲಬಾರದು ಎನಿಸುತ್ತದೆ. ಸಾಹಿತ್ಯ ಕಲೆಯಾಗುವುದೆಂದರೆ ಶಿಲೆಯಾಗುವುದೆಂದೇ ಅರ್ಥ. ಸಾಹಿತ್ಯ ಸಮಾಜಕ್ಕಾಗಿಯೇ ಹುಟ್ಟುವುದಿಲ್ಲ. ಏಕೆಂದರೆ ಯಾರೂ ಸಮಾಜಕ್ಕಾಗಿಯೇ ಬದುಕುವುದಿಲ್ಲ. ಹಾಗೇನಾದರೂ ವಾದಿಸಿದರೆ ಆತ ತನ್ನ ಒಂದು ಮುಖವನ್ನು ಮಾತ್ರ ತೋರಿಸುತ್ತಿದ್ದಾನೆಂದೇ ಅರ್ಥವಲ್ಲವೇ?

ಪದ್ಯ ಹೇಳಲಾಗದ ಸತ್ಯಗಳನ್ನು ಹೇಳುತ್ತದೆ. ಗದ್ಯ ಹೇಳಬಹುದಾದ ಸತ್ಯಗಳನ್ನು ಹೇಳುತ್ತದೆ. ಬರಹಗಾರ ಅಭಿವ್ಯಕ್ತಿಯ ಮಾರ್ಗಗಳನ್ನು ಆಯ್ದುಕೊಳ್ಳುವಾಗ ವಿಷಯ ಪ್ರಧಾನವಾಗುತ್ತದೆ. ಕಾವ್ಯಕ್ಕಿರುವ ಮುಚ್ಚುವ ಪ್ರಕ್ರಿಯೆ ಗದ್ಯಕ್ಕಿರುವ ಬಿಚ್ಚುವ ಪ್ರಕ್ರಿಯೆಗಳ ಇತಿಮಿತಿಗಳನ್ನು ಅರಿತ ಪ್ರಜ್ಞಾವಂತ ಬರಹಗಾರ ಇವುಗಳನ್ನು ಸಮರ್ಥವಾಗಿ ಬಳಸಿಕೊಳ್ಳುತ್ತಾನೆಂದು ನಂಬಿದ್ದೇನೆ. ಪದ್ಯಕ್ಕೂ ಗದ್ಯಕ್ಕೂ ರಾತ್ರಿ ಹಗಲುಗಳಷ್ಟೇ ಅಂತರ. ಮುಸ್ಸಂಜೆ ಹಾಗೂ ಚೆಂಬೆಳಕಿನ ಪರಿಸರದ ಬರಹವೇ ಉತ್ಕೃಷ್ಟ ಮಾರ್ಗವೆಂದು ನಾನಂದುಕೊಂಡಿದ್ದೇನೆ. ನಿನಗೂ ಹಾಗನಿಸಿದ್ದರೆ ನಾವು ಒಂದೇ ದೋಣಿಯಲ್ಲಿ ಚಲಿಸಿದಂತಲ್ಲವೆ?

ಬರಹ ಮತ್ತು ಬದುಕಿನ ಪ್ರಶ್ನೆ ಬಂದಾಗ, ಬದ್ಧತೆಯ ಮಾರ್ಗ ತುಳಿದರೆ ಬದುಕು ಬಂಧನವಾಗುವುದೇ ಹೆಚ್ಚು. ಸಾಮಾಜಿಕ ಜವಾಬ್ದಾರಿ ಎಂಬ 'ಟಾರ್ಚ್' ಹಿಡಿದು ಹೊರಟಾಗ ಇದು ಅನಿವಾರ್ಯ. ಎಷ್ಟೋ ಬಾರಿ ತಲೆ ಭೂಮಿಗಿಂತ ಭಾರವೆನಿಸಿಬಿಡುತ್ತದೆ. ಬಹುಶಃ ಬರಹವನ್ನು ಬಂಡವಾಳವಾಗಿ ಪರಿವರ್ತಿಸಲಾಗದ ನನ್ನಂಥವರ ಬಗೆ ಇದಾಗಿರುತ್ತದೆ ಎನಿಸುತ್ತದೆ. ನನ್ನ ಗೌರ್ಮೆಂಟ್ ಬ್ರಾಹ್ಮಣ ಕೃತಿ ಪ್ರಕಟವಾದಾಗ ಕೆಲ ಸ್ನೇಹಿತರು "ಅಯ್ಯೋ ಮಾಲಗತ್ತಿ ಬದುಕನ್ನು ಬರೆದು ಮಾರಿಕೊಂಡು ತಿನ್ನುವುದಕ್ಕೆ ಪ್ರಾರಂಭಿಸಿದನೆ?" ಎಂದರಂತೆ!

ಯಾವುದು ಖಾಸಗಿ ಯಾವುದು ಸಾರ್ವಜನಿಕ ಎನ್ನುವುದೇ ಅರ್ಥವಾಗುತ್ತಿಲ್ಲ. ಅಸ್ಪೃಶ್ಯವಾಗಿ ಹುಟ್ಟಿದ ತಪ್ಪಿಗೆ ಸಮಾಜವನ್ನು ಪ್ರಶ್ನಿಸಿದ ತಪ್ಪಿಗೇನೋ ಎನ್ನುವಂತೆ ನಾ ಕೇಳಿದ ಪ್ರಶ್ನೆಗಳು ಇಂದು ನನಗೇ ಎದುರು ನಿಲ್ಲುತ್ತಿರುವುದನ್ನು ನೋಡಿದಾಗ, ನಿಷ್ಕರುಣಿ ಕಾಲದ ಬಗ್ಗೆ ಕನಿಕರವೆನಿಸುತ್ತದೆ. ಓದಿನಾಳಕ್ಕಿಳಿಯದೆ ಮಾತನಾಡುವವರನ್ನು ಕಂಡಾಗ ಮರುಕವೆನಿಸುತ್ತದೆ. ನಾನು ಸಾಚಾ, ನನ್ನ ಬರವಣಿಗೆ ಸಾಚಾತನದಿಂದ ಕೂಡಿದ್ದು ಎಂದು ಹನುಮಂತನ ಹಾಗೆ ಎದೆ ಹರಿದು ತೋರಿಸಿ ನಾನು ಯಾರನ್ನೂ ಮೆಚ್ಚಿಸಬೇಕಾಗಿಲ್ಲ. ಅದು ನನ್ನ ಬರಹದ ಉದ್ದೇಶವೂ ಅಲ್ಲ. ಸ್ವಾರಸ್ಯವೆಂದರೆ ಓದುಗರು ಬರಹದ ಹೊರತಾದ ಉದ್ದೇಶಗಳನ್ನು ಬರಹದಲ್ಲಿ ಹುಡುಕುವುದನ್ನು ಕಂಡಿದ್ದೇನೆ. ಇಂಥ ಸಂದರ್ಭದಲ್ಲಿ ದಿವ್ಯ ನಿರ್ಲಕ್ಷ್ಯ ವಹಿಸಿ ಬಿಡುತ್ತೇನೆ.

ವಾಸ್ತವವಾಗಿ ನಾನು ಬೆಳಕನ್ನು ಪ್ರೀತಿಸಿದಷ್ಟೇ ಕತ್ತಲನ್ನೂ ಪ್ರೀತಿಸುತ್ತೇನೆ. ಕತ್ತಲು ಇಲ್ಲದಿದ್ದರೆ ಬೆಳಕಿಗೆ ಅರ್ಥವೇ ಇರುತ್ತಿರಲಿಲ್ಲ. ಈ ಕತ್ತಲ ಪ್ರೀತಿ ನನ್ನನ್ನು ಹೆಚ್ಚು ಏಕಾಂಗಿಯಾಗಿಸಿದೆ. ಪ್ರಜ್ಞಾವಂತನನ್ನಾಗಿಸಿದೆ. ನನ್ನ ಬರಹದ ಬಹುಪಾಲು ಕತ್ತಲಲ್ಲಿಯೇ ದೀಪದೆದುರು ಕುಳಿತು ಬರೆದಿದ್ದು. ದೀಪ ನನ್ನನ್ನು ಮಲಗಿಸದೆ ಬರೆಯಿಸಿದೆ. ಹೀಗಾಗಿ ನನಗೂ ಕತ್ತಲಿಗೂ ಎಲ್ಲಿಲ್ಲದ ನಂಟು. ಕತ್ತಲು ಪರಿಸರವನ್ನು ನಿರ್ಮಿಸಿಕೊಟ್ಟಿದೆ. ರಾತ್ರಿ ಎರಡು ಗಂಟೆಗಿಂತ ಮೊದಲೇ ಮಲಗಿದ ದಿನಗಳು ನನ್ನ ವಯದಲ್ಲಿ ತುಂಬ ಕಡಿಮೆ. ಹೀಗಾಗಿಯೇ ನಿಶಾಚರನೆಂದು ನಿನ್ನಂತಹ ಗೆಳೆಯರಿಂದ ಕರೆಯಿಸಿಕೊಂಡಿದ್ದೇನೆ.

ಪಂಚತಂತ್ರದಲ್ಲಿ ಬರುವ ಕಟುಕನ ಹಾಗೂ ಮಠದ ಗಿಳಿಗಳ ಕಥೆ ನನಗೆ ಹೆಚ್ಚು ಪ್ರಿಯವಾದುದು. ಅದಕ್ಕೆ ಕಾರಣ ಈ ಕಥೆ ಹುಟ್ಟನ್ನು ಕುರಿತಾದ ಮೂಲಭೂತ ಸಿದ್ಧಾಂತವನ್ನೇ ಹೊಡೆದು ಹಾಕುತ್ತದೆ. ಹುಟ್ಟಿನ ಮೂಲದ ಕುರಿತು ಸಿದ್ಧಾಂತಗಳು ದಲಿತರನ್ನು ಮಹಿಳೆಯರನ್ನು ಅಧಿಕೃತವಾಗಿ ಕಾಡುತ್ತವೆ. ಅವರಿಂದ ಬರೆಸುತ್ತವೆ. ಆದರೆ ಸಿದ್ಧಾಂತಗಳನ್ನು ಕಟ್ಟಿದವರನ್ನು ಈ ಸಿದ್ಧಾಂತಗಳು ಕಾಡದಿರುವುದು ಈ ನೆಲದ ವಿಶೇಷ ಅಲ್ವಾ?

ಸೃಜನ ಭಾವಕೇಂದ್ರಿತ, ವಿಮರ್ಶೆ ಬುದ್ಧಿಕೇಂದ್ರಿತ. ಸೃಜನ ಸರಮಾಡುತ್ತ ಮೊಟ್ಟೆಯ ರೂಪ ಕೊಟ್ಟರೆ, ವಿಮರ್ಶೆ ಮರಿಗೆ ಬದುಕಿನ ಮಾರ್ಗವನ್ನು ತೋರಿಸುತ್ತದೆಂದೇ ನಾನು ತಿಳಿದಿದ್ದೇನೆ. ವಿಮರ್ಶೆಯ ಗ್ರಹಿಕೆ ಬೆಳೆದಂತೆ ನನ್ನ ಸೃಜನ ಬರಹದ ಸಂಬಂಧ ಕ್ಷೀಣಿಸಿದೆ. ಭಾವ ಬುದ್ಧಿಗಳ ಮೇಳದಲ್ಲಿ ಗೆಲ್ಲುವುದು ಅನುಭವವೇ ಆಗಿದೆ. ಹೀಗಾಗಿ ಅದು ಸಂಕೀರ್ಣತೆಗೆ ಪ್ರತೀಕವಾಗಿದೆ.

ಅನುಭವ ಮತ್ತು ಶಬ್ದ ಸಂಪತ್ತು ಬರಹಕ್ಕೆ ದೊಡ್ಡ ಶಕ್ತಿ. ಬರಿ ಅನುಭವವಿದ್ದರೆ ಸಾಲದು, ಶಬ್ದ ಸಂಪತ್ತು ಬೇಕು ಎನಿಸುತ್ತದಲ್ಲವೆ? ಅಕ್ಷರಗಳ ಸಾಮರ್ಥ್ಯಕ್ಕೆ ನಾನು ಸಂಪೂರ್ಣ ಸೋತು ಪರವಶನಾಗಿದ್ದೇನೆ. ತರಗತಿಯಲ್ಲಿ ಬಳಪ ಹಿಡಿದು ಪಾಠ ಮಾಡುತ್ತ ಕರಿಹಲಗೆಯ ಮೇಲೆ ಶಬ್ದದ ಒಂದಕ್ಷರ ಬರೆಯುವ ನನ್ನ ಹವ್ಯಾಸದಲ್ಲಿ ಉದ್ಭವವಾದ ಶಬ್ದಗಳನ್ನು ಕಂಡು ಬೆರಗಾಗಿ ಅವಾಕ್ಕಾಗಿ ನನ್ನಷ್ಟಕ್ಕೆ ನಾನೇ ಹಿಮಗಿರಿಯನ್ನೇರಿದ್ದೇನೆ, ಕೆಲ ಬಾರಿ ಜಾರಿ ಬಿದ್ದಿದ್ದೇನೆ.

ಅನುಭವವನ್ನು ವ್ಯಕ್ತಿನಿಷ್ಠ, ಸಮೂಹನಿಷ್ಠವೆಂದು ವರ್ಗೀಕರಿಸುವುದು ತುಂಬ ಸರಳವಾದುದಲ್ಲವೆ? ಸಮಷ್ಟಿಯ ಅನುಭವ ಕೆಲವೊಮ್ಮೆ ಭಯಾನಕವೆನ್ನಿಸಿ ವ್ಯಷ್ಟಿತನಕ್ಕೆ ಬೆಂಕಿ ಹಚ್ಚಿವೆ. ಕೆಲವು ಸಲ ಬೆಚ್ಚಗೆ ಕಾವು ಕೊಟ್ಟಿವೆ. ವ್ಯಷ್ಟಿಯ ಅನುಭವಗಳೇ ಸಮಷ್ಟಿಯತೆಗೆ ದಾರಿ ತೋರಿವೆ. ಕೆಲ ಬಾರಿ ದಾರಿ ತಪ್ಪಿಸಿದ್ದೂ ಇದೆ. ಹೀಗಾಗಿ ಯಾವ ಅನುಭವವೂ ಸ್ವತಂತ್ರವೆನಿಸುವುದಿಲ್ಲ. ಯಾವುದಕ್ಕೂ ಪ್ರತ್ಯೇಕ ಅಸ್ತಿತ್ವವಿದೆ ಎನಿಸುವುದಿಲ್ಲ.

ಅಕ್ಷರಗಳು ಮರಳಿನ ಹಾಗೆ. ಮರಳು ಮರಳಿಗೆ ಸೇರಿ ಹುಟ್ಟುವ ಆಕಾರ ಜೀವ ಪಡೆಯುತ್ತದೆ. ಅಕ್ಷರಗಳಿಗೆ ಜೀವಂತಿಕೆ ಬರುವುದೆಂದರೆ ಮರುಭೂಮಿಯಲ್ಲಿ ಒಯಸಿಸ್ ಕಂಡಂತೆ. ಈ ಅಕ್ಷರ-ಶಬ್ದಗಳ ರುಚಿ ಕಂಡವ ಸಾಮಾಜಿಕ ಜವಾಬ್ದಾರಿಯನ್ನು ಮರೆತು ಅದೇ ಲೋಕದಲ್ಲಿ ಜೂಜಿಗಿಳಿಯುವ ಸಾಧ್ಯತೆಗಳೇ ಹೆಚ್ಚು. ಇದರಿಂದ ತಪ್ಪಿಸಿಕೊಂಡವ ಕಡಲ ನೀರಾಗದೆ ಕುಡಿವ ನೀರಾಗುತ್ತಾನೆ. ಜ್ಞಾನದ ಕಾಡಲ್ಲಿ ಭಿಕಾರಿಯಾಗುತ್ತಾನೆ. ಹಾಗೆ ಭಿಕಾರಿಯಾಗುವುದು ನನಗೆ ಬಹಳ ಪ್ರಿಯವಾದುದು.

ನನ್ನೊಳಗೇ ಒಬ್ಬ ಅರವಿಂದನಿದ್ದಾನೆ. ಅವನು ನನಗಿಂತಲೂ ಸೂಕ್ಷ್ಮ, ಸ್ಥಿತ ಪ್ರಜ್ಞೆಯುಳ್ಳವ. ಆತ ನನ್ನನ್ನು ಅಕ್ಷರಕ್ಷರಕ್ಕೂ ವಿಮರ್ಶಿಸುತ್ತಾನೆ. ನನ್ನ ಒತ್ತು ನಿನಗಿಂತಲೂ ಹೆಚ್ಚು ಆತನಿಗೆ. ಆತನಿಗೆ ವಿರುದ್ಧವಾಗಿ ನಾನಿರಲು ಬಯಸುವುದಿಲ್ಲ. ಆತ ನನ್ನ ಕೆನ್ನೆಗೆ ಹಲವಾರು ಬಾರಿ ಹೊಡೆದಿದ್ದಾನೆ. ಮೂಡಿದ ಬರೆಗಳು ಮಾಸದೆ ಉಳಿದಿವೆ. ಕೆಲವರ ವಿಚಾರಗಳಿಗೆ ಹಲವಾರು ಬಾರಿ ಖಾರವಾಗಿ ಪ್ರತಿಕ್ರಿಯಿಸಿದ್ದರೆ ಅದು ಆತನ ಪ್ರೇರಣೆಯಿಂದಲೇ. ಆದರೆ ನನ್ನೊಳಗಿನ ಅರವಿಂದನನ್ನು ಮೀರಲಾಗಲಿಲ್ಲವಲ್ಲ ಎಂದು ನೀನೆಣಿಸಲಾರೆ ಎಂದು ನನಗೆ ಗೊತ್ತು. ಏಕೆಂದರೆ ನಿನ್ನೊಳಗಿನ ನಿನ್ನನ್ನು ಮೀರಿಸಲು ನಿನ್ನಿಂದಾಗದು ಎಂದು ನೀನರಿತಿರುವೆ ಎಂದು ನಾನು ತಿಳಿದಿರುವೆ.



## ಸಾರ್ಥಕ ಪ್ರಶ್ನೆಗೆ ನಿರರ್ಥಕ ಉತ್ತರಗಳು

● ಆನಂದ ಜಂಝುರವಾಡ

'ನಾನೇಕೆ ಬರೆಯುತ್ತೇನೆ' ಲೇಖನ ಕೇಳಿದ್ದಾರೆ. ಬರೆಯುತ್ತೇನೆಂದು ಬರೆದು ಬಿಟ್ಟಿದ್ದೇನೆ. ಬರೆಯಲು ಕುಳಿತಿದ್ದೇನೆ.

ತುಂಬ ದಣಿವು, ಹಿಂದಿನ ವಾರವೆಲ್ಲ ಗೌರಿ-ಗಣಪತಿಯ ಪೂಜೆ, ಕಚೇರಿಯಲ್ಲಿ 'ಬಜೆಟ್' ಕೆಲಸದ ಭಾರ, ಪುಸ್ತಕ-ಪರಿಷತ್ತಿನ ಸಭೆ, ಉರುಲು ಬಿಗಿಯುತ್ತಿರುವ ಅರ್ಥ-ವ್ಯವಹಾರಗಳು, ಸುಸ್ತೋ ಸುಸ್ತು. ಮನುಷ್ಯರು ಎದುರಾಗುತ್ತಾರೆ. ಅನಿವಾರ್ಯವಾದಾಗ ರೂಢಿಗತ ಮಾತಾಡುತ್ತೇವೆ. ಮತ್ತೇ ಕಣ್ತಪ್ಪಿಸಿ ಪಾರಾಗುತ್ತೇನೆ. ಈಗ ರಾತ್ರಿ ೧೦ ಗಂಟೆ.

ಪ್ರಸನ್ನವೆಂಕಟದಾಸರ ಆರಾಧನೆಯ ಕಾರ್ಯಕ್ರಮ ಮೈಕಿನಲ್ಲಿ ಕೇಳುತ್ತಿದೆ. ಪರಿಚಿತ ಗಾಯಕನ ಧ್ವನಿ. ಆಹಾ, ಎಷ್ಟು ವಯ್ಯಾರದಲ್ಲಿ ತಾನಗಳ ಎಳೆ ಎಳೆ ನೇಯುತ್ತಿದ್ದಾನೆ ಕಲಾವಿದ. ದಾಸರ ಕೀರ್ತನೆಗಳನ್ನು ತನ್ಮಯತೆಯಿಂದ ಹಾಡಿ ಈ ಲೋಕದ ಬಗೆಗೆ ಒಂದು ಉದಾಸೀನ ತೆಯ ಭಾವವನ್ನೇ ಹುಟ್ಟಿಸುತ್ತಿದ್ದಾನೆ. ಭೈರವಿಯ ಶೃಂಗಕ್ಕೆ ಬಂದಾಗಲಂತೂ ಕಣ್ಣು ತುಂಬಿ ಬಿಡುತ್ತದೆ. ಅದೇ ಪರಿಚಿತ ಕೀರ್ತನೆ. ದಾಸರು ತಮ್ಮ ಕೊನೆಗಾಲದಲ್ಲಿ ಪರಮಾತ್ಮನಿಗೆ ತಮ್ಮ "ಪ್ರಾಣ-ಕಷ್ಟ"ವನ್ನು ಕೊಡುವ ರೂಪಕ.

ಇಲ್ಲ ಇದಾವುದು ನಿಜವಲ್ಲ. ಹೀಗೆ ನಮ್ಮನ್ನು ಒಂದು ಭ್ರಮಾತ್ಮಕ ಲೋಕಕ್ಕೆ ಕರೆಯೊಯ್ದು, ಧೊಪ್ಪನೆ ಕೆಳಗುರುಳಿಸುವ ಕಲೆಯ ಬಗೆಗೆ ನನಗೆ ಸ್ವಲ್ಪ ತಿರಸ್ಕಾರವೇ ಇದೆ. ಇಂದು ರಾತ್ರಿ ಇಂಥ ಅದ್ಭುತ ಲೋಕ ಒಂದನ್ನು ಕಟ್ಟಿಕೊಟ್ಟ ಕಲಾವಿದ ನಾಳೆ ಬೆಳಿಗ್ಗೆ ಪೇಟೆಯಲ್ಲಿ ಭೇಟಿಯಾದಾಗ, ಈಗ ಒಂದು ಅನನ್ಯ ಲೋಕವನ್ನು ಸೃಷ್ಟಿಸಬೇಕೆಂಬ ಸತತ ಹಂಬಲವುಳ್ಳವನೆಂದು ಎನ್ನಿಸುವದೇ ಇಲ್ಲ. ಆತನೂ ವ್ಯವಹಾರಿ, ಲೆಕ್ಕಚಾರದ ವೃತ್ತಿಯವ, ಎಲ್ಲಕ್ಕಿಂತ ಹೆಚ್ಚಾಗಿ ಮಾಧ್ಯಮಗಳ ಜೊತೆಗೆ ಕೀಲಿಸಿಕೊಂಡವ ತನ್ನ ವೃತ್ತಿ-ಚಾತುರ್ಯ ವನ್ನೂ, ಅಧ್ಯಾತ್ಮ-ಸಾಧನೆಯ ಚಟುವಟಿಕೆ ಎಂಬಂತೆ ತಾನೇ ನಂಬುವ, ನಂಬಿಸುವ ವೈದಿಕ-ತಂತ್ರಜ್ಞಾನದಲ್ಲಿ ಪಳಗಿದವ. ನನಗೆ ಕಾಲಕೆಳಗಿನ ನೆಲ ಕುಸಿದಂತಾಗುತ್ತದೆ.

ಹೌದು, ಲಕ್ಷಾಂತರ ಚಪ್ಪಾಳೆಗಳನ್ನು ಗಳಿಸಿದ ಪಂಡಿತರಿದ್ದರೂ, ಒಬ್ಬ ವ್ಯಕ್ತಿಯ ಅಂತರಂಗವನ್ನೂ ಗಟ್ಟಿಯಾಗಿ ಮುಟ್ಟುವ ತಳಮಳದ, ಸಾಧಕರಿಲ್ಲದ ಜಾತಿಯಲ್ಲಿ ಬೆಳೆದು ಬಂದವ ನಾನು. ಮನೆಯಲ್ಲಿ ಬಾಲ್ಯದಲ್ಲಿ ತುಂಬ ಅರ್ಹವಾದ ಕಲೆಯ ವಾತಾವರಣವಿತ್ತು. ಮುಂದಿನ ವರ್ಷ ವತ್ತು ತಲುಪುವ ನಾನು, ಅರ್ಧಶತಮಾನದಷ್ಟು ಹಿಂದಿನ -ನನ್ನ ಮನಸ್ಸನ್ನು ರೂಪಿಸಿದ-ಅನುಭವಗಳ ಜಗತ್ತನ್ನು ಪುನಃ ಪ್ರವೇಶಿಸಿದರೆ, ಅಲ್ಲಿರುವುದು ಅತ್ಯಂತ ದಟ್ಟ ಬಣ್ಣಗಳಿಂದ ಬರೆದ ಒಂದು ಚಿತ್ರ-ಮೆರವಣಿಗೆ. ಅಪ್ಪ ಮರಾಠಿ ಶಾಲೆಯ ಶಿಕ್ಷಕ. ಅವನಿಗೆ ಮಾಧ್ವ ಸಂಪ್ರದಾಯ ನಿಯತಿಗಿಂತ ಮಹಾರಾಷ್ಟ್ರದ ಮುಕ್ತ-ಧರ್ಮದ ಸಂಪ್ರದಾಯ ದೊಡ್ಡದಾಗಿತ್ತು. 'ಜ್ಞಾನೇಶ್ವರಿ' ಅವನ ಜೀವನ-ಗ್ರಂಥವಾಗಿತ್ತು. ಆತ ಬಹಳ ಸುಂದರವಾಗಿ ಅದನ್ನು ಓದುತ್ತಿದ್ದ. ಅದರ ಮೇಲೆ ಪ್ರವಚನ ಮಾಡುತ್ತಿದ್ದ. ಅವ್ವ,-ನಾವೆಲ್ಲ ಅವಳನ್ನು 'ಮಾಮಿ' ಎಂದೇ ಕರೆಯುತ್ತಿದ್ದೆವು-ಅತ್ಯಂತ್ಯ ಸಹನಶೀಲ ಸೀತೆಯಾಗಿದ್ದಳು. ಸಹಜ ದುಡಿಮೆ, ಆಳವಾದ ಅಂತಃಕರಣ, ಅಚಲವಾದ ದೈವಭಕ್ತಿ, ಇವುಗಳಿಂದ ಪಿಂಡಗೊಂಡಿದ್ದ ಅವಳ ತುಂಬಿದ ಬದುಕಿನಲ್ಲಿ ಕಾಲಚಕ್ರದ ಉರುಳಿನಲ್ಲಿ ಅನುಭವಿಸಿದ ಆಘಾತಗಳೂ ಸಾಕಷ್ಟಿದ್ದವು. ಒಬ್ಬ ಚಿಕ್ಕಪ್ಪ, ಖಟ್ಟಾ ಖಾದೀಭಕ್ತರು. ಸ್ವಾತಂತ್ರಹೋರಾಟದಲ್ಲಿ ವಿಧಾಯಕ ವಾಗಿ ತೊಡಗಿಸಿಕೊಂಡು ಜೈಲಿಗೂ ಹೋಗಿ ಬಂದವರು. ಇನ್ನೊಬ್ಬ ಚಿಕ್ಕಪ್ಪ, ಗುಳೇದಗುಡ್ಡ ದಲ್ಲಿ ಟೇಲರ ಆಗಿದ್ದರು. ಇನ್ನೊಬ್ಬ 'ಹಣಮಾ' ಎಂಬ ಚಿಕ್ಕಪ್ಪ, ಇವನ ಹತ್ತಿರ ನೂರಾರು ಕಾದಂಬರಿಗಳಿದ್ದವು. ಒಂದರ್ಥದಲ್ಲಿ ಈತನೇ ನಮಗೆ ಕಾದಂಬರಿಯ ಚಟ ಹಚ್ಚಿದವ.

ನನ್ನ ಹಿರಿಯ ಅಣ್ಣ ಮೊದಲಿನಿಂದಲೂ ಬಹಳ ಕಷ್ಟಪಟ್ಟು ಬದುಕಿ ಮುಂದೆ ಬಂದವ.

ಸಂಸ್ಕೃತ ವಿದ್ವತ್ತು, ಆಧುನಿಕ ಇಂಗ್ಲಿಶ್ ಸಾಹಿತ್ಯದ ಅಪಾರ ಅಧ್ಯಯನ, ಕನ್ನಡದ ಬಗೆಗೆ ಅಷ್ಟೇ ಆಳವಾದ ಓದು-ಮನನ-ಚಿಂತನ, ಇವುಗಳಿಂದ ತುಂಬಿಕೊಂಡವ. ಇಡೀ ಮನೆತನದ ಭಾರವನ್ನು ಹೊತ್ತು ಸುಸ್ತಾದವ. ಈತ ಬರೆದ ಪದ್ಯಗಳ ನೋಟ್ ಬುಕ್ಕೊಂದನ್ನು ನಾನು ಬಹಳ ಸಣ್ಣವನಿದ್ದಾಗ ನೋಡಿದ್ದು ನೆನಪಿದೆ. ಕಳೆದ ೬೦ ವರ್ಷಗಳಿಂದಲೂ ಆತ ಪದ್ಯ ಬರೆಯುತ್ತಿದ್ದಾನೆ. ಆ ಪದ್ಯಗಳನ್ನು ಇನ್ನೂ ಪ್ರಕಾಶನಕ್ಕೆ ತರುವುದಾಗಿಲ್ಲ. ಆದರೆ ಆ ಪದ್ಯಗಳು ಖಂಡಿತವಾಗಿಯೂ ಕನ್ನಡಕ್ಕೆ ಹೊಸ ರುಚಿ ಸತ್ವಗಳನ್ನು ಸೇರಿಸಬಲ್ಲ ಪದ್ಯಗಳು. ಯಾರಾದರೂ ಪ್ರಕಟಿಸಬೇಕು. ಈತನೇ ನನ್ನನ್ನು ರೂಪಿಸಲು ಬಹಳ ಕಷ್ಟಪಟ್ಟವ. ಪ್ರಾಚೀನ ಕಾವ್ಯದ ಹೊಳಹುಗಳನ್ನು ಹೇಳಿ ಕೊಟ್ಟವ. ಲಾವಣಿಗಳನ್ನು ಹಾಡಿ ತೋರಿದವ. 'ಬೇಂದ್ರೆ-ಹುಚ್ಚು' ತಲೆಗೆ ಹಿಡಿಸಿದವ. ಎಲ್ಲಕ್ಕಿಂತ ಮುಖ್ಯವಾಗಿ ಕಲೆ ಕೇವಲ ದಾರಿ, ಗಂತವ್ಯ ಬೇರೆ ಇದೆ ಎಂದು ಮನದಟ್ಟಾಗಿಸಿದವ.

ಹೇಗೆ ಮನೆಯೊಳಗೆ ಸಮೃದ್ಧ ಸ್ಮೃತಿ-ಸ್ವಾಂತಂತ್ರ್ಯದ ವಲಯದಿಂದ ಬಂದ ನಾನು, ಬಡತನದ ಬವಣೆಗಳಿಂದಾಗಿ ಶಿಕ್ಷಣವನ್ನು ಮುಂದುವರೆಸಲಾಗಲಿಲ್ಲ. ದುಗ್ಗೇವಾಡಿ, ಹಾರೋಗೇರಿಗಳಲ್ಲಿದ್ದ ನಮ್ಮ ಪೂರ್ವಜರ ಹೊಲಗಳು ಟೆನನ್ಸಿಯಲ್ಲಿ ಕಳೆದುಹೋದವು. ಕೋರ್ಟಿನಲ್ಲಿ ಬೇಲೀಫನೆಂದು (ಅಮೀನ್) ನೌಕರಿ ಪಡೆಯುವ ಹೊತ್ತಿಗೆ ನಾನು ವಯೋಮಾನಕ್ಕನುಗುಣವಾದ ದಳ್ಳುರಿಗೆ ನಾನೇ ಹಾರಿಕೊಂಡಿದ್ದೆ. ನನ್ನ ಸಾಂಸಾರಿಕ ಸಂಬಂಧಗಳ ಬಗೆಗೆ ಹೇಳಿಕೊಳ್ಳುವ ಸ್ವಾಂತಂತ್ರ್ಯ ನನಗಿನ್ನೂ ದಕ್ಕಿಲ್ಲ. ಆದರೆ ಅದು ಬಹಳ ದುರ್ಗಮ ಕಾಡು-ದಾರಿಯಾಗಿದೆ ಎಂದು, ಕವಿಗಳಿಗೆ ಮಾತ್ರ ತಿಳಿವಂತೆ ಹೇಳಬಲ್ಲೆ.

ಕಳೆದೊಂದು ದಶಕದ ಚಿತ್ರ ಭಯಾನಕ. ಅದನ್ನೂ ವಿವರಿಸುವ ಹಕ್ಕೂ ನನಗಿಲ್ಲ. ನನ್ನ 'ದಿಂಡೀ ಮತ್ತು ದಾಂಡೀ' ಸಂಕಲನದ 'ಒಂದು ಸಂಜೆಯ ಗೆಳೆಯರು' ಪದ್ಯ ಅದನ್ನೆಲ್ಲ ಸೂಚಿಸುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಹತ್ತು ವರ್ಷಗಳಲ್ಲಿ ನಾನು ಒಂದು ಶತಮಾನವನ್ನೇ ಬಾಳಿಬಿಟ್ಟಿದ್ದೇನೆ. 'ಯ್ಯಯಾತಿ' ನಾಟಕದಲ್ಲಿ ದೇವಯಾನಿ ಹೇಳುತ್ತಾಳಲ್ಲ, "ನಿನ್ನೆ ರಾತ್ರಿ, ಸೂರ್ಯನ ಅರ್ಧ ಪ್ರದಕ್ಷಿಣೆ ಮುಗಿಯುವದರೊಳಗಾಗಿ ನನ್ನ ಹಾಸಿಗೆಯ ಮೇಲೆ ಅರ್ಧ ಶತಮಾನವೇ ನಡೆದು ಹೋಯಿತು" ಹಾಗೆ.

ಸಾಹಿತ್ಯ ಜಗತ್ತಿನಲ್ಲಿ ನಾನು ಕಾಲಿಟ್ಟಿದ್ದು ೧೯೭೨ರಲ್ಲಿ. ನಾನು ಕಳಿಸಿದ ಪತ್ರಗಳ ಕಟ್ಟೊಂದನ್ನು ಓದಿ, ನನಗೆ ಪತ್ರ ಬರೆದ ಮೊದಲಿಗರು ಚೆನ್ನವೀರ ಕಣವಿಯವರು. "ನಿಮ್ಮಲ್ಲಿ ಪ್ರತಿಮಾ ನಿರ್ಮಾಣಕ್ಕೆ ಚಿತ್ರತ-ಶೈಲಿ ಸಮೃದ್ಧವಾಗಿದೆ" ಎಂದು ಬರೆದಿದ್ದರು. ಆ ಪತ್ರವನ್ನು ನಾನು ಎಲ್ಲರಿಗೂ ಹುರುಪಿನಿಂದ ತೋರಿಸಿದ್ದೆ. ನಂತರ ನನ್ನನ್ನು ಸಾಹಿತ್ಯ ಲೋಕಕ್ಕೆ ಎಳೆದವರು ದೇಶಪಾಂಡೆ ಸುಬ್ಬರಾಯರು, ಶಾಮಸುಂದರ ಬಿದರಕುಂದಿಯವರು. ಆ ದಿನಗಳಲ್ಲಿ 'ಅನ್ವೇಷಣ' ಎಂಬ ಸಂಘಟನೆಯ ಅಡಿಯಲ್ಲಿ 'ಅಡಿಗರ ಸಮಗ್ರ ಕಾವ್ಯ' ನನ್ನ ಕುರಕುರಿ, ಮಂಗಳೂರಮಠರ ಒಂದೊಂದು ಸಂಕಲನ ಪ್ರಕಾಶನ ಗೊಂಡವು. ನನ್ನ ಕಾವ್ಯ ಸಂಕಲನಗಳನ್ನು ಪ್ರಕಟಿಸಿ, ನನ್ನನ್ನು ಕವಿ ಎಂದು ಪ್ರಕಟಿಸಿದ ಶ್ರೇಯಸ್ಸು

ಬಿದರಕುಂದಿಯವರದು. ನನ್ನ ಹಸಿದ ಹೊಟ್ಟೆಗೆ ಅನ್ನ, ತಪ್ತಭಾವಕ್ಕೆ ಉಪಶಮನ, ವೈಚಾರಿಕ ಚಹಾ ಕೂಟಗಳಿಗೆ ತಮ್ಮದೇ ಆದ ಸ್ಪಂದನ, ನೀಡಿ ಬೆಳಸಿದವರು ಅವರು.

ಇಷ್ಟೆಲ್ಲ 'ಪುರಾಣ' ಹೇಳಿದ ಮೇಲೂ, ಮುಖ್ಯ ಪ್ರಶ್ನೆ ಹಾಗೇ ಉಳಿಯಿತಲ್ಲ. ನಾನೇಕೆ ಬರೆಯುತ್ತೇನೆ? ನಾನೂ ಹತ್ತು ಸಲ ಯೋಚಿಸಿದ್ದೇನೆ ಹೊಳೆದಿಲ್ಲ ಅದಕ್ಕಾಗಿಯೇ ನನ್ನ ಬದುಕನ್ನು, ಬಿಚ್ಚಿಡಬಹುದಾದಷ್ಟನ್ನು- ಬಿಚ್ಚಿಟ್ಟಿದ್ದೇನೆ. ತನ್ಮೂಲಕ ಓದುಗ ನನ್ನ ಪದ್ಯಗಳು ನನ್ನ ಬದುಕು ಇವುಗಳ ನಡುವೆ ಒಂದು ಸಂಬಂಧ ಕಲ್ಪಿಸಿಕೊಂಡು, ಅವನೇ ಪ್ರಶ್ನೆಗೊಂದು ಉತ್ತರ - ಅನಿವಾರ್ಯವಿದ್ದರೆ ಹುಡುಕಿಕೊಳ್ಳಲಿ ಎಂದು.

ಈ ಪ್ರಶ್ನೆಗೆ ಉತ್ತರಿಸಲು ಇರುವ ಸಮಸ್ಯೆ ಎಂದರೆ, ನಾನು ಇದನ್ನು ಹೇಗೆ ನಿರ್ವಚಿಸಿ ಕೊಂಡರೂ ಅದು ಆಂಶಿಕ ನಿರ್ವಚನವಾಗಿರುತ್ತದೆ. ಅಂತೆಯೇ ಅಪೂರ್ಣವಾಗಿರುತ್ತದೆ. ಎರಡನೆಯದ್ದಾಗಿ ಸದಾ ಪರಿವರ್ತನಶೀಲವಾದ ಕಾಲದ ಗತಿಯಲ್ಲಿ ನಾನು ಇಂದು ಗುರುತಿಸಿ ಕೊಂಡ ಉತ್ತರ ನಾಳೆ ಔಟ್‌ಡೇಟೆಡ್ ಆಗಿ ಬಿಡುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ನಾನು ನಿರೂಪಿಸುವ ಉತ್ತರಗಳ ಪ್ರಾಮಾಣಿಕತೆಯನ್ನು ಅಳೆಯಲು ಅನ್ಯ ಮಾನದಂಡಗಳಿಲ್ಲ. ಹೀಗಾಗಿ ಆ ಉತ್ತರಗಳು ಅಂತಿಮವಾಗಿ ಅವರವರ ಓದಿನ ವ್ಯಾಖ್ಯಾನಗಳಲ್ಲೇ ರೂಪುಗೊಳ್ಳು ವಂತಹವು. ಅದಕ್ಕಾಗಿ ವಾಚ್ಯವಾದ ಉತ್ತರಗಳಿಂದೇನು ಹೆಚ್ಚಿನ ಉಪಯೋಗವಿಲ್ಲ. ಕವಿಯ ಕಾವ್ಯದ ಮೂಲಕವೇ ಕವಿಯ ಕಾವ್ಯ ಪ್ರೇರಣೆಗಳನ್ನು ಊಹಿಸಿಕೊಳ್ಳುವುದು ಸೂಕ್ತ.

ಬಹುಶಃ ನನ್ನದು ದುರ್ಬಲ ಸ್ವಭಾವ. 'ಸ್ತ್ರೀತ್ವ' ಅಧಿಕವಾದ ಮನೋಮಯ ರಚನೆ ನನ್ನ ಅಂತರಂಗದ್ದಿರಬೇಕು. ಹೀಗಾಗಿ ಅತಿಯಾದ ನಮನಶೀಲತೆ, ಅಷ್ಟೇ ಉಗ್ರವಾದ 'ಆಪ್ತ-ಕಾಮುಕತೆ' ನನ್ನಲ್ಲಿ ಉಳಿದಿರಬೇಕು. ಆದರೆ ಇಂಥ ಗಾಢ ಅಂಟುವಿಕೆಗೆ ಅವಕಾಶ ವಿರದ ಸಮಾಜ-ವ್ಯವಸ್ಥೆಯಲ್ಲಿ, ಜಾರಿ ಹೋಗುವ ಸಂಕಟ, ನನ್ನ ಕಾವ್ಯದ ಮೂಲ, ತಳಮಳವೆಂದು ಎನ್ನಿಸುತ್ತದೆ. ಇದು ಇಬ್ಬದಿಯ ಚೂರಿ. ಜಗತ್ತು ಕ್ರೂರವಾಗುವದೊಂದು ಮೊನೆಯಾದರೆ, ನಾನೂ ಅನಿವಾರ್ಯವಾಗಿ ಕ್ರೂರಿಯಾಗುತ್ತಿರುವದು ಅದರ ಇನ್ನೊಂದು ಬದಿ. ಈ ಸಂಕಟದ ಗಾಣದಲ್ಲಿ ನನ್ನ ಶಬ್ದಗಳು ತಮ್ಮ ರಸಹಿಂಡಿಕೊಡುತ್ತವೆ. ಈ ಗಾಣವನ್ನೇ, ಈ ಮುರಿಯುವಿಕೆಯನ್ನೇ ಅರ್ಥಹೀನವೆಂದು ಸಾಧಿಸುವ ಶಿಕ್ಷಣವನ್ನು ಕೊಡುತ್ತಿರುವ ಪಡೆಯುತ್ತಿರುವ ಜನಾಂಗದ ನಡುವೆ ನಾನು ಅನಾಥನೂ ಆದಂತೆನಿಸುತ್ತದೆ. ಅನೇಕ ಜನರು ನಾನು ಅಧ್ಯಾಪಕನಲ್ಲವೆಂಬುದನ್ನು, ನ್ಯಾಯಾಲಯದಲ್ಲಿ ಅಮೀನನಾಗಿರುವು ದನ್ನು ನಂಬುವದಕ್ಕೂ ಹಿಂಜರಿಯುತ್ತಾರೆ. ನಂಬುವುದು ಅನಿವಾರ್ಯವಾದಾಗ ಲೊಚಗುಡುತ್ತಾರೆ, ದಿಗಿಲು ಪಡುತ್ತಾರೆ. ನಿಜ ಹೇಳಬೇಕೆಂದರೆ, ನನ್ನ ವೃತ್ತಿ ಜೀವನದ ಅವಶ್ಯಕತೆಗಾಗಿ ನಾನು ಹಳ್ಳಿಹಳ್ಳಿಗಳನ್ನು ತಿರುಗುವ ತಿರುಗಿ, ಬಂದು ಅದ್ಭುತವಾದ ಭಾವಕೋಶದ ಸಮೃದ್ಧಿಯನ್ನು ಪಡೆದಿದ್ದೇನೆ. ದೇಶೀಬದುಕಿನ ಭಾಷೆ, ಜೀವನಕ್ರಮ, ಕೆಲಸ ಮಾಡುವ ನಂಬಿಕೆಗಳು, ಇವುಗಳನ್ನು ಆಳವಾಗಿ ಗಮನಿಸುವ ಭಾಗ್ಯ ನನಗೆ ದೊರೆತದ್ದ ರಿಂದಲೇ ನನ್ನ ಕಾವ್ಯ ಒಂದಿಷ್ಟು ಸುಪುಷ್ಟವಾಗಿದೆ. ಇನ್ನು ಅಧಿಕಾರಿಗಳು, ಕಚೇರಿಯೊಳಗಿನ

ಬರ್ಬರತೆ, ರೂಕ್ಷತೆ, ಒಂದಿಷ್ಟು ನನ್ನ ಕವಿ ಜೀವವನ್ನು ಕಾಡಿದ್ದು ನಿಜ. ಅದರ ಕರಾಳ ಛಾಯೆಯೂ ನನ್ನ ಕೆಲವು ಪದ್ಯಗಳಲ್ಲಿದೆ. ಮನೆಯಲ್ಲಿ ಗ್ರಂಥಾಲಯವಿರುವದರಿಂದ, ಶಾಸ್ತ್ರೀಯ ಸಂಗೀತದ ಧ್ವನಿಸುರುಳಿಗಳಿರೋದರಿಂದ, ಕಚೇರಿಯ ಕ್ರೌರ್ಯವನ್ನು ಮೀರಿ ನಿಂತಿದ್ದೇನೆ.

ಸಾಹಿತ್ಯಿಕ ಸ್ನೇಹಗಳು ನನಗೆ ತುಂಬ ಕಡಿಮೆಯೇ. ಸಾಹಿತಿಗಳ ಪರಿಚಯವಿದ್ದರೂ ಅವರ ಭೇಟಿ, ಸಲುಗೆ, ಬೆಳೆಯಲಾರದ ವಾತಾವರಣದಲ್ಲಿರುವ ನನಗೆ, ಅದರ ಬಗೆಗೆ ಬಹಳ ಬೇಸರವೇನಿಲ್ಲ. ಏಕೆಂದರೆ ಸಂವಾದಕ್ಕೆ ಸಮಪಾತಳಿ ಇಲ್ಲದೆ ನಾವು ಆಡುವ ಸುಳ್ಳು-ಗಾಢತೆಯ ನಾಟಕಗಳೂ ನನಗೆ ಓಕರಿಕೆ ತಂದಿವೆ. ("ನಿ ನಗುವೆ ನನಗೆ ನಾ ನಗುವೆ ನಿನಗೆ ಇಬ್ಬರಿಗೂ ಸುಪ್ತಹೃದಯ" ಬೇಂದ್ರೆ) ಗಾಢ ತಾತ್ವಿಕ ಪರಂಪರೆ, ನೀತಿನಿಷ್ಠ ಸ್ವಭಾವ, ಪ್ರಾಕೃತಿಕ ಕಾಲಗತಿಯೊಂದಿಗೆ ನಡೆಸಲು ಒತ್ತಾಯಿಸಿದ ಸಾಮಾಜಿಕ, ಕೌಟುಂಬಿಕ ಸಂಘರ್ಷ ಗಳು, ಗ್ರಾಮ್ಯ ಬದುಕಿನ ಒಡನಾಟ, ಇವೇ ನನ್ನ ಕಾವ್ಯದ ಮೂಲಕೇಂದ್ರಗಳೆಂದು ನನಗನ್ನಿಸಿದೆ. ಸಾಹಿತ್ಯಿಕ ಸಂಬಂಧಗಳೂ ಒಂದು ಬಗೆಯ ಜೀವನದರ್ಶನ ಮಾಡಿಸುವ ಕಾಲ 'ಮಾಸ್ತಿ-ಬೇಂದ್ರೆ' ಕಾಲಕ್ಕೆ ಮುಗಿಯಿದೆನ್ನಿಸುತ್ತದೆ.

ನಾನು ಯಾವ ಪಾರಂಪರಿಕ ಪ್ರಸ್ಥಾಪದಿಂದ ಬಂದಿರುವೆನೋ ಅದರ ಸ್ಥಾಪಕ ಆಚಾರ್ಯರು, ಮಧ್ವಾಚಾರ್ಯರು. ತಾವು ಮಂಡಿಸುವ ತಾತ್ವಿಕತೆಯ ಚೌಕಟ್ಟಿನಲ್ಲಿ, ಇನ್ನುಳಿದ ಹಲವು (ವಿವಾದಗ್ರಸ್ತ?) ವಿಷಯಗಳ ಜೊತೆಗೆ ಎರಡು-ಮೂರು ಮಾತುಗಳನ್ನು ಹೇಳುತ್ತಾರೆ.

೧. ಜೀವ ಎಂದಿಗೂ ಅಸ್ವತಂತ್ರ, ೨) ಜೀವ ಅನನ್ಯ. ಅದು ಎಂದು ಇನ್ನೊಂದರಂತೆ ಇರಲಾರದು. (೩) ಪರಮಾತ್ಮನೊಬ್ಬನೇ ಸ್ವತಂತ್ರ.

ಈ 'ತ್ರಿಪಾದ ವಿಭೂತಿ'ಯ ಸ್ಟ್ಯಾಂಡ್ ಮೇಲೆ ನನ್ನ ಬಾಳನ್ನು ಇಟ್ಟು ನೋಡಿಕೊಳ್ಳುವದು ಇತ್ತೀಚೆಗೆ ಅನಿವಾರ್ಯವಾಗುವಂತೆ ಕಾಣುತ್ತದೆ. ಆಚಾರ್ಯರು ಹೇಳುವ ಸ್ಥಿತಿ, ಮಾಧ್ವ ಪಂಡಿತರಿಗೆ ಒಂದು ಸಂಭ್ರಮದ ವಿಷಯವಾದರೆ, ನನಗದೂ ರಕ್ತದಲ್ಲಿ ಅರಗಿಸಿಕೊಳ್ಳ ಬೇಕಾದ ಕಟು ಅನುಭೂತಿ.

ಮಹಾಭಾರತ ಯುದ್ಧದಲ್ಲಿ ಭೀಷ್ಮರು-ತಾವೇ ಆಹ್ವಾನಿಸಿಕೊಂಡಂತೆ- ತಮ್ಮ ಮೈಗೆ ಕೃಷ್ಣನ ಒಂದೊಂದು ಬಾಣ ನೆಟ್ಟಾಗಲೂ, ಕೃಷ್ಣನ ಒಂದೊಂದು ಗುಣವಾಚಕ ಹೆಸರನ್ನು ಹಿಡಿದು ಚೀರಿದರಂತೆ. ಆ ಚಿರುವಿಕೆಯೇ 'ವಿಷ್ಣು ಸಹಸ್ರನಾಮ'ವೆಂಬ, ವೈದಿಕ-ಸಾಹಿತ್ಯದಲ್ಲೇ ಶ್ರೇಷ್ಠವಾದದ್ದೆಂದೂ, ಎಲ್ಲರೂ ಒಪ್ಪುವ, ಮಂತ್ರನೆಕ್ಕಿದಮುಳ್ಳ ಕಾವ್ಯವಾಯಿತಂತೆ. ಕಾವ್ಯ ಸೃಷ್ಟಿ ಹೀಗಾಗಬೇಕೆಂದು ನನ್ನ ಆಶಯ. ಆದರೆ ಈ ದೃಷ್ಟಿಕೋನ ಕವಿಯನ್ನು ಅವಾಸ್ತವ ವನ್ನಾಗಿಯೂ ಮಾಡಬಾರದು. ಕಂಬಾಲಪಲ್ಲಿ, ಕಾಶ್ಮೀರದಂಥ ಸಮಸ್ಯೆಗಳೂ, ಕವಿಯನ್ನು ಸ್ಪರ್ಶಿಸದೇ ಉಳಿಯಬಾರದು. ಆದರೆ ಅಂಥ ಸಂದರ್ಭದಲ್ಲಿ ಕಾವ್ಯ ಸೃಷ್ಟಿ ಒಂದು 'ಮತ್ಸ್ಯ-ಭೇದನ' ತಂತ್ರವಾಗಬೇಕು. ಕೆಳಗಿನ ತುಡಿವ ಬದುಕಿನಲ್ಲಿ, ಅಸ್ಪಷ್ಟವಾಗಿ ತಿರುಗುವ ಬಿಂಬಕ್ಕೆ

ಕಣ್ಣಿಟ್ಟರೂ, ನಿಜದ ಗುರಿ ಅದರ ಮೂಲಲಕ್ಷ್ಯಕ್ಕೆ ನಿಗದಿಯಾಗಬೇಕು. ಕವಿಯ ಪ್ರತಿ ಪದ್ಯವೂ ಒಂದು ಬಾಣ. ಮೂಲಕ್ಕೆ ಬಡಿಯುವವರೆಗೆ ಬಿಲ್ಲು ಬಾಗಿಸಿ, ಹೆದೆ ಏರಿಸುತ್ತಲೇ ಇರಬೇಕು.

ಬಹಳ ಸಲ ಕಾವ್ಯದ ಆವೇಶ, ನನ್ನನ್ನು ಸೆಳೆದು ಬಿಡುತ್ತದೆ. ಅದರಿಂದ ಸಾಕಷ್ಟು ಹಾನಿ, ಗಾಮಗಳುಂಟಾದರೂ ಅದರ ಶಕ್ತಿ ದೊಡ್ಡದು.

ನಾನೇಕೆ ಬರೆಯುತ್ತೇನೆ ಎಂಬ ನಿಮ್ಮ ಪ್ರಶ್ನೆಗೆ, ಅಲ್ಲಲ್ಲ ನನ್ನ ಪ್ರಶ್ನೆಗೆ ನಾನು ಉತ್ತರಿಸಿಲ್ಲ. ಏಕೆ ಉತ್ತರಿಸಲಾಗಿಲ್ಲ ಎನ್ನುವುದಕ್ಕೆ ಕಾರಣಗಳನ್ನು ಒದಗಿಸಿದ್ದೇನಷ್ಟೆ. ಈ ಪ್ರಶ್ನೆ ಹೀಗಾದರೆ ಹೇಗೆ"ನನ್ನ ಬರಹ ನನಗೇನು ಕೊಟ್ಟಿದೆ?" ಪ್ರಾಮಾಣಿಕವಾಗಿ ಉತ್ತರಕೊಡುವ ಛಾತಿಯುಳ್ಳವರಿದ್ದಾರೇನು? ಅಥವಾ ಅವರ ಉತ್ತರದ ಪ್ರಾಮಾಣಿಕತೆಯನ್ನು ಸಿದ್ಧಪಡಿಸುವ ಸಾಧನಗಳು ನಮ್ಮಲ್ಲಿದ್ದಾವೇನು?

●

## ಸಾಹಿತ್ಯ ಸೃಷ್ಟಿಯ ಮೂಲಸ್ಫೂರ್ತಿ ಕುವೆಂಪು

● ಕೋ ಚೆನ್ನಬಸಪ್ಪ

ಹಂಪಿ ಕನ್ನಡ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪತ್ರಿಕೆಯ ಸಂಪಾದಕರು ಕೆಲವು ತಿಂಗಳ ಹಿಂದೆ ಒಂದು ಆತ್ಮೀಯ ಪತ್ರ ಬರೆದು: 'ನಾನು-ನನ್ನ ಬರಹ' ಎಂಬ ವಿಷಯವನ್ನು ಕುರಿತು ಲೇಖನ ಬರೆಯಬೇಕೆಂದು ಕೇಳಿದರು. ವಿಷಯದ ತಲೆ ಬರಹವನ್ನು ಓದಿ ನನಗೆ ಬಹು ಸಂಕೋಚವೂ ಒಂದಿಷ್ಟು ಹೆದರಿಕೆಯೂ ಆಯಿತು. 'ನಾನು ಎಂಬುದೆಲ್ಲ ಅಳಿದು ನೀನು ಮಾತ್ರ ಉಳಿಯಲಿ' ಎಂದು ಬಹುಕಾಲದಿಂದ ಜಪಿಸುವ ನನ್ನ ನಾಲಗೆಗೆ ಈ ನಾನು ಎಂಬುದು ಒಂದಿಷ್ಟು ಕಹಿಯಾಗಿದೆ. ಒಮ್ಮೊಮ್ಮೆ ಕತ್ತಿಯೂ ಆಗಿ ಕಾಣಿಸುತ್ತದೆ. ಆದ್ದರಿಂದ ಆ ಆತ್ಮೀಯ ಪತ್ರವನ್ನು ಎಲ್ಲಿಯೊ ಇಟ್ಟು ಮರೆತು ಬಿಟ್ಟೆ. ಆದರೆ ನನ್ನ ಮಿತ್ರರು ನೆನಪು ಮಾಡಿದರು. ಅವರು ಸೂಚಿಸಿದ್ದ ಕ್ಲುಪ್ತ ಕಾಲಕ್ಕೆ ಬರೆಯಲು ಆಗುವುದಿಲ್ಲವೇನೊ ಎಂದು ಉತ್ತರಿಸಿದೆ. ಅವರು ವಿಳಂಬವಾದರೂ ಕಾಯುತ್ತೇವೆ. ಬರೆಯಿರಿ ಎಂದು ಒತ್ತಾಯ ಮಾಡಿದ್ದರಿಂದ ಬರೆಯುತ್ತಿದ್ದೇನೆ. ಈ ಪೀಠಿಕೆ ಏಕೆಂದರೆ, ಈ ಮುಂದಿನ ಬರಹವನ್ನು ಓದುವವರು ಯಾವ ದೃಷ್ಟಿಯಿಂದ ಓದಬೇಕೆಂಬುದಕ್ಕೆ ದಿಕ್ಸೂಚಿ.

ಸಾಹಿತಿಯಾಗಬೇಕು, ಬರಹಗಾರನಾಗಬೇಕು ಎಂಬ ಆಸೆಯನ್ನೂ ಕನಸನ್ನೂ ಕಟ್ಟಿಕೊಂಡವನಲ್ಲ. ಅಂಥ ಆಸೆಯನ್ನಿಟ್ಟುಕೊಳ್ಳಬಹುದಾದ ಸನ್ನಿವೇಶದಲ್ಲಿ ಹುಟ್ಟಿದವನಲ್ಲ. ಚಿಕ್ಕಂದಿನಲ್ಲಿ ಅಂಥ ಯಾವ ಸಂಸ್ಕಾರವೂ ಆಗಿರಲಿಲ್ಲ. ಬಹು ಜನ ಬರಹಗಾರರ ಆತ್ಮಕಥೆಯಲ್ಲಿ

ಅವರ ತಂದೆ ತಾಯಿಗಳು ಅವರ ಮೇಲೆ ಮಾಡಿದ ಪರಿಣಾಮ, ಚಿಕ್ಕಂದಿನಲ್ಲಿ ಅವರಿಗೆ ಸಿಕ್ಕ ಪ್ರೋತ್ಸಾಹ, ಸ್ಫೂರ್ತಿಯ ಹಿನ್ನೆಲೆಯನ್ನು ಚಿತ್ರಿಸುತ್ತಾರೆ. ಚಿಕ್ಕಂದಿನಲ್ಲಿ ಪ್ರಸಿದ್ಧ ಸಾಹಿತಿಗಳ ಪುಸ್ತಕ ಓದಿದ ಅನುಭವ ಹೇಳುತ್ತಾರೆ. ನನಗೆ ಅಂಥ ಯಾವ ಸನ್ನಿವೇಶವೂ ಇರಲಿಲ್ಲ. ಪ್ರೋತ್ಸಾಹವೂ ಇರಲಿಲ್ಲ. ಆದರೂ ಹದಿನಾರು ವಯಸ್ಸಿನಿಂದಲೂ ಬರೆಯತೊಡಗಿದೆ. ಬರೆದೆ, ಬರೆದೆ, ಬರೆದೇ ಬರೆದೆ! ಅರವತ್ತು ವರ್ಷಗಳಿಂದ ಬರೆಯುತ್ತಿದ್ದೇನೆ. ಇನ್ನೂ ಬರೆಯುತ್ತಿದ್ದೇನೆ! ಪ್ರಕಟಿತ ಕೃತಿಗಳು ಎಪ್ಪತ್ತಾಗಿವೆ!!

ಇದು ಹೇಗಾಯಿತು? ಖಚಿತವಾಗಿ ಹೇಳುವುದು ಕಷ್ಟ. ಪ್ರೌಢಶಾಲೆಗೆ ಸೇರಿದ ಮೇಲೆ ಬಳ್ಳಾರಿಯಲ್ಲಿ ಪ್ರತಿ ವರ್ಷ ನವರಾತ್ರಿಯ ಕಾಲದಲ್ಲಿ ನಾಡಹಬ್ಬ ಆಚರಿಸಲಾಗುತ್ತಿತ್ತು. ಆಗ ನಾಡಿನ ಪ್ರಸಿದ್ಧ ಸಾಹಿತಿಗಳು ಎಂಟು ದಿನಗಳು ಸಾಹಿತ್ಯ ಸಂಸ್ಕೃತಿಯನ್ನು ಕುರಿತು ಸಾಮಾನ್ಯ ಜನರಿಗೆ-ವಿದ್ಯಾರ್ಥಿಗಳಿಗೆ, ವರ್ತಕರಿಗೆ, ವೈದ್ಯರಿಗೆ, ವಕೀಲರಿಗೆ, ಅತ್ಯಂತ ಸಾಧಾರಣ ಜನರಿಗೆ ತಿಳಿಯುವಂತೆ ಬಹು ಗಹನ ವಿಷಯಗಳನ್ನು, ದೊಡ್ಡದೊಡ್ಡ ಕಾವ್ಯಗಳನ್ನು ಕುರಿತು ಭಾಷಣ ಮಾಡುತ್ತಿದ್ದರು. ಬಳ್ಳಾರಿಯಲ್ಲಿದ್ದ ನಾಲ್ಕು ವರ್ಷಗಳೂ ಆ ಭಾಷಣಗಳನ್ನು ತಪ್ಪದೆ ಕೇಳುತ್ತಿದ್ದೆ. ಆ ಪ್ರಗಲ್ಭ ಪಂಡಿತರು ಉದ್ದಾಮ ಸಾಹಿತಿಗಳು ಪ್ರಸಿದ್ಧ ಕವಿಗಳು ಕನ್ನಡ ಸಾಹಿತ್ಯದ ಸೊಬಗನ್ನು ಸುಲಲಿತವಾದ ಸರಳ ಮಾತಿನಲ್ಲಿ ಹೇಳುತ್ತಿದ್ದರು. ಅವರ ಆ ಭಾಷಣಗಳು ಮನಸ್ಸಿನ ಮೇಲೆ ಅಗಾಧ ಪರಿಣಾಮ ಮಾಡಿದವು. ಅದರಲ್ಲೂ ಹರಿಹರನ ರಗಳೆಗಳನ್ನು, ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಕುರಿತು ಮಾಡಿದ ಭಾಷಣಗಳು ಅಚ್ಚಳಿಯದ ಮುದ್ರೆಯನ್ನು ಮನದ ಮೇಲೆ ಒತ್ತಿದವು. ೧೯೩೮ನೇ ಡಿಶಂಬರ್‌ನಲ್ಲಿ ಬಳ್ಳಾರಿಯಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನದ ಪ್ರಭಾವ ಅಗಾಧವಾಗಿತ್ತು. ಸಮ್ಮೇಳನಕ್ಕೆ ಬಂದಿದ್ದ ಸಾಹಿತಿಗಳನ್ನು ನೋಡುವುದು, ಅವರ ಕೃತಿಗಳನ್ನು ಓದುವುದು ಒಂದು ಸುದೈವ ಎಂದು ಬಗೆದಿದ್ದೆ. ಆಗ ದಿವಾಕರರ 'ಅಂತರಾತ್ಮ', ರಾಜರತ್ನಂ ಅವರ 'ಹತ್ತುವರ್ಷ' 'ರತ್ನನ ಪದಗಳು' 'ಪುರುಷ ಸರಸ್ವತಿ' ಮುಂತಾದ ಇನ್ನೂ ಕೆಲವು ಪುಸ್ತಕಗಳನ್ನು ಕೊಂಡುಕೊಂಡು ಪಠಿಸತೊಡಗಿದೆ. ಅವು ನನ್ನನ್ನು ಗ್ರಹದಂತೆ ಹಿಡಿದುಕೊಂಡವು.

ಪ್ರೌಢಶಾಲೆಯ ಕೊನೆಯ ವರ್ಷದಲ್ಲಿದ್ದಾಗ (೧೯೩೮-೩೯ - ನನಗೆ ೧೬ ವಯಸ್ಸು) ಹರ್ಡೇಕರ್ ಮಂಜಪ್ಪನವರ ಶರಣ ಸಂದೇಶವನ್ನು ತಪ್ಪದೆ ಓದುತ್ತಿದ್ದೆ. ಒಂದು ವಾರದ ಸಂಚಿಕೆಯಲ್ಲಿ ವೀರ ಸಾವರಕರರನ್ನು ಕುರಿತು ಒಂದು ಲೇಖನ ಪ್ರಕಟವಾಗಿತ್ತು. ಅದನ್ನು ಓದಿದ ದಿನವೆ ಅದೇನು ಸ್ಫೂರ್ತಿ ಬಂತೊ: 'ವೀರ ಸಾವರಕರಗೆ' ಎಂಬ ಒಂದು ದೀರ್ಘ ಕವನವನ್ನು ಸರಳ ರಗಳೆ ಛಂದಸ್ಸಿನಲ್ಲಿ ಬರೆದು ಬಿಟ್ಟೆ. ಆಗ ವ್ಯಾಕರಣ, ಛಂದಸ್ಸು.... ಇತ್ಯಾದಿ ಪ್ರೌಢಶಾಲಾ ಪಠ್ಯಪುಸ್ತಕದಲ್ಲಿ ಕಲಿತದ್ದು ಎಷ್ಟೋ ಅಷ್ಟೇ ಗೊತ್ತಿದ್ದದ್ದು. ಅದನ್ನು ಯಾರಿಗೂ ತೋರಿಸದೆ, ಯಾರಿಗೂ ಹೇಳದೆ 'ಶರಣ ಸಂದೇಶ'ದ ಸಂಪಾದಕರಿಗೆ ಕಳಿಸಿದೆ. ಒಂದೆರಡು ವಾರಗಳ ನಂತರ ಬಂದ ಸಂಚಿಕೆಯಲ್ಲಿ ಆ ಕವನ ಪ್ರಕಟವಾದದ್ದನ್ನು ನೋಡಿ, ಹದಿನಾರು ವರ್ಷದ ಹುಡುಗನಿಗೆ ಅವನ ಮೊದಲ ಕವನ ಅಚ್ಚಾದದ್ದನ್ನು ಕಂಡಾಗ

ಆಗುವಷ್ಟು ಸಂತೋಷವಾಯಿತು! ಆಗ ಮೊಟ್ಟಮೊದಲ ಬಾರಿಗೆ ಬರೆಯಬಲ್ಲೆನೆಂಬ ವಿಶ್ವಾಸ ಹುಟ್ಟಿತು. ಪತ್ರಿಕೆಯಲ್ಲಿ ಬಂದಿದ್ದ ಕವನವನ್ನು ಓದಿದ ನಮ್ಮ ಹಾಸ್ಟೆಲ್ ವಿದ್ಯಾರ್ಥಿ ಮಿತ್ರರಿಗೂ ಆಶ್ಚರ್ಯ, ಅಭಿಮಾನ. ನನ್ನನ್ನು ಅಭಿನಂದಿಸಿದರು. (ಆ ಕವನ ಕಳೆದು ಹೋಗಿದೆ. ದುರ್ದೈವ). ವೀರ ಸಾವರಕರರನ್ನು ಕುರಿತು ಬರೆದ ಆ ಕವಿತೆಯಲ್ಲಿ ಅವರ ದೇಶ ಪ್ರೇಮವನ್ನು ಮನತುಂಬಿ ಪ್ರಶಂಸಿಸಿದ್ದೆ. ಅವರು ಮೆಡಿಟರೇನಿಯನ್ ಸಮುದ್ರದಲ್ಲಿ ಈಜಿದ ಮಹಾಸಾಹಸವನ್ನು ಕೊಂಡಾಡಿದ್ದೆ.

ಆ ಕವಿತೆ ಬರೆದದ್ದು ಆಗ ಸ್ವಾತಂತ್ರ್ಯಕ್ಕಾಗಿ ದೇಶದಲ್ಲಿ ಉಂಟಾಗಿದ್ದ ಕ್ಷೋಭೆಯೆ ಮುಖ್ಯ ಕಾರಣ. ದೇಶ ಸ್ವತಂತ್ರವಾಗದೆ ಇಲ್ಲಿಯ ದಾರಿದ್ರ್ಯ, ಅನಕ್ಷರತೆ, ಅನಾರೋಗ್ಯ, ಸಾಮಾಜಿಕ ಅಸಮಾನತೆ ನೀಗದು ಎಂಬ ನಂಬಿಗೆ ಆಗಿನ ನಮ್ಮಂಥ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ದಿಟವಾಗಿತ್ತು. ದೇಶ ಪ್ರೇಮ ಆಗಿನ ಗಾಳಿಯಲ್ಲಿ ತುಂಬಿದ್ದ ವಾಸನೆ. ಅದನ್ನು ಉಸಿರಾಡ ದಿರುವುದು ಯಾರಿಂದಲೂ ಸಾಧ್ಯವಿರಲಿಲ್ಲ. ಹಾಗೆ ಶ್ವಾಸಕೋಶ ತುಂಬಿದ ಗಾಳಿ ಕೆಲವರಲ್ಲಿ ನಿಟ್ಟುಸಿರಾಗಿ ಹೊರಬರುತ್ತಿತ್ತು. ಕೆಲವರಿಗೆ ಕವನವಾಗಿ ಹೊರಬೀಳುತ್ತಿತ್ತು. ಅದು ನಿಸರ್ಗ ನಿಯಮವೊ ಎಂಬಷ್ಟು ಸಹಜ ಬೀಜವಾಗಿತ್ತು. ಹಾಗೆ ನನ್ನ ಸಾಹಿತ್ಯ ಶಕ್ತಿ ಮೊಳೆಯಿತು; ಬೆಳೆಯಿತು; ಫಲಬಿಟ್ಟಿತು. ಇಂದಿಗೂ ಆ ಮೂಲಪ್ರವೃತ್ತಿಯ ನನ್ನ ಲೇಖನಿಯನ್ನು ನಡೆಸು ತ್ತಿದೆ. ನನ್ನ ಸಾಹಿತ್ಯದ ಬಹುಭಾಗ ಕವಿತೆ, ಕತೆ, ಕಾದಂಬರಿ, ಶ್ರೀ ಅರವಿಂದರ ಜೀವನ ಚರಿತ್ರೆ, ಸ್ವಾಮಿ ವಿವೇಕಾನಂದರ ಅನುವಾದಿತ ಕೃತಿಗಳಲ್ಲಿ ಓತು ಪ್ರೋತವಾಗಿ ಹೆಣೆದು ಕೊಂಡಿದೆ. ನನ್ನ ಈ ಪ್ರವೃತ್ತಿ ಬರಬರುತ್ತ ವಿಸ್ತಾರವಾಗುತ್ತ ಮಾನವ ಕಲ್ಯಾಣದ ಗುರಿಯತ್ತ ಸಾಗಿತು.

ಅದಕ್ಕೊಂದು ಪ್ರಬಲವಾದ, ಹಾಗೆ ಹೇಳುವುದಾದರೆ, ಏಕಮಾತ್ರ ಕಾರಣ ಹಂಪೆಯ ಹರಿಹರ; ಅವನ ಶಿಷ್ಯ ರಾಘವಾಂಕ, ಹರಿಹರನ ಪ್ರತಿಜ್ಞೆ 'ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ತನಗಿಲ್ಲದ ಸಲ್ಲದ ಗುಣಂಗಳನ್ನಿಟ್ಟು, ಕೆಡಬೇಡೆಲೆವೊ' ಎಂಬುದು ನನ್ನ ಆದರ್ಶವಾಯಿತು. ಹಾಗೆಯ ರಾಘವಾಂಕನು ಸಾರಿದ ಸರ್ವಕಾಲಿಕ ಸತ್ಯ: 'ಜಗ ಬದುಕ ಬೇಕೆಂದು ಕಾವ್ಯ ಮುಖದಿಂ ಪೇಳ್ವೆನನಪೇಕ್ಷೆಯಿಂ' ಎಂಬುದು ನನ್ನ ಶ್ವಾಸಕೋಶದ ಉಸಿರು. ಭಾರತೀಯ ಕಾವ್ಯ ಮೀಮಾಂಸೆಕಾರರು ಹೇಳಿದ ಕಾವ್ಯ ರಚನೆಯ ಉದ್ದೇಶ ರಸಾಸ್ವಾದನೆಯ ಆನಂದ, ಕೀರ್ತಿ ಮತ್ತು ಅರ್ಥ ಸಂಪಾದನೆಯನ್ನು ಅನಾಮತ್ತಾಗಿ ತಿರಸ್ಕರಿಸಿದ ಕ್ರಾಂತಿ ಕವಿಗಳಾದ ಹರಿಹರ ರಾಘವಾಂಕರು, ನನ್ನ ಸಾಹಿತ್ಯ ರಚನೆಯ ಆದರ್ಶ ಕವಿಗಳು. ಸಾಹಿತ್ಯ ಕ್ಷೇತ್ರಕ್ಕೆ ಕವಿತಾ ರಚನೆಯ ಮೂಲಕ ಕಾಲಿಟ್ಟ, ಹೊಸತರಲ್ಲಿಯೆ 'ಕಡೆಗಾಣಲೀ ಜೀವ ದೀನರಿಗೆ ಮುಡಿಪಾಗಿ' ಎಂಬ ಕವಿತೆಯಲ್ಲಿ ಹೀಗೆ ಬರೆದಿದ್ದೆ:

"............... ಈ ಲೆಕ್ಕನಿಯ
ಮೀಸಲಾಗಿಡುತಿಹೆನು ದೀನರಾರಾಧನೆಗೆ
ಪಾಪಿಗಳ ಪೂಜೆಗಂ, ಬಡವರಾ ಸೇವೆಗಂ,
ದೀನರಲಿ ದೈವವನು ಪೂಜಿಸುವೆನೆಂತಲ್ಲ-

ದೆಂದಾದೊಡಂ ಮರೆತು, ನೃಪರ ನೃಪ ಸೇವಕರ
ಧರ್ಮದಾ ಮುಸುಕಿನಲಿ ದೋಚುತಿಹ ಕಳ್ಳರಂ
ಕುರಿತು ಒಂದಕ್ಕರವ ನುಡಿದೆನಾದೊಡೆ ಬರಲಿ
............... ನರಕ"

ಈ ಕೊಟ್ಟ ಮಾತಿಗೆ ಅನುಗುಣವಾಗಿ ಈ ಅರವತ್ತು ವರ್ಷಗಳೂ ನನ್ನ ಲೇಖನಿ ಬರೆದಿದೆ! ಈ ಪ್ರಕಟವಾದ ಮಹಾಕಾದಂಬರಿ 'ಬೇಡಿಕಳಚಿತು-ದೇಶ ಒಡೆಯಿತು'ವರೆಗೆ ಸಾಗಿ ಬಂದಿದೆ.

ಹೀಗೆ ಸಾಹಿತ್ಯ ಲೋಕಕ್ಕೆ ಕಾಲಿಟ್ಟ ಮೇಲೆ ಅನಂತಪುರದಲ್ಲಿ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ನನ್ನ ಆಪ್ತಸ್ನೇಹಿತರೊಬ್ಬರ ಮೂಲಕ ಶ್ರೀ ಕುವೆಂಪು ಅವರ 'ಸ್ವಾಮಿ ವಿವೇಕಾನಂದ' ಜೀವನ ಚರಿತ್ರೆ ಕೈಗೆ ಸಿಕ್ಕಿತು. ಅದು ನನ್ನ ಅಂತಃಚೇತನದ ಕಣ್ಣನ್ನು ತೆರೆಸಿತು. ನನ್ನೊಲವು ಆಧ್ಯಾತ್ಮದತ್ತ ಹರಿಯಿತು. ಶ್ರೀ ರಾಮಕೃಷ್ಣ ಶ್ರೀ ವಿವೇಕಾನಂದರು ನನ್ನನ್ನು ಸುಮ್ಮನೆ ಆಕ್ರಮಿಸಿ ಬಿಟ್ಟರು. ಮೊದಲೇ ಹುಟ್ಟಿನಿಂದ ಬಂದಿದ್ದ ಶರಣ ಧರ್ಮದ ಸಂಸ್ಕಾರದ ಭದ್ರಬುನಾದಿಯ ಮೇಲೆ ಶ್ರೀ ರಾಮಕೃಷ್ಣ-ವಿವೇಕಾನಂದರ ಮಂದಿರ ನಿರ್ಮಾಣವಾಯಿತು. 'ಸ್ವಾಮಿಜಿಯ ಪತ್ರಗಳು' ಅನುವಾದದಿಂದ ಪ್ರಾರಂಭವಾದ (೧೯೪೨- ಸೆರೆಮನೆಯಲ್ಲಿದ್ದಾಗ), ಈ ಸಾಹಿತ್ಯ ಸೇವೆ, 'ಶ್ರೀ ರಾಮಕೃಷ್ಣ ಲೀಲಾ ನಾಟಕಂ', 'ಶ್ರೀರಾಮಕೃಷ್ಣರ ದೃಷ್ಟಾಂತ ಕಥೆಗಳು', 'ಸ್ವಾಮಿ ವಿವೇಕಾನಂದರ ಸಮಗ್ರ ಕೃತಿ ಸಾರಸಂಗ್ರಹ', 'ಸಂಸಾರ ಯೋಗ' ಮುಂತಾದ ಕೃತಿಗಳಲ್ಲಿ ಮೂಡಿ ಬಂತು. ಈ ಸಮೃದ್ಧ ಸಾಹಿತ್ಯ ಸೃಷ್ಟಿಯ ಮೂಲ ಸ್ಫೂರ್ತಿ ಕುವೆಂಪು. ಅವರ ಪ್ರಭಾವ ನನ್ನ ಮೇಲೆ ಎಷ್ಟಾಗಿದೆ ಎಂದರೆ, ಬಹುಶಃ ಅವರ ಮಹಾಕಾವ್ಯಕ್ಕೆ ನನ್ನ ಸಾಹಿತ್ಯದ ಶ್ರೇಷ್ಠ ಕೃತಿ 'ಮಹಾಕಾವ್ಯ ಸಮೀಕ್ಷೆ'ಯಲ್ಲಿ ಮೂಡಿ ನಿಂತಿದೆ. ಪ್ರಾಚೀನ ಕವಿಗಳಲ್ಲಿ ಹರಿಹರ ರಾಘವಾಂಕರು ನನ್ನ ಮೇಲೆ ಮಾಡಿದ ಪ್ರಭಾವವನ್ನು ಆರ್ವಾಚೀನ ಕವಿಗಳಲ್ಲಿ ಕುವೆಂಪು-ಬೇಂದ್ರೆಯವರು ಮಾಡಿದ್ದಾರೆ.

ಈಗ ಬೇಂದ್ರೆ ಅವರ ಪ್ರಭಾವವನ್ನು ಸ್ಮರಿಸುತ್ತೇನೆ. ವಿದ್ಯಾಭ್ಯಾಸ ಮುಗಿಸಿ ವೃತ್ತಿಜೀವನಕ್ಕೆ ಇಳಿದ ಮೇಲೆ ಶ್ರೀ ಅರವಿಂದರ ಸಾಹಿತ್ಯಭ್ಯಾಸಕ್ಕೆ ತೊಡಗಿದೆ. 'ರಾಮಾಯಣದರ್ಶನಂ' ಮಹಾಕಾವ್ಯಾಭ್ಯಾಸ ಕಾಲಕ್ಕೆ ಕುವೆಂಪು ಅವರೊಡನೆ ಮಾತನಾಡುವಾಗ ಆಗಂತುಕವಾಗಿ ಬಂದ ಮಾತಿನಿಂದ ಶ್ರೀ ಅರವಿಂದರ ಕಡೆ ತಿರುಗಿದ್ದೆ. ಅಷ್ಟು ದೂರ ಹೋದ ಮೇಲೆ ಬೇಂದ್ರೆ ಅವರ ಆಶೀರ್ವಾದ ದೃಷ್ಟಿಪಾತ ನನ್ನ ಮೇಲಾಯಿತು. ಹಿಂದೆ ಶ್ರೀರಾಮಕೃಷ್ಣ-ವಿವೇಕಾನಂದರು ನನ್ನನ್ನು ಆಕ್ರಮಿಸಿದಂತೆ ೧೯೫೫ರ ನಂತರ ಶ್ರೀ ಅರವಿಂದರು ನನ್ನನ್ನು ಸೆರೆಹಿಡಿದು ಬಿಟ್ಟರು. ಬೇಂದ್ರೆ ಅವರು ಶ್ರೀ ಅರವಿಂದರ ಕೃತಿಗಳನ್ನು ಹೆಚ್ಚು ಅನುವಾದ ಮಾಡಿಲ್ಲ. ಆದರೆ ಅವರ ಕವಿತೆಗಳಲ್ಲಿ ಅರವಿಂದ ದರ್ಶನದ ಹೊಳಹು ಅವರ ಬಾಯಿಂದಲೇ ಕೇಳಿದಾಗ ನನ್ನ ಮನವನ್ನು ಬೆಳಗಿಸಿತು. ಶ್ರೀ ಮಾತಾರವಿಂದರ ಹಸ್ತಾಕ್ಷರದ ಸಹಿಗಳುಳ್ಳ ಒಂದು ಭಾವಚಿತ್ರವನ್ನು ಕೊಟ್ಟು ಶ್ರೀ ಅರವಿಂದಾಶ್ರಮಕ್ಕೆ ಕಳಿಸಿದವರೆ ಬೇಂದ್ರೆ. ಅಲ್ಲಿಂದ ಶ್ರೀ ಮಾತಾರವಿಂದ ಸಾಹಿತ್ಯ ರಚನೆ ನಿರರ್ಗಳವಾಗಿ ಸಾಗಿತು. ಮತ್ತೆ ಶ್ರೀ ಕುವೆಂಪು ಅವರ

ಪ್ರೇರಣೆ ಪ್ರೋತ್ಸಾಹದಿಂದ ಶ್ರೀ ಅರವಿಂದರ ಮೇರು ಕೃತಿ 'ಲೈಫ್ ಡಿವೈನ್' ಅನ್ನು ಕನ್ನಡಕ್ಕೆ ಅನುವಾದಿಸಿದೆ. ತರುವಾಯ ಶ್ರೀ ಅರವಿಂದಾಶ್ರಮದ ಶ್ರೀಮಾಧವ ಪಂಡಿತರ ಪ್ರೋತ್ಸಾಹದಿಂದ 'ಸಾವಿತ್ರಿ' ಮಹಾಕಾವ್ಯವನ್ನೂ ಅನುವಾದಿಸಿದೆ. 'ದಿವ್ಯಜೀವನ'ಕ್ಕೆ ಮುನ್ನುಡಿ ಬರೆಯುತ್ತಾ ಶ್ರೀ ಕುವೆಂಪು:

"...... ಈ ಜಗದ್ಭವ್ಯ ಮೇರು ಕೃತಿಯನ್ನು ಕನ್ನಡಕ್ಕೆ ಕೊಟ್ಟು, ಕನ್ನಡಿಗರಿಗೆ ಆಧ್ಯಾತ್ಮಿಕ ಲೋಕಕ್ಕೆ ಅತಿಮಾನಸ ಜ್ಯೋತಿರ್‌ದ್ವಾರವನ್ನೇ ತೆರೆದಿದ್ದಾರೆ. ಈ ಗ್ರಂಥಗೋಮಟನನ್ನು ಕೆತ್ತಿರುವ ಮಹಾಶಿಲ್ಪಿಗೆ ನಾನು ಶ್ರವಣಬೆಳಗೊಳದ ಗೋಮಟೇಶ್ವರನನ್ನು ಕೆತ್ತಿದ ಮಹಾ ಶಿಲ್ಪಿಗೆ ಅರ್ಪಿಸಿದ ಕಾವ್ಯವಾಣಿಯಿಂದ ನಮಿಸುತ್ತೇನೆ.... - ಕುವೆಂಪು ೨೦-೩.೮೧" ಮಹಾ ಕವಿಯ ಈ ಗೌರವಕ್ಕೆ ಪಾತ್ರನಾಗುವಂತೆ ಆ ದೈವ ಆಶೀರ್ವದಿಸಲಿ ಎಂದು ಅಂದು ಪ್ರಾರ್ಥಿಸಿದೆ. ಇಂದೂ ಪ್ರಾರ್ಥಿಸುತ್ತಿದ್ದೇನೆ. ಹೀಗೆ ನನ್ನ ಜೀವನ ಮತ್ತು ಜೀವನದ ಜೀವಾಳ ವಾದ ಸಾಹಿತ್ಯ ಮಂದಿರದ ಬುನಾದಿ ಶರಣಧರ್ಮ; ಬುನಾದಿಯ ಮೇಲಿನ ಕಟ್ಟಡ ರಾಮಕೃಷ್ಣ-ವಿವೇಕಾನಂದರ ಸಾಹಿತ್ಯ; ಅದರ ಮೇಲಿನ ಗೋಪುರ ಮತ್ತು ಕಳಸ ಶ್ರೀ ಅರವಿಂದರ ಅತಿಮಾನಸ ದೀಪ್ತಿ.

'ಕಡೆಗಾಣಲೀಜೀವ ದೀನರಿಗೆ ಮುಡಿಪಾಗಿ' ಎಂಬ ಸಂಕಲ್ಪವೆ ನನ್ನನ್ನು ಪ್ರಗತಿಶೀಲ ಸಾಹಿತ್ಯ ಚಳವಳಿ ಪ್ರವಾಹದಲ್ಲಿ ಧುಮ್ಮಿಕ್ಕುವಂತೆ ಮಾಡಿತು. ಬೆಳಗಾವಿ ಲಾ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಒಮ್ಮೆ ಅನಕೃ ಅಲ್ಲಿಗೆ ಬಂದಿದ್ದರು. ಅವರು ಆಗ ಪ್ರಗತಿಶೀಲ ಸಾಹಿತ್ಯದ ಬಗ್ಗೆ ಭಾಷಣ ಮಾಡಿದರು. ಅಷ್ಟು ಹೊತ್ತಿಗೆ ನನ್ನ ಕೆಲವು ಕವಿತೆಗಳು, ಸಣ್ಣಕತೆ ಗಳು ಬಸವರಾಜ ಕಟ್ಟೀಮನಿ ಅವರು ಸಂಪಾದಕರಾಗಿದ್ದ 'ಉಷಾ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ಅವುಗಳನ್ನು ಗಮನಿಸಿದ್ದ ಅನಕೃ ನನ್ನನ್ನು ತಮ್ಮ ಅಂತರಂಗದ ಬಳಗಕ್ಕೆ ಸೇರಿಸಿಕೊಂಡರು. ಉತ್ತರ ಕರ್ನಾಟಕದಲ್ಲಿ ಅನಕೃ ಆಗಿನ ಯುವ ಸಾಹಿತಿಗಳಿಗೆ ಮಾರ್ಗ ದರ್ಶಕರೂ ಗುರುಗಳೂ ಆಗಿದ್ದರು. ಯುವ ಬರಹಗಾರರಿಗೆ ಆತ್ಮವಿಶ್ವಾಸವನ್ನು ಹುಟ್ಟಿಸಿ ದರು. ೧೯೪೬ರಿಂದ ೧೯೫೬ರವರೆಗೆ ಪ್ರಗತಿಶೀಲ ಚಳವಳಿಯ ಫಲವಾಗಿ ಉತ್ತಮ ಸಾಹಿತ್ಯ ಹುಲುಸು ಬಂತು. ಆ ಕಾಲಾವಧಿಯಲ್ಲಿ ಬರೆದ ನನ್ನ ಮೊದಲ ಕಾದಂಬರಿ 'ಹಿಂದಿರುಗಿ ಬರಲಿಲ್ಲ'. ಅದನ್ನು ಆಗ ವಿದ್ಯಾರ್ಥಿಗಳಾಗಿ ಓದಿದವರು ಇಂದಿಗೂ ನೆನಪಿಟ್ಟುಕೊಂಡಿದ್ದಾರೆ. ೧೯೮೮ರಲ್ಲಿ ಅಮೆರಿಕೆಯಲ್ಲಿ ನನ್ನನ್ನು ಕಂಡ ಕೆಲವರು ತಾವು ಆ ಕಾದಂಬರಿ ಓದಿದ್ದುದನ್ನು ಸ್ಮರಿಸಿದರು. ಇತ್ತೀಚೆಗೆ ಪ್ರಕಟವಾದ 'ಬೇಡಿ ಕಳಚಿತು - ದೇಶ ಒಡೆಯಿತು' ಮಹಾಕಾದಂಬರಿ ಆ ಪ್ರವಾಹವೆ ಹರಿದು ಸೇರಿದ ಸಾಗರದ ಅನರ್ಘ್ಯ ರತ್ನ ಎಂಬುದಾಗಿ ಭಾವಿಸಲಾಗಿದೆ!

೧೯೩೮ರಿಂದ ೨೦೦೧ರವರೆಗೆ - ಈ ಎರಡು ತುದಿಗಳ ನಡುವೆ ಎಪ್ಪತ್ತು ಕೃತಿಗಳು ಹೊರಬಂದಿವೆ. ಇನ್ನೂ ಹತ್ತು ಕೃತಿಗಳಿಗಾಗುವಷ್ಟು ಗಟ್ಟಿ ಶಾಶ್ವತ ಮೌಲ್ಯದ ಲೇಖನಗಳಿವೆ. ಹದಿನಾಲ್ಕು ವರ್ಷ 'ರೈತ' ಪತ್ರಿಕೆಯಲ್ಲಿ ಬರೆದ ಸಂಪಾದಕೀಯ ಲೇಖನಗಳಿವೆ. ನಿಯತಕಾಲಿಗಳಿಗೆ ಅಂಕಣಕಾರನಾಗಿ ಬರೆದ ಸಾವಿರಾರು ಲೇಖನಗಳಿವೆ. ಒಬ್ಬ ಸಾಹಿತಿ

ಬರೆಯಲು ತೊಡಗಿದ ಮೇಲೆ ಬರೆಯಬಹುದಾದಷ್ಟು ಬರೆದಿದ್ದೇನೆ. ಬರೆಯುವ ಸರಕು ಬೇಕಾದಷ್ಟಿದೆ. ಸ್ವಾತಂತ್ರ್ಯ ಸಂಗ್ರಾಮದ ಕಥೆಯ ನಂತರದ ಸ್ವಾತಂತ್ರ್ಯೋತ್ತರದ ಕಥೆ ಬರೆಯುವ ಉದ್ದೇಶ. ಆದರೆ ಅದು ಈಡೇರೀತೆಂಬ ಭರವಸೆ ಕಡಿಮೆ. ಅದೇನೆ ಆಗಲಿ, ಇದುವರೆಗೆ ಆಗಿರುವ ಕೆಲಸದ ಮೌಲ್ಯವೇನು? ಆ ಮೌಲ್ಯಮಾಪನವನ್ನು ಈಗಲೇ ಮಾಡುವುದು ಉಚಿತವಲ್ಲ. ಐವತ್ತು ವರ್ಷದ ಮೇಲೆ ನೂರಾರು ವರ್ಷಗಳ ನಂತರ 'ಕೋಚೆ' ಎಂಬ ಸಾಹಿತಿ ಒಬ್ಬನಿದ್ದ ಎಂದು ಆಗಿನವರು ಅವನ 'ದಿವ್ಯಜೀವನ'ವನ್ನೋ 'ಸಾವಿತ್ರಿ' ಯನ್ನೋ, 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ ಸಮೀಕ್ಷೆಯನ್ನೋ, 'ಬೇಡಿ ಕಳಚಿತು - ದೇಶ ಒಡೆಯಿತು' ಮಹಾಕಾದಂಬರಿಯನ್ನೊ, ಹರಿಹರನ ರಕ್ಷಾ ಶತಕಕ್ಕೆ ಅವನು ಬರೆದ ವ್ಯಾಖ್ಯಾನವನ್ನೊ ಕರ್ನಾಟಕದ ಯಾವುದೋ ಒಂದು ಹಳ್ಳಿಯಲ್ಲೊ ವಿಶ್ವವಿದ್ಯಾಲಯದ ಅಧ್ಯಯನ ಕೇಂದ್ರದಲ್ಲೊ ಒಬ್ಬಾನೊಬ್ಬನು ಯಾರಿಗೂ ಕಾಣದೆ ಓದುತ್ತಿದ್ದರೆ ಅವನು ತೀರಿದ ಮೇಲೆಯೂ ಬದುಕಿರುತ್ತಾನೆ! ಆ ವಿಚಾರದಲ್ಲಿ ಸಂದೇಹವಿಲ್ಲ.



# ನನಗೆ ಬದುಕು ಬರೆಹ ಬೇರೆಬೇರೆ ಅಲ್ಲ

● ಕೆ ಟಿ ಗಟ್ಟಿ

"ಓದಿ ಏನಾಗಬೇಕು?" ಎನ್ನುವವರು ಹಿಂದೆಯೂ ಇದ್ದರು; ಈಗಲೂ ಇದ್ದಾರೆ. ಓದದಿದ್ದರೆ ಏನೂ ನಷ್ಟವಾಗುವುದಿಲ್ಲ, ಓದದೆ ಬದುಕು ಮಾಡಲು ಆಗುತ್ತದೆ ಎಂಬುದೇ ಈ ಪ್ರಶ್ನೆಯ ಹಿಂದಿರುವ ಭಾವ. ಇದೇನೂ ನನಗೆ ಅಚ್ಚರಿ ಉಂಟುಮಾಡುವುದಿಲ್ಲ. ಆದರೆ ಬರೆದು ಏನೂ ಆಗುವುದಿಲ್ಲ ಎನ್ನುತ್ತಾ ಸಾಹಿತ್ಯ ಏನನ್ನೂ ಸಾಧಿಸುವುದಿಲ್ಲ ಎನ್ನುತ್ತಾ ಲೇಖಕರು ಬರೆಯುತ್ತಾ ಇರುತ್ತಾರಲ್ಲಾ, ಅದು ನನ್ನಲ್ಲಿ ಅಚ್ಚರಿಯನ್ನೂ ಕುತೂಹಲವನ್ನೂ ಉಂಟುಮಾಡುತ್ತದೆ. ಯಾಕೆಂದರೆ, ಜಗತ್ತಿನಲ್ಲಿ ಉಪಯೋಗವಿಲ್ಲದ್ದು ಯಾವುದೂ ಇಲ್ಲ. ಯಾವುದನ್ನು ಯಾವ ಉಪಯೋಗಕ್ಕೆ ಹಚ್ಚಲಾಗುತ್ತದೆ ಎನ್ನುವುದಷ್ಟೇ ಯೋಚಿಸಬೇಕಾದ ವಿಚಾರ. ಇದು ಒಂದು ಹುಲ್ಲುಕಡ್ಡಿಯ ವಿಚಾರದಲ್ಲೂ ಅಷ್ಟೇ, ಮನುಷ್ಯನ ವಿಚಾರದಲ್ಲೂ ಅಷ್ಟೇ. ಮನುಷ್ಯ ಎಂದರೆ ಅವನು ಏನು ಮಾಡುತ್ತಾನೋ ಅದು. ಅದರಿಂದ ಏನಾದರೂ ಆಗಿಯೇ ಆಗುತ್ತದೆ. ಆಗದಿರಲು ಸಾಧ್ಯವಿಲ್ಲ. ಆಗುವ ಬಗ್ಗೆ ಭ್ರಮೆಗಳನ್ನು ಮಹತ್ವಾಕಾಂಕ್ಷೆ ಗಳನ್ನು ಇಟ್ಟುಕೊಂಡಾಗ ಏನೂ ಆಗಿಲ್ಲ ಅಥವಾ ಏನೂ ಆಗುವುದಿಲ್ಲ ಎನಿಸುವುದು ಸ್ವಾಭಾವಿಕವೇ ಆಗಿದೆ.

ಸಾರಾಂಶ ಇಷ್ಟೇ: ಲೇಖಕನಿಗೆ ತನ್ನ ಬರೆಹದ ಬಗ್ಗೆ ಭ್ರಮೆ, ಮಹತ್ವಾಕಾಂಕ್ಷೆ

ಇರಬಾರದು. ಬೇಕೇ ಬೇಕೆನಿಸಿದರೆ ಇಟ್ಟುಕೊಳ್ಳಲು ಯಾರ ಆಕ್ಷೇಪವೂ ಇರಲಾರದು. ಆದರೆ ಭ್ರಮನಿರಸನಕ್ಕೆ ಸಿದ್ಧನಾಗಿರಬೇಕು. ಬಹುಶಃ ಲೇಖಕನಿಗೆ ಅದು ಒಂದು ಅಗತ್ಯವಾದ ಪಾಠ.

**ಸೃಜನಶೀಲ ಮತ್ತು ವೈಚಾರಿಕ ಎಂಬ ವರ್ಗೀಕರಣ**

ಸೃಜನಶೀಲ ಬರೆಹವೆಂದರೆ ಏನು? ಉದ್ದೇಶರಹಿತವಾದ ಬರೆಹ ಎಂದರ್ಥವೆ? ಮನುಷ್ಯನು ಮಾಡುವುದೆಲ್ಲದಕ್ಕೂ ಏನಾದರೊಂದು ಉದ್ದೇಶ ಇದ್ದೇ ಇರುತ್ತದೆ. ಸೃಜನ ಶೀಲ ಸಾಹಿತ್ಯ ಮಾತ್ರ 'ಇದರಿಂದ ಏನೂ ಆಗಬೇಕಾಗಿಲ್ಲ' ಎಂಬ ಭಾವನೆಯಲ್ಲಿ ತಯಾರಾಗುವಂಥ ಸಾಹಿತ್ಯ ಎನ್ನಲಾದೀತೆ? ಅಥವಾ ಸೃಜನಶೀಲ ಬರೆಹವೆಂದರೆ, ಸಾವಿರಾರು ವರ್ಷಗಳ ಹಿಂದೆ ಇದ್ದ ಸಾಮಾಜಿಕ ಸ್ಥಿತಿಯಲ್ಲಿ ಕವಿಗಳು ಒಂದು ರೀತಿಯ ಆತ್ಮ ಸಂತೋಷ ಕ್ಕೆಂದು ಕಾವ್ಯ ರಚನೆ ಮಾಡುತ್ತಿದ್ದರಲ್ಲಾ, ಆ ಬಗೆಯ ಬರೆಹವೇ? ಇತರ ಕವಿಗಳ ಮತ್ತು ಪಂಡಿತರ ಮೆಚ್ಚುಗೆಯಲ್ಲಿ ಅಥವಾ ಈರ್ಷ್ಯೆಯಲ್ಲಿ ಸಾಫಲ್ಯವನ್ನು ಕಾಣುವ ಬರೆಹವೇ?

ನನ್ನ ದೃಷ್ಟಿಯಲ್ಲಿ ವೈಚಾರಿಕತೆ ಸೃಜನಶೀಲತೆಯ ಪ್ರತಿಸ್ಪರ್ಧಿಯಲ್ಲ. ವಿಚಾರಗಳೆಲ್ಲವೂ ಮನುಷ್ಯನ ಮನಸ್ಸಿನ ಸೃಷ್ಟಿಯೇ. ಆದುದರಿಂದ ಈ ಬಗೆಯ ವರ್ಗೀಕರಣ ಅನಗತ್ಯ. ನಮ್ಮ ಮನಸ್ಸು ಅರಳಬೇಕು, ನಮ್ಮ ಬದುಕು ಅರಳಬೇಕು. ನಮ್ಮ ಅರಿವಿನ ಸೀಮೆ ನಿರಂತರವಾಗಿ ವಿಸ್ತರಿಸುತ್ತಾ ಹೋಗಬೇಕು. ನಮ್ಮ ಅನುಭವಗಳನ್ನು ವಿಶ್ಲೇಷಿಸುತ್ತಾ, ಪುನರ್ವಿಮರ್ಶಿಸುತ್ತಾ ನಮ್ಮನ್ನು ತಿಳಿದುಕೊಳ್ಳಬೇಕು. ಕಾಳು ರೂಢಿಗಳನ್ನು ಪ್ರಶ್ನಿಸುವ ಧೈರ್ಯ ಮತ್ತು ತಿದ್ದಲು ಬೇಕಾದ ಅರಿವು ನಮಗೆ ಬೇಕು. ಜನಸಮಷ್ಟಿಯ ಜೀವನ ಧರ್ಮ ಹೆಚ್ಚು ಹೆಚ್ಚು ಉದಾತ್ತವಾಗುತ್ತಾ ಹೋಗಬೇಕು. ಇದು ಕೇವಲ ವಿಜ್ಞಾನದಿಂದ, ಆಡಳಿತ ಸುಧಾರಣೆಯಿಂದ ಅಥವಾ ಹೆಚ್ಚು ಸಂಪಾದನೆಯಿಂದ ಆಗುವುದಿಲ್ಲ. ಇದು ಬರೆಹದಿಂದ ಆಗಬೇಕಾದ್ದು. ನಾವು ಹೇಗೆ ಸಂತೋಷದಿಂದಿರಬಹುದು ಎಂಬುದನ್ನು ಹೇಳಿಕೊಡುವಂಥದು ಬಹುಶಃ ಸಾಹಿತ್ಯ ಮಾತ್ರ.

ವಿಜ್ಞಾನಕ್ಕೂ ರಾಜಕಾರಣಕ್ಕೂ ಸಂಪತ್ತಿಗೂ ಬರೆಹದ ಸಂಬಂಧ ಬೇಕು. ಇಲ್ಲವಾದರೆ ರಾಜಕಾರಣ ಮತ್ತು ಸಂಪತ್ತು ದೃಷ್ಟಿಹೀನವಾಗಬಹುದು. ವಿಶಾಲವಾದ ಅರ್ಥದಲ್ಲಿ ಸಾಹಿತ್ಯ ಎಂಬುದು ಶಿಕ್ಷಣವೇ ಆಗಿದೆ. ಶಿಕ್ಷಣ ಮತ್ತು ಸಾಹಿತ್ಯ ಒಂದರ್ಥದಲ್ಲಿ ಅವಳಿಜವಳಿ. ಯೋಚಿಸಲು ಕಲಿಸುವುದು ಶಿಕ್ಷಣದ ಅತ್ಯಂತ ಪ್ರಧಾನವಾದ ಕೆಲಸ. ಹಾಗೆಯೇ ಸಾಹಿತ್ಯವೂ ನಮಗೆ ಯೋಚಿಸಲು ಕಲಿಸಬೇಕು.

ಸಾಹಿತ್ಯ ಸಮಕಾಲೀನ ಬದುಕಿನ ಕುರಿತಾಗಿಯೇ ಇರಬೇಕೆಂದೇನೂ ಇಲ್ಲ. ಆದರೆ ಸಾಹಿತ್ಯ ಸಮಕಾಲೀನ ಮನಸ್ಸನ್ನು ತಟ್ಟಬೇಕು. ಅದರ ಮೇಲೆ ಧನಾತ್ಮಕವಾದ ಪರಿಣಾಮವುಂಟು ಮಾಡಲೇ ಬೇಕು. ಧನಾತ್ಮಕ ಪರಿಣಾಮವಾಗಬೇಕು ಎಂಬುದೇ ಸಾಹಿತ್ಯದ ಬದ್ಧತೆ ಮತ್ತು ನೈತಿಕತೆ ಎಂದು ನಾನು ಭಾವಿಸುತ್ತೇನೆ. ಮತ್ತು ಸಾಹಿತ್ಯ ಇದನ್ನು ಮಾಡಿಯೇ ಮಾಡುತ್ತದೆ. ಈ ಪರಿಣಾಮ ದಿನದಿಂದ ದಿನಕ್ಕೆ ಕಾಣಿಸಬೇಕು, ತನ್ನ ಬರೆಹದಿಂದಾದುದನ್ನು ಪ್ರತ್ಯೇಕವಾಗಿ

ಕಾಣಬೇಕು ಎಂದು ಯಾವನಾದರೂ ಲೇಖಕ ಆಸೆಪಟ್ಟರೆ ಅದು ಶುದ್ಧಹುಂಬತನ.

**ಮತ್ತೊಂದು ವರ್ಗೀಕರಣ**

ಸಾಹಿತ್ಯವನ್ನು ಬದ್ಧತೆಯಿರುವಂಥದು, ಬದ್ಧತೆಯಿಲ್ಲದ್ದು, ಜನಪ್ರಿಯ, ಜನಪ್ರಿಯ ವಲ್ಲದ್ದು ಎಂದು ಮುಂತಾಗಿ ಸಾಹಿತಿಗಳು ವರ್ಗೀಕರಿಸುವುದು ಸಾಹಿತಿಗಳಿಗೂ ಸಾಹಿತ್ಯಕ್ಕೂ ಸಲ್ಲದ ಕೆಲಸ ಎಂದು ನಾನು ತಿಳಿಯುತ್ತೇನೆ. ಒಂದು ಕೃತಿ ಹೇಗಿದೆ ಎಂದು ಕಂಡುಕೊಳ್ಳುವ ಹಕ್ಕು ಓದುಗನಿಗೂ ಇದೆ. ಓದುಗ ಅದನ್ನು ತಾನೇ ಕಂಡುಕೊಳ್ಳಲಿ. ಓದುಗನ ಮನಸ್ಸಿನಲ್ಲಿ ಪೂರ್ವಗ್ರಹಗಳನ್ನು ಯಾಕೆ ಸೃಷ್ಟಿಸಬೇಕು? ಪೂರ್ವಗ್ರಹಗಳನ್ನು ಸೃಷ್ಟಿಸುವವರಿಗೆ ಏನೋ ಲಾಭದ ಉದ್ದೇಶವಿರುತ್ತದೆ; ಸಾಹಿತಿಗಳು ಅಂಥವರಲ್ಲ ಅಥವಾ ಅಂಥವರು ಸಾಹಿತಿಗಳಲ್ಲ ಎಂಬುದು ನನ್ನ ಭಾವನೆ. ಇಂಥ ವರ್ಗೀಕರಣ ಸಮೀಪ ದೃಷ್ಟಿ ಕಾರಣ. ಯಾಕೆಂದರೆ, ಯಾವುದೇ ವರ್ಗೀಕರಣ ಸಾರ್ವಕಾಲಿಕವಾಗಿರಲಾರದು. ಸಾಮಾಜಿಕ ಸನ್ನಿವೇಶ ಬದಲಾಗುತ್ತಾ ಹೋದ ಹಾಗೆ, ವರ್ಗೀಕರಣ ಅರ್ಥ ಕಳೆದುಕೊಳ್ಳುತ್ತದೆ. ಸುಮಾರು ಮೂವತ್ತು ವರ್ಷಗಳ ಹಿಂದಿನ ಕಮ್ಯೂನಿಸ್ಟ್ ಅಥವಾ ಸಮಾಜವಾದಿಗಳನ್ನು ಇಂದಿನ ಕಮ್ಯೂನಿಸ್ಟ್‌ರು ಮತ್ತು ಸಮಾಜವಾದಿಗಳ ಜತೆ ಹೋಲಿಸಿ ನೋಡೋಣ. ಅವರ ಹೋರಾಟದಲ್ಲಿ ವಾದ ಮತ್ತು ಬದುಕು ಒಂದೇ ಆಗಿತ್ತು. ವಾದ ಮತ್ತು ಬದುಕಿಗೆ ನಿಷ್ಠರಾಗಿದ್ದ ಯಾರಿಗೂ ತನ್ಮೂಲಕ ಶ್ರೀಮಂತಿಕೆ ಅಥವಾ ಅಧಿಕಾರವನ್ನು ಗಳಿಸಬೇಕೆಂಬ ಇರಾದೆಯಿರಲಿಲ್ಲ. ಇಂದಿನ ಸಮಾಜವಾದಿಗಳ ವಾದ ಬೇರೆ ಬದುಕು ಬೇರೆ. ಇಂದಿನ ಸಮಾಜವಾದ ತಿಂಗಳಿಗೆ ಹತ್ತಿಪ್ಪತ್ತು ಸಾವಿರ ಸಂಬಳ ಪಡೆಯುವವನು ಶೇಕಡಾ ತೊಂಬತ್ತು ಅಂಥವರೇ ಇರುವ ಸಭೆಯಲ್ಲಿ ಮಾಡುವ ಭಾಷಣ ಮಾತ್ರ, ಬದುಕು ಅಲ್ಲ! ಒಬ್ಬ ಎಷ್ಟು ಶ್ರೇಷ್ಠ ಸಮಾಜವಾದಿ ಎಂಬುದು ಆತನ ಭಾಷಣ ಎಷ್ಟು ಒಳ್ಳೆಯದಿತ್ತು ಎಂಬುದನ್ನು ಹೊಂದಿಕೊಂಡಿದೆ. ನಿಜದ ಬದುಕು ಬಂದ ಸುವರ್ಣಾವಕಾಶಗಳನ್ನು ಕಾಲಿನಿಂದ ತಳ್ಳುವುದಿಲ್ಲ. ಮಾತ್ರವಲ್ಲ, ಅವಕಾಶಗಳನ್ನು ಹುಡುಕುತ್ತಲೇ ಇರುತ್ತದೆ. ಈ ಮಾತು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರದಲ್ಲಿ ನಡೆದ ದಲಿತ, ಬಂಡಾಯ ಮುಂತಾದ ಸಮಾಜವಾದೀಯ ನೆಲೆಗಟ್ಟಿನ ಹೋರಾಟಗಳಿಗೂ ಅನ್ವಯಿಸುತ್ತದೆ. ಒಂದು ಸಾಮಾಜಿಕ ಪರಿವೇಶದಲ್ಲಿನ ಸತ್ಯ ಸರ್ವಕಾಲಕ್ಕೂ ಸತ್ಯವೆನಿಸದು. ಶಾಶ್ವತ ಸತ್ಯದ ನಾಮಗಳನ್ನು ಹಣೆಗೆ ಅಂಟಿಸಿಟ್ಟುಕೊಳ್ಳುವುದರಿಂದ ಕೆಲವು ವೈಯಕ್ತಿಕ ಲಾಭ ಗಳಿಸಿರಬಹುದು. ಆದರೆ ಇದರಿಂದ ಸಮಾಜಕ್ಕೂ ಪ್ರಯೋಜನವಿಲ್ಲ, ಸಾಹಿತ್ಯಕ್ಕೂ ಪ್ರಯೋಜನವಿಲ್ಲ.

**ಸಾಹಿತ್ಯದಿಂದ ಕ್ರಾಂತಿ**

ಇವತ್ತು 'ಪುಸ್ತಕ' ಎನ್ನುವುದು ಒಂದು ಮಹತ್ವದ, ಮನುಷ್ಯನಿಗೆ ಅಗತ್ಯವೆನಿಸುವಂಥ ಒಂದು ಸಾಧನವಾಗಿ ಉಳಿದಿದೆಯೆ ಎನ್ನುವುದು ಸಾಹಿತ್ಯ ಕ್ಷೇತ್ರದ ಪ್ರಜ್ಞಾವಂತರನ್ನು ಕಾಡುವ ಪ್ರಶ್ನೆಯಾಗಿದೆ. ದೃಶ್ಯಮಾಧ್ಯಮದ ದಾಳಿಗೆ ತುತ್ತಾಗಿರುವ ಸಾಹಿತ್ಯವನ್ನು ಹೇಗಾದರೂ ಉಳಿಸಬೇಕು ಎಂಬುದು ದೊಡ್ಡ ಕಾಳಜಿಯಾಗಿದೆ. ಹಾಗೆಂದು ಪ್ರಕಾಶನಗೊಳ್ಳುವ ಪುಸ್ತಕಗಳ

ಸಂಖ್ಯೆಯೇನೂ ಕಡಿಮೆಯಾಗಿಲ್ಲ. ಈಗ ಹಿಂದೆಂದಿಗಿಂತಲೂ ಹೆಚ್ಚು ಪುಸ್ತಕಗಳು ಹೊರಬರು ತ್ತಿವೆ. ಓದುವವರ ಸಂಖ್ಯೆ ಹೆಚ್ಚಾಗಿಲ್ಲವಾದರೂ ಕಡಿಮೆಯಾಗಿದೆ ಎಂದೆನಿಸುವುದಿಲ್ಲ. ಬೇಸರದ ವಿಚಾರವೆಂದರೆ, ಸಾಮಾನ್ಯವಾಗಿ ಮುದ್ರಣಗೊಳ್ಳುವ ಒಂದು ಪುಸ್ತಕದ ಸಾವಿರ ಪ್ರತಿಗಳಲ್ಲಿ ಸುಮಾರು ಅರೆವಾಸಿ ಪ್ರತಿ ಸರಕಾರಿ ಗ್ರಂಥಾಲಯ ಸೇರಿ ಮರಗಟ್ಟುತ್ತವೆ. ಅವುಗಳನ್ನು ಯಾರಾದರೂ ಓದಿದರೇ ಇಲ್ಲವೆ ಎನ್ನುವುದು ತಿಳಿಯುವುದೇ ಇಲ್ಲ. ಇವು ಗಳಲ್ಲಿ ಮುಕ್ಕಾಲು ಪಾಲು ಪುಸ್ತಕಗಳನ್ನು ಯಾರೂ ಮುಟ್ಟುವುದಿಲ್ಲ. ಅವು ಮುಟ್ಟಿಸಿಕೊಳ್ಳು ವಂಥವಾಗಿರುವುದಿಲ್ಲ ಎಂದು ಕೂಡ ಹೇಳಲಾಗುತ್ತದೆ. ವಾಸ್ತವದಲ್ಲಿ ಕೆಲವೇ ಕೆಲವು ಪ್ರತಿಗಳಿಗೆ ಓದಿಸಿಕೊಳ್ಳುವ ಸೌಭಾಗ್ಯ ದೊರೆಯುತ್ತದೆ. ಒಂದು ಪುಸ್ತಕ ಹೊರಬಂದದ್ದು ಮತ್ತು ಏಳೆಂಟು ತಿಂಗಳಲ್ಲಿ ಅದೃಶ್ಯವಾದದ್ದು ಯಾರ ಅರಿವಿಗೂ ಬರುವುದಿಲ್ಲ. ಒಂದು ಒಳ್ಳೆಯ ಕೃತಿ ಒಂದೆರಡು ವರ್ಷಗಳ ಅವಧಿಯಲ್ಲಿ ಓದುಗರ ಕೈಯಲ್ಲಿ ಜೀರ್ಣಶೀರ್ಣ ವಾಗುವುದು ಸ್ವಾಭಾವಿಕ. ಮತ್ತೆ ಅದನ್ನು ತರಿಸಿ ಹಾಕಬೇಕೆಂಬ ಕಾಳಜಿ ಅಥವಾ ಪ್ರಜ್ಞೆ ಗ್ರಂಥಾಲಯಕ್ಕೂ ಇಲ್ಲ, ಆಡಳಿತಕ್ಕೂ ಇಲ್ಲ. ಮರುಮುದ್ರಣದ ಮೂಲಕ ಉತ್ತಮ ಪುಸ್ತಕ ಯಾವಾಗಲೂ ಮಾರುಕಟ್ಟೆಯಲ್ಲಿ ಲಭ್ಯವಿರುವಂತೆ ನೋಡಿಕೊಳ್ಳುವ ಪಶ್ಚಿಮ ದೇಶಗಳ ಪ್ರಕಾಶಕರ ಪ್ರಕಾಶನ ಶಿಸ್ತು ನಮ್ಮಲ್ಲಿಲ್ಲ. ಗ್ರಾಹಕ ಸಂಸ್ಕೃತಿಯಿಂದಾಗಿ, ಪ್ರಚಾರವಿಲ್ಲದ್ದು ಯಾರ ಗಮನವನ್ನೂ ಸೆಳೆಯದಿರುವ ಒಂದು ವಿಶಿಷ್ಟ ಪರಿಸ್ಥಿತಿ ನಿರ್ಮಾಣವಾಗಿದೆ. ಪತ್ರಿಕೆಗಳಲ್ಲಿ ಟೀವಿಯಲ್ಲಿ ಜಾಹೀರಾತು ಹಾಕಿ ಪುಸ್ತಕಗಳನ್ನು ಮಾರಾಟ ಮಾಡಬಲ್ಲ ಪ್ರಕಾಶಕ ರಿಲ್ಲ. ಯಾರೋ ಕೆಲವು ಪ್ರತಿಷ್ಠಿತ ಲೇಖಕರು ತನ್ನ ಪುಸ್ತಕ ಬರುತ್ತಿದೆ ಎಂದು ತಾವೇ ಘೋಷಿಸಿಕೊಂಡು ಓದುಗರಿಗೆ ತಮ್ಮ ಇರುವಿಕೆಯನ್ನು ನೆನಪಿಸಿಕೊಡುತ್ತಾರೆ. ಅದಕ್ಕೆ ಸಹ ಅಂಥ ಮಾನ್ಯತೆಯೇನೂ ಇಲ್ಲ.

'ಟೀವಿ ಪುಸ್ತಕವನ್ನು ಕೊಲ್ಲುತ್ತಿದೆ' ಎಂದು ಅಳುವುದು ನಮ್ಮಲ್ಲಿ ಕೆಲವರ ಒಂದು ಅಳುಬುರುಕ ಗುಣ. ಹಾಗಾಗಿದ್ದರೆ ಇಂಗ್ಲೆಂಡ್, ಅಮೆರಿಕಗಳಲ್ಲಿ ಪುಸ್ತಕವೇ ಇರುತ್ತಿರಲಿಲ್ಲ. ತದ್ವಿರುದ್ಧವಾಗಿ ಅಲ್ಲಿ ಪ್ರಸಿದ್ಧ ಲೇಖಕರ ಪ್ರತಿಯೊಂದು ಪುಸ್ತಕದ ಮಿಲಯಗಟ್ಟಲೆ ಪ್ರತಿಗಳು ಮಾರಾಟವಾಗುತ್ತವೆ. ನಮ್ಮಲ್ಲಾಗುವಂತೆ ಸರಕಾರಿ ಸಗಟು ಕೊಳ್ಳಿಕೆಯ ಮೂಲಕ ಖಾಲಿಯಾಗುವುದಲ್ಲ! ಕನ್ನಡದ ವಿಚಾರದಲ್ಲಿ, ಪುಸ್ತಕಕ್ಕೆ ಪಾರ್ಶವಾಯು ಬಡಿಯುಲು ಭಾಗಶಃ ಇಂಗ್ಲಿಶ್ ಮಾಧ್ಯಮ ಕಾರಣ ಎಂಬುದರಲ್ಲಿ ಸಂದೇಹವಿಲ್ಲ. ವಿಮರ್ಶಕರು ದೀರ್ಘ ರಜದ ಮೇಲೆ ಹೋಗಿದ್ದಾರೆ. ಹಳೆಯ ಓದುಗರು 'ಓದಿ ಏನಾಗಬೇಕಾಗಿದೆ? ಎನ್ನುತ್ತಿದ್ದರೆ, ತರುಣ ಪೀಳಿಗೆಗೆ ಓದಿನ ಬಗ್ಗೆ ಮಾರ್ಗದರ್ಶನವೇ ಇಲ್ಲವಾಗಿದೆ. ಇಂಥ ಸ್ಥಿತಿಯಲ್ಲೂ 'ಬರವಣಿಗೆಯ ಮೂಲಕ ನಾಳೆಯೇ ಸಮಾಜ ಬದಲಾಗಬೇಕು' ಎಂದು ಹೇಳಿ ಲೇಖಕ ಹಾಸ್ಯಾಸ್ಪದವಾಗಬೇಕೆ! 'ಬರೆಯುವುದಿಲ್ಲ' ಎಂದು ಲೇಖನ ಸನ್ಯಾಸ ಸ್ವೀಕರಿಸಬೇಕೇ? ಅಥವಾ ಸಾಮಾಜಿಕ ಮೌಲ್ಯಗಳು ಬದಲಾಗಿಬಿಟ್ಟಿವೆ, ಈಗ ಜನರಿಗೆ ಬೇಕಾದ್ದು ಇದು ಎಂದು ಭ್ರಮಿಸಿಕೊಂಡು ಹಾಗೆ ಬರೆಯಬೇಕೆ? ಲೇಖಕನೇ ನಿರ್ಧರಿಸಬೇಕು. ಹಿಂದೆಲ್ಲಕ್ಕಿಂತ

ಈಗ ಲೇಖಕನ ಮುಂದೆ ಹೆಚ್ಚು ಸವಾಲುಗಳು ಇವೆ. ಈ ಕಾರಣದಿಂದಲೇ ಲೇಖಕನ ಜವಾಬ್ದಾರಿ ಹೆಚ್ಚಿದೆ.

**ಯಾಕೆ ಬರೆಯುತ್ತೀರಿ ಎಂಬ ಪ್ರಶ್ನೆ**

ಯಾರೋ ಏನೋ ಮಾಡುತ್ತಿರುವಾಗ, ಅವರೇನು ಮಾಡುತ್ತಿದ್ದಾರೆ ಎಂದು ನಮಗೆ ಅರ್ಥವಾಗದಿದ್ದರೆ, ಅರ್ಥವಾಗಬೇಕು ಎಂದಿದ್ದರೆ, ಈ ಪ್ರಶ್ನೆಯನ್ನು ಕೇಳಬಹುದು. ಆದರೆ ಇದು ಸಾಮಾನ್ಯವಾಗಿ ಮಾಡಬಾರದ್ದನ್ನು ಮಾಡುವವರನ್ನು ಕೇಳುವ ಪ್ರಶ್ನೆ. ಸಾಹಿತಿಯನ್ನು ಯಾಕೆ ಕೇಳುತ್ತಾರೆ? ಕಾರಣ ಇಷ್ಟೇ: ಬರೆಯುವವರು ಅಪರೂಪದ ಪ್ರಾಣಿಗಳು ಅರ್ಥಾತ್ ಅವರ ಸಂಖ್ಯೆ ಬಹಳ ಚಿಕ್ಕದು. ಅವನು ಬಹುಶಃ ಜನಸಮಷ್ಟಿಯೆಂಬ ಹಸು ಹಿಂಡಿನಲ್ಲಿ ಒಂದು ಕಾಂಗರುವಿನಂತೆ ಕಾಣಿಸುತ್ತಾನೆ. 'ಅಂಗಡಿ ಯಾಕೆ ಇಟ್ಟಿದ್ದೀರಿ' ಎಂದು ಯಾರೂ ಕೇಳುವುದಿಲ್ಲ. ಯಾಕೆಂದರೆ ಹೆಜ್ಜೆಗೊಂದು ಅಂಗಡಿ ಇದೆ.

ಸಾಹಿತ್ಯದ ಗ್ರಾಹಕರ ಸಂಖ್ಯೆ ಕೂಡ ಚಿಕ್ಕದು. ಆದ್ದರಿಂದ ಒಮ್ಮೆಲೇ ನಾಲ್ಕೈದು ಪುಸ್ತಕಗಳನ್ನು ಕೊಂಡುಕೊಳ್ಳುವಾತ 'ಪುಸ್ತಕ ಹುಚ್ಚ' ಆಗಿಬಿಡುತ್ತಾನೆ. 'ಬರೆಯುವ ಚಟ' 'ಓದುವ ಚಟ' ಎಂಬ ಮಾತುಗಳೂ ಇವೆ. ಸಿಗರೇಟಿನ ಚಟ, ಸಿನಿಮಾ ನೋಡುವ ಚಟ, ಕಣ್ಣಿಗೆ ಆಕರ್ಷವೆನಿಸಿದ್ದನ್ನೆಲ್ಲ ಕೊಂಡುಕೊಳ್ಳುವ ಚಟ. ಇವಲ್ಲದೆ, ಗ್ರಾಹಕ ಸಂಸ್ಕೃತಿಯ ಜೊತೆಯಲ್ಲಿ ಹುಟ್ಟಿಕೊಂಡ ಇತರ ಹತ್ತು-ಹಲವು ಚಟಗಳು ಇವೆ. ಆದರೆ ಅವರೆಲ್ಲ ಹುಚ್ಚು ಎನಿಸಿಕೊಳ್ಳುವುದಿಲ್ಲ, ಅದು ಮಾನವ ಸಹಜ ಸ್ವಭಾವ ಎನಿಸಿಕೊಳ್ಳುತ್ತದೆ.

ಇದು ವ್ಯರ್ಥಾಲಾಪ ಎನಿಸಿದರೂ ಲೇಖಕನಾಗಿ ನಾನಿದನ್ನು ಮಾಡಲು ಬದ್ಧನಾಗಿದ್ದೇನೆ. ನನ್ನ ಆಲಾಪ ಏನೆಂದರೆ, ಲೇಖಕರ ಸಂಖ್ಯೆ ಈಗಿರುವ ಸಂಖ್ಯೆಯ ಹತ್ತು ಪಟ್ಟು ನೂರು ಪಟ್ಟು ಆಗಬೇಕು. ಓದುವವರ ಸಂಖ್ಯೆ ಈಗಿರುವ ಸಂಖ್ಯೆಯ ನೂರು ಪಟ್ಟು ಆಗಬೇಕು. ಆಗ 'ಯಾಕೆ ಬರೆಯುತ್ತೀರಿ' 'ಯಾಕೆ ಓದಬೇಕು?' ಎನ್ನುವ ಪ್ರಶ್ನೆಗಳಿರುವುದಿಲ್ಲ. ಲೇಖಕರೇ ಲೇಖಕರನ್ನು ಓದಿದರೂ ಸಾಕು, ಬರೆಯುವವನಿಗೆ ಬರೆಯುವುದು ಬದುಕು ಆಗಬಹುದು, ಓದುವವನಿಗೆ ಓದುವ ಹವ್ಯಾಸ ಬದುಕುವಿಕೆಯ ಕ್ರಿಯೆಗಳಲ್ಲೊಂದಾಗಬಹುದು. ಎಲ್ಲರೂ ನನ್ನ ಕವಿತೆಗಳನ್ನು ಓದಲಿ ಅಥವಾ ಎಲ್ಲರೂ ನನ್ನ ಕಾದಂಬರಿಗಳನ್ನು ಓದಲಿ ಎಂದು ಬಯಸುವುದು ಹುಂಬತನವೆನಿಸೀತು. ಯಾರಿಗೆ ಯಾವುದು ಇಷ್ಟವೋ ಅದನ್ನು ಅವರು ಓದಲಿ. ಆದರೆ ಹೆಚ್ಚು ಜನರು ಓದಲಿ. ಓದುವುದಷ್ಟೇ ಅಲ್ಲ, ಓದಿದ್ದರ ಕುರಿತು ಚರ್ಚಿಸಲಿ, ಸಾಧ್ಯವಾದಾಗ ಲೇಖಕನ ಜೊತೆಯಲ್ಲಿಯೂ ಚರ್ಚಿಸಲಿ. ಸಾಹಿತ್ಯ ಕೇವಲ 'ಪುಸ್ತಕ'ವೆನಿಸದೆ, ಒಂದು ಸಾಮಾಜಿಕ-ಸಾಂಸ್ಕೃತಿಕ ಪ್ರಕ್ರಿಯೆಯಾಗಲಿ. ಲೇಖಕರು ನಂಬಿರುವ 'ಸಾಹಿತ್ಯದ ಮೂಲಕ ನಡೆಯುವ ಕ್ರಾಂತಿ' ಇದೇ, ಮತ್ತು ಇಷ್ಟೇ; ದಂಗೆಯಲ್ಲ, ದೊಂಬಿಯಲ್ಲ. ಇದೆಲ್ಲ ನಾಳೆಯೇ ಆಗುವುದಿಲ್ಲ. ಆದರೆ ನಿಧಾನವಾಗಿ ಆಗುತ್ತದೆ. ಇದಕ್ಕಾಗಿ ಲೇಖಕರು ಬರೆಯುತ್ತಿರುಬೇಕು. ಓದುಗರು ಓದುತ್ತಿರಬೇಕು.

ಆದ್ದರಿಂದ ನಾನು ಕೂಡ ಬರೆಯುತ್ತೇನೆ.

# ನೆಲವ ಹುಡುಕಿ ಆಕಾಶ ಮಾರ್ಗದಲ್ಲಿ

● ಚಂದ್ರಶೇಖರ ತಾಳ್ಯ

ನಾನು ಎಂದರೆ ಯಾರು? ಯಾರಾದರೂ ಗೆಳೆಯರು, ಬಂಧುಗಳು, ಪರಿಚಯದವರು ನನ್ನನ್ನು ಹೀಗೆ ಕೇಳಿದರೆಂದರೆ (ಹಾಗೆ ಯಾರೂ ಕೇಳುವುದಿಲ್ಲ, ಅದು ಬೇರೆ ಮಾತು) ಏನೆಂದು ಹೇಳುವುದು? ಎಲ್ಲರಿಗೂ ಒಮ್ಮೆಯಲ್ಲಾ ಒಮ್ಮೆ ಇಂಥ ಪ್ರಶ್ನೆ ಕಾಡುತ್ತದೆಯೋ ಅಥವಾ ನನ್ನಂಥವರಿಗೆ ಮಾತ್ರ ಕಾಡುವುದೋ ತಿಳಿಯುತ್ತಿಲ್ಲ. ಪಾತ್ರದ ಅಪಾತ್ರದ ಹರಿವಿನ ಸೆಲೆಯೊಳಗೇ ಸಿಕ್ಕಿಕೊಂಡ ಜೀವ ಮಿಡುಕೀ ಮಿಡುಕೀ ತನ್ನ ಪಾಪವನ್ನು ನೆನೆದೂ ನೆನೆದೂ ಹಾಡುತ್ತಲೇ ಇರುತ್ತದೆ. ತನ್ನ ಪಾಪದ ಹಾಡುಗಳನ್ನು ಕಟ್ಟುತ್ತಲೇ ಇರುತ್ತದೆ. ಪುಣ್ಯವಂತರು ಹಾಡು ಕಟ್ಟುವುದುಂಟೆ? ಅವರು ಭೋಗಿಗಳು, ಭೋಗದ ತುತ್ತತುದಿಯಲ್ಲಿ ಮಲಗಿ ಎಚ್ಚರದ ನಿದ್ದೆ ಮಾಡುವ ಜೀವಗಳವು. ಅಂಥಾ ಉನ್ಮಾದ, ಉಲ್ಲಾಸ, ಸವಿನಿದ್ದೆ ಅವರಿಗಲ್ಲದೆ ಬೇರೆ ಯಾರಿಗೆ ತಾನೆ ದಕ್ಕೀತು? ಯೋಗಿಗಳು ಹಾಡೆಂದರೆ ವಾಕರಿಸಿ ಬಿಡುತ್ತಾರೆ. ಶಬ್ದದ ಹಂಗಿನೊಳಗೆ ಅವರಿಗೇನು ಕೆಲಸ? ಹಂಗು ಮೀರಿದ ಅವರ ಗುಂಗು ಪರಮಾತ್ಮನ ಸಾನಿಧ್ಯದ ಪರಮ ಗುಂಗು. ಈಶ್ವರನೊಳಗೆ ಲಯವಾಗುವವರೆಗೂ ಅವರು ಉನ್ಮತ್ತರು, ಲೋಕ ವಿರಾಗಿಗಳು. ಎಲ್ಲವನ್ನೂ ಧಿಕ್ಕರಿಸಿ ಹೋಗಿಬಿಡಬಲ್ಲ ಪರಮ ಅಹಂಕಾರಿಗಳು. ಆದರೆ ಹಾಡು ಕಟ್ಟುವವನು ಈ ಎರಡೂ ಆಗುತ್ತಾ ಎರಡೂ ಆಗದೆ ಇರುತ್ತಾ ಪಾಪವನ್ನು ಮಾಡು ತ್ತಲೇ ಇರುತ್ತಾನೆ. ಹಾಗಾಗಿ ಹಾಡು ಕಟ್ಟುವವನು (ಸಾಹಿತಿ) ತನಗೆ ತಾನೇ ಸಂದೇಹಿಯಾಗಿರು ತ್ತಾನೆ. ತನಗೆ ತಾನೇ ತಾನು ಯಾರು ಎಂಬ ಪ್ರಶ್ನೆ ಹಾಕಿಕೊಳ್ಳುತ್ತಲೇ ಇರುತ್ತಾನೆ. ಉತ್ತರ ಸಿಕ್ಕು ಮೀರಿದರೆ ಯೋಗಿಯಾಗುವನು. ಉತ್ತರದಲ್ಲೇ ನಿಂತರೆ ಭೋಗಿಯಾಗುವನು. ಉತ್ತರ ಹುಡುಕುತ್ತಲೇ ಇದ್ದರೆ ಅವನು ಕವಿಯಾಗುವನು (ತತ್ವಜ್ಞಾನಿ ಕೂಡ). ಹೀಗೆ ನಾನು ಯಾರು ಎಂದು ಕೇಳಿದರೆ ಈ ನಿರಂತರ ಹುಡುಕಾಟದ ವ್ಯಕ್ತಿ 'ಕವಿ' ಎಂದು ಹೇಳಲೇ?

ನಾನು ಚಿಕ್ಕವನಿದ್ದಾಗ ಇವೆಲ್ಲ ನನಗೆ ತಿಳಿಯದ ಅಂಶಗಳಾಗಿದ್ದವು. ಯಾಕಾದರೂ ಆಗ ತಿಳಿಯಬೇಕು ಹೇಳಿ. ನನ್ನ ಊರಲ್ಲಿ, ತಾಳ್ಯ ಎಂಬ ಹೊಳಲ್ಕರೆ ತಾಲ್ಲೂಕಿನಲ್ಲಿರುವ ಗ್ರಾಮದಲ್ಲಿ, ನನ್ನ ಸಾಕುತಂದೆ ಅಕ್ಕಸಾಲೆ ವಜ್ರಾಚಾರಿಯ ಅಗ್ಗಿಷ್ಟಿಕೆಯ ಮುಂದೆ ಕುಂತು, ಊದುಗೊಳವೆಯಿಂದ ಪುಸ್‌ಪುಸ್ ಅಂತಾ ಊದುತ್ತಾ ಅಗ್ಗಿಷ್ಟಿಕೆಯ ಬೆಂಕಿಯನ್ನು ತನಗೆ ಬೇಕಿರುವಷ್ಟು ತೀವ್ರಗೊಳಿಸಿಕೊಳ್ಳುತ್ತಾ, ಅದರಲ್ಲಿ ಕಾದು ಕೆಂಡವಾದ ಇದ್ದಿಲಿನ ನಡುವೆ ಬಂಗಾರದ ತುಣುಕೊಂದ ಕಾಯಿಸಿಕೊಂಡು, ಅದ್ದಗಣೆಯ ಮೇಲಿಟ್ಟು ಪುಟ್ಟ ಸುತ್ತಿಗೆಯಿಂದ ತನಗೆ ಬೇಕಾದ ಆಕಾರ ಬರುವವರೆಗೂ ಬಡಿಯುತ್ತಿದ್ದ. ಆ ಬಂಗಾರದ ತುಂಡು ಅಗ್ಗಿಷ್ಟಿಕೆ ಯಲ್ಲಿ ಕಾದು ಅದ್ದಗಣೆಯ ಮೇಲೆ ಬಡಿಸಿಕೊಂಡು, ಶ್ರವಣ, ಹಿಕ್ಕುಳ, ತಂಡಸಗಳಿಂದ ಹಿಡಿಸಿಕೊಂಡು ತನ್ನ ಹಿಂದಿನ ಆಕಾರ ಕಳೆದುಕೊಳ್ಳುತ್ತಾ ಹೊಸದಾದ ಆಕಾರವನ್ನು

ಪಡೆಯುತ್ತಾ ಹೋದಂತೆ, ಅದನ್ನು ನನ್ನ ಅಪ್ಪ ಮುಟ್ಟುತ್ತಾ ನೇವರಿಸುತ್ತಾ ಸವರುತ್ತಾ ತನಗೆ ತಾನೇ ಆನಂದವನ್ನು ಸವಿಯುತ್ತಿದ್ದ. ಹೆಣ್ಣೊಂದನ್ನು ಅವನು ತನ್ನ ಕೈಯಲ್ಲಿ ಹಿಡಿದಿರುವನೋ ಎಂಬಂತೆ ಅದರೊಡನೆ ಮಾತಾಡುತ್ತಾ ಮುದ್ದು ಮಾಡುತ್ತಿರುವವನಂತೆ ಇರುತ್ತಿದ್ದ. ನನಗೆ ಅದೊಂದು ವಿಸ್ಮಯದ ದೃಶ್ಯ. ಆ ಬಂಗಾರದ ತುಣುಕು ಒಂದು ತಾಳಿಯಾಗಿ, ಮೂಗು ಬೊಟ್ಟಾಗಿ, ಬೆಂಡೋಲೆ, ಜೊತೆ ಕೈ ಬಳೆ, ಥರಾವರಿ ಚಪಲಕ್ಕಿ ಗುಂಡು ಸರ, ಝುಮಕಿ, ಲೋಲಾಕು, ಎನಾಮೆಲ್ ಉಂಗುರ, ಇನಿಶಿಯಲ್ ಉಂಗುರ ಹೀಗೆ ಏನೆಲ್ಲಾ ಆಗಿ ಬಿಡುತ್ತಿತ್ತಲ್ಲಾ, ಆಗ ಆ ನನ್ನ ಅಕ್ಕಸಾಲಿ ಅಪ್ಪ ಮಾಂತ್ರಿಕನಂತೆ, ನಮ್ಮ ಊರಿನಲ್ಲೇ ಅತ್ಯಂತ ಸುಂದರ ಪುರುಷನಂತೆ ಕಾಣಿಸುತ್ತಿದ್ದ. ಅವತ್ತಿನಿಂದ ಇವತ್ತಿನ ತನಕ ನನ್ನ ಹೀರೋ ಅವನೇ. ಸತ್ತು ಸ್ವರ್ಗ ಸೇರಿದ ( ಕಲಾವಿದರು ಸ್ವರ್ಗದಲ್ಲಿ ಮಾತ್ರ ಇರಬಲ್ಲರು) ೩೦ ವರ್ಷಗಳ ನಂತರವೂ ನನ್ನೊಳಗೇ ಉಳಿದು ಬಿಟ್ಟಿರುವ ನನ್ನ ಸಾಕಿದ ಆ ಮಹಾನ್ ತಂದೆ, ಹೀಗೆ ಬಂಗಾರದ ತುಣುಕೊಂದನ್ನು ಯಕ್ಷಿಣಿಗಾರನಂತೆ ನನ್ನ ಕಣ್ಣೆದುರೇ ರೂಪಾಂತರ ಮಾಡಿಬಿಡುತ್ತಿದ್ದ. ಆಗ ನಾನೊಬ್ಬ ಕವಿ, ಬರಹಗಾರ ಆಗಬಹುದೆಂಬ ಅಂಶ ಕನಸಿನಲ್ಲೂ ಬರಲು ಸಾಧ್ಯವಿರಲಿಲ್ಲ. ನನಗಾಗ ಬೀಳುತ್ತಿದ್ದ ಬಹುಭಾರೀ ಕನಸುಗಳೆಂದರೆ: ನನ್ನ ಅಪ್ಪ ಮಾಡುತ್ತಿದ್ದ ಒಡವೆಗಳನ್ನು ನಾನೂ ಮಾಡಿದಂತೆ, ಸ್ವಲ್ಪ ದೊಡ್ಡವನಾದ ಮೇಲೆ ನನ್ನ ಸಹಪಾಠಿ ಗೆಳತಿಯರನ್ನು ಪ್ರೀತಿಸಿದಂತೆ, ದೊಡ್ಡ ಸಿರಿವಂತನಾಗಿ ಬಿಟ್ಟು ಊರಿನ ದೊರೆಯಾದಂತೆ. (ನಮಗಾಗ 'ತಿರುಕನ ಕನಸು' ಪಠ್ಯ).

ನಮ್ಮೂರಲ್ಲಿ ಒಂದು ದೊಡ್ಡ ಕೆರೆ ಇದೆ. ಆಗೆಲ್ಲ ಯಾರಾದರೂ ಸಮುದ್ರ ಅಂದರೆ ಹೆಂಗಿರುತ್ತೆ ಅಂತ ಕೇಳಿದ್ದರೆ, ನಾನು ನಮ್ಮೂರಿನ ಕೆರೆಯಷ್ಟು ಎಂದು ಹೇಳುತ್ತಿದ್ದೆ. ಅಷ್ಟು ದೊಡ್ಡದು ನಮ್ಮೂರ ಕೆರೆ 'ಬಾರಯ್ಯ ಬೆಳದಿಂಗಳೇ, ನಮ್ಮೂರ ಹಾಲಿನಂಥ ಬೆಳದಿಂಗಳೇ' ಎಂದಂತೆ, ನಮ್ಮೂರಿನ ಬೆಳದಿಂಗಳು ಬೇರೆ ಬೆಳದಿಂಗಳಂತಲ್ಲದೆ ಅದು ನಮ್ಮೂರಿನದೇ ಆಗಿರುತ್ತದಲ್ಲ ಹಾಗೆ, ನಮ್ಮೂರ ಕೆರೆ ಕೂಡ ನನಗೆ ಒಂದು ರೀತಿ ಅಸಾಧಾರಣವಾದದ್ದೇ. ಈ ಇಂಥಾ ಕೆರೆಯ ಹಿಂಬದಿಯಲ್ಲಿ ನಮ್ಮ ಹಿರೀಕರು ನೆಟ್ಟು ಬೆಳೆಸಿದ ನಳನಳಿಸುವ ಅಡಿಕೆ ತೋಟಗಳು. ಆ ತೋಟಗಳಲ್ಲಿನ ಹೊಂಬಾಳೆ, ಆ ಹೊಂಬಾಳೆಯ ಅನನ್ಯ ಸುವಾಸನೆಯನ್ನು ಸೆರಗಿನ ತುಂಬ ತುಂಬಿಕೊಂಡ ತಿಳಿಯಾದ ಗಾಳಿ. ಆ ತೋಟಗಳಲ್ಲಿ ಥರಾವರಿ ಹೂಗಿಡಗಳು. ಚಕ್ಕೋತ, ದಾಳಿಂಬೆ, ಬಿಕ್ಕೆ, ಹಲಸು, ಮಾವು, ಕಂಚಿ, ನಿಂಬೆಯಂಥ ಹಣ್ಣಿನ ಗಿಡಗಳು. ಈ ಹಣ್ಣುಗಳನ್ನು ಕದಿಯುವುದೇ ನಮ್ಮಂಥ ಹುಡುಗರ ಕೆಲಸವಾಗಿರುತ್ತಿತ್ತು. ಅದೊಂದು ರೋಮಾಂಚಕಾರಿ ನೆನಪು.

ಇಂಥ ಕದಿಯುವುದನ್ನೇ ವಸ್ತುವಾಗಿಟ್ಟುಕೊಂಡು ನಾನೊಂದು ಕತೆ ಕಟ್ಟಿರುವೆ. ನಮ್ಮ ಊರಿನ ಜನ ಮಹಾ ರಸಿಕರು. ಅವರ ರಸಿಕತೆಯನ್ನು ಇಂಥ ತೋಟಗಾರಿಕೆಯಲ್ಲಿ ಕಾಣುತ್ತಿದ್ದೆ. ಅಂಥಾ ತೋಟಗಾರರು ಅಂಥಾ ಮಾಟಗಾರರು ಅವರು. ಇಂಥಾ ತೋಟ ಮತ್ತು ಕೆರೆಯ ಏರಿಯ ನಡುವೆ ಇರುವ ಜಾಗದ ಒಂದು ಪಕ್ಕದಲ್ಲಿ ದೊಡ್ಡ ಎಕರೆಯಷ್ಟು

ಪ್ರದೇಶದಲ್ಲಿ ಊರಿನ ಜನ ಸ್ಮಶಾನವನ್ನು ನಿರ್ಮಿಸಿಕೊಂಡಿದ್ದಾರೆ. ಅದನ್ನು ಕೋಡಿಗುದ್ದು ಎಂಬ ಹೆಸರಿನಿಂದ ಕರೆಯುತ್ತಾರೆ. ಗುದ್ದು ಎಂಬುದು ರೂಪಕದಂತೆ ಕಂಗೊಳಿಸುವ ಹಾಗೆ ಅಲ್ಲಿ ನಮ್ಮೂರಿನ ಬಡಜನ, ಹೊಲ ತೋಟ ಇಲ್ಲದವರು ತಮ್ಮ ಬಂಧುಗಳು ತೀರಿಕೊಂಡಾಗ ಅವರ ಪಾರ್ಥಿವ ಶರೀರಗಳನ್ನು ಇಲ್ಲಿ ಹೂಣುವರು. ಅಲ್ಲೇ ಆಸುಪಾಸಿನಲ್ಲಿ ಒಂದು ಕಲ್ಲು ಕಂಬ, ಚಪ್ಪಡಿಗಳಿಂದ ನಿರ್ಮಿಸಿದ ಈಶ್ವರನ ಗುಡಿಯೂ ಇದೆ. ಅದು ಜಂಟಿಯಾಗಿ ಈ ಕೋಡಿಗುದ್ದಿನ ಅರಣ್ಯದಲ್ಲಿ ನಿಂತಿದೆ. ಅರಣ್ಯ ಎಂದು ಕರೆಯಬಹುದಾದ ದೊಡ್ಡ ಗಿಡ, ಪೊದೆ ಅಲ್ಲಿದೆ. ಗುದ್ದು ತೋಡಿ ಹೆಣ ಹೂಳಿ ಚಟ್ಟವನ್ನು ಗುದ್ದು ಮುಚ್ಚಿದ ದಿಣ್ಣೆಯ ಮೇಲಿಟ್ಟು ಒಂದು ವರ್ಷದ ತನಕ ಅಲ್ಲಿಗೆ ಯಾರೂ ಹೋಗದಿರುವಾಗ ಆ ಚಟ್ಟವು, ತಂತಾನೇ ಮಣ್ಣಾಗಿ ಆ ಮೇಲೆ ಆ ಮಣ್ಣಿನ ದಿಣ್ಣೆಯ ಮೇಲೆ ಕಾಡು ಹೂ ಗಿಡವೋ ಲಂಟಾನೋ ಲಕ್ಕಿ ಪತ್ರೆಯ ಗಿಡವೋ ಬೆಳೆದು, ಒಂದು ಪೊದೆಯಾಗಿ ವರ್ಷದ ಹಿಂದೆ ಅಲ್ಲಿ ಯಾರದೋ ಹೆಣವೊಂದನ್ನು ಹೂಣಿದ್ದರು ಎಂಬುದೇ ಮರೆತು ಹೋಗಿ, ಅಲ್ಲಿ ಅದರ ಮರೆಯಲ್ಲಿ ನಾವೆಲ್ಲ ಸ್ನೇಹಿತರು, ಊರವರು ಎರಡಕ್ಕೆ ಕೂತು ಬಿಡುತ್ತಿದ್ದೆವು.

ಇದ್ಯಾವುದೂ ಮೈಲಿಗೆ ಮುಟ್ಟು ಎಂದು ಮುಖ ಸಿಂಡರಿಸಿಕೊಳ್ಳದೆ ಈಶ್ವರ ದೇವಾಲಯ ಅಲ್ಲಿದೆ. ನನಗೆ ಅತ್ಯಂತ ಪ್ರಿಯವಾದ, ದೇವಾಲಯ ಅದು. ಅಲ್ಲೊಂದು ರೀತಿಯ ಪ್ರಸನ್ನತೆ, ಪ್ರಶಾಂತತೆಯ ವಾತಾವರಣ ತಂತಾನೇ ನೆಲೆಸಿಬಿಟ್ಟಿದೆ. ರಾತ್ರಿ ಹೊತ್ತು ಕರಡಿಗಳು ಅದರೊಳಗೆ ಬಂದು ವಾಸ ಮಾಡಿ ಬೆಳಗಿನ ಜಾವಕ್ಕೆ ಹೋಗಿ ಬಿಡುತ್ತಿದ್ದುವು. ಬೆಳಗಿನ ಅಂಥಾ ಜಾವದಲ್ಲಿ ನಮ್ಮೂರಿನ ನಿಷ್ಠಾವಂತ ಪೂಜಾರಿಗಳಲ್ಲೊಬ್ಬನಾದ ತಿಮ್ಮಣ್ಣನು ಅಲ್ಲಿ ಹೋಗಿ ಗುಡಿಯನ್ನು ಸ್ವಚ್ಛಮಾಡಿ ಲಿಂಗಕ್ಕೆ, ಬಸವಣ್ಣನಿಗೆ ಎರೆದು, ಆಮೇಲೆ ಅಲ್ಲೇ ಗುದ್ದಿನ ದಿಣ್ಣೆಗಳ ಮೇಲೆಲ್ಲ ತಮ್ಮಷ್ಟಕ್ಕೆ ಬೆಳೆದ ಲಕ್ಕಿ ಕಣಗಿಲೆ ದಾಸವಾಳದ ಹೂಗಳನ್ನು ಬಿಡಿಸಿ ಮುಡಿಸಿ ಅಂದಮಾಡಿ, ಲಿಂಗ ಹೊಳೆಯುವಂತೆ ಮಾಡುತ್ತಿದ್ದನು. ಸಂಜೆಗೊಮ್ಮೆ ದೀಪ ಮುಡಿಸಿ ಬರುತ್ತಿದ್ದನು. ನಾನು ಅವನ ಪೂಜೆಯಾದ ಮೇಲೆ ಬೆಳಗಿನ ಹೊತ್ತೋ, ಸಂಜೆಯ ಹೊತ್ತೋ ಒಮ್ಮೆ ಹೋಗಿ ಒಂಟಿಯಾಗಿ ಕುಂತು ಹಚ್ಚಿಟ್ಟ ದೀಪವು ಬೆಳಗುವುದನ್ನು ತದೇಕ ದಿಟ್ಟಿಯಿಂದ ನೋಡುತ್ತಾ ಕೂಡುತ್ತಿದ್ದೆ. ಇಂಥಾ ಹೊತ್ತುಗಳಲ್ಲಿ ನನ್ನ ಆ ವಯಸ್ಸಿನಲ್ಲಿ ಅಂಥ ಗಹನ ಅರ್ಥಗಳೇನೂ ಹೊಳೆಯುತ್ತಿರಲಿಲ್ಲ. ಆದರೆ ಒಂದು ರೀತಿಯ ಅಸ್ಪಷ್ಟವಾದ ಮಾನಸಿಕ ನೆಮ್ಮದಿ ಅಲ್ಲಿ ಉಂಟಾಗುತ್ತಿತ್ತು. ಹಾಗೆ ನೋಡಿದರೆ ನಾನು ಮಹಾ ಲೌಕಿಕ ಮನುಷ್ಯ. ಎಲ್ಲವೂ ನನ್ನ ಮಟ್ಟಿಗೆ ವಾಸ್ತವ. ಅಲೌಕಿಕ ಎಂಬುದಿದ್ದರೂ ಅದರ ಉಸಾಬರಿ ನಮ್ಮಂಥ ವರಿಗೇಕೆ ಎಂಬ ಥರವೇ ಇರುತ್ತಿದ್ದೆ. ಈಶ್ವರ ದೇವರ ಗುಡಿಯಲ್ಲಿ ನಾನು ಹೋಗಿ ಕೂಡುತ್ತಿದ್ದುದು ಯಾವುದೇ ಮಹಾನ್ ಸಾಧಕನಾಗುವ ಮಹತ್ವಾಕಾಂಕ್ಷೆಯಿಂದ ಅಲ್ಲವಾದರೂ ಅಲ್ಲಿ ಸಿಗುತ್ತಿದ್ದ ಏಕಾಂತ, ಅದರೊಳಗಿನ ಪ್ರಸನ್ನತೆ, ಅಜ್ಞಾತ ಅಲೌಕಿಕ ತುಡಿತ ನಾನು ಮುಂದೆ ಬರೆಯಬಹುದಾದ ಬರಹಗಳ ಹಿಂದಿನ ಪ್ರೇರಣೆಗಳಂತೆ ಕೆಲಸ ಮಾಡಿವೆ ಎಂದು ಈಗ ನನಗನಿಸುತ್ತಿದೆ.

ನನ್ನ ಸಾಕುತಂದೆ ಮಾಡುತ್ತಿದ್ದ ಒಡವೆಗಳನ್ನು ನಮ್ಮೂರಿನ ಸ್ಥಿತಿವಂತರು ತೋಟ ತುಡಿಕೆ ಇದ್ದವರು, ಮದುವೆ ಮುಂಜಿಯಂಥ ಶುಭ ಸಂದರ್ಭಗಳಲ್ಲಿ ಯಥೇಚ್ಛವಾಗಿ, ಬಹು ಸಂತೋಷದಿಂದ ಮಾಡಿಸುತ್ತಿದ್ದರು. ಒಡವೆಗಳನ್ನು ವಜ್ರಾಚಾರಿಯು ಬಹು ನಿಷ್ಠೆಯಿಂದ ತಯಾರಿಸಿ ಕೊಡುತ್ತಿದ್ದ. ಆತ ಮಾಡಿ ಕೊಟ್ಟ ಒಡವೆಗಳ ಗುಣಮಟ್ಟ ಅತ್ಯುತ್ಕೃಷ್ಟತೆಯಿಂದ ಕೂಡಿದವಾಗಿದ್ದವು. ಈಗಲೂ ಆತ ಮಾಡಿಕೊಟ್ಟ ಒಡವೆಗಳ ಬಗ್ಗೆ, ನಮ್ಮೂರು ಮತ್ತು ಸುತ್ತಮುತ್ತಲ ಹಳ್ಳಿಯ ಜನರು ತಮ್ಮೊಳಗೇ ಕೊಂಡಾಡುವುದನ್ನು ಕೇಳಿಸಿಕೊಂಡಿರುವೆ. ಕೆಲವೊಮ್ಮೆ ಗಿರಾಕಿಗಳು ಕಠಿಣವಾದ ವಿನ್ಯಾಸಗಳಲ್ಲಿ ತಮ್ಮ ಒಡವೆಗಳನ್ನು ತಯಾರಿಸಿಕೊಡುವಂತೆ ಅಪೇಕ್ಷೆ ಮಾಡುತ್ತಿದ್ದರು. ಇಂಥ ವಿನ್ಯಾಸಗಳ ತಯಾರಿಕೆ ತನ್ನಿಂದ ಸಾಧ್ಯವಾಗದಾಗ ನನ್ನ ತಂದೆ ದೂರದ ದುರ್ಗದಲ್ಲಿದ್ದ ರಾಜಣ್ಣಾಚಾರ್ ಎಂಬ ಅಕ್ಕಸಾಲಿಯ ನೆರವು ಪಡೆಯುತ್ತಿದ್ದ.

ಈ ರಾಜಣ್ಣಾಚಾರ್ ಮತ್ತು ಆತನ ಹೆಂಡತಿ ಲಲಿತಮ್ಮ ದೂರದ ತಮಿಳುನಾಡಿನ ತ್ರಿಚೂರ್ ಕಡೆಯವರು. ಪಕ್ಕಾ ಕಲಾವಿದನಂತೆ ಕಾಣುತ್ತಿದ್ದ ರಾಜಣ್ಣಾಚಾರ್ ಸೀಜರ್ಸ್ ಸೀಗರೇಟನ್ನು (ಆಗ ಅದಕ್ಕೆ ಟಿಪ್ ಇರುತ್ತಿರಲಿಲ್ಲ) ಸರಿಸಮನಾಗಿ ಅರ್ಧಕ್ಕೆ ಕತ್ತರಿಸಿ (ಕತ್ತರಿ ಅಲ್ಲೇ ಅದ್ದಗಣೆಯ ಪಕ್ಕದಲ್ಲಿರುತ್ತಿತ್ತು) ಒಂದು ತುಂಡಿಗೆ ಬೆಂಕಿ ಹಚ್ಚಿ ಸೇದುತ್ತಾ ಕುಸುರಿ ಕೆಲಸದಲ್ಲಿ ಮಗ್ನನಾಗುತ್ತಿದ್ದ. ಬಹು ಹಾಸ್ಯದ ಮನುಷ್ಯ. ತುಂಬಾ ಪ್ರೀತಿಯಿಂದ ನನ್ನನ್ನು ಶ್ಯಾಗರೂ (ಶೇಖರ) ಎಂದು ತಮಿಳ್ಗನ್ನಡ ಶೈಲಿಯಲ್ಲಿ ಕೂಗಿ ಕರೆಯುತ್ತಿದ್ದ. ನಮ್ಮೂರಿಗೂ ಒಮ್ಮೆ ಈತ ಬಂದಿದ್ದ ತನ್ನ ಹೆಂಡತಿ ಲಲಿತಮ್ಮನ ಜೊತೆ. ಲಲಿತಮ್ಮ ತುಂಬಾ ಸುಂದರವಾಗಿದ್ದಳು. ತಮಿಳು ಬಣ್ಣಕ್ಕೆ ತದ್ವಿರುದ್ಧವಾದ ಗೌರವರ್ಣದ ಹೆಣ್ಣುಮಗಳು ಈಕೆ. ನನಗೆ ಈ ಲಲಿತಮ್ಮ, ರಾಜಣ್ಣಾಚಾರ್, ಮತ್ತು ಈತನ ಬಳಿ ಮಾಣಿಕ್ಯಂ ಅಂತ ಒಬ್ಬ ಕೆಲಸಕ್ಕಿದ್ದ, ಈತ ಕೂಡ ಅಸಾಮಾನ್ಯ ಹಾಸ್ಯಗಾರ. ಇವರೆಲ್ಲರೂ, ಬಹುದೂರ ಈಗ ನಾವು ಫಾರಿನ್ ಗೀರಿನ್ ಅಂತೀವಲ್ಲ, ಅಲ್ಲಿಂದ ಅಥವಾ ಅದಕ್ಕೂ ದೂರದ ಅದೃಶ್ಯ ಲೋಕದಿಂದ ಬಂದ ಯಕ್ಷಗಂಧರ್ವ ಕಿಂಪುರುಷರಂತೆ ಭಾಸವಾಗುತ್ತಿದ್ದರು.

ನಾನು ಒಮ್ಮೆ ನನ್ನ ಸಾಕುತಂದೆಯ ಜೊತೆ ಈ ರಾಜಣ್ಣಾಚಾರ್ ಮನೆಯಲ್ಲಿ ಒಂದು ರಾತ್ರಿ ಉಳಿದುಕೊಂಡಿದ್ದೆ. ನನಗಾಗ ಕೇವಲ ಒಂಬತ್ತು ವರ್ಷಗಳಿದ್ದಾವು. ಯಥಾಪ್ರಕಾರ ನನ್ನ ತಂದೆ ತನಗೆ ಕಷ್ಟವೆನಿಸಿದ ಒಡವೆಗಳನ್ನು ರಾಜಣ್ಣಾಚಾರ್ ಬಳಿಗೆ ಆಗ ತಂದಿದ್ದ. ಇಂಥ ಸಂದರ್ಭಗಳಲ್ಲೇ ಆತ ರಾಜಣ್ಣಾಚಾರ್ ಮನೆಯಲ್ಲಿ ತಂಗುತ್ತಿದ್ದ. ಇಂಥ ಒಂದು ರಾತ್ರಿ ನಾನು ನನ್ನ ತಂದೆಯ ಜೊತೆ ರಾಜಣ್ಣಾಚಾರ್ ಮನೆಯಲ್ಲಿ ಉಳಿದುಕೊಂಡಿದ್ದೆ. ಅದು ನನ್ನ ಮೊಟ್ಟ ಮೊದಲ ತಂಗುವಿಕೆ. ತಣ್ಣಗೆ ಉಷೆಯ ಕಿರಣಗಳು ನಸುಕನ್ನು ಸುರಿಸುತ್ತಿರುವಾಗ ನಾನು ಉಚ್ಚೆ ಹೊಯ್ಯಲು ಹೊರಕ್ಕೆ ಬಂದೆ. ಮಂಪರು ಕಣ್ಣಿನಲ್ಲೇ ತಲೆ ಮೇಲೆತ್ತಿದರೆ ದುರ್ಗದ ಬತೇರಿಯ ಮೇಲೆ ಈಗಲೂ ಉರಿಯುತ್ತಿರುವ ಮರ್ಕ್ಯುರಿ ದೀಪವನ್ನು ಕಂಡು ದಂಗಾಗಿ ಬಿಟ್ಟೆ. ಅದು ಬೆಳಗಾದರೂ ಮುಳುಗದ ಪೂರ್ಣ ಚಂದ್ರನಂತೆ

ಕಂಡಿತು. ಆ ಭ್ರಾಮಕ ಚಿತ್ರ ಈಗಲೂ ನನ್ನ ಕಣ್ಣಲ್ಲಿ ಕುಂತು ಬಿಟ್ಟಿದೆ.

ಇಲ್ಲಿಂದ ನಾನು ಪೇಟೆಯ ವಿಸ್ಮಯಗಳಿಗೆ ಬೆರಗಾಗುತ್ತಾ ಹೋದೆ. ನನಗೆ ಸ್ವಲ್ಪ ತಿಳುವಳಿಕೆ ಬಂದ ನಂತರ ನನ್ನ ತಂದೆ ಒಡವೆಗಳನ್ನು ತರಲು ದುರ್ಗಕ್ಕೆ ನನ್ನೊಬ್ಬನನ್ನೇ ಕಳಿಸುತ್ತಿದ್ದ. ಅವನ ಆರೋಗ್ಯ ಅಸ್ತಮಾದಿಂದಾಗಿ ಕೆಡುತ್ತಾ ಆತ ದೈಹಿಕವಾಗಿ ಕಂಗಾಲಾಗ ತೊಡಗಿದ್ದ ದಿನಗಳವು. ದುರ್ಗದಲ್ಲಿ ಉಳಿದುಕೊಂಡ ಇಂಥ ಸಂದರ್ಭಗಳಲ್ಲಿ ದುಶ್ಚಟ ಗಳನ್ನು ಮೆಲ್ಲಗೆ ಕದ್ದು ಕದ್ದು ರೂಢಿಸಿಕೊಳ್ಳುತ್ತಿದ್ದೆ. ಸಿನಿಮಾಗಳನ್ನು ಕದ್ದು ನೋಡುವುದು, ರಾಜಣ್ಣಾಚಾರ್ ಥರ ಸೀಜರ್ ಸಿಗರೇಟಿನ ಅರ್ಧ ತುಣುಕನ್ನು ಸೇದಲು ಕಲಿಯುವುದು. ಈ ಸಿನಿಮಾ ನಾಟಕ ನೋಡುತ್ತಾ ನೋಡುತ್ತಾ ನನಗೆ ನಟನಾಗಬೇಕೆಂಬ ಹುಚ್ಚು ಹತ್ತಿ ನಾನು ಗುಬ್ಬಿ ಕಂಪನಿಯಲ್ಲಿ ಪರದೆ ಎಳೆಯುವಂತೆಯೂ ಮಾಡಿತ್ತು. ಹಾಗೆ ನೋಡಿದರೆ ಈ ನಟನಾಗುವ ಹುಚ್ಚನ್ನು ಹಚ್ಚಿದವನು ನನ್ನ ಸಾಕು ತಂದೆಯೇ. ನಾನು ಚಿಕ್ಕವನಿದ್ದಾಗ ನಮ್ಮೂರಲ್ಲಿ ನಾಟಕ ಗೀಟಕ, ದೊಡ್ಡಾಟ, ತೋಂಗಾಗಳನ್ನು ಹನುಮಪ್ಪನ ತೇರಿನ ಸಂಬಂಧ ಆಡುತ್ತಿದ್ದರು. 'ಸಂಪೂರ್ಣ ರಾಮಾಯಣ', 'ನಟಸಾರ್ವಭೌಮ' ಇಂಥಾ ನಾಟಕಗಳಲ್ಲಿ ನಮ್ಮೂರಿನ ಜನ ನನಗೆ ಬಾಲಪಾತ್ರಗಳನ್ನು ಕೊಡುವಂತೆ ನನ್ನ ತಂದೆ ಒತ್ತಾಯಿಸುತ್ತಿದ್ದ. ಪಾತ್ರ ಮುಗಿದ ಮೇಲೆ ಸ್ಟೇಜಿನ ಹಿಂಭಾಗಕ್ಕೆ ಬಂದು ನನ್ನನ್ನು ತಬ್ಬಿ ಮುದ್ದಾಡಿ ಇದ್ದವರೆದುರು ಕೊಂಡಾಡುತ್ತಿದ್ದ. ನಮ್ಮೂರಿಗೆ ಚಿಂದೋಡಿ ಕಂಪನಿ ಬಡತನದ ಸ್ಥಿತಿಯಲ್ಲಿ ಬಂದು ತಿಂಗಳು ಗಟ್ಟಲೆ ಬೀಡುಬಿಟ್ಟಿದ್ದು ನನಗಿನ್ನೂ ಜ್ಞಾಪಕದಲ್ಲಿದೆ. ಚಿಂದೋಡಿ ವೀರಪ್ಪ, ಅವರ ತಂಗಿ ಲೀಲಮ್ಮ ಎಲ್ಲರೂ ಅಲ್ಲಿರುತ್ತಿದ್ದರು. ಲೀಲಮ್ಮ ಅನ್ಯಲೋಕದಿಂದ ಬಂದ ಯಕ್ಷಿಯಂತೆ ನನಗೆ ಕಾಣುತ್ತಿದ್ದಳು. ಇಂಥವರನ್ನೆಲ್ಲ ನೋಡು ನೋಡುತ್ತಾ ನನಗೂ ನಟನೆಯ ಆಸೆ ಯದ್ವಾತದ್ವಾ ಬೆಳೆದು ನಾನು ಗುಬ್ಬಿ ಕಂಪನಿ ಸೇರಿದ್ದೆ. ಹೇಗಿದ್ದರೂ ಬಾಲ ಸಾರ್ವಭೌಮ, ಬಾಲ ರಾಮನ ಪಾತ್ರಗಳಲ್ಲಿ ಅಭಿನಯಿಸಿ ಆಗಲೇ ಕೀರ್ತಿಶೇಷನಾಗಿಬಿಟ್ಟಿದ್ದ ಧೈರ್ಯ. ಆದರೆ ಗುಬ್ಬಿ ಕಂಪನಿಯ ನನ್ನ ಜೀವನ ಅತ್ಯಂತ ಸಂಕ್ಷಿಪ್ತವಾದದ್ದು ಮತ್ತು ಪರದೆ ಎಳೆಯುವದಕ್ಕಷ್ಟೇ ಸೀಮಿತವಾದದ್ದು.

ಇದೆಲ್ಲದರ ಜೊತೆಗೆ ನನ್ನ ಮೇಲೆ ಗಾಢ ಪರಿಣಾಮ ಬೀರಿದ ಘಟನೆ ಎಂದರೆ, ನನ್ನ ತಂದೆ ಮದುವೆ ಸಂದರ್ಭದ ಒಡವೆಗಳನ್ನು ಮಾಡಿ ಕೊಡುವಾಗ ಸಂಬಂಧಿಸಿದವರು ಧಾರೆಯ ಹೊತ್ತಿಗೆ ಸ್ವಲ್ಪ ಮುಂಚೆ ಆ ಒಡವೆಗಳನ್ನು ಪಡೆಯಲು ಸಂಪ್ರದಾಯ ರೀತಿಯಲ್ಲಿ ಮೇಳದ ಸಮೇತ ಅಕ್ಕಿ ಬೆಲ್ಲ ಉತ್ತತ್ತಿ ಕೊಬ್ಬರಿ ಬಟ್ಟಲು ಹೀಗೆ ಏನೇನನ್ನೋ ಒಂದು ಹೊಸದಾದ ಮರದಲ್ಲಿ ತುಂಬಿಕೊಂಡು ನಮ್ಮ ಬಾಡಿಗೆ ಮನೆಗೆ ಬರುತ್ತಿದ್ದದ್ದು. ಹಾಗೆ ಬರುತ್ತಿದ್ದವರಲ್ಲಿ ಹೆಣ್ಣು ಮಕ್ಕಳೇ ಜಾಸ್ತಿ ಇರುತ್ತಿದ್ದರು. ಅಂಥವರಲ್ಲಿ ಸ್ವಲ್ಪ ವಯಸ್ಸಾದವರಿದ್ದರೆ ಅವರು ನನ್ನನ್ನು ನೋಡುತ್ತಲೇ ಇವನು 'ಇವನಲ್ಲೆ ವಜೂರಣ್ಣಾ, ನಮ್ಮ ನೂಲೇನೂರು ಈಶಣ್ಣನ ಮಗ ಅಲ್ಲೇ' ಅಂತ ಕೇಳಿದರೆ, ನನ್ನ ತಂದೆ ತುಂಬಿದ ನಗೆಯಿಂದ ಒಡವೆಗಳನ್ನು ಬಣ್ಣದ ಕಾಗದದಲ್ಲಿ ಸುತ್ತಿಡುತ್ತಾ 'ಹೂ ನಮ್ಮ ಸೇಕರಲ್ವೆ' ಅಂತಿದ್ದ. ನನಗಾಗ ಯಾವ ನುಲೇನೂರು,

ಯಾವ ಈಶಣ್ಣ ಎಂಬುದೇ ಅರ್ಥವಾಗದೆ ಕಂಗಾಲಾಗುತ್ತಿದ್ದೆ. ನನ್ನ ನಿಜ ತಂದೆಯ ಹೆಸರದು. ಇಂಥ ಸಂದರ್ಭದಲ್ಲೇ ನನಗೆ ಜಾತಿಯ ಬಲವಾದ ಅನುಮಾನಗಳೇಳಲು ಪ್ರಾರಂಭಗೊಳ್ಳುತ್ತಿದ್ದವು. ಎಷ್ಟೋ ಜನ ನನ್ನ 'ಲೋ ಆಚಾರಪ ಬಾ ಇಲ್ಲಿ' ಕರೆದಾಗ ನಾನು ಸಂತೋಷದಿಂದ ಓಗೊಟ್ಟಿದ್ದುಂಟು. ಯಾರಾದರೂ ನಮ್ಮ ಈಶಣ್ಣನ ಮಗ ಅಂದಾಗ ಬೇಸ್ತು ಬಿದ್ದದ್ದೂ ಉಂಟು. ಇಂಥ ಗಳಿಗೆಗಳಲ್ಲೇ ನನ್ನ ತಂದೆ ವಜ್ರಪ್ಪನು ಸಾಕು ತಂದೆಯಾಗಿಬಿಡುತ್ತಿದ್ದ. ಈತ ನಾನು ಎಷ್ಟೇ ಪ್ರಯತ್ನಿಸಿದರೂ ನನಗೆ ಆತನ ಕುಲಕಸುಬಾದ ಅಕ್ಕಸಾಲಿಕೆಯನ್ನು ಕಲಿಸಲೇ ಇಲ್ಲ. ನಾನು ಕೇಳಿದಾಗಲೆಲ್ಲ 'ಇದು ನೀನು ಮಾಡದಲ್ಲ' 'ಇದು ನೀನು ಮಾಡದಲ್ಲ' ಅಂಥ ನಿವಾರಿಸಿಬಿಡುತ್ತಿದ್ದ. ನಾನು ಈತನ ಬಳಿ ಒಂದು ವರ್ಷದ ಕೂಸಿರುವಾಗಲೇ ಬಂದಿರುವುದನ್ನು ಹೇಳುತ್ತಿದ್ದನೇ ಹೊರತು ಯಾಕೆ ಬಂದೆ, ಯಾಕೆ ಕೊಟ್ಟರು ಎಂಬುದನ್ನು ಆತನಾಗಲಿ, ನನ್ನ ಸಾಕುತಾಯಿಯಾಗಲೀ ಎಂದೂ ಹೇಳಲಿಲ್ಲ. ನನಗೀಗಲೂ ಅದೊಂದು ಒಡೆಯದ ಒಗಟಾಗಿಯೇ ಉಳಿದು ಬಿಟ್ಟಿದೆ.

ನಂತರದ ದಿನಗಳಲ್ಲಿ ನಾನು ಎಸ್ಸೆಲ್ಸಿ ಪಾಸಾದ ಮೇಲೆ ಮೂರುವರ್ಷ ನನ್ನ ಓದಿಗೆ ವಿದಾಯ ಹೇಳಿ ನಾಟಕ ಕಂಪನಿ, ದೂರದ ನಾರಾಯಣಪುರದ ಯುಕೆಪಿ ಅಲ್ಲಿಗೆ ಇಲ್ಲಿಗೆ ಅಂತ ಅಲೆದಾಡಿದೆ. ಅಷ್ಟರಲ್ಲಾಗಲೇ ನಾನು ಸಾಹಿತಿ ಆಗುವ ಹುಚ್ಚಿನಿಂದ ಸಾಹಿತ್ಯಪರಿಷತ್ತು ನಡೆಸುವ 'ಕನ್ನಡ ರತ್ನ' ಎಂಬ ಪರೀಕ್ಷೆಯನ್ನು ಪಾಸುಮಾಡಿ ಜುಬ್ಬ ಪಾಯಿಜಾಮ ಮತ್ತು ವೇಸ್ಟುಕೋಟನ್ನು ಅನಕೃರಂತೆ ತಲೆ ಬಾಚಿಕೊಳ್ಳುತ್ತಾ ಧರಿಸುತ್ತಿದ್ದೆ. ಇದನ್ನೆಲ್ಲ ನೋಡಿದ ಗೆಳೆಯರು ಮರೆಯಲ್ಲಿ ಗೇಲಿ ಮಾಡಿ ನಗುತ್ತಿದ್ದರು. ಸ್ವಲ್ಪ ಧೈರ್ಯಸ್ಥರು ನನ್ನೆದುರೇ ಹೀಯಾಳಿಸುತ್ತಿದ್ದರು. ಏನೇ ಇದ್ದರು ಸಾಹಿತಿಯಾಗಿ ಮೆರೆಯಲೇ ಬೇಕೆಂಬ ಸಣ್ಣದೊಂದು ಆಸೆಯ ಚೂರನ್ನು ಎದೆಯಲ್ಲಿ ಬಚ್ಚಿಟ್ಟುಕೊಂಡೇ ನಾನು ಕೃಷ್ಣೆಗೆ ಅಡ್ಡಗಟ್ಟೆ ಕಟ್ಟಲು ಹೋಗಿದ್ದೆ. ನಾನು ಹೋದಾಗ ಕೃಷ್ಣೆ ನಿರಾತಂಕವಾಗಿ ಹರಿಯುತ್ತಲೇ ಇದ್ದಳು. ಆಕೆಯ ಎಡಬಲ ದಂಡೆಗಳಲ್ಲಿ ಮಣ್ಣಿನ ಅಣೆಕಟ್ಟೆಗಾಗಿ ಆಳವಾದ, ಅಗಾಧವಾದ ಪಾಯ ತೋಡಲಾಗುತ್ತಿತ್ತು. ನಾನು ನನ್ನ ಭವಿಷ್ಯದ ವ್ಯಾಸಂಗದ ಬಗ್ಗೆ, ಸಾಹಿತ್ಯದ ಬಗ್ಗೆ ಯೋಚಿಸಿದ್ದು ಅಲ್ಲಿಯೇ. ಆಗಲೇ ವಿಪರೀತವಾಗಿ ಹತಾಶನಾಗಿದ್ದೆ. ನನ್ನ ಸಾಕುತಂದೆ ಕೂಡ ಎಲ್ಲ ದೃಷ್ಟಿಯಿಂದ ಜರ್ಝರಿತನಾಗಿದ್ದ. ಮುರಾರ್ಜಿದೇಸಾಯಿಯಿಂದಾಗಿ ಬಂಗಾರದ ಕಂಟ್ರೋಲ್ ಬಂದು, ಅಕ್ಕಸಾಲೀ ಕೆಲಸ ನಿಂತುಹೋಗಿತ್ತು. ಸಣ್ಣದೊಂದು ಚಿಲ್ಲರೆ ಅಂಗಡಿ ನಡೆಸುತ್ತಾ ನನ್ನ ಐಲುಗಳನ್ನು ಸಹಿಸಿಕೊಳ್ಳುತ್ತ ಜೀವನ ಸಾಗಿಸುತ್ತಿದ್ದ. ಮುಂದೆ ಕೇವಲ ಐದು ವರ್ಷ ಬದುಕಿ ನಾನು ಸಿರಿಗೆರೆಯಲ್ಲಿ ಬಿಎ ಎರಡನೆಯ ವರ್ಷಕ್ಕೆ ಕಾಲಿಟ್ಟಾಗ, ಆತ ದಮ್ಮಿನಿಂದಾಗಿ ಉಸಿರುಗಟ್ಟಿ ತೀರಿಹೋದ. ನನ್ನ ಜೀವನದ ಜ್ಯೋತಿ ನಂದಿಹೋಯಿತು. ನಾನು ಕತ್ತಲಲ್ಲಿ ತಡಕಾಡುತ್ತ ಹಣತೆಯೊಂದಕ್ಕಾಗಿ ಬಾಯಿಬಾಯಿ ಬಿಡುತ್ತಾ ಸಿರಿಗೆರೆಯಲ್ಲಿ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳ ಜಾತ್ಯಾತೀತ ಮನಸ್ಸಿನ ಆವರಣಕ್ಕೆ ಒಳನುಗ್ಗುತ್ತಾ ಹೋದೆ. ಅಲ್ಲಿ ನಾನು ನನ್ನ ಕಳೆದುಹೋದ ಜ್ಯೋತಿಯನ್ನು ಮತ್ತೆ ಕಂಡುಕೊಳ್ಳಲು ಪ್ರಯತ್ನಿಸಿದೆ.

ಇಂಥ ಹಿನ್ನೆಲೆಯಲ್ಲಿಯೇ ನಾನು ನನ್ನ ಸಾಹಿತ್ಯದ ಮೂಲ ಎಳೆಗಳನ್ನು ಕಂಡುಕೊಂಡದ್ದು. ಬಂಡಾಯ ಸಂಘಟನೆಯು ಆಕಾರ ಪಡೆಯುತ್ತಿದ್ದಾಗ ನನಗೆ ಅದರ ಬಗ್ಗೆ ಸೆಳೆತ ಉಂಟಾದದ್ದಕ್ಕೆ ಕಾರಣಗಳು, ನನ್ನ ಬದುಕಿನ ಘಟನೆಗಳ ಅನೇಕ ವಿವರಗಳಲ್ಲಿಯೇ ಇರುವಂತೆ ಇವೆ. ಕನ್ನಡ ಭಾಷೆ, ತತ್ವಶಾಸ್ತ್ರಗಳನ್ನು ಪ್ರಧಾನವಾಗಿ ಅಭ್ಯಾಸ ಮಾಡುತ್ತಿರುವಾಗಲೇ ನಾನು ಓದಿಕೊಂಡ ಗಾಂಧಿ, ಲೋಹಿಯಾ, ರಸೆಲ್ ಮುಂತಾದವರ ಪ್ರಭಾವ, ನನ್ನ ಹಳ್ಳಿಯ ಜಾನಪದ ಮತ್ತು ಸಿರಿಗೆರೆಯಲ್ಲಿದ್ದ ವಚನ ಸಾಹಿತ್ಯದ ವಾತಾವರಣ ನನ್ನನ್ನು ಪ್ರಭಾವಿಸಿದವು. ನಿಧಾನಕ್ಕೆ ಜಾನಪದ ಹಿಂದೆ ಸರಿದು ಪ್ರಖರ ವೈಚಾರಿಕತೆಗೆ ಮರುಳಾಗುತ್ತಿದ್ದದ್ದು ಆಕಾಲದ ವೈಶಿಷ್ಟ್ಯ. ೭೦ರ ದಶಕ ವೈಚಾರಿಕ ದಟ್ಟತೆಯ ಕಾಲ. ಸಾಹಿತ್ಯ ಎಲ್ಲರಿಗೂ ತಲುಪುವಂತಿರಬೇಕು. ಅದು ಸರಳವಾಗಿರಬೇಕು ಎಂಬ ನಿಲುವು ಆ ಕಾಲದ್ದೇ. ದಾರಿದ್ರ್ಯ ನಮಗೆ ಅರ್ಥವಾದರೆ ದಾರಿದ್ರ್ಯವನ್ನು ತೊಲಗಿಸುವ ಉಪಾಯ ನಮಗೆ ಹೊಳೆಯುತ್ತದೆ. ಹಾಗಾಗಿ ಚಿಂತನೆಯ ಮೂಲದಿಂದ ಹುಟ್ಟಿದ ಸಾಹಿತ್ಯ ಹೊಸ ಸಮಾಜದ ನಿರ್ಮಾಣಕ್ಕೆ ನೆರವಾಗುವಂತಿರಬೇಕು. ಅದು ವೈಯಕ್ತಿಕ ಶುದ್ಧತೆ ಮತ್ತು ಸಾಮಾಜಿಕ ಬದ್ಧತೆ ಎರಡನ್ನು ರೂಪಿಸುವಂತಿರಬೇಕು ಎಂದು ನಾವೆಲ್ಲ ಯುವಕರು ಚಿಂತಿಸುತಿದ್ದ ಘಟ್ಟ ಅದು. ಕುವೆಂಪು ನನ್ನ ಮಾದರಿ. ಅವರು 'ವಿಚಾರ ಕ್ರಾಂತಿಗೆ ಆಹ್ವಾನ'ದಂಥ ಕೃತಿಗಳು ನನ್ನನ್ನು ಬಹುವಾಗಿ ಪ್ರೇರೇಪಿಸಿದವು. ನಂತರ ನನ್ನ ಆಯ್ಕೆ ಬೇಂದ್ರೆ ಮತ್ತು ಅಡಿಗರಾದ್ದರಿಂದ ಆಗ ರಚನೆಯಾದ ನನ್ನ ಕವಿತೆಗಳು ಹೆಚ್ಚಾಗಿ ವಿಚಾರ ಮತ್ತು ಭಾವಗಳು ಸಮ್ಮಿಶ್ರ ರೂಪದವು. ವಚನಗಳನ್ನು ನಾನು ಮೊದ ಮೊದಲು ಓದಿಕೊಂಡದ್ದು ಸಾಮಾಜಿಕ ಕಾಳಜಿಯಿಂದಾಗಿ. ಅವುಗಳ ಸಾಹಿತ್ಯಕ ಮಹತ್ವ ಅರ್ಥವಾಗತೊಡಗಿದ್ದು ಈಚೆಗೆ. 'ನನ್ನ ಕಣ್ಣಿಗಲಕ್ಕೆ' ನನ್ನ ಮೊದಲ ಕವಿತಾ ಸಂಗ್ರಹ ಈ ಸಂಕಲನ ಕನ್ನಡದ ಮನಸ್ಸಿಗೆ ಹಿಡಿಸದೆ ನಿರಾಕರಿಸಲ್ಪಡಲಿಲ್ಲ. ಇದೇ ನಾನು ಮುಂದೆ ಬರವಣಿಗೆಯನ್ನು ಧೈರ್ಯದಿಂದ ಮುಂದುವರಿಸುವಂತೆ ಮಾಡಿತು. ನನ್ನನ್ನು ಜನ ಕವಿ ಎಂದು ಬೈಯ್ಯತೊಡಗಿದ್ದರು. ನಾನು ಇನ್ನಷ್ಟು ಪಾಪಗಳನ್ನು ಎಸಗಲು ತಯಾರಾಗಿ ಬಿಟ್ಟಿದ್ದೆ. ಬಂಡಾಯದ ಸಂದರ್ಭದಲ್ಲಿ ಕವನವನ್ನು ಕಟ್ಟುವುದಕ್ಕಿಂತ ಹೇಳುವುದು ಮುಖ್ಯವಾಗಿದ್ದಂತೆ ತೋರಿತು. ಆದ್ದರಿಂದ ನನ್ನ ನೋವಿಗೆ, ಅನುಭವಿಸಿದ ಸಂಕಟಗಳಿಗೆ, ಅವಮಾನಗಳಿಗೆ ದನಿಯಾಗಲು ಯತ್ನಿಸಿರುವುದು ನನ್ನ ಮೊದಲ ಸಂಕಲನದಲ್ಲಿ ಸುಮಾರಾಗಿ ಬಂದಿದೆ.

> ನನ್ನ ಬಾಯಿಗೆ ಹುಳ ಬಿದ್ದ ದಿನದಿಂದ
> ತಲೆ ತುಂಬ ಗುಪ್ತರೋಗದ ಬಾಧೆ
> ಈಗ ತಲೆ ತುಂಬಾ ಅದೇ

ಇದು ನನ್ನದೇ ಅವನತಿಯೇ? ಅಥವಾ ಇಡೀ ವ್ಯವಸ್ಥೆಯಲ್ಲಿ ಕುಸಿಯುತ್ತಿರುವ ಮೌಲ್ಯಗಳು ನನ್ನ ಮೂಲಕ ಅಭಿವ್ಯಕ್ತಿಗೊಳ್ಳಲು ಈ ರೀತಿ ಮಾಡಿದವೇ? ತಿಳಿಯುತ್ತಿಲ್ಲ. ಭ್ರಷ್ಟಗೊಳ್ಳುವ ವ್ಯವಸ್ಥೆ ಮೃದುತ್ವವನ್ನೂ, ಸೌಂದರ್ಯವನ್ನೂ ಹೊಸಕಿ ಹಾಕಿಬಿಡುತ್ತೆ. ಇಂಥಲ್ಲಿ ಕನಸು ನಿರಾಸೆ ಹಿಂಸೆ ಮತ್ತು ನಿಗೂಢ ಇಂಥ ಅಮೂರ್ತ ಪ್ರತಿಮೆಗಳೇ ಪ್ರಾಮುಖ್ಯತೆ ಪಡೆದು

ಬಿಡುತ್ತವೆ. ಮೌನವಾಗಿ ಕೊಲ್ಲುವ ಕೊಲೆಪಾತಕಿಯ ಹುಡುಕಾಟವೇ ನನ್ನ ಬರಹದ ಪ್ರಾರಂಭಿಕ ದೆಸೆಯಲ್ಲಿ, ನನ್ನ ಕ್ರಿಯಾತ್ಮಕ ಹೋರಾಟದೊಟ್ಟಿಗೇ ತನ್ನ ಪ್ರತಿಮೆಗಳನ್ನು ಸಂಕೇತಗಳನ್ನು ನಿರ್ಮಾಣಮಾಡಿಕೊಳ್ಳತೊಡಗಿತು. ಆದರೆ ಅನುಮಾನದ ಛಾಯೆಗಳಲ್ಲೇ ಈ ಪ್ರತಿಮೆಗಳು ತಮ್ಮ ವಾಚಾಳಿತನವನ್ನು ಅದುಮಿಟ್ಟುಕೊಳ್ಳಲಾರದೇ ಅವು ಕರಗುವ ಆವಿಯಾಗುವ ಅನುಭವವೂ ನನಗಾಯಿತು. ಈ ಧಾಟಿಯ ಮತ್ತೊಂದು ಮಜಲಿನ 'ಸಿಂಧೂ ನದಿಯ ದಂಡೆಯ ಮೇಲೆ' ಸಂಕಲನ ಬಂದಾಗಲೂ ಈ ನೆರಳೇ ನನ್ನನ್ನು ಹಿಂಬಾಲಿಸಿತು. ಸಂಸ್ಕೃತಿಯ ಹುಡುಕಾಟ ಅಲ್ಲಿ ಮುಖ್ಯವಾಗುತ್ತಾ ಕವಿತೆ ಹಿಂಜರಿಯತೊಡಗಿತು. ಅಲ್ಲಿಗೆ ನಾನು ಕುಸಿಯತೊಡಗಿದೆ. ಹೊರಗಿನ ಝುಳಝುಳ ಬಿಸಿಲಿನಿಂದ ಒಳಗಿನ ನಡುಮನೆಯ, ಮಾಳಿಗೆಯ ತಂಪು ನೆರಳಿಗೆ ಒರಗಬೇಕೆನಿಸಿ ಒಳಗೆ ಬಂದರೆ 'ಸುಡುವ ಭೂಮಿ'ಯನ್ನು ತಣ್ಣಗೆ ಹೇಗೆ ಮಾಡುವುದು ಎಂದು ಕುಂತು ಯೋಚಿಸತೊಡಗಿದೆ. ಪರಂಪರೆಯ ಒಡಲಲ್ಲೇ ಅದರ ತಳದಲ್ಲೇ ಇದ್ದ ತಂಪು ತೊರೆಗಳನ್ನೂ ಹಸಿರು ಮರಗಳನ್ನೂ, ನಿಗೂಢತೆಯ ಆಳದಲ್ಲೇ ಇದ್ದ ಅನೇಕ ವಿಸ್ಮಯಗಳನ್ನೂ ಹೇಗಾದರೂ ಹಿಡಿಯಬೇಕೆಂದು ತಣ್ಣಗೆ ನಿದ್ದೆ ಹೋದೆ. ಅಲ್ಲಿ ನಿದ್ದೆಯಲ್ಲಿ ಎಚ್ಚರದ ಕನಸುಗಳು ಬೀಳತೊಡಗಿದವು. ಜ್ವಾಲಾಮುಖಿ ತಣ್ಣಗಾಗಿತ್ತು. ಅದರ ಕಾವಿನಲ್ಲಿ ಬಂಗಾರ ಸೋಸಿ ಇಷ್ಟ ದೇವತೆಯ ವಿಗ್ರಹ ಕಡೆಯುವ ಸಹನೆ ಹೊಳೆಯ ತೊಡಗಿತು. 'ಠಗರು ಉಡ್ಡಿಯಾಡಿದರೆ ಕಲ್ಲೊ ಚೂರು ಚೂರು' ಎಂಬ ಅರಿವು ಮೂಡಿದಂತೆ ಆಳದ ಯಾವುದೇ ಅವ್ಯಕ್ತ ತಾತ್ವಿಕ ಸೆಳೆತ ಉಂಟಾಗತೊಡಗಿತು. ರೂಪಕ ಧಾಟಿಯನ್ನು ನನ್ನದಾಗಿಸಿಕೊಳ್ಳಲು ಯತ್ನಿಸುವ ಹಂಬಲ ಮೂಡಿಸಿದ್ದು ಇದೇ. ನಿಸರ್ಗ ನನ್ನ ಹಂಬಲಕ್ಕೆ ತಕ್ಕ ರೂಪಕ, ಪ್ರತಿಮೆ, ಸಂಕೇತಗಳನ್ನು ಒದಗಿಸತೊಡಗಿತು. ಅಮೂರ್ತದ ನೆಲೆಯಿಂದ ಮೂರ್ತವನ್ನು ಗ್ರಹಿಸುವ ತವಕಕ್ಕೆ ನನಗೆ ಭೌತಾತೀತ ಶಾಸ್ತ್ರ, ಸೌಂದರ್ಯ ಶಾಸ್ತ್ರಗಳು ನೆರವಾದವು. ಆದರೆ ತರ್ಕವೊಂದು ಕಟೆಯುತ್ತಲೇ ಇರುತ್ತದೆ. ವಾಸ್ತವತೆಯ ನೆಲೆಯನ್ನು ಕೆದಕುತ್ತಲೇ ಇರುತ್ತದೆ. ಇವುಗಳ ಸಂಘರ್ಷದಲ್ಲಿ ಬರೆಹ ವೆಂಬುದು ಕಾಸುತ್ತಾ ಕರಗಿಸುತ್ತಾ ಪ್ರತಿಮೆಗಳನ್ನು ತಯಾರಿಸುವ ಅತ್ಯಂತ ಉನ್ನತ ಎಚ್ಚರದ ಕೆಲಸ ಎಂಬ ಸತ್ಯ ನನಗೆ ತಿಳಿಯತೊಡಗಿದಂತೆ ಉಲ್ಲಾಸವೂ ಯಾತನೆಯೂ ಒಟ್ಟಿಗೇ ಆಗ ತೊಡಗುತ್ತದೆ. ತಾತ್ವಿಕ ಹುಡುಕಾಟವೆನ್ನುವುದು ಆಕಾಶ ಮಾರ್ಗವಾದರೂ ಅದು ನಾನು ನಿಂತ ನೆಲೆಯಿಂದ ಆರಂಭವಾಗಬೇಕಲ್ಲ. ಇಂಥ ಸಮ್ಮಿಲನಕ್ಕೆ ನನಗೆ ಜಾನಪದದಲ್ಲಿ ಉತ್ತರ ಸಿಕ್ಕಂತೆ ತೋರುತ್ತದೆ. ಜಾನಪದವನ್ನು ತಿಳಿಯುವ ಕ್ರಮದಲ್ಲಿ ನಾನು ಬದುಕಿನ ಹೊಸ ಗ್ರಹಿಕೆಗಳನ್ನು ರೂಢಿಸಿಕೊಳ್ಳುವ ಹವಣನ್ನು ನನ್ನೊಳಗೇ ತಡಕಾಡುತ್ತಿರುವೆ. ಅಂತಃ ಕರಣದ ಮೂಲದಿಂದ ತಳದಲ್ಲೇ ರಹಸ್ಯವಾಗಿ ವ್ಯಕ್ತಗೊಳ್ಳುವ ಸಮೂಹ ಕ್ರಿಯೆಯ ತಣ್ಣಗಿನ ಪ್ರತಿಭಟನೆಯೇ ನಿಜ ಬಂಡಾಯ ಎಂಬುದು, ಸಂಸ್ಕೃತಿ ಅಧ್ಯಯನದಿಂದ ಹೊಳೆಯ ತೊಡಗಿತು. ಆದರೆ ಈ ಅಧ್ಯಯನ ತುಂಬಾ ಆಳವಾದದ್ದೇನೂ ಅಲ್ಲ. ಇನ್ನೂ ದಂಡೆಯಲ್ಲೇ ನಿಂತುನೋಟ ನೋಡುತ್ತಿರುವ ಅಧ್ಯಯನ. ವಚನ ಗ್ರಹಿಕೆ ತೀವ್ರ ವೈಚಾರಿಕ ಸ್ವರೂಪದ್ದಾದರೆ

ಜಾನಪದ ಭಾವಕೋಶದ ಕರುಳು ತುಡಿತಗಳಿಂದ ವ್ಯಕ್ತಗೊಳ್ಳುವಂಥದು. ನಿಜವಾದ ಬಂಡಾಯ ಇದೇ ಇರಬೇಕೆಂದು ಇತ್ತೀಚೆಗೆ ಅಂದುಕೊಳ್ಳುತ್ತಿರುವೆ. ಇದು ತಡವಾಯಿತೋ ಏನೋ. ನನ್ನ ಉಳಿದ ಆಯುಷ್ಯ ಇಲ್ಲಿ ನೆಲೆಗೊಳ್ಳಲು ಆಸೆ ಪಡುತ್ತಿದೆ.

ಇವೆಲ್ಲವನ್ನು ತುಂಬಿಕೊಂಡು ನನ್ನ ಒಂಟಿತನದ ತಾತ್ವಿಕ ಹುಡುಕಾಟವು, ಜೀವಮುಖಿಯಾಗಿ ಭಾಷೆಯ ಧ್ವನಿ ಶಕ್ತಿಯನ್ನು ತುಂಬಿಕೊಂಡು ಅಭಿವ್ಯಕ್ತವಾಗುವಂಥ ಒಂದು ನವೀನ ಮಾದರಿಗಾಗಿ ಹುಡುಕುವಂತೆ ತೋರುತ್ತದೆ ನನ್ನ ಬರಹ. ಇಷ್ಟೆಲ್ಲಾ ಆಗಿಯೂ ನಾನು ಮಹಾ ಬರಹಗಾರನೇ? ನನ್ನ ರಚನೆಗಳನ್ನು ನಿಜಕ್ಕೂ ಕನ್ನಡದ ಮನಸ್ಸು ತುಂಬಿಕೊಂಡು ಸ್ವೀಕರಿಸಿದೆಯೇ? ಅಲ್ಲಲ್ಲಿ ನನ್ನ ಹೆಸರು ಬಡಕಲಿನಂತೆ ನಮೂದಾಗಿರುವುದ ಬಿಟ್ಟರೆ, ಎಲ್ಲೂ ನಾನು ಸೀರಿಯಸ್ಸಾಗಿ ದಾಖಲಾದವನಲ್ಲ. 'ಅಕ್ಷರ ಹೊಸಕಾವ್ಯ'ದ ಶ್ರೇಷ್ಠ ಸಂಪಾದಕರಿಗೆ ನಾನು ಕವಿಯಾಗಿ ಅವರು ತೀರುವ ತನಕವೂ ಕಾಣಿಸಲೇ ಇಲ್ಲ. ಇನ್ನು 'ಶತಮಾನದ ಕಾವ್ಯ'ದ ಸಂಪಾದಕರಿಗೆ ನಾನು ಮುಖ್ಯವೆನಿಸುವುದು ವಸ್ತುಪ್ರಧಾನ ವಿಂಗಡಣೆಯಲ್ಲಿ ಮಾತ್ರ. ಅದೂ ಅವರಿಗೆ ಅವರ ಸಂಪಾದನೆಯ ಪುಸ್ತಕದಲ್ಲಿ ಹಾಕಲು ಯೋಗ್ಯವೆನಿಸಿದ್ದು ಒಂದೇ ಒಂದು ಕವಿತೆ. ನಾನು ಅವರಿಗೆ ಗುಣದಲ್ಲಿ ಕವಿಯಲ್ಲದಿದ್ದರೂ ಗಾತ್ರದಲ್ಲಿ ಕವಿಯಂತೆ ಕಂಡದ್ದು ನನ್ನ ಅದೃಷ್ಟವೇ. ಈ ಎಲ್ಲ ಅವಾಂತರಗಳ ನಡುವೆಯೂ 'ಕನ್ನಡ ಅಧ್ಯಯನ'ದ ಸಂಪಾದಕರಿಗೆ ನಾನು ಬರಹಗಾರನೆಂಬಂತೆ ಕಾಣಿಸಿಕೊಂಡು ಬಿಟ್ಟಿರುವೆ. ಹಾಗೆ ನೋಡಿದರೆ ನನಗೇ ನಾನು ಬರಹಗಾರನೇ ಎಂಬ ಶಂಕೆಗಳಿವೆ ಎಂದ ಮೇಲೆ ಬೇರೆಯವರನ್ನು ದೂರಲೇಬಾರದು. "ನಿನ್ನ ಹಾದಿಯನ್ನು ನೀನೇ ಕಂಡುಕೋ" ಎನ್ನುವ ಬುದ್ಧ ಮಹಾಕಠಿಣ ವ್ಯಕ್ತಿ. ನಾನೀಗ ಬಹುಕಷ್ಟಪಟ್ಟು ಕವಿ ಬರಹಗಾರನಾಗಲೇ ಬೇಕಿದೆ. ಅದಕ್ಕಾಗಿ ಒಂಚೂರು ತಿವಳಿಕೆಯನ್ನು ಸಂಪಾದಿಸಲೇ ಬೇಕಿದೆ. ನನ್ನ ತಿಳಿವಿನ ಹಾದಿಯ ಹುಡುಕಾಟದಲ್ಲಿ ಸಿಕ್ಕ ಬೆಳಕಿನ ಒಂದು ಕಿರಣ. ಈ ಕಿರಣ ಕಡ್ಡಿಯ ಹಿಡಿದು ನನ್ನೂರಿನ ಈಶ್ವರಗುಡಿಯ ದೀಪದ ಮಿಸುಗಾಡದ ಕುಡಿಯ ಬೆಳಕನ್ನು ಧ್ಯಾನಿಸುತ್ತಾ, ನನ್ನ ನೆಲದ ತಹತಹಗಳನ್ನು ಅರ್ಥಮಾಡಿಕೊಳ್ಳಲು ಮಾಡಬೇಕೆನ್ನುವ ಈ ಪ್ರಯತ್ನದಲ್ಲಿ ಏನಾದರೂ ದಕ್ಕಿದರೆ ಅವು ಪದ್ಯಗಳಾಗಲಿ, ನನ್ನೂರಿನಿಂದ ನಾನು ಮಾಡಿದ ಪಯಣ ವ್ಯರ್ಥಗೊಳ್ಳದಿರಲಿ.

●

## ಮಾನವೀಯ ವ್ಯವಸ್ಥೆಗಾಗಿ ಕೂಗಿಕೊಳ್ಳುತ್ತೇನೆ

● ಜಂಬಣ್ಣ ಅಮರಚಿಂತ

ನಾನು ವಾಸಿಸುವುದು ರಾಯಚೂರಿನ ಮಕ್ತಲ್‌ಪೇಟೆಯಲ್ಲಿ. 'ಮಕ್ತಲ್' ಎಂದರೆ ಉರ್ದುವಿನಲ್ಲಿ ವಧಾಸ್ಥಳ ಎಂದು ಅರ್ಥ. ನಮ್ಮ ಕೇರಿಗೆ ಈ ಹೆಸರು ಯಾಕ ಬಂತೋ ಗೊತ್ತಿಲ್ಲ. ಆದರೆ ಅಲ್ಲಿ ವಾಸಿಸುವ ತುಳಿತಕ್ಕೊಳಗಾದ, ಅಜ್ಞಾನಕ್ಕೆ ಬಲಿಯಾದ ಅಗಸರು,

ಕಬ್ಬೇರರು, ಮ್ಯಾದಾರರು, ಚಮ್ಮಾರರು, ಮಾದಿಗರು, ಹಂದಿಜೋಗಿಗಳು, ದೊಂಬಿದಾಸರು, ಹಗಲು ವೇಷಗಾರರು, ಪಿಂಜಾರರು, ಕೊರವರು - ತಳದ ಈ ಜನ ನಿತ್ಯ ಸತ್ತು ಸತ್ತು ಬದುಕುತ್ತಿರುವ ಪರಿಯನ್ನು ಕಂಡಾಗ 'ಮಕ್ತಲ್' ಎಂಬ ಹೆಸರು ಸಾರ್ಥಕವಾಯಿತೇನೋ ಎನಿಸುತ್ತದೆ.

ಇಂಥ ಸ್ಥಳದಲ್ಲಿ ನಮ್ಮಪ್ಪ ಅಗಸರ ಲಚುಮಯ್ಯ ಒಂದು ಚಿಕ್ಕ ತಟ್ಟಿ ಹೋಟೆಲು ಇಟ್ಟಿದ್ದ. ಈ ಹೋಟೆಲ್ಲಿನ ಖಾಯಂ ಗಿರಾಕಿಗಳೆಂದರೆ ಗಂಜಿನ ಹಮಾಲರು, ಬಂಡಿ ಹೊಡೆಯುವವರು, ರೈತರು, ದಲಿತರು, ಕೊರವರು, ಹಗಲುವೇಷಗಾರರು ಮುಂತಾದವರು. ನನ್ನ ತಂದೆಗೆ ಬಯಲಾಟದ ಹುಚ್ಚು. 'ದೇವಿಕಥೆ', 'ಕನಕಾಂಗಿ ಕಲ್ಯಾಣ', 'ಸಂಗ್ಯಾ-ಬಾಳ್ಯಾ' ಡಪ್ಪಿನಾಟಗಳಲ್ಲಿ ಬರುವ ಹೆಣ್ಣು ಪಾತ್ರಗಳನ್ನು ಮಾಡುತ್ತಿದ್ದ. ಹೆಣ್ಣುಪಾತ್ರದ ಅಭಿನಯಕ್ಕೆ ಒಂದಿಬ್ಬರು ಹೆಂಗಸರು ಮರುಳಾಗಿ ಆತನಿಗೆ ಗಂಟು ಬಿದ್ದಿದ್ದರು. ಬಯಲಾಟದ ಕುಣಿತಕ್ಕಿಂತ ಅಡ್ಡದಾರಿಗಳಲ್ಲಿ ಕುಣಿಯುವುದೇ ಜಾಸ್ತಿಯಾಗಿತ್ತು. ಹೀಗಾಗಿ ಹೋಟಲ್ಲಿನ ಕಡೆ ಆತನ ಗಮನವೇ ಇರಲಿಲ್ಲ. ಹೋಟೆಲ್ಲನ್ನು ಸಂಭಾಳಿಸೋ ಜವಾಬ್ದಾರಿ ನನ್ನ ಮೇಲೆ ನಮ್ಮ ತಾತನ ಮೇಲೆ ಬಿದ್ದಿತ್ತು. ಆಗ ನಾನು ೭ನೇ ಕ್ಲಾಸಿನಲ್ಲಿ ಓದುತ್ತಿದ್ದೆ. ಶಾಲೆ ಬಿಟ್ಟ ಕೂಡಲೆ ಹೋಟೆಲ್ಲಿಗೆ ಬಂದು ಉದ್ರಿ ಖಾತೆ ಬರೆಯೋದು; ಗಲ್ಲದ ಮೇಲೆ ಕೂತು ಗಿರಾಕಿಗಳಿಂದ ರೊಕ್ಕ ತಗೊಳ್ಳೋದು; ಸಪ್ಲೈ ಮಾಡೋದು; ಕಪ್ಪು ಬಸಿ ತೊಳೊಯೋದು ಇವೆಲ್ಲ ನನ್ನ ನಿತ್ಯದ ಕಾರ್ಯಗಳಾಗಿದ್ದವು. ಆಗಿನಿಂದಲೇ ನಾನು ಶಾಲೆಯ ಓದಿನ ಜೊತೆ ಜೀವನ ಓದುವ ಕ್ರಮವನ್ನು ರೂಢಿಸಿಕೊಂಡೆ.

ಪ್ರತಿಯೊಬ್ಬ ಲೇಖಕನನ್ನು ಬಾಲ್ಯದ ನೆನಪುಗಳು ಕಾಡುತ್ತಿರುತ್ತವೆ. ನನಗಿನ್ನೂ ನೆನಪಿದೆ ಬಾಲ್ಯದಲ್ಲಿ ಜರುಗಿದ ಒಂದು ಘಟನೆ. ಸ್ವಂತ ಅಂಗಿ, ಸ್ವಂತ ಅಸ್ತಿತ್ವಕ್ಕೆ ಹುಡುಕಾಟ ಮಾಡಲು ಪ್ರೇರೇಪಿಸಿದ ಘಟನೆ. ನಮ್ಮ ಮನೆಯ ಕಸುಬು ಮಡಿವಾಳಿಕೆ. ನನ್ನ ತಂದೆ ಹೋಟೆಲ್ಲಿನ ವ್ಯವಹಾರ ನಡೆಸುತ್ತಿದ್ದರೂ ಮನೆಯ ಇತರ ಸದಸ್ಯರು ಅಂದರೆ ಚಿಕ್ಕಪ್ಪ; ಚಿಕ್ಕಮ್ಮ ಇಸ್ತ್ರಿ ಬಟ್ಟೆ ಮಾಡುತ್ತಿದ್ದರು. ನಮ್ಮ ಕಡೆಯ ಅಗಸರು ಎಂದೂ ಸ್ವಂತ ಬಟ್ಟೆ ಧರಿಸಿದವರಲ್ಲ. ಎಲ್ಲರೂ ಧರಿಸುವುದು ಮಂದಿಯ ಉದ್ರಿ ಬಟ್ಟೆ. ನಾನು ಕೂಡ ಇಸ್ತ್ರಿಗೆ ಬಂದ ಮಂದಿಯ ಉದ್ರಿ ಬಟ್ಟೆ ಧರಿಸುತ್ತಿದ್ದೆ. 'ಪಟ್ನೇ ವಾಲೋಂಕೆ ಪಟೇ; ದೋಭಿ ಬೇಟಾ ಚಾಂದ್'- ಯಾರ ಬಟ್ಟೆ ಹರಿದರೇನು - ಬಿಟ್ಟರೇನು ಉದ್ರಿ ಬಟ್ಟೆ ತೊಟ್ಟ ಅಗ್ಸರ ನನ್ಮಗ ಚಂದ್ರಾಮನಂತೆ ಮರೆಯುತ್ತಾನೆ ಎಂದು ಎಲ್ಲರೂ ಗೇಲಿ ಮಾಡುತ್ತಿದ್ದರು. ಹೀಗೆ ನಾನೊಮ್ಮೆ ಉದ್ರಿ ಬಟ್ಟೆ ಹಾಕಿಕೊಂಡು ಶಾಲೆಯಲ್ಲಿ ಜರುಗಿದ ೧೫ ಆಗಸ್ಟು ಧ್ವಜ ಆರೋಹಣ ಕಾರ್ಯಕ್ರಮಕ್ಕೆ ಹೋಗಿದ್ದೆ. ಕಾರ್ಯಕ್ರಮ ಮುಗಿದನಂತರ ವಿದ್ಯಾರ್ಥಿ ಮಿತ್ರರೊಂದಿಗೆ ಆಟದ ಮೈದಾನಕ್ಕೆ ಬಂದೆ. ಒಬ್ಬ ರೆಡ್ಡೋರು ಹುಡುಗ ನನ್ನನ್ನೇ ದುರುಗುಟ್ಟಿ ನೋಡುತ್ತಿದ್ದ. ತನ್ನ ಗೆಳೆಯರ ಜೊತೆ ಗುಸುಗುಸು ಮಾತಾಡಿಕೊಂಡು ನನ್ನ ಹತ್ತಿರ ಬಂದ. ಬಂದವನೆ ನನ್ನ ಅಂಗಿ ಹಿಡಿದು ಕಪಾಳಕ್ಕೆ ಬಾರಿಸಿದ. 'ನನ್ನ ಬಟ್ಟೆ ಹಾಕ್ಕೊಂಡು, ಮೆರಿತಿದ್ಯಾ; ಬಿಚ್ಚಲೆ

ನನ ಬಟ್ಟೆ ಅಗ್ಸರ ಲೋಡಿಮಗನೇ' ಎಂದು ನಾನು ಹಾಕಿಕೊಂಡ ಅಂಗಿ; ಚೊಣ್ಣ ಬಿಚ್ಚಿದ. ಒಳಗೆ ಹಾಕಿಕೊಂಡ ಬನೀನು, ಚಡ್ಡಿ ಅವನದಾಗಿರಲಿಲ್ಲ ಪುಣ್ಯಕ್ಕೆ; ಆಗಿದ್ದರೆ ಅವುಗಳನ್ನು ಬಿಚ್ಚಿ ನನ್ನನ್ನು ದಿಗಂಬರಗೊಳಿಸುತ್ತಿದ್ದನೇನೋ ಪುಣ್ಯಾತ್ಮ. ಅವನು ಹಾಕಿದ ಏಟಿಗಿಂತ ಬಟ್ಟೆಬಿಚ್ಚಿ ಅರೆ ನಗ್ನ ಮಾಡಿದ ಅವಮಾನ ನನಗೆ ದೊಡ್ಡ ಪೆಟ್ಟಾಗಿತ್ತು. ಹುಡುಗರೆಲ್ಲಾ ಗುಂಪು ಗೂಡಿ ಚಪ್ಪಾಳೆ ಹೊಡೆದು ನಗುತ್ತಿದ್ದರು. ನಾನು ತೀರ ಅವಮಾನಗೊಂಡು ಅಳುತ್ತಾ ಹೋಗಿ ನವರಂಗ ದರವಾಜ ಕೋಟೆಯೊಳಗೆ ಅಡಗಿಕೊಂಡೆ. ಈ ವಿಷಯ ನನ್ನ ಗೆಳೆಯರು ಮನೆಯವರಿಗೆ ಮುಟ್ಟಿಸಿದಾಗ ನನ್ನ ತಾತ; ಚಿಕ್ಕಪ್ಪ ಬಂದು ನನ್ನ ಅರೆನಗ್ನ ಅವಸ್ಥೆ ನೋಡಿ ಸಿಟ್ಟಿನಿಂದ ರಂಗುರಂಗಾದರು. 'ಯಾರು ಅನ್ನತೋರ್ಸು ಒಂದು ಕೈ ನೋಡಿ ಬುಡ್ತೀನಿ; ಏನು ತಪ್ಪು ಮಾಡ್ಯನ ನಮ್ ಹುಡುಗ ಈ ರೀತಿ ಮಾಡಾಕ. ನಾವು ಹೇಳಿ ಕೇಳಿ ಅಗ್ಸರ ರಾಜನ ತಲೆಯ ಮೇಲಿನ ಮುಂಡಾಸನ್ನು ಸೈತೆ ಕುಂಡಿಗೆ ಸುತ್ತಿಕೊಂಡು ಹಳ್ಳದಾಗ ಬಟ್ಟೆ ಹೊಗಿತೀವಿ. ಅದು ನಮ್ಮ ರಿವಾಜು' ಎಂದು ರೇಗಾಡಿ ನಮ್ಮ ಚಿಕ್ಕಪ್ಪ ತೋಳೇರಿಸಿದ. ಅವನ ರುದ್ರಾವತಾರ ಕಂಡು ಹುಡುಗರೆಲ್ಲಾ ಓಡಿ ಹೋದರು. ನಮ್ಮ ತಾತ; ಚಿಕ್ಕಪ್ಪ ನನ್ನ ಸಮಾಧಾನ ಪಡಿಸಿ, ಶಲ್ಯೆಯಿಂದ ಮೈಮುಚ್ಚಿ, ಮನೆಗೆ ಕರೆದು ತಂದರು. ಏಳೆಂಟು ದಿನ ನಾನು ಮನೆಬಿಟ್ಟು ಕದಲಲಿಲ್ಲ. 'ಹೊಸ ಬಟ್ಟೆ ತರೋ ತನಕ ಶಾಲೆಗೆ ಹೋಗುವುದಿಲ್ಲ' ವೆಂದು ಪಟ್ಟು ಹಿಡಿದು ಕುಳಿತೆ. ನನ್ನ ಹಠಕ್ಕೆ ಮನಸೋತು; ತಾತ ಬಜಾರಿನಿಂದ ಎರಡು ಜೋಡಿ ಹೊಸ ಬಟ್ಟೆಕೊಂಡು ತಂದು ಉಡಿಸಿದ್ದ. ಮೊದಲ ಬಾರಿಗೆ ನನ್ನವೇ ಆದ ಹೊಸ ಬಟ್ಟೆ ಉಟ್ಟ ಸಂಭ್ರಮದಿಂದ ಮೆರೆದಾಡಿದೆ. ಆ ರೆಡ್ಡಿ ಹುಡುಗನ ಮೇಲೆ ಇಂದಿಗೂ ನನಗೆ ಮುನಿಸಿಲ್ಲ. ಯಾಕೆಂದರೆ ಉದ್ರಿ ಬಟ್ಟೆತೊಟ್ಟು ನನ್ನದಲ್ಲದ ಮುಖವಾಡ ಧರಿಸಿ ಪೋಜು ಕೊಡುತ್ತಿದ್ದ ನನಗೆ ನನ್ನ ಅಸಲಿರೂಪ ತೋರಿಸಿದ್ದ. ನನ್ನ ಸ್ವಂತ ಅಂಗಿ; ಸ್ವಂತ ಅಸ್ತಿತ್ವದ ಹುಡುಕಾಟಕ್ಕೆ ಪ್ರೇರೇಪಿಸಿದ್ದ. ಮುಖವಾಡಗಳನ್ನು ಕಿತ್ತೆಸೆಯಲು ಕಲಿಸಿದ್ದ.

ವ್ಯಾಕುಲಗೊಂಡ ನನ್ನ ಎಳೆಮನಸ್ಸು ಅಸ್ತವ್ಯಸ್ತಗೊಂಡ ಈ ವ್ಯವಸ್ಥೆಯ ಪ್ರವಾಹದಲ್ಲಿ ಮುಳುಗಿ ತೇಲುತ್ತಿರುವಾಗ ಈಜುವ ಆಧಾರ ಹಿಡಿದು ಹೊಸ ಶಬ್ದಗಳು ನನ್ನ ಬಳಿಬರುವುದು. ಆಗ ಮೌನಕ್ಕೆ ಮಾತು ಮೂಡುವವು. ಆ ಕಾತರ, ಆ ಹಂಬಲ ಹೆಚ್ಚಾದಂತೆ ನನ್ನ ಅಂತರಂಗದೊಳಗೆ ಕವಿತೆಗಳು ಟಿಸಿಲೊಡೆಯುವವು. ಬಾಲ್ಯದ ಅನುಭವಗಳ ಹಿನ್ನೆಲೆಯಲ್ಲಿ ಬಹಳಷ್ಟು ಕವನಗಳನ್ನು ಬರೆದಿರುವೆ. 'ಪೆಟ್ರೋಮ್ಯಾಕ್ಸ್ ಹೊತ್ತ ಕೊರವರು', 'ಬದುಕಪ್ಪ', 'ಶ್ರೀಸಾಮಾನ್ಯರು', 'ಹಗಲುವೇಷಗಾರರು', 'ಕೆಲವು ಸವಾಲು', 'ಕೋಟೆ' ಮುಂತಾದ ಕವನಗಳು ನನ್ನ ಬಾಲ್ಯದ ನೆನಪಿನಲ್ಲಿ ಅರಳಿದ ಕವನ ಕುಸುಮಗಳು, ವಿಶ್ವ ಹೃದಯದ ಗಾಯಗಳನ್ನು ದಕ್ಷಿಣ ಆಫ್ರಿಕಾ, ನಾಗಸಾಕಿ, ಹಿರೋಸಿಮಾಗಳಲ್ಲಿ ಒಂದೇ ಅಲ್ಲ, ರಾಯಚೂರಿನ ಲಡಕಾಸಿ ಗಲ್ಲಿಗಳಲ್ಲಿನ ಗಟಾರಗಳಲ್ಲಿ ಬದುಕನ್ನು ಸೋಸುತ್ತಿರುವ ಬದುಕಪ್ಪ ನಲ್ಲಿ, ಬಿಜಲಿ ಹೊತ್ತು ನಡೆದಾಡುತ್ತಿರುವ ಕೊರವರಲ್ಲಿ, ಜಕಳಾಂಗ ಸಭೆಗಳಲ್ಲಿ ಅಮಾಯಕ ಕೊರವ ಹೆಂಗಸರನ್ನು ವಸ್ತುವಿನಂತೆ ಮಾರಾಟ ಮಾಡುವ, ಒತ್ತೆಯಿಡುವ ಅನಿಷ್ಟ

ಪದ್ಧತಿಗಳಲ್ಲಿ, ಇವುಗಳಿಂದ ಘಾಸಿಗೊಂಡು ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡ ಕೊರವರ ಹೆಂಗಸಿನ ಶವದಲ್ಲಿ, ತಮ್ಮ ಭವಿಷ್ಯವೇನೆಂಬುದನ್ನು ಅರಿಯದೆ ಬೇರೆಯವರ ಭವಿಷ್ಯ ನುಡಿಯುವ ಕೊರವಂಜಿ ಗಿಳಪಂಚಾಗದ ಹುಡುರ ಮುಖಗಳಲ್ಲಿ, ಧಣಿಗಳ ಮನವೊಲಿಸಲು ವೇಷಧರಿಸಿ ಕುಣಿದಾಡುವ ಹಗಲುವೇಷಗಾರರಲ್ಲಿ ಈ ಗಾಯಗಳನ್ನು ಕಂಡಿವೆ. ನನ್ನ ಬೆನ್ನ ಹಿಂದಿನ ಇತಿಹಾಸ ಪರಂಪರೆಯನ್ನು ಗಮನಿಸಿರುವೆ. ವರ್ತಮಾನವನ್ನು ಗ್ರಹಿಸಿರುವೆ.

ನಾನು ಕಂಡ ಜನ ಅಕ್ಷರ ಪರಿಚಯವಿರದ ಅಧೋಜಗತ್ತಿನ ಜನ, ಪ್ರಪಂಚವೇ ಅವರ ಪಾಠಶಾಲೆ. ಅನುಭವವೇ ಅವರು ಕಲಿತ ಪಾಠ. ಅವರ ಮುಖ ತೆರೆದ ಪುಸ್ತಕ. ಅದನ್ನು ಓದುವುದೆಂದರೆ ಪ್ರಪಂಚವನ್ನು ಓದಿದಂತೆ ಸರಿ. ಅವರು ಮೂಲದಲ್ಲಿ ಬಾಳನ್ನು ಬಾಳುತ್ತಾರೆ. ಅದನ್ನು ಅಕ್ಷರಗಳಿಂದ ಅನುವಾದಿಸಲು ನಾವು ಹೆಣಗಾಡುತ್ತೇವೆ.

ನಾನು ಕವಿತೆ ಬರೆಯಲು ಪ್ರಾರಂಭಿಸಿದ್ದು ೭೦ರ ದಶಕದಲ್ಲಿ. ಆಗ ನವ್ಯರ ಭರ ಭರಾಟೆಯ ಕಾಲ. ವ್ಯಕ್ತಿಯ ಹತಾಶೆ ಅಸಹಾಯಕತೆ ಸಿನಿಕತನ ದ್ವಂದ್ವ ವಿಕ್ಷಿಪ್ತತೆ ಪಲಾಯನವಾದಿ ವಿಚಾರ ನನ್ನಲ್ಲಿ ಮನೆಮಾಡಿಕೊಂಡಿದ್ದವು. ನನ್ನ ಬರಹ ನನಗೆ ತೃಪ್ತಿತರಲಿಲ್ಲ. ಎಲ್ಲರಂತೆ ನಾನು ಓದುಗರಿಗೆ ಪೋಸುಕೊಟ್ಟು ಹುಸಿ ಆದರ್ಶವಾದಿಯಾಗುತ್ತಿದ್ದೇನೆ ಎನಿಸತೊಡಗಿತು. ೧೦-೧೫ ವರ್ಷಗಳವರೆಗೆ ಏನನ್ನು ಬರೆಯದೆ ಮೌನ ವಹಿಸಿದೆ. ಅಧ್ಯಯನಕ್ಕೆ ತೊಡಗಿಕೊಂಡೆ. ಇದೇ ಸಮಯದಲ್ಲಿ ಡಿಎಸ್‌ಎಸ್ ಸಂಘಟನೆ ಜೊತೆ ನನ್ನ ಸಂಬಂಧ ಬೆಳೆಯಿತು. ನನ್ನ ವಿಚಾರಗಳು ಬದಲಾಗತೊಡಗಿದವು. ರಾಯಚೂರಿನ ಸಮುದಾಯದವರು ಪ್ರಯೋಗಿಸಿದ ಹೊಸ ಅಲೆಯ ನಾಟಕಗಳು; ಆಂಧ್ರದ ದಿಗಂಬರ ವಿಪ್ಲವ ಸಾಹಿತ್ಯ ನನ್ನ ಮೇಲೆ ಹೆಚ್ಚಿನ ಪ್ರಭಾವ ಬೀರಿದವು. ಹಿಂದಿಯ ಮುಕ್ತಭೋದ, ತೆಲುಗಿನ ಶ್ರೀ ಶ್ರೀ ಚೆರಬಂಡರಾಜು, ಗದ್ದರ್, ಚಿಲಿದೇಶದ ಪಾಬ್ಲೋ ನೆರೂಡ ನನ್ನ ನೆಚ್ಚಿನ ಕವಿಗಳಾದರು. ಮಾರ್ಕ್ಸ್, ಅಂಬೇಡಕರರ ಕೃತಿಗಳನ್ನು ಅಭ್ಯಸಿಸಿದೆ. ಕನ್ನಡದ ಹೊಸ ತಲಮಾರಿನ ಲೇಖಕರಾದ ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಚಂಪಾ, ಬರಗೂರು ರಾಮಚಂದ್ರಪ್ಪ, ಚೆನ್ನಣ್ಣ ವಾಲೀಕಾರ, ಕಾಳೇಗೌಡ ನಾಗವಾರ, ಅಲ್ಲಮಪ್ರಭು ಮುಂತಾದವರ ನಿಕಟ ಪರಿಚಯದಿಂದ ಹೊಸ ವಿಚಾರಗಳು ಮೂಡಿದವು. ದಲಿತ ನಾಯಕರಾದ ಬಿ. ಕೃಷ್ಣಪ್ಪ, ಬೋಳಬಂಡೆಪ್ಪ, ವಾಲೀಕಾರ ಇವರ ಜೊತೆಯಲ್ಲಿ ಕೂಡಿಕೊಂಡು ಡಿಎಸ್‌ಎಸ್ ಸಂಘಟನೆಯನ್ನು ಹುಟ್ಟುಹಾಕುವ ಹಿನ್ನೆಲೆಯಲ್ಲಿ ಊರು ಕೇರಿ, ಹಳ್ಳಿಗಳನ್ನು ಸುತ್ತಾಡಿದೆ. ಅರೋಲಿ ಹುಲಿಗೆಮ್ಮನ ಜಾತ್ರೆಯಲ್ಲಿ ಜರುಗುವ ಬೆತ್ತಲೆ ಸೇವೆ, ಜಾಲಿಬೆಂಚೆಯ ದಲಿತರಿಗೆ ನಿವೇಶನ ಹಂಚಿಕೆ ಪ್ರಕರಣ. ಮೆದಿಕನಾಳ ಭೂ ಹೋರಾಟಗಳಲ್ಲಿ ಭಾಗವಹಿಸುವ ಮೂಲಕ, ದಲಿತರ ಕುಂದು ಕೊರತೆಗಳನ್ನು ಅರಿಯಲು, ಅವರಲ್ಲಿ ಹೋರಾಟದ ಮನೋಭಾವ ಬೆಳೆಸಲು ಗೆಳೆಯ ದಿ. ಬೋಳಬಂಡೆಪ್ಪ, ಬಾಬು, ಕರಿಯಪ್ಪ ಮಾಸ್ತರ ಇನ್ನಿತರ ಗೆಳೆಯರ ಜೊತೆ ಕೂಡಿಕೊಂಡು ಹಳ್ಳಿಗಳನ್ನು ಸುತ್ತಿದೆವು. ಹೋರಾಟದ

ಗೀತೆಗಳನ್ನು ರಚಿಸಿ, ಜಾನಪದ ಬಾಣಗಳಲ್ಲಿ ರಾಗ ಸಂಯೋಜನೆ ಮಾಡಿ ದಲಿತರ ವೇದನೆಗಳನ್ನು ಅವರ ಭಾಷೆಯಲ್ಲಿ ಪ್ರಸ್ತುತಪಡಿಸುವ ಹಿನ್ನೆಲೆಯಲ್ಲಿ ದಲಿತ ಕಲಾಮಂಡಲಿಗೆ ಹುಟ್ಟು ಹಾಕಲಾಯಿತು. ದಲಿತ ಕಲಾಮಂಡಲಿ ಮೂಲಕ ದಲಿತ ಜಗತ್ತಿನ ಹೊಸ ಯುವ ಗಾಯಕರನ್ನು, ಕವಿಗಳನ್ನು ಪರಿಚಯಿಸಲಾಯಿತು. ೮೦ರ ದಶಕದಲ್ಲಿ ರಾಯಚೂರಿನಲ್ಲಿ ಬಂಡಾಯ ದಲಿತ ಚಳುವಳಿಗಳ ಮೂಲಕ ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೊಸ ಆಂದೋಲನ ಪ್ರಾರಂಭವಾಯಿತು. ಇದೇ ಸಮಯದಲ್ಲಿ ನಾನು ನವ್ಯದ ತಾತ್ವಿಕತೆಯಿಂದ ಬಿಡಿಸಿಕೊಂಡು ಪ್ರಗತಿಪರ ವಿಚಾರಗಳ ಕಡೆಗೆ ವಾಲಿದೆ. ಮನಸ್ಸಿಗೆ ಮಂಕು ಕವಿಸುವ, ಜೀವನಾಸಕ್ತಿಯಿಲ್ಲದ ಬರಹಗಳು ನಿಂತು ಹೋದವು. ನನ್ನ ಸುತ್ತ ಸುತ್ತಿಕೊಂಡ ಬದುಕಿನಲ್ಲಿ ಇತರರ ನೋವು ನಲಿವುಗಳು ಮುಖ್ಯ ಸಂಗತಿ ಎಂಬ ವಿಶಾಲತೆಗೆ ಬೆಳೆದಂತೆ ನನ್ನ ರಚನೆಗಳ ಸ್ವರೂಪವೇ ಬೇರೆಯಾಯಿತು. ೮೦ರ ದಶಕದಲ್ಲಿ ಮೊದಲ ಬಾರಿಗೆ ಉಪಸಂಸ್ಕೃತಿಗಳ ನೆಲೆಯಿಂದ ಬುಡಕಟ್ಟು ಜನಾಂಗದ ಬದುಕನ್ನು ಸಮಗ್ರವಾಗಿ ಗ್ರಹಿಸುವ, ಎಳೆಎಳೆಯಾಗಿ ಬಿಡಿಸುವ ಒಂದು ಪ್ರಯತ್ನ 'ಕುರುಮಯ್ಯ ಅಂಕುಶ ದೊಡ್ಡಿ' ಕಾದಂಬರಿಯಲ್ಲಿ ಮೂಡಿ ಬಂದಿದೆ. ಜಾತಿ, ವರ್ಗ, ಲಿಂಗ ಭೇದಗಳ ಆಧಾರದ ಮೇಲೆ ಸಹಸ್ರಾರು ವರ್ಷಗಳಿಂದ ಶೋಷಣೆ ಸಹಿಸುತ್ತಾ ಬಂದ ದಲಿತ ಜಗತ್ತಿನ ಸಮಗ್ರ ಚಿತ್ರಣ ಈ ಕಾದಂಬರಿ ಒಳಗೊಂಡಿದೆ.

ಕವಿಯ ಮುಖ್ಯಕರ್ತವ್ಯವೆಂದರೆ, ಸತ್ಯವನ್ನು ಜಗತ್ತಿಗೆ ಸಾರುವುದು. ದಂತಕತೆಯಲ್ಲಿ ಬರುವ ಮಗುವಿನಂತೆ 'ರಾಜ ಬೆತ್ತಲೆ ಇದ್ದಾನೆ' ಎಂಬ ನಗ್ನಸತ್ಯವನ್ನು ಜಗತ್ತಿಗೆ ಮತ್ತೆ ಮತ್ತೆ ಕೂಗಿ ಹೇಳುವುದು. ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ಲೇಖಕ ಸದಾಕಾಲ ಬೇಟೆಯ ಜೊತೆಗಿರುತ್ತಾನೆ, ಬೇಟೆಗಾರನ ಜೊತೆಯಲ್ಲ. ವರ್ಗ, ವರ್ಣ, ಜಾತಿ, ಧರ್ಮ, ರಾಷ್ಟ್ರೀಯತೆ, ಲಿಂಗಭೇದಗಳಿಂದಾಗಿ ವೃದ್ಧಿಸುತ್ತಿರುವ ಶೋಷಣೆ ಮತ್ತು ಮಾನವ ಜಾತಿಯನ್ನು ವಿನಾಶದತ್ತ ನೂಕುತ್ತಿರುವ ಯುದ್ಧದ ಕರಾಳ ಛಾಯೆಗಳು ಆವರಿಸಿದಂತೆ ಮನಗಳಲ್ಲಿ ಪಾಪ, ವಿಚಾರಧಾರೆಯಲ್ಲಿ ಅಂಧಕಾರ, ರಸ್ತೆಯ ಮೇಲೆ ನೆತ್ತರು, ನನ್ನ ನಾಡಿನಲ್ಲಿ ನಾನು ನೋಡುತ್ತಿರುವೆ. ನೇತೃತ್ವದ ಧೋರಣೆ ಇವೆಲ್ಲವುಗಳನ್ನೊಳಗೊಂಡು ಸೃಷ್ಟಿಗೊಂಡ ಅತ್ಯಾಚಾರದ ವಿಶಾಲ ಮೂರ್ತಿಯ ಎದುರು ನಮ್ಮ ಕ್ರೋಧ ನತಮಸ್ತಕವಾಗಿ ಅಸಹಾಯಕ ಸ್ಥಿತಿಯನ್ನು ಅನುಭವಿಸುತ್ತಿರುವಾಗ ನನ್ನೆದುರುನಿಂತ ಬೃಹದಾಕಾರದ ಪ್ರಶ್ನೆಗಳಿಗೆ ಸಿದ್ಧಪಡಿಸಿದ ಉತ್ತರಗಳು ಸಿಗದೆ, ಡೈಲಾಗ್ ಮರೆತ ನಟನಂತೆ ನಾನು ಪೇಟೆಗೆ ಸಿಕ್ಕಿಹಾಕಿಕೊಳ್ಳುತ್ತೇನೆ. ಆದರೂ ಇವೆಲ್ಲವುಗಳ ಬಗ್ಗೆ ಎಚ್ಚರ ವಹಿಸುವ ವೈಚಾರಿಕ ಪ್ರಜ್ಞೆ ನನ್ನಲ್ಲಿ ಮನೆಮಾಡಿಕೊಂಡ ಪ್ರಯುಕ್ತ, ನಾನು ಪ್ರಶ್ನೆಯ ಪ್ರಶ್ನೆಯಾಗಿ ಉಳಿಯದೆ ಉತ್ತರದ ಅಂಶವಾಗಿ ಕಾಣಿಸಿಕೊಳ್ಳುತ್ತೇನೆ. ನಾನು ಪೀಡೆಯನ್ನು ಅನುಭವಿಸಿದರೂ ಭವಿಷ್ಯದ ಮೇಲೆ ಆಶೆಯಿಟ್ಟುಕೊಂಡಿರುವವನು. ಅನ್ಯಾಯ ನೋಡುತ್ತೇನೆ, ಮತ್ತೆ ಉತ್ತಮ ಮಾನವೀಯ ವ್ಯವಸ್ಥೆಗಾಗಿ ಕೂಗಿಕೊಳ್ಳುತ್ತೇನೆ.

## ಕಾವ್ಯ: ಬದುಕಿಗಿಂತ ದೊಡ್ಡದಲ್ಲ

● ಎಚ್ ಡುಂಡಿರಾಜ್

ಕಾವ್ಯವೆಂದರೇನು ಎಂಬ ಕಲ್ಪನೆಯೇ ಇಲ್ಲದೆ ನನ್ನ ಹನ್ನೆರಡನೆಯ ವಯಸ್ಸಿನಲ್ಲಿ ನಾನು ಕವಿತೆ ಕಟ್ಟಲು ಪ್ರಾರಂಭಿಸಿದೆ. ಪಠ್ಯಪುಸ್ತಕದ ಪದ್ಯಗಳು, ಹಳ್ಳಿಯ ಹಾಡುಗಳು, ಅಪ್ಪಯ್ಯ ಗಟ್ಟಿಯಾಗಿ ಓದುತ್ತಿದ್ದ ಮಂತ್ರಗಳು, ಶ್ಲೋಕಗಳು, ದೇವಸ್ಥಾನದಲ್ಲಿ ನಡೆಯುತ್ತಿದ್ದ ಭಜನೆ ಇವೆಲ್ಲ ನನಗೆ ಪ್ರೇರಣೆ ನೀಡಿರಬಹುದು. ಆಗ ನಮ್ಮ ಹಳ್ಳಿಗೆ ಪತ್ರಿಕೆಯೇ ಬರುತ್ತಿರಲಿಲ್ಲ. ಪ್ರಕಟಣೆ, ಗೌರವಧನ, ಪ್ರಶಸ್ತಿ, ಶಾಲು ಇತ್ಯಾದಿಗಳು ಇವೆ ಎಂಬುದೂ ನನಗೆ ಗೊತ್ತಿರಲಿಲ್ಲ. ಕಬ್ಬಡ್ಡಿ, ಚಿಣ್ಣಿದಾಂಡುವಿನಂತೆ ಕವಿತೆ ಕಟ್ಟುವುದೂ ಆಗ ನನಗೊಂದು ಆಟವಾಗಿತ್ತು.

೧೯೭೨ರಲ್ಲಿ ಕಾಲೇಜು ಶಿಕ್ಷಣಕ್ಕಾಗಿ ಬೆಂಗಳೂರಿನ ನನ್ನ ಅಣ್ಣನ ಮನೆಗೆ ಬಂದಾಗ ನನಗೆ ಅಂದಿನ ಸಮಕಾಲೀನ ಕಾವ್ಯ ಸಂದರ್ಭದ ಜತೆ ಮೊದಲ ಮುಖಾಮುಖಿಯಾಯಿತು. ಅಣ್ಣನ ಮನೆಯಲ್ಲಿ ಸಾಕ್ಷಿ, ಸಂಕ್ರಮಣ ಮುಂತಾದ ಸಾಹಿತ್ಯ ಪತ್ರಿಕೆಗಳು, ಅಕ್ಷರ ಪ್ರಕಾಶನ ಹಾಗೂ ಮನೋಹರ ಗ್ರಂಥಮಾಲೆಯ ಎಲ್ಲಾ ಪ್ರಕಟಣೆಗಳೂ ಇದ್ದವು. ನಿಸಾರ್ ಮತ್ತು ನಾಡಿಗರು ನನ್ನ ಅಣ್ಣನ ಮಿತ್ರರಾದ್ದರಿಂದ, ಮನೆಗೆ ಆಗಾಗ ಬರುತ್ತಿದ್ದರು. ಅವರನ್ನು ನೋಡಿ, ಅವರ ಮಾತುಗಳನ್ನು ದೂರದಿಂದ ಕೇಳಿ ಪುಳಕಿತಗೊಳ್ಳುತ್ತಿದ್ದೆ. ಕವಿತೆ ಪ್ರಕಟವಾದರೆ ನಾನೊಬ್ಬ ಕವಿ ಎಂಬ ಕೋಡು ಮೂಡುತ್ತದೆ ಎಂದು ನನಗೆ ಆಗ ತಿಳಿಯಿತು.

ಅದು ನವ್ಯದ ಕಾಲ. ನವ್ಯ ಕವಿತೆಗಳ ಮುಂದೆ ನಾನು ಬರೆಯುತ್ತಿದ್ದ ಪ್ರಾಸಬದ್ಧ ರಚನೆಗಳು ಕಾವ್ಯವೇ ಅಲ್ಲ ಅನ್ನಿಸಿ ನಾನು ಕಂಗಾಲಾಗಿದ್ದೆ. ನವ್ಯ ಕಾವ್ಯ ಅರ್ಥವಾಗದಿದ್ದರೂ ಹಾಗೆ ಹೇಳಿದರೆ ಪೆದ್ದ ಅನ್ನಿಸಿಕೊಳ್ಳುವ ಭಯ! ಹಟ ಹಿಡಿದು ನವ್ಯ ಕವನಗಳನ್ನು, ವಿಮರ್ಶೆ ಗಳನ್ನು ಓದುತ್ತಿದ್ದೆ. ಅಡಿಗರ 'ಪುಷ್ಪ ಕವಿಯ ಪರಾಕು', 'ನೆಹರೂ ನಿವೃತ್ತರಾಗುವುದಿಲ್ಲ' ಮುಂತಾದ ವಿಡಂಬನಾತ್ಮಕ ಕವನಗಳು, ನಿಸಾರರ ಕವಿತೆಗಳು ಆಗ ನನಗೆ ಮೆಚ್ಚುಗೆಯಾಗಿ ದ್ದವು. ಅವುಗಳನ್ನು ಅನುಕರಿಸಿ ನಾನು ಕೆಲವು 'ನವ್ಯ' ಕವನಗಳನ್ನು ಬರೆದೆನಾದರೂ ಸಂಪಾದಕರು ಪ್ರೋತ್ಸಾಹ ನೀಡಲಿಲ್ಲ! ಆದರೆ ನನ್ನ ಮಕ್ಕಳ ಕವನಗಳು ಪ್ರಕಟವಾದ್ದರಿಂದ ಮೀಸೆ ಮೂಡಿದ ಮೇಲೂ ಮಕ್ಕಳ ಕವನಗಳನ್ನೇ ಬರೆಯುತ್ತಿದ್ದೆ.

ಕಾಲೇಜಿನಲ್ಲಿ ಕೃಷಿ ವಿಜ್ಞಾನದ ವಿದ್ಯಾರ್ಥಿಯಾದ್ದರಿಂದ ನನಗೆ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಕಲಿಯುವ ಅವಕಾಶವಿರಲಿಲ್ಲ. ಆದರೂ ನನ್ನೊಳಗಿನ ಕವಿ ಸುಮ್ಮನಿರಲಿಲ್ಲ. ಕಾಲೇಜಿನ ಕುಂದು ಕೊರತೆಗಳ ಬಗ್ಗೆ ಮತ್ತು ಕೆಲವು ಅಧ್ಯಾಪಕರ ಬಗ್ಗೆ ನಾನು ಬರೆದ ಲಾವಣಿಗಳು, ಅಣಕವಾಡುಗಳು ವಿದ್ಯಾರ್ಥಿ ವೃಂದದಲ್ಲಿ ಅಪಾರ ಜನಪ್ರಿಯತೆ ತಂದು ಕೊಟ್ಟವು. ಮಿತ್ರರೊಂದಿಗೆ ಸೇರಿ ಕೈ ಬರಹದ ಪತ್ರಿಕೆಯೊಂದನ್ನು ಪ್ರಾರಂಭಿಸಿದೆ. ಅದಕ್ಕೆ ನಾನೇ ಸಂಪಾದಕನಾಗಿ, ನನ್ನ ನವ್ಯ ಕವನಗಳನ್ನು ನಾನೇ ಪ್ರಕಟಿಸಿಕೊಂಡು, ಅವುಗಳನ್ನು

ತಿರಸ್ಕರಿಸಿದ್ದ ಸಂಪಾದಕರ ಮೇಲೆ ಸೇಡು ತೀರಿಸಿಕೊಂಡೆ!

೧೯೭೭ರಲ್ಲಿ ಸ್ನಾತಕೋತ್ತರ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಹೋದಾಗ ಬಂಡಾಯ ಕಾವ್ಯದ ಗಾಳಿ ಜೋರಾಗಿತ್ತು. ಡಿಆರ್ ನಾಗರಾಜ್, ಕಾಳೇಗೌಡ ನಾಗವಾರ ಮುಂತಾದವರು ನವ್ಯ ಕಾವ್ಯದ ದೋಷಗಳನ್ನು ಬಹಿರಂಗವಾಗಿ ಹೇಳತೊಡಗಿದ್ದರು. ಸಿದ್ಧಲಿಂಗಯ್ಯ 'ಇಕ್ರಲಾ, ಒದೀರ್ಲಾ' ಅನ್ನುತ್ತಿದ್ದರು. ಇವುಗಳಿಂದಾಗಿ, ನವ್ಯ ಕಾವ್ಯ ಬರೆಯಲಾಗದೆ ಇರುವುದು ಅಪರಾಧವಲ್ಲ ಎಂದು ನನ್ನೊಳಗಿನ ಯುವ ಕವಿಗೆ ಅನ್ನಿಸಿ ಕೊಂಚ ಧೈರ್ಯ ಬಂತು. ಅದೇ ಸಮಯಕ್ಕೆ ಕೆಲವು ಅಧ್ಯಾಪಕರು ಮತ್ತು 'ಸಮುದಾಯ'ದ ಗೆಳೆಯರ ಸಂಪರ್ಕದಿಂದ ಎಡಪಂಥೀಯ ವಿಚಾರಧಾರೆ ನನ್ನನ್ನು ಆಕರ್ಷಿಸಿತು. ನನ್ನ ಹೆಸರಿನಲ್ಲಿದ್ದ 'ಭಟ್ಟ' ಎಂಬ ಬಾಲಂಗೋಚಿ ಕಳಚಿಕೊಂಡು ನಾನೂ ಬಂಡಾಯ ಕಾವ್ಯ ಬರೆಯಲು ಪೆನ್ನು ಮಸೆಯ ತೊಡಗಿದೆ. ಕೃಷಿಕಾಲೇಜಿನ ಹಂಗಾಮಿ ನೌಕರರು, ಕೃಷಿ ಕಾರ್ಮಿಕರು ಮುಷ್ಕರ ಹೂಡಿದಾಗ ಅವರಿಗೆ ಬೆಂಬಲ ಸೂಚಿಸಿ ಒಂದು ಕವಿತೆ ಬರೆದು ಅದನ್ನು ರಾತ್ರೋರಾತ್ರಿ ಕಾಲೇಜಿನ ನೋಟೀಸು ಬೋರ್ಡಿನಲ್ಲಿ ಅಂಟಿಸಿ ದೊಡ್ಡ ಕ್ರಾಂತಿಕಾರಿ ಎಂಬಂತೆ ಬೀಗಿದ ನೆನಪು ಇನ್ನೂ ಹಸಿರಾಗಿದೆ.

೧೯೮೦ರಲ್ಲಿ ಬ್ಯಾಂಕಿನ ನೌಕರಿ ಹಿಡಿದು ಮಂಗಳೂರಿಗೆ ಹೋದ ನಂತರ ನನ್ನ ಎಡಪಂಥೀಯ ವಿಚಾರಧಾರೆ ಕೊಂಚ ತಣ್ಣಗಾಯಿತಾದರೂ ಕಾವ್ಯಧಾರೆ ಯಾಕೋ ನಿಲ್ಲಲಿಲ್ಲ. ಕವಿತೆಗಳನ್ನು ಪತ್ರಿಕೆಗಳಿಗೆ ಒಂದೇ ಸಮನೆ ಕಳಿಸುತ್ತಿದ್ದೆ. ವಾಪಾಸು ಬಂದರೆ ಮರಳಿಯತ್ನವ ಮಾಡು ಎಂಬಂತೆ ಇನ್ನೊಂದು ಪತ್ರಿಕೆಗೆ ಕಳಿಸುತ್ತಿದ್ದೆ. ಪ್ರಕಟವಾದದ್ದು ಒಳ್ಳೆಯ ಕವನ: ಎಲ್ಲೂ ಪ್ರಕಟವಾಗದ್ದು ಕೆಟ್ಟ ಕವನ ಎಂಬುದು ಆಗ ನನ್ನ ನಂಬಿಕೆ ಯಾಗಿತ್ತು! ಇದೇ ಮಾನದಂಡದಿಂದ ಪ್ರಕಟಿತ ಕವನಗಳ ಒಂದು ಹಸ್ತಪ್ರತಿ ಸಿದ್ಧಪಡಿಸಿದೆ. ಅದಕ್ಕೆ ೧೯೮೨ರ 'ಕಡೆಂಗೋಡ್ಲು ಕಾವ್ಯ ಪ್ರಶಸ್ತಿ' ಬಂದಾಗ ನನಗೆ ನಿಜಕ್ಕೂ ಖುಷಿಯಾಗಿತ್ತು. ಅಧಿಕೃತವಾಗಿ ನಾನು ಕವಿಯಾದೆ ಅನ್ನಿಸಿತು.

ಮೊದಲ ಸಂಕಲನ ಪ್ರಕಟವಾದಾಗ ಗೌರವ ಪ್ರತಿಗಳನ್ನು ಹಿರಿಯ ಕವಿಗಳಿಗೆ ವಿಮರ್ಶಕರಿಗೆ ಕಳಿಸಬೇಕೆಂಬುದು ನನಗೆ ಗೊತ್ತಿರಲಿಲ್ಲ. ಮಂಗಳೂರಿನ ಹೊರಗಿರುವ ಕವಿಗಳ ನೇರ ಪರಿಚಯ ನನಗಿರಲಿಲ್ಲ. ಕಾವ್ಯದ ಬಗೆಗಿನ ನನ್ನ ಜ್ಞಾನ ನನ್ನ ಸ್ವಂತ ಚಿಂತನೆ ಮತ್ತು ನಾನು ಓದಿದ ಪುಸ್ತಕಗಳಿಗೆ ಸೀಮಿತವಾಗಿತ್ತು. ೧೯೮೮ರ ನಂತರ ಕವಿಗೋಷ್ಠಿ, ವಿಚಾರ ಸಂಕಿರಣಗಳ ಮೂಲಕ ಲಕ್ಷ್ಮಣರಾವ್, ಎಚ್.ಎಸ್. ವೆಂಕಟೇಶಮೂರ್ತಿ, ನಾಡಿಗ್, ಚೊಕ್ಕಾಡಿ, ಕಿ.ರಂ., ಚೆನ್ನಂಗೋಡ್ ಮುಂತಾದವರ ಸಂಪರ್ಕ ಲಭಿಸಿತು. ಅವರೊಂದಿಗಿನ ಮಾತುಕತೆ, ಚರ್ಚೆ ಕಾವ್ಯದ ವಿಶಿಷ್ಟತೆಯ ಬಗ್ಗೆ ನಾನು ಗಂಭೀರವಾಗಿ ಚಿಂತಿಸುವಂತೆ ಮಾಡಿತು. ನವ್ಯವೂ ಸೇರಿದಂತೆ ನಮ್ಮ ಕಾವ್ಯ ಪರಂಪರೆಯ ವಿವಿಧ ಘಟ್ಟ ಗಳನ್ನು ಅವುಗಳ ಉತ್ತಮ ಅಂಶಗಳನ್ನು ಗುರುತಿಸುವುದು ಸಾಧ್ಯವಾಯಿತು.

೭೮ರಲ್ಲಿ ಅಡಿಗರು 'ಜೀವವಿರೋಧಿ ಕವಿ' ಎಂದು ಡಿ.ಆರ್. ನಾಗರಾಜ ಹೇಳಿದಾಗ

ತಲೆದೂಗಿದ್ದ ನಾನು, ೮೪ರಲ್ಲಿ ಅಡಿಗರು 'ಪ್ರಪಂಚದ ಶ್ರೇಷ್ಠಕವಿ' ಎಂದು ಕಿ.ರಂ. ನಾಗರಾಜ್ ಸೋದಾಹರಣವಾಗಿ ಸಾಧಿಸಿದಾಗ, ಮತ್ತೆ ಅಡಿಗರನ್ನು ಓದತೊಡಗಿದೆ. ಹೀಗೆ ಈ ಇಬ್ಬರು ನಾಗರಾಜರಿಗೂ ಅವರ ಹಿಂದಿರುವ ಇನ್ನೂ ಅನೇಕ ವಿಮರ್ಶಕರಿಗೂ ಈ ಡುಂಡಿರಾಜನ ಕಾವ್ಯ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಕಾರಣಕ್ಕೆ ಋಣಿಯಾಗಿದೆ.

ಇವೆಲ್ಲ ಹಳೆಯ ಕತೆ. ಇಂದು ನನ್ನ ಕಾವ್ಯ ಸೃಷ್ಟಿಯ ಪ್ರೇರಣೆ ಹಾಗೂ ಕಾವ್ಯ ಸಂದರ್ಭ ಗಳ ಬಗ್ಗೆ ಬರೆಯತೊಡಗಿದರೆ ಅದೇ ಇನ್ನೊಂದು ಪ್ರಬಂಧವಾಗಬಹುದು. ಪುಟಗಳ ಮಿತಿಯಿಂದ ಅವುಗಳನ್ನು ಟಿಪ್ಪಣಿಗಳ ಮೂಲಕ ದಾಖಲಿಸಲು ಯತ್ನಿಸುತ್ತೇನೆ.

ನನ್ನ ಒಂದು ಕವನ ಹಾಗೂ ಸಂಕಲನದ ಹೆಸರು 'ನನ್ನ ಕವಿತೆ ನನ್ನ ಹಾಗೆ'. ನಾವೆಲ್ಲರೂ ಮನುಷ್ಯರೇ ಆದರೂ ಪ್ರತಿಯೊಬ್ಬನಿಗೂ ಅವನದೇ ಆದ ಸ್ವಂತ ವ್ಯಕ್ತಿತ್ವವಿದೆ. ಕವಿತೆಯಲ್ಲೂ ಸ್ವಂತಿಕೆಯ ಛಾಪು ಇರಬೇಕು. ವಸ್ತುವಿನಲ್ಲಿ, ಹೇಳುವ ವಿಚಾರದಲ್ಲಿ, ಅದಾಗದಿದ್ದರೆ ಕಡೇಪಕ್ಷ ಕವಿತೆ ಕಟ್ಟುವ ರೀತಿಯಲ್ಲಿ ಹೊಸತನ ಇರಬೇಕೆಂಬುದು ನನ್ನ ನಂಬಿಕೆ ಮತ್ತು ಹಂಬಲ.

ಹವ್ಯಾಸಿ ನಟನಾಗಿ, ನಾಟಕಕಾರನಾಗಿ ರಂಗಭೂಮಿಯಲ್ಲಿ ಕೆಲಸ ಮಾಡಿದ್ದು ನನ್ನ ಕಾವ್ಯದ ಮೇಲೆ ಪ್ರಭಾವ ಬೀರಿರಬಹುದು.

ನಾನು ಬರೆವ ಪೆನ್ನು, ಮಸಿ, ಕಾಗದ ಅಷ್ಟೇಕೆ ನನ್ನ ಅಸ್ತಿತ್ವವೇ ಸಮಾಜಕ್ಕೆ ಋಣಿಯಾಗಿರು ವಾಗ ನನ್ನ ಕವಿತೆ ತೀರಾ ವೈಯಕ್ತಿಕ ಅನ್ನುವುದು ಹೇಗೆ? ಅದು ಸಮಾಜದೊಂದಿಗೆ ಸಂವಹನ ನಡೆಸಬೇಕೆಂಬ ಕಾರಣಕ್ಕೆ ಬುದ್ಧಿಪೂರ್ವಕ ಕ್ಲಿಷ್ಟತೆಯನ್ನು ಬದಿಗೊತ್ತಿ ಸರಳವಾಗಿ ಆಕರ್ಷಕ ವಾಗಿ ಬರೆಯಲು ಯತ್ನಿಸುತ್ತೇವೆ.

ಕವಿಯನ್ನು ಎಲ್ಲ ವಿಷಯಗಳ ಬಗ್ಗೆ ಅಧಿಕೃತವಾಗಿ ಮಾತಾಡಬಲ್ಲ ಸರ್ವಜ್ಞನೆಂದು ಯಾಕೆ ತಿಳಿಯಬೇಕು? ಅವನೂ ಎಲ್ಲರಂತೆ ಉಪ್ಪು ಹುಳಿ ಖಾರ ತಿನ್ನುವ ಮನುಷ್ಯ. "ಕವಿಯಿದ್ದಾನೆ, ಎಲ್ಲರ ಹಾಗೆ ಕವಿಗಳಿರೋದೆ ಹಾಗೆ" ಎಂಬ ತಿರುಮಲೇಶರ ಕವನದ ಸಾಲು ನನಗೆ ಆಗಾಗ ನೆನಪಾಗುತ್ತದೆ.

ಕಾವ್ಯ ಬದುಕಿನ ಒಂದು ಭಾಗ. ಆದರೆ ಬದುಕಿಗಿಂತ ದೊಡ್ಡದಲ್ಲ. ಬ್ಯಾಂಕಿನಲ್ಲಿ ಗ್ರಾಹಕರಿಗೆ ಮೆನೇಜರ್ ಆಗಿ, ಮನೆಯಲ್ಲಿ ಹೆಂಡತಿಗೆ ಗಂಡನಾಗಿ, ಮಕ್ಕಳಿಗೆ ಅಪ್ಪನಾಗಿ, ಮಾರ್ಕೆಟ್ಟಿನಲ್ಲಿ ವ್ಯಾಪಾರಿಗಳಿಗೆ ಗಿರಾಕಿಯಾಗಿ ನಾನಿದ್ದೇನೆ. ಇದರ ನಡುವೆ ಅವಕಾಶ ಸಿಕ್ಕಾಗ ಕವಿಯಾಗಿ ನಾನು ಎಡೆ ಮಾಡಿಕೊಳ್ಳಬೇಕು.

ಕವಿತೆಯಿಂದ ಕ್ರಾಂತಿಯಾಗುತ್ತದೆ ಎಂಬ ಭ್ರಮೆ ಬಹುಶಃ ಈಗ ಯಾರಿಗೂ ಇಲ್ಲ. ಆದರೆ, ಕವಿತೆ ಪ್ರತಿಗಾಮಿಯಾಗಿರಬಾರದು ಎಂಬ ಎಚ್ಚರ ಇರಬೇಕಲ್ಲವೆ?

ಹೇಳಬಹುದಾದ್ದು ಇನ್ನೂ ಇದೆ. ಆದರೆ "ತನ್ನ ಕುಚಗಳ ತಾನೆ ಮಿಡಿವುದು ಹೆಣ್ಣಿಗೇನು ಸುಖ?" ಎಂಬ ಸುಭಾಷಿತ ನೆನಪಾಗುತ್ತಿರುವುದರಿಂದ ನಿಲ್ಲಿಸುತ್ತೇನೆ.

●

# ಪತ್ರಕರ್ತನ ಸಾಹಿತ್ಯಕೃತ್ಯ

● ನಾಗೇಶ ಹೆಗಡೆ

ಮಂಡ್ಯದ ಸಮೀಪದ ಹಳ್ಳಿಯೊಂದರಿಂದ ಆ ವೃದ್ಧ ಶಿಕ್ಷಕರು ಮೊದಲ ಬಾರಿಗೆ 'ಪ್ರಜಾವಾಣಿ' ಕಚೇರಿಗೆ ಬಂದಿದ್ದರು. ಹೇಗೊ ಏಳು ಸುತ್ತಿನ ಕೋಟೆ ಸುತ್ತುತ್ತ, ಅವರಿವರನ್ನು ಕೇಳುತ್ತ, ನನ್ನ ಪುಟ್ಟ ಕೋಣೆಗೆ ಬಂದರು. ಬಂದವರೇ ಕೊಂಚ ಉದ್ವಿಗ್ನರಾದರು.

'ನೀವೇನಾ ನಾಗೇಶ ಹೆಗಡೆ? ಓದಿದೇನೆ ನಿಮ್ಮದನ್ನ. ನೋಡಿ, ನಿಮ್ಮ ಈ ಪುಸ್ತಕಾನ ಸ್ವಲ್ಪ ಮುಂಚೆ ಕೊಂಡ್ ಕೊಂಡು ಬಂದೆ... ತುಂಬಾ ಚೀಪಾಗಿ ಸಿಕ್ತು!' ಎನ್ನುತ್ತ ತಮ್ಮ ಚೀಲದ ಅದೆಷ್ಟೊ ಕಂತೆ ಕಂತೆ ಕಾಗದಗಳ ಮಧ್ಯದಿಂದ ಕಷ್ಟಪಟ್ಟು ಆ ಪುಸ್ತಕವನ್ನು ಹೊರತೆಗೆದರು.

ನೋಡಿದೆ. ಸಾಕಷ್ಟು ಚಿಂದಿಚಿಂದಿಯಾಗಿದ್ದರೂ ತಕ್ಷಣ ಪರಿಚಯ ಸಿಕ್ತು. ಅದು ನನ್ನ 'ಕ್ಯಾಪ್ಸೂಲಗಿತ್ತಿ'.

'ಎಲ್ಲಿ ಸಿಕ್ತು?' ಕೇಳಿದೆ.

'ಇಲ್ಲೇ ಅವೆನ್ಯೂ ರೋಡ್‌ನ ಫುಟ್‌ಪಾತ್‌ನಲ್ಲಿ ಸಿಕ್ತು; ಸೆಕೆಂಡ್ ಹ್ಯಾಂಡ್ ಬುಕ್ಸ್‌ಗಳನ್ನ ಮಾರ್ತಾರಲ್ಲ? ಅಲ್ಲಿ!' ಎಂದರು.

'ರಪ್ !' ಎಂದು ಯಾರೊ ನನ್ನ ಮುಖಕ್ಕೆ ಐಸ್‌ಕ್ರೀಮ್ ಬಟ್ಟಲನ್ನು ರಾಚಿದಂತಾಯಿತು.

ತುಟಿ ಸವರಿಕೊಂಡರೆ ಸಿಹಿಸಿಹಿ ಕೆನೆ ಕ್ರೀಮ್. ಮೂಗಿಗೆ ವೆನಿಲಾ ಪರಿಮಳ. ಆದರೆ ಮುಖ ಎಲ್ಲಾ ರಾಡಿ. ಉಸಿರು ಕಟ್ಟಿದ ಅನುಭವ. ನಾಚಿಕೆ. ಕಿಸೆಯ ಕರವಸ್ತ್ರ (ಇದ್ದರೆ!) ಎತ್ತಿಕೊಂಡು ಮುಖ ಮುಚ್ಚಿಕೊಂಡು ಬಾತ್‌ರೂಮಿಗೆ ಓಡಬೇಕಾದಂಥ ಮುಖಭಂಗ.

'ಪ್ರಜಾವಾಣಿ'ಯ ಮೂರನೆಯ ಸಂಪಾದಕೀಯ ಬರಹಗಳ ಈ ಸಂಕಲನ ನನಗೆ ಅಷ್ಟಿಷ್ಟು ಖ್ಯಾತಿ ತಂದಿತ್ತು. ಅನಂತಮೂರ್ತಿಯವರು ಅದನ್ನು ಸಾಕಷ್ಟು ಶ್ಲಾಘಿಸಿ ಮುನ್ನುಡಿ ಬರೆದಿದ್ದರು. 'ನಮ್ಮ ನಡುವಿನ ಈಚೆಗೆ ಬರೆಯುವ ಎಷ್ಟೋ ಕವಿಗಳು ನಾಗೇಶ ಹೆಗಡೆಯಂತೆ ಸ್ವಾರಸ್ಯಪೂರ್ಣವಾಗಿ ಭಾಷೆಯನ್ನು ಬಳಸಲು ಕಲಿತರೂ ಸಾಕು....' ಎಂದು ಹೇಳಿದ್ದರು.

ಇದು ನನ್ನ ಬರಹಗಳ ಹಣೆಬರಹದ ಒಂದು ಸ್ಯಾಂಪಲ್.

'ರಪ್ ಎಂದು ಯಾರೊ ಆ ಪುಟ್ಟ ಪುಸ್ತಕವನ್ನು ಮುಖಕ್ಕೆ ಎಸೆದಂತಾಯಿತು' ಎಂದು ನಾನು ಹೇಳಬಹುದಿತ್ತು.

ಯಾಕೆ ನಾನು ಐಸ್‌ಕ್ರೀಮ್ ಬಟ್ಟಲಿನ ಉದಾಹರಣೆ ಕೊಟ್ಟೆ, ಎಂದರೆ, ಅದು ನನ್ನ ಬರಹದ ಒಂದು ಸ್ಯಾಂಪಲ್ ಕೂಡ. ನನಗಾದಂಥ ಇಂಥದೇ ಅನುಭವಗಳು ನನಗಿಂತ

ಅನೇಕ ಪಟ್ಟು ಹೆಚ್ಚಿನ ಖ್ಯಾತಿಯ ಲೇಖಕರಿಗಾಗಿದೆ. ಸಾಮರ್‌ಸೆಟ್ ಮಾಮ್‌ಗಂತೂ ತಾನೇ ಹಸ್ತಾಕ್ಷರ ಹಾಕಿ ಪ್ರೀತಿಯಿಂದ ಕೊಟ್ಟ ಪುಸ್ತಕವೊಂದು, ಸೆಕೆಂಡ್‌ಹ್ಯಾಂಡ್ ಬುಕ್‌ಸ್ಟಾಲ್‌ಗಳಲ್ಲೂ ಅಲ್ಲ, ರದ್ದಿ ಅಂಗಡಿಯಲ್ಲಿ ದರ್ಶನ ನೀಡಿದೆ. ಆತ ಆ ಪುಸ್ತಕವನ್ನು ಏನು ಮಾಡಿದ ಎಂಬುದರ ಕುರಿತೂ ಐತಿಹ್ಯಗಳಿವೆ. ಅಂಥದ್ದನ್ನು ಬಿಟ್ಟು ಯಾಕೆ ನಾನು ಐಸ್‌ಕ್ರೀಮ್ ಬಟ್ಟಲಿನ ಉದಾಹರಣೆ ಕೊಟ್ಟೆ ಅನ್ನೋದಕ್ಕೆ ಕಾರಣ ಹೇಳುತ್ತೇನೆ.

ಜಗತ್ತಿನ ಅತ್ಯಂತ ಧನಿಕ ವ್ಯಕ್ತಿಯೆನಿಸಿದ ವ್ಯಕ್ತಿ ಬಿಲ್‌ಗೇಟ್ಸ್‌ನ ಮುಖಕ್ಕೆ ಈಚೆಗೆ ಯಾರೊ ಹೀಗೆ ಐಸ್‌ಕ್ರೀಮ್ ಬಟ್ಟಲನ್ನು ರಾಚಿದ್ದ ಚಿತ್ರವನ್ನು ನಾನು ನೋಡಿದ್ದೆ. ಗೊತ್ತಲ್ಲ, 'ಮೈಕ್ರೋಸಾಫ್ಟ್' ಹೆಸರಿನ ಕಂಪ್ಯೂಟರ್ ಕಂಪನಿಯ ಬಿಲ್‌ಗೇಟ್ಸ್? ಆತನ ಧನರಾಶಿಯ ಬಡ್ಡಿ ಹಣವೇ ಪ್ರತಿ ನಿಮಿಷಕ್ಕೆ ೧.೬೩ ಕೋಟಿಯಷ್ಟು ಹೆಚ್ಚುತ್ತಿದೆ. ಪ್ರತಿ ದಿನವೂ ಆತ ಒಂದು ಕೋಟಿ ರೂಪಾಯಿಗಳಷ್ಟನ್ನು ದಾನ ಮಾಡುತ್ತ ಹೋದರೆ, ಅವನ ಹಣವೆಲ್ಲ ಪೂರ್ತಿ ಖರ್ಚಾಗಲು ೬೩೦ ವರ್ಷಗಳು ಬೇಕು! (ಈ ದಾಖಲೆಗಳನ್ನು ನಾನು ನನ್ನ 'ಮುಷ್ಟಿಯಲ್ಲಿ ಮಿಲೆನಿಯಂ' ಎಂಬ ಗ್ರಂಥದಿಂದ ಎತ್ತಿಕೊಂಡಿದ್ದೇನೆ). ಅಂಥ ಧನಿಕನೊಬ್ಬನ ಮುಖಕ್ಕೆ ಎಲ್ಲರೆದುರು ರಪ್ಪೆಂದು ಐಸ್ ಕ್ರೀಮ್ ಬಟ್ಟಲನ್ನು ಎಸೆದ ಘಟನೆಯನ್ನು ನಾನು ಇಲ್ಲಿ ಪೋಣಿಸಬಯಸುತ್ತೇನೆ.

ಏಕೆಂದರೆ, ನಮ್ಮ ಸಂಸ್ಕೃತಿಯ ಹೆಚ್ಚೆಂದರೆ ಪುಸ್ತಕವನ್ನು ಲೇಖಕನ ಮುಖಕ್ಕೆ ಎಸೆಯುವ (ಕಡತವನ್ನು ಬಾಸ್ ತನ್ನ ನೌಕರನ ಮುಖಕ್ಕೆ ಎಸೆಯುವ) ಪದ್ಧತಿ ಇದೆಯೇ ವಿನಾ, ಪಾಯಸದ ಬಟ್ಟಲನ್ನು ಎಸೆದ ಉದಾಹರಣೆಗಳಿಲ್ಲ. ನಾವು ಭಾರತೀಯರು ಯಾರನ್ನೇ ಆದರೂ ಒಂದೋ, ಚೆನ್ನಾಗಿ ಇಷ್ಟಪಡುತ್ತೇವೆ ಅಥವಾ ದ್ವೇಷಿಸುತ್ತೇವೆ. ಪ್ರೀತಿಯಿಂದ ದ್ವೇಷಿಸುವ Oxymoron ವಿಧಾನ ನಮಗೆ ಗೊತ್ತಿಲ್ಲ. ಅಥವಾ ಅಂಥ ವಿಧಾನ ಇದ್ದರೆ ನನಗೆ ಗೊತ್ತಿಲ್ಲ. ಅದಕ್ಕೇ ಅವಕಾಶ ಸಿಕ್ಕಾಗಲೆಲ್ಲ ನನ್ನ ಬರಹಗಳ ಮೂಲಕ ವಿದೇಶೀ ಸಂಸ್ಕೃತಿಯ ಅಪರಿಚಿತ ಮುಖಗಳನ್ನು ಪರಿಚಯಿಸಲು ಇಷ್ಟ ಪಡುತ್ತೇನೆ.

ಪಿಯುಸಿ ಓದುತ್ತಿದ್ದಾಗ ನನ್ನ ರೂಮಿನಲ್ಲಿ ಒಂದು ಚೀಟಿಯನ್ನು ಅಂಟಿಸಿಕೊಂಡಿದ್ದೆ. 'ಭಾರತವನ್ನು ನೋಡು, ಜಗತ್ತನ್ನು ನೋಡು' ಎಂಬರ್ಥದ ಮುದ್ರಿತ ಚೀಟಿ. ಅದೇ ನನ್ನ ದಿಶೆಯನ್ನು ಮೂವತ್ತು ವರ್ಷಗಳ ಕಾಲ ನಿರ್ದೇಶಿಸಿತ್ತು ಎಂದು ಈಗ ಅನ್ನಿಸುತ್ತಿದೆ. ಭಾರತವನ್ನು ನೋಡುವ ಅವಕಾಶ ಸಿಗುತ್ತದೆಂದೇ ನಾನು ಇತರೆಲ್ಲ ವಿಷಯಗಳನ್ನು ಬಿಟ್ಟು ಭೂವಿಜ್ಞಾನವನ್ನು ಆಯ್ದುಕೊಂಡೆ. ಧಾರವಾಡದಲ್ಲೇ ಎಮ್‌ಎಸ್‌ಸಿ ಪದವಿ ಪಡೆಯುವ ಅವಕಾಶವಿದ್ದರೂ, ಅಪ್ಪನ ಎದುರು ಅದೆಂಥದೊ ಒಂದು ದೊಡ್ಡ ಚಿತ್ರ ಬಿಚ್ಚಿಟ್ಟು, ದೂರದ ಖರಗ್‌ಪುರ ಐಐಟಿಗೆ ಅರ್ಜಿ ಹಾಕಿ ಪ್ರವೇಶ ಗಿಟ್ಟಿಸಿ ಹೊರಟು ಅಲ್ಲಿಂದ ಜೆಎನ್‌ಯು, ಅಲ್ಲಿಂದ ನೈನಿತಾಲ್, ಅಲ್ಲಿಂದ ಬ್ರಿಟನ್, ಅಮೆರಿಕ ಇತ್ಯಾದಿ ಛಪ್ಪನ್ನಾರು (ಮೈನಸ್ ನಾಲ್ವತ್ತು!) ದೇಶಗಳನ್ನು ಸುತ್ತಿ ಬರೋದಕ್ಕೆ ಆ ಚೀಟಿಯೇ ಕಾರಣವಿರಬೇಕು.

'ಆತ್ಮಕಥೆ ಬೇಡ, ಬರವಣಿಗೆ ವಿಷಯ ಹೇಳ್ರೀ' ಎಂದು ನೀವು ಸಿಡುಕುತ್ತಿರುವುದು ನನಗೆ ಗೊತ್ತಾಗುತ್ತಿದೆ. ಅಲ್ಲಿಗೇ ಬರ್ತೇನೆ ತಾಳಿ. ಪ್ರಪಂಚ ಸುತ್ತೋದಕ್ಕೂ ಬರವಣಿಗೆಗೂ ಯಾವ ಸಂಬಂಧವೂ ಇಲ್ಲ. ದಿನಾ ಬೆಂಗಳೂರಿನ ಏರ್‌ಪೋರ್ಟ್‌ನಿಂದ ನೂರೈವತ್ತು ಜನ ಕನ್ನಡಿಗರು ವಿದೇಶಕ್ಕೆ ಹೋಗುತ್ತಾರೆ. ಒಂದೇ ವರ್ಷದಲ್ಲಿ ನೂರೈವತ್ತು ದೇಶಗಳನ್ನು ಸುತ್ತಿ ಬರುವ ಕನ್ನಡಿಗನನ್ನೂ ಹುಡುಕಬಹುದು. ಆದರೆ ಅಂಥ ಎಲ್ಲರೂ ಬರೆಯುವುದಿಲ್ಲ. ಮೋಹಕ ಭಾಷೆಯಲ್ಲಿ ಬರೆಯಬಲ್ಲ ಅದೆಷ್ಟೊ ಮಂದಿಗೆ ಪ್ರಪಂಚದ ಅನುಭವ ಇರುವುದಿಲ್ಲ. ಪ್ರಪಂಚದ ನಿಯಮವೇ ಹಾಗಿರಬೇಕು. ಎಲ್ಲ ದೇಶಗಳಲ್ಲೂ, ಎಲ್ಲ ಕಾಲದ್ಲಲೂ ಹೀಗೇ!

ನನ್ನ ಅದೃಷ್ಟಕ್ಕೆ ನಾನು ಬರವಣಿಗೆ ಆರಂಭಿಸುವ ವೇಳೆಗೆ ಸರಿಯಾಗಿ ತಂತ್ರಜ್ಞಾನದ ನಾಗಾಲೋಟ ಒಮ್ಮೆಗೇ ಆರಂಭವಾಗಿತ್ತು. ಮನುಷ್ಯ ಚಂದ್ರನ ಮೇಲೆ ಕಾಲಿಟ್ಟಾಗಿತ್ತು. 'ಪರಿಸರ ಪ್ರಜ್ಞೆ' ಎಂಬ ಹೊಸ ವಿಷಯಕ್ಕೆ ಎಲ್ಲೆಡೆ ಆದ್ಯತೆ ಸಿಗತೊಡಗಿತ್ತು. ನಾನು ತಂತ್ರಜ್ಞಾನದಲ್ಲಿ ಮುಂಚೂಣಿಯಲ್ಲಿದ್ದ ಐಐಟಿಯಿಂದ ಪದವಿ ಪಡೆದು, ಪರಿಸರ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದು ಹೆಮ್ಮೆಯ ಆ ಎರಡು ಕೋಡುಗಳ ಮೇಲೆ ಕನ್ನಡದ ಬಾಸಿಂಗವನ್ನು ಏರಿಸಿಕೊಂಡು ಬರವಣಿಗೆಗೆ ಇಳಿದೆ.

ನಾನು ಸರಳವಾಗಿ ಬರೆಯುತ್ತೇನೆಂದು ಅನೇಕರು ಹೇಳಿದ್ದುಂಟು. ಅದು ಹೊಗಳಿಕೆಯ ಮಾತಾದರೆ ಅದರ ಶ್ರೇಯ ನನಗೆ ಸೇರಬೇಕಾಗಿಲ್ಲ. ಕನ್ನಡದ ಜಾಯಮಾನದಲ್ಲೇ ಆ ಸರಳತೆ ಇದೆ. ನಾನು ಹೊಸ ಭಾಷೆಯನ್ನೇನೂ ಸೃಷ್ಟಿ ಮಾಡಿಲ್ಲ. ಕನ್ನಡವೆಂದರೆ ಚಿನ್ನವಿದ್ದಂತೆ. ಚಿನ್ನದ ಗುಣವೇನೆಂದರೆ ಅದನ್ನು ನೀವು ಕುಟ್ಟಿದಷ್ಟೂ ಹಿಗ್ಗುತ್ತ ಹೋಗುತ್ತದೆ ವಿನಾ ಭಗ್ನವಾಗುವುದಿಲ್ಲ. ಎಳೆದಷ್ಟೂ ತಂತಿಯಾಗುತ್ತ ಹೋಗುತ್ತದೆ ವಿನಾ ತುಂಡಾಗುವುದಿಲ್ಲ. ಅಕ್ಕಸಾಲಿಗನ ತನ್ಮಯತೆ ಹಾಗೂ ಕಲಾತ್ಮಕತೆ ಇದ್ದರೆ ಕನ್ನಡ ಹೇಗೆ ಬೇಕಾದರೂ ಬಾಗುತ್ತದೆ, ಬಳುಕುತ್ತದೆ. ಎಷ್ಟುದ್ದ ಬೇಕಾದರೂ ಹಿಗ್ಗುತ್ತದೆ. ಭಾಷೆಗಾಗಿ ಶ್ರಮಿಸಿದವನನ್ನು ಹಿಗ್ಗಿಸುತ್ತದೆ. ಈ ಕನ್ನಡ ಚಿನ್ನವನ್ನು ಸುಂದರ ಆಭರಣವಾಗಿ ಮಾಡುವುದು ಹೇಗೆಂಬುದನ್ನು ನನ್ನ ಹೈಸ್ಕೂಲ್ ಗುರುಗಳು, ನಮ್ಮ ಕಾಲದಲ್ಲಿ ಹೈಸ್ಕೂಲ್ ಶಿಕ್ಷಕರು ಮಕ್ಕಳಿಂದ ನಿಬಂಧ ಬರೆಯಿಸಿ, ಅತ್ಯುತ್ತಮವಾದುದನ್ನು ಇಡೀ ಕ್ಲಾಸಿಗೆ ಓದಿ ಹೇಳುತ್ತಿದ್ದರು. ಅದು ಹೆಚ್ಚಿನ ಬಾರಿ ನನ್ನ ನಿಬಂಧವೇ ಆಗಿರುತ್ತಿತ್ತು. ಏಕೆಂದರೆ, ಆಗ ನಾನು ಕದ್ದು ಮುಚ್ಚಿ, ಎನ್. ನರಸಿಂಹಯ್ಯ, ಅನಕೃ, ತರಾಸು, ಬಸವರಾಜ ಕಟ್ಟೀಮನಿಯವರ ಕಾದಂಬರಿಗಳನ್ನೂ ಬೇಂದ್ರೆಯವರ ಕವನಗಳನ್ನೂ ಕೆಮಿಸ್ಟ್ರಿ ಕ್ಲಾಸಿನಲ್ಲೇ ಓದುತ್ತಿದ್ದೆ. ಸಿಕ್ಕಿಬಿದ್ದಾಗ ಗಣಿತ ಶಿಕ್ಷಕರಿಂದ ಬೈಸಿಕೊಳ್ಳುತ್ತಲೇ ಕನ್ನಡ ಶಿಕ್ಷಕರಿಂದ ಹೊಗಳಿಸಿಕೊಳ್ಳುತ್ತಿದ್ದೆ.

ಈಚೀಚೆಗೆ ಹೈಸ್ಕೂಲುಗಳಲ್ಲಿ ನಿಬಂಧ ಬರೆಸುವ ಪ್ರವೃತ್ತಿಯೇ ಹೋಗಿಬಿಟ್ಟಿದೆ. ನನ್ನ ಮಗನ ಮೂರು ವರ್ಷಗಳ ಹೈಸ್ಕೂಲ್ ಶಿಕ್ಷಣದಲ್ಲಿ ಒಂದು ಬಾರಿಯೂ ಉಪಾಧ್ಯಾಯರು

ಅವನಿಂದ ನಿಬಂಧವನ್ನು ಬರೆಸಲಿಲ್ಲ. ನಾನು ಈ ಕುರಿತು ಬೆಂಗಳೂರಿನ ನ್ಯಾಶನಲ್ ಹೈಸ್ಕೂಲ್‌ನ ಉಪಾಧ್ಯಾಯರಿಗೆ ದೂರನ್ನು ಕೂಡ ಕೊಟ್ಟಿದ್ದೆ. ನನ್ನ ಅನುಭವದ ಪ್ರಕಾರ, ಬರವಣಿಗೆಯ ಆಸಕ್ತಿಯನ್ನು ರೂಪಿಸುವುದೇ ಹೈಸ್ಕೂಲ್ ನಿಬಂಧಗಳು. ಈಗಿನ ಅನೇಕ ಗದ್ಯ ಬರಹಗಾರರು ಸರಳವಾಗಿ ಹೇಳಬಹುದಾದದ್ದನ್ನೂ ತೀರಾ ಕ್ಲಿಷ್ಟವಾಗಿ ಬರವಣಿಗೆಯಲ್ಲಿ ಹೇಳುವುದನ್ನು ರೂಢಿಸಿಕೊಂಡಿದ್ದಾರೆ. ಕನ್ನಡ ಓದುವವರು ಕಮ್ಮಿಯಾಗಿದ್ದರೊ ಅಥವಾ ಸುಲಲಿತವಾಗಿ ಓದಿಸಿಕೊಳ್ಳುವಂಥ ಗದ್ಯವನ್ನು ಬರೆಯುವವರು ಕಮ್ಮಿಯಾಗಿದ್ದಾರೊ ಅಂತೂ ಕನ್ನಡ ಬರವಣಿಗೆಯಲ್ಲಿ ಲಾಲಿತ್ಯ, ಸ್ವಾರಸ್ಯ ಕಮ್ಮಿಯಾಗುತ್ತಿದೆ. ವಾರಕ್ಕೆ ಕನಿಷ್ಟ ಐವತ್ತು ಲೇಖನಗಳ ಹಸ್ತಪ್ರತಿಗಳ ಮೇಲೆ ಕಣ್ಣಾಡಿಸಬೇಕಾದ ದೌರ್ಭಾಗ್ಯವಂತ ನಾನು. ಅನುಭವದಿಂದ ಈ ಮಾತನ್ನು ಬರೆಯುತ್ತಿದ್ದೇನೆ.

ಗದ್ಯ ಬರವಣಿಗೆಗೆ ಭಾಷೆಯೊಂದೇ ಸಾಲದು. ಬರೆಯಲು ಹೊಸ ಹೊಸ ವಿಷಯಗಳು ಬೇಕು. ಅದಕ್ಕೆ ಲೋಕಜ್ಞಾನ ಬೇಕು. ಮಾಧ್ಯಮಗಳಲ್ಲಿ ಅಷ್ಟಾಗಿ ಪ್ರಚಾರ ಸಿಕ್ಕಿರದ, ಆದರೆ ನಮ್ಮನ್ನು ನೇರವಾಗಿ ತಟ್ಟುವ ವಿದ್ಯಮಾನಗಳ ಅರಿವಿರಬೇಕು. ವಿಜ್ಞಾನ ತಂತ್ರಜ್ಞಾನಗಳ ಲೋಕದಲ್ಲಿ ಅಂಥ ಬೇಕಷ್ಟು ವಿಷಯಗಳು ಸಿಗುತ್ತಿವೆ. ಪತ್ರಕರ್ತನಾಗಿರುವುದರಿಂದ ಅನೇಕ ವಿದ್ಯಮಾನಗಳನ್ನು ಅವುಗಳ ಕಚ್ಚಾರೂಪದಲ್ಲೇ (ಅಂದರೆ ಅವುಗಳ ಸಂಸ್ಕರಣೆ ಮತ್ತು ಪ್ಯಾಕೇಜಿಂಗ್ ಆಗುವ ಮೊದಲೇ) ಕಣ್ಣಾರೆ ನೋಡುವ 'ಸೌಭಾಗ್ಯ' ನನ್ನದಾಗಿದೆ.

ಈ ಬಗ್ಗೆ ಎರಡು ಉದಾಹರಣೆ ಕೊಟ್ಟರೆ ಬೇಸರವಿಲ್ಲ ತಾನೆ? ಭಾರತದ ಹೆಮ್ಮೆಯ ರಾಕೆಟ್ ಒಂದು ಬಾಹ್ಯಾಕಾಶಕ್ಕೆ ಹಾರಲಿದೆ. ಒಂದು ದಿನ ಮುಂಚೆಯೇ ಶ್ರೀಹರಿಕೋಟಾಕ್ಕೆ ಪ್ರೆಸ್ ಪಾರ್ಟಿ ಹೋಗುತ್ತದೆ. ವೈಭವೋಪೇತ ಗೆಸ್ಟ್ ಹೌಸ್, ಭರ್ಜರಿ ಪಾರ್ಟಿ. ಮರುದಿನ ಬೆಳಿಗ್ಗೆ ಉಡ್ಡಾಣ ತಾಣದ ದರ್ಶನ. ಪೂರ್ಣರೂಪದಲ್ಲಿರುವ ಒಂದೆರಡು ರಾಕೆಟ್‌ಗಳು; ಅರೆಬರೆ ಸಿದ್ಧತೆಯಲ್ಲಿರುವ ಅಲ್ಲಲ್ಲಿ ಜೋಡಿಸಿಟ್ಟ ಅನೇಕ ರಾಕೆಟ್‌ಗಳು; ಹೊರಗೆ ಎಂತೆಂಥದೋ ಹೊಸ ಯೋಜನೆಗಳ, ಹೊಸ ಕಟ್ಟಡಗಳ ನಿರ್ಮಾಣ ಕಾರ್ಯ. ಅಲ್ಲಿ, ಬಯಲಿನಲ್ಲಿ ಅನಾಥವೆಂಬಂತೆ ಬಿದ್ದಿರುವ ದೂರಭವಿಷ್ಯದ ರಾಕೆಟ್‌ಗಳ ಹೊರಗವಚಗಳು. ಕುಡಿಯುವ ನೀರಿನ ಹೇಮಾವತಿ ಯೋಜನೆಗಾಗಿ ಎಂಟು ವರ್ಷಗಳಿಂದ ರಸ್ತೆ ಪಕ್ಕದಲ್ಲಿ ಬಿದ್ದ ಖಾಲಿ ಪೈಪುಗಳಂತೆ ಮಲಗಿರುವ ಆ ಫೈಬರ್ ಗ್ಲಾಸ್ ಕವಚಗಳಲ್ಲಿ ಬಡ ಕೂಲಿಕಾರ ಸಂಸಾರ ಇರುವುದನ್ನು ನೀವು ನೋಡಿದ್ದೀರಾ? ನಾನು ನೋಡಿದ್ದೇನೆ. ಭವ್ಯ ಭಾರತದ ಬಾಹ್ಯಾಕಾಶ ಯೋಜನೆಗೆಂದು ತರಿಸಿದ ರಾಕೆಟ್ ಕೊಳವೆಯ ಒಳಗೆ ತಂಪು ನೆರಳಲ್ಲಿ ಬಡ ಕೂಲಿ ಕಾರ್ಮಿಕರ ಮಗು.

ಕವನ ಬರೆಯಲು ಬೇಕಾಗ ಸಾಮಗ್ರಿ ಇದು. ಯಾವ ವರದಿಗಾರನೂ ಇದನ್ನು ನಿಮ್ಮ ಮುಂದೆ ಇಡಲಾರ. 'ಅಯ್ಯೊ ಬಿಡಿ ಸಾ! ನೂರು ಕೋಟಿ ಜನರ 'ಭಾರ'ತ ಇದು. ಪಾಪುಲೇ ಶನ್ ನಿಯಂತ್ರಣ ಮಾಡದೇ ಇದ್ರೆ ಇವೆಲ್ಲ ಮಾಮೂಲು' ಎಂದು ನೀವು ಹೊರಡಬಹುದು.

ಆದರೆ ಹೊರಡಬೇಡಿ ನಿಲ್ಲಿ. ಜನಸಂಖ್ಯಾ ನಿಯಂತ್ರಣದ ವೈಜ್ಞಾನಿಕ ವೈಖರಿಯನ್ನೂ ಇದೇ ಉಸಿರಲ್ಲಿ ಹೇಳಿ ಮುಗಿಸುತ್ತೇನೆ. ಜನಸಂಖ್ಯಾ ನಿಯಂತ್ರಣಕ್ಕೆ ಸಂಬಂಧಿಸಿದ ಸಂಶೋಧನೆ ಮಾಡುತ್ತೇನೆಂದು ಏಳೆಂಟು ಕೋತಿಗಳ ಶಿಶ್ನಗಳನ್ನು ಕೊಯ್ದು ಅರೆಬರೆ ಬ್ಯಾಂಡೇಜ್ ಸುತ್ತಿ ಎಲ್ಲವನ್ನೂ ಒಂದು ಸಾಮಾನ್ಯ ಟೇಬಲ್ ಗಾತ್ರದ ಪಂಜರದೊಳಕ್ಕೆ ತುರುಕಿ ಇಟ್ಟ ಹಿರಿಯ ವಿಜ್ಞಾನಿಯ ಕೃತ್ಯವನ್ನು ನೀವು ನೋಡಿದ್ದೀರಾ? ನಾನು ನೋಡಿದ್ದೇನೆ. ಮಾನವನ ಮೇಲಷ್ಟೇ ಅಲ್ಲ, ಇಡೀ ಜೀವಲೋಕದ ಮೇಲಣ ದೌರ್ಜನ್ಯದ ಕತೆ ಇದು. ಕತೆ ಉದ್ದ ಇಲ್ಲ. ಆ ವಿಜ್ಞಾನಿಗೆ ನಿವೃತ್ತಿಯಾಯಿತು. ಯೋಜನೆ ಅಷ್ಟಕ್ಕೇ ನಿಂತಿತು. ನರಳಿ ಸತ್ತ ಕೋತಿಗಳು ಮಣ್ಣಾದವು. ಜನಸಂಖ್ಯಾ ನಿಯಂತ್ರಣದ ಒಂದು ಹೊಸ ಉಪಾಯ ಬಂದಿಲ್ಲ, ಹಳೆಯ ಯೋಜನೆಗಳು ಪ್ರಜೆಗಳ ವೋಟಿನ ಬಲದಿಂದಾಗಿ ಕಾರ್ಯಗತವಾಗಿಲ್ಲ.

ಇಂಥ ಮೆಲೊಡ್ರಾಮಾಗಳನ್ನು ಬಿಚ್ಚಿಟ್ಟು, ಅವುಗಳ ನಡುವಣ ಸತ್ಯವನ್ನು ಕೆದಕುವಂಥ ಗದ್ಯದ ಬರವಣಿಗೆ ನನಗೆ ಇಷ್ಟ. ರಾಕೆಟ್ ಮತ್ತು ಅದರ ನೆರಳಿನ ನಡುವಣ ಅಂತರ; ಸಂಶೋಧನೆ ಮತ್ತು ವಾಸ್ತವದ ನಡುವಣ ಅಂತರ; ತಂತ್ರಜ್ಞಾನದ ದಾಪುಗಾಲು ಮತ್ತು ದುರ್ಬಲರ ಅಂಬೆಗಾಲುಗಳ ನಡುವಣ ಅಂತರವನ್ನು ವಿಶ್ಲೇಷಿಸುವ ಗದ್ಯ ನನಗೆ ಇಷ್ಟ.

'ನೀವು ಹೆಚ್ಚು ಹೆಚ್ಚು ಪುಸ್ತಕಗಳನ್ನೇ ಬರೆಯಬೇಕು' ಎಂದು ಕೆಲವರು ಸಲಹೆ ಮಾಡುತ್ತಾರೆ. ಸಾಕಷ್ಟು ಪ್ರಕಾಶಕರೂ 'ಬರ್ಕೊಡಿ ಬರ್ಕೊಡಿ' ಎಂದು ಕೇಳಲು ಬರುತ್ತಿದ್ದಾರೆ. ಆದರೆ ನನಗೆ ಜಗತ್ತನ್ನು ತೋರಿಸಿದ ಪತ್ರಿಕೋದ್ಯಮವೇ ನನ್ನ ಬರವಣಿಗೆಗೆ ಮಿತಿ ಹಾಕುತ್ತಿದೆ. ಪತ್ರಿಕೆಗೆಂದೇ ಬರೆಯುತ್ತಿರುವ ನಮ್ಮಂಥವರಿಗೆ ಏನಾಗುತ್ತದೆಂದರೆ, ಇಂದು ಸಂಜೆ ಬರೆದದ್ದು ನಾಳೆ ಬೆಳಿಗ್ಗೆ ಮುದ್ರಿತ ಅಕ್ಷರಗಳ ರೂಪದಲ್ಲಿ ಮೂರು ಲಕ್ಷ ಜನರನ್ನು ತಲುಪಿರುತ್ತದೆ. ಬಿಸಿಲೇರುವ ಮೊದಲೇ ಕೆಲವರಾದರೂ ಪ್ರತಿಕ್ರಿಯೆ ಸೂಚಿಸಿರುತ್ತಾರೆ. ಬರವಣಿಗೆಗೂ ಪ್ರಕಟನೆಗೂ ಪ್ರತಿಕ್ರಿಯೆಗೂ ಹೆಚ್ಚೆಂದರೆ ಹತ್ತೇ ದಿನಗಳ ಅಂತರವಿರುತ್ತದೆ. ಅಂಥ instant gratificationನ ಸುಳಿಯಲ್ಲಿ ಸಿಕ್ಕಿಬಿದ್ದವರು ನಾವು. ಪುಸ್ತಕ ಪ್ರಕಾಶನದ ವಿಷಯ ಹಾಗಲ್ಲ. ಪ್ರಕಾಶಕರು ಇಂದು ಹಸ್ತಪ್ರತಿಯನ್ನು ಒಯ್ದು, ಆರು ತಿಂಗಳ ಮೇಲೆ ಪ್ರೂಫ್ ಕೊಟ್ಟು ಆರು ತಿಂಗಳ ಮೇಲೆ ಚಿತ್ರ ಬರೆಸಿ, ಒಂದೂವರೆ ವರ್ಷಗಳ ನಂತರ ಬರೀ ಒಂದು ಸಾವಿರ ಪ್ರತಿಗಳನ್ನು ಹಾಕಿ, ಅದರ ಇನ್ನೂರೈವತ್ತು ಪ್ರತಿಗಳನ್ನು ನಾನೇ ಖರೀದಿಸಿ, ಅದು ಪ್ರಕಟವಾದ ಒಂದೂವರೆ ತಿಂಗಳಲ್ಲಿ....

'ಸೆಕೆಂಡ್ ಹ್ಯಾಂಡ್ ಬುಕ್ ಸ್ಟಾಲ್ ನಲ್ಲಿ ಚೀಪಾಗಿ ಸಿಗ್ತು, ಕೊಂಡ್ಕೊಂಡೆ ಸಾರ್!' ಎನ್ನುತ್ತ ಮುಗ್ಧ ನಗೆಯೊಂದಿಗೆ ಹಿರಿಯರು ನನ್ನನ್ನು ಮೆಚ್ಚಿಸಲೆಂದು ಬಂದಾಗ ರಪ್ ಎಂದು ಐಸ್‌ಕ್ರೀಮ್ ಬಟ್ಟಲನ್ನು ಮುಖಕ್ಕೆ ಯಾರೊ ರಾಚಿದಂತಾಗುತ್ತದೆ.

ಸಿಹಿಗನ್ನಡಂ ಗೆಲ್ಗೆ!

# ವಿವಾದ ಸೃಷ್ಟಿಗಾಗಿ ಬರೆಯುವುದಿಲ್ಲ

● ಫಕೀರ್ ಮುಹಮ್ಮದ್ ಕಟ್ಪಾಡಿ

ಬರಹಗಾರನಾಗಬೇಕೆಂಬ ಆಸೆ ನನ್ನಲ್ಲಿ ಹುಟ್ಟಿಕೊಂಡದ್ದು ಯಾವಾಗ ಎಂಬುದು ನನಗೆ ಗೊತ್ತಿಲ್ಲ. ನನ್ನ ಕುಟುಂಬದಲ್ಲಿ ಸಾಹಿತ್ಯದ ವಾತಾವರಣವಿರಲಿಲ್ಲ. ಬರಹಗಾರರು ಬಿಡಿ, ಸಾಹಿತ್ಯದ ಪರಿಚಯವಿದ್ದವರಾಗಲಿ, ಅಭಿರುಚಿ ಇದ್ದವರಾಗಲಿ ಯಾರೂ ಇರಲಿಲ್ಲವೆಂದೇ ಹೇಳ ಬೇಕಾಗುತ್ತದೆ. ಸಣ್ಣಕತೆಗಳ ಜೊತೆಗಿನ ನನ್ನ ಸಂಬಂಧ ಬರಿಯ ಪ್ರತಿಭೆ, ಕತೆ ಕಟ್ಟುವ ಸೃಜನಶೀಲ ಪ್ರವೃತ್ತಿಯ ಭಾಗಕ್ಕೆ ಮಾತ್ರ ಸೀಮಿತಗೊಂಡಿಲ್ಲ; ನನ್ನ ಬಾಲ್ಯದ ಪರಿಸರ, ಅನುಭವ, ಆಸಕ್ತಿ, ಬದುಕಿನಲ್ಲಿ ಎದುರಾದ ಹಲವು ಒತ್ತಡಗಳು ಅತ್ಯಂತ ಪ್ರಮುಖವಾದ ಪಾತ್ರವಹಿಸಿವೆ. ಕಥೆಗಳ ಉದ್ದೇಶ ಬರಿಯ ಮನೋರಂಜನೆ ಮಾತ್ರವಲ್ಲವೆಂಬ ಎಚ್ಚರಿಕೆ ಮೊದಲಿನಿಂದಲೇ ನನ್ನಲ್ಲಿ ಬೆಳೆದುಬಂದಿತ್ತು. ನನ್ನ ವಿದ್ಯಾರ್ಥಿ ಜೀವನದಲ್ಲಿ ಬಹಳಷ್ಟು ಪುಸ್ತಕಗಳನ್ನು ಓದುತ್ತಿದ್ದೆ. ಬಿ.ಪಿ. ಕಾಳೆ, ಎನ್. ನರಸಿಂಹಯ್ಯ, ಮಾ.ಭಿ. ಶೇಷಗಿರಿರಾವ್ ಮುಂತಾದವರ ಪತ್ತೇದಾರಿ ಕಾದಂಬರಿಗಳನ್ನು ಓದುವ ಮೂಲಕ ಮೂಡಿದ ಆಸಕ್ತಿ, ಬೆಳೆದದ್ದು ತರಾಸು, ಅನಕೃ, ಕೃಷ್ಣಮೂರ್ತಿ ಪುರಾಣಿಕ, ತ್ರಿವೇಣಿ, ಚಡಗರ ಕಾದಂಬರಿಗಳನ್ನು ಓದುವ ಮೂಲಕ. ಕಥೆಗಾರನಾಗಿ ರೂಪುಗೊಳ್ಳಲು ಬಹುಶಃ, ಕುವೆಂಪು, ಯು.ಆರ್. ಅನಂತಮೂರ್ತಿ, ಕಾರಂತರ ಕಾದಂಬರಿಗಳು, ತೇಜಸ್ವಿ ದೇವನೂರು, ಲಂಕೇಶ್, ಶ್ರೀಕೃಷ್ಣ ಆಲನಹಳ್ಳಿ, ವೈಕಂ ಮುಹಮ್ಮದ್ ಬಶೀರ್ ರವರ ('ಪಾತುಮ್ಮನ ಆಡು', 'ನನ್ನಜ್ಜನಿ ಗೊಂದಾನೆಯಿತ್ತು') ಕೃತಿಗಳು, ಇಸ್ಮತ್ ಜುಗ್ತಾಯಿ, ಸಾದತ್ ಹುಸೇನ್ ಮಾಂಟೋರವರ ಕೃತಿಗಳು ಮುಖ್ಯವಾಗಿದ್ದವು.

## ಬಾಲ್ಯದ ಅನುಭವಗಳು

ಸಣ್ಣಕಥೆಗಾರನಾಗಿ ನನ್ನ ಹುಟ್ಟು ಅನಿರೀಕ್ಷಿತ. ಭಾರತದ ಉದ್ದಗಲದಲ್ಲೂ ಕಂಡು ಬರುವ ಕೆಳ ಮಧ್ಯಮ ವರ್ಗದ ಕುಟುಂಬಗಳಲ್ಲಿನ ಅನುಭವಗಳೊಂದಿಗೆ ನನ್ನ ಬಾಲ್ಯವು ಕಳೆಯಿತು. ಊಟಕ್ಕೆ, ಬಟ್ಟೆಗೆ ಇದ್ದಾಗ ಉಂಡು ಉಟ್ಟು ಸಂಭ್ರಮಿಸುವುದು, ಇಲ್ಲವಾದಾಗ ಹೊರ ಜಗತ್ತಿಗೆ ತಿಳಿಯದಂತೆ ಎಲ್ಲವನ್ನೂ ನಗುಮೊಗದ ಹಿಂದೆ ಅಡಗಿಸಿಡುವುದು. ೧೯೬೦-೬೫ ರ ನಡುವೆ ಉಂಟಾದ ಅವಶ್ಯಕ ವಸ್ತುಗಳ ಬೆಲೆಯೇರಿಕೆಯ ಬಿಸಿ ಎಲ್ಲ ಹಳ್ಳಿಯಲ್ಲೂ ವ್ಯಾಪಕವಾಗಿ ಆವರಿಸಿತ್ತು. ಹೆಚ್ಚುಕಮ್ಮಿ ಅದೇ ಸಮಯದಲ್ಲಿ ನಮ್ಮ ಹಳ್ಳಿಗೆ ಬಂದೆರಗಿದ ಸಿಡುಬು ರೋಗ, ಹಲವಾರು ಜನರನ್ನು ಬಲಿ ತೆಗೆದುಕೊಂಡಿತ್ತು. ದೇವಿ ಹಾಕಿ ಕೊಳ್ಳಲು, ಚುಚ್ಚುಮದ್ದು ಹಾಕಿಕೊಳ್ಳಲು ಭಯ ಪಡುತ್ತಿದ್ದ ಜನ, ಈ ಕಾಯಿಲೆಯ ಬಗ್ಗೆ ಹಲವಾರು ಕತೆಗಳನ್ನು ಹೇಳುತ್ತಿದ್ದರು. ಈ ಸಂದರ್ಭದಲ್ಲಿ ಊರ ಭತ್ತದ ಗದ್ದೆಯಲ್ಲಿ ಕೆಲಸ ಮಾಡುವ ಕೂಲಿಯಾಳುಗಳು ಯಾವುದೇ ರಾಜಕೀಯ ಪ್ರೇರಣೆಯಿಲ್ಲದೆ ಸ್ವಯಂ ಪ್ರೇರಣೆಯಿಂದ

ಕೂಲಿ ಹೆಚ್ಚಿಸಬೇಕೆಂದು ಭತ್ತದ ಗದ್ದೆಗಳಿಗೆ ಇಳಿಯದೆ ಪ್ರತಿಭಟಿಸಿದ್ದರು. ಒಮ್ಮೆ ನಾವು ಸಂಜೆ ಶಾಲೆ ಬಿಟ್ಟು ಬರುವಾಗ ದಾರಿಯಲ್ಲಿ ಗದ್ದೆಯಲ್ಲಿ ಕೆಲಸ ಮಾಡುವ ಕೂಲಿಯಾಳು ಕಚ್ಚಾದ ಕಂಕುಳಲ್ಲಿ ಭತ್ತ ತುಂಬಿದ ಡಬ್ಬಿಯನ್ನಿಟ್ಟುಕೊಂಡು, ನಮಗೆಲ್ಲಾ ಕಾಳುಗಳನ್ನು ತೋರಿಸುತ್ತಾ ಅಳುತ್ತಾ ಅದನ್ನು ಕೂಲಿಯಾಗಿ ನೀಡಿದ ಧನಿಗಳಿಗೆ ಬಯ್ಯುತ್ತಾ ನಡೆಯುತ್ತಿದ್ದದ್ದು ಇನ್ನೂ ಹಸಿರಾದ ನೆನಪು.

ಬಿದಿರ ಮೆಳೆಯಲ್ಲಿ ಬಿದ್ದ ಕಾಳುಗಳನ್ನು ಬೇಯಿಸಿದ ಅನ್ನ, ಗೆಣಸು, ಹಲಸಿನ ಬೀಜ, ಹುಣಸೆ ಬೀಜಗಳನ್ನು ಬೇಯಿಸಿ, ಸುಟ್ಟು ತಿಂದು ಹಸಿವನ್ನು ತಣಿಸಿಕೊಳ್ಳುವ ಜನಗಳು, ಹಸಿವೆಂದು ಹಟಹಿಡಿದು ಕೂಗಿದ ಮಕ್ಕಳ ಬೆನ್ನಿಗೆ ಹುಣಸೆ ಬರಲಿನಿಂದ ಏಟು ಬಿಗಿದು ತಾವೂ ಅಳುತ್ತಿರುವ ತಾಯಂದಿರನ್ನು ನಮ್ಮ ಸುತ್ತಲೂ ಕಂಡಿದ್ದೆ. ನಮ್ಮ ಮನೆಯ ಪರಿಸ್ಥಿತಿಯು ಉಳಿದವರಿಗಿಂತ ಭಿನ್ನವಾಗೇನೂ ಇರಲಿಲ್ಲ. ರೂ. ೧೨೦ ಸಂಬಳ ತಿಂಗಳಿಗೆ ಪಡೆಯುತ್ತಿದ್ದ ನನ್ನ ತಂದೆ ಮಸೀದಿಯಲ್ಲಿ 'ಕಾಝಿ' ಮತ್ತು ಖತೀಬ್' ಆಗಿ ಕೆಲಸ ಮಾಡುತ್ತಿದ್ದು, ಎಂಟು ಮಕ್ಕಳ ಕುಟುಂಬವನ್ನು ಹಾಗೂ ಹೀಗೂ ಎಳೆದಾಡಿ ಬದುಕನ್ನು ನಡೆಸಿ ಕೊಡುವವಳು ನಮ್ಮಮ್ಮ. ಪಾರಮಾರ್ಥಿಕ ಮೌಲ್ಯಗಳ ಉದಾತ್ತತೆ, ಶ್ರೇಷ್ಠತೆಯ ಬಗ್ಗೆ ಬೋಧಿಸುತ್ತಾ, ಲೌಕಿಕ ಪ್ರಪಂಚವು ನಶ್ವರವೆಂದೂ, ಪಾರಮಾರ್ಥಿಕವೇ ಶಾಶ್ವತವೆಂದು ಉಪದೇಶ ಮಾಡುತ್ತಾ ಕಾಲ ಕಳೆಯುತ್ತಿದ್ದ ಅಪ್ಪನಿಗೆ, ಅವನ ಕುರ್‌ಆನ್, ಹದೀಸ್‌ಗಳ ಅಧ್ಯಯನಕ್ಕೆ ಕುಟುಂಬದ ರಗಳೆ ಅಡ್ಡಿಬರದಂತೆ ಹೊಂದಿಸಿಕೊಂಡು ಮನೆವಾರ್ತೆಯನ್ನು ನೋಡಿಕೊಳ್ಳುತ್ತಿದ್ದವಳು ಅಮ್ಮ. ಇಂತಹ ಪರಿಸ್ಥಿತಿಯಲ್ಲೂ ಮನೆಯಲ್ಲಿ ಇದ್ದದ್ದನ್ನು ನೆರೆಹೊರೆಯ ಹಿಂದುಗಳೊಂದಿಗೆ ಹಂಚಿ ತಿನ್ನುವ ನನ್ನ ಹೆತ್ತವರ ಗುಣ ನನ್ನನ್ನು ಪರೋಕ್ಷವಾಗಿ ರೂಪಿಸಲು ಸಹಾಯವಾಯಿತೆಂದುಕೊಂಡಿದ್ದೇನೆ. ನನ್ನ ಕತೆಗಳಲ್ಲಿ ಬಡತನವೇ ಹೆಚ್ಚು ಕಂಡುಬರುತ್ತದೆ ಎನ್ನುವ ಓದುಗರಿಗೆ ನನ್ನ ಬದುಕಿನ ಈ ಹಿನ್ನೆಲೆಯನ್ನು ತೆರೆದಿಡಲು ಬಯಸುತ್ತೇನೆ. ನನ್ನನ್ನು ಎಡಪಂಥೀಯನೆಂದೋ ಮಾರ್ಕ್ಸಿಸ್ಟ್ ಬರಹಗಾರನೆಂದೋ ವಿಮರ್ಶಕರು ಬರೆದಿರುವುದನ್ನು ನಾನು ವಿರೋಧಿಸಿಲ್ಲ. ಆದರೂ ಮಾರ್ಕ್ಸಿಸಂ ಅನ್ನು ನಾನು ಇಂದಿಗೂ ಓದಿ ತಿಳಿದುಕೊಂಡವನಲ್ಲವೆಂದು ಹೇಳಲು ಇಷ್ಟಪಡುತ್ತೇನೆ. ಬದುಕಿನಲ್ಲಿ ಕಂಡ ಸತ್ಯವನ್ನಷ್ಟೇ ಕಥೆಗಳ ಮೂಲಕ ಹೇಳಿದ್ದೇನೆಯೇ ಹೊರತು, ಯಾವ ರಾಜಕೀಯ ತತ್ವಗಳಿಗೂ ಬದ್ಧನಾಗಿ ಅಥವಾ ಪ್ರಜ್ಞಾಪೂರ್ವಕವಾಗಿ ಬರೆದಿಲ್ಲ. ನಾನು ಕಂಡು ಅನುಭವಿಸಿದ ಬದುಕು ಮತ್ತು ಮಾರ್ಕ್ಸ್‌ನ ತತ್ವಗಳು ಒಂದೇ ಎಂದಾದರೆ ಆ ತತ್ವಗಳ ಬಗ್ಗೆ ನನಗೆ ಗೌರವ ಮೂಡುತ್ತದೆ.

**ಪರಿಸರ**

ಮಸೀದಿಯಲ್ಲಿ 'ಕಾಝಿ'ಯಾಗಿದ್ದ ನಮ್ಮ ಅಪ್ಪ ತನ್ನ ಮನೆಯನ್ನು ಮುಸ್ಲಿಮ್ ಕೇರಿಯಲ್ಲಿ ಮಾಡದೆ ಹಿಂದುಗಳು ಹೆಚ್ಚಿನ ಸಂಖ್ಯೆಯಲ್ಲಿರುವ ಕೋಟೆ ಗ್ರಾಮದಲ್ಲಿ ಮಾಡಿದ್ದು, ನನ್ನ ಮಟ್ಟಿಗೆ ಒಂದು ಅರ್ಥಪೂರ್ಣ ಕೊಡುಗೆಯಾಗಿತ್ತು. ನಮ್ಮ ಮನೆ ಈಗಲೂ ಇರುವುದು

ಕಟ್ಪಾಡಿಯ ಕೋಟೆ ಗ್ರಾಮದಲ್ಲಿ. ಇಲ್ಲಿರುವ ನಾಲ್ಕುನೂರಕ್ಕೂ ಹೆಚ್ಚಿನ ಮನೆಗಳ ಪೈಕಿ ನಮ್ಮದೂ ಸೇರಿದಂತೆ ಮೂರು ಮನೆಗಳು ಮಾತ್ರ ಮುಸ್ಲಿಮರಿಗೆ ಸೇರಿದ್ದು. ಹೆಚ್ಚಿನವರು ಕೆಳಜಾತಿಗಳೆಂದು ಪರಿಗಣಿಸಿಲ್ಪಟ್ಟ ಹಿಂದೂಗಳು ಇಲ್ಲಿ ವಾಸಿಸುತ್ತಾರೆ. ಒಂದಷ್ಟು ದೂರದಲ್ಲಿ ಬ್ರಾಹ್ಮಣರ ಕೇರಿ ಇದೆ. ಉಪ್ಪುನೀರು ಸದಾಕಾಲ ತುಂಬಿರುವ ಉದ್ಯವರ ಹೊಳೆಯು ನಮ್ಮ ಗ್ರಾಮವನ್ನು ಸುತ್ತಿ ಹರಿಯುವುದರಿಂದ, ಹೆಚ್ಚಿನ ಶೂದ್ರರ ಮನೆಯ ಬಾವಿಯ ನೀರು ಸೆಖೆಗಾಲದಲ್ಲಿ ಒಗರಾಗಿ ಪರಿವರ್ತನೆಯಾಗುತ್ತದೆ. ಬ್ರಾಹ್ಮಣರ ಕೇರಿಯಲ್ಲಿರುವ ಅನೇಕರ ಬಾವಿಗಳು ಸಿಹಿನೀರಿನವುಗಳಾದರೂ ಶೂದ್ರರು ಬಾವಿಯನ್ನು ಮುಟ್ಟುವಂತಿಲ್ಲ. ನಮ್ಮ ಮನೆಯ ಮುಂದಿನ ಬಾವಿಯು ಸಿಹಿನೀರಿನ ಬಾವಿಯಾದದ್ದರಿಂದ ನೀರಿಗಾಗಿ ದೂರದೂರದಿಂದ ಕೊಡ ಹೊತ್ತು ಹೆಂಗಸರು ನಮ್ಮಲ್ಲಿಗೆ ಬರುತ್ತಿದ್ದರು. 'ನೀರಿಗೆಂತಾ ಜಾತಿ? ಕುಡಿಯೋ ನೀರಿಗೆ ಯಾರೂ ಅಡ್ಡಿ ಮಾಡಕೂಡದು' ಎನ್ನುವ ಅಮ್ಮ ನನಗೆ ಬದುಕಿನ ಮೊತ್ತಮೊದಲ ಪಾಠ ಕಲಿಸಿಕೊಟ್ಟವಳು. ಕಟ್ಟಾ ಮುಸ್ಲಿಮ್ ಸಂಪ್ರದಾಯಗಳನ್ನು ಶ್ರದ್ಧೆಯಿಂದ ಆಚರಿಸುವ ನನ್ನ ಅಮ್ಮ, ಶೂದ್ರರ ಗರ್ಭಿಣಿ ಹೆಣ್ಣು ನೀರಿಗೆಂದು ಬಂದಾಗ ತುಳು ನಾಡಿನ ಸಂಪ್ರದಾಯದಂತೆ, ತಲೆಗೆ ತೆಂಗಿನೆಣ್ಣೆ ಹಚ್ಚಿ, 'ನಿನ್ನ ತಲೆ ತಂಪಾಗಿರಲಮ್ಮ' ಎಂದು ಸುಖ ಹೆರಿಗೆಯನ್ನು ಹಾರೈಸುವಳು. ನೆರೆಹೊರೆಯ ಚಿಕ್ಕ ಮಕ್ಕಳಿಗೆ ಬರುವ ಜ್ವರ, ಕೆಮ್ಮು, ಬೇಧಿ ಮುಂತಾದ ಚಿಕ್ಕಪುಟ್ಟ ಕಾಹಿಲೆಗಳಿಗೆ ಅದ್ಯಾವದೋ ಯುನಾನಿಯೋ ಆಯುರ್ವೇದವೋ, ಅವಳಿಗಷ್ಟೇ ತಿಳಿದ ಮದ್ದಿನ ಚಿಕ್ಕಚಿಕ್ಕ ಉಂಡೆಯನ್ನು ಸಂಬಾರಬಳ್ಳಿಯ ಎಲೆಯ ರಸದಲ್ಲೋ, ಈರುಳ್ಳಿಯ ರಸದಲ್ಲೋ ಇಲ್ಲವೇ ತುಳಸೀ ದಳದ ರಸದಲ್ಲೋ ಕಾಹಿಲೆಗೆ ತಕ್ಕಂತೆ ತೇಯ್ದು ಕೊಡುವಂತೆ ಹೇಳುವಳು. ಅವರಿವರ ಸುಖಕಷ್ಟದ ಸಂಗತಿಗಳನ್ನು ಕೇಳುತ್ತಾ ಐದು ಹೊತ್ತು ತಪ್ಪದೆ ನಮಾಜು ಮಾಡುತ್ತಾ ಮನೆಯೊಳಗೆಯೇ ಇದ್ದರೂ, ಸಾಕಷ್ಟು ಗೆಳತಿಯರನ್ನು ಸಂಪಾದಿಸಿಕೊಂಡಿದ್ದಳು. ಊರ ಪ್ರತಿಷ್ಠಿತ ಮನೆಯ ಹೆಂಗಸರು ಬಿಡುವಾದಾಗಲೆಲ್ಲ ನಮ್ಮ ಮನೆಗೆ ಬಂದು ಅಮ್ಮನೊಂದಿಗೆ ಮಾತಾಡುತ್ತಾ ಕೂರುವರು. 'ನಾವು ಕೂಡಾ ನಿಮ್ಮ ಹಾಗೆಯೇ, ಮನೆ ಬಿಟ್ಟು ಎಲ್ಲೂ ಹೋಗೋದಿಲ್ಲ, ನೋಡಿ...' ಎನ್ನುತ್ತಿದ್ದರು.

ಸುತ್ತಮುತ್ತಲೆಲ್ಲಾದರೂ ಯಕ್ಷಗಾನದ ಬಯಲಾಟ, ಉತ್ಸವ, ಭೂತಕೋಲ ನಡೆಯುತ್ತಿದ್ದರೆ, ನೆರೆಹೊರೆಯ ಮಕ್ಕಳ ಜೊತೆ ನಾನೂ ಹೋಗುತ್ತೇನೆಂದು ಹಟ ಹಿಡಿಯುತ್ತಿದ್ದೆ. 'ಅದಕ್ಕೆಲ್ಲ ಹೋಗೂದಕ್ಕೆ ನೀನೇನೂ ಹಿಂದುವೊ?' ಎಂದು ಹೆತ್ತವರು ಒಮ್ಮೆಲೆ ಒಪ್ಪದಿದ್ದರೂ, ಹಟಹಿಡಿದು ಒಪ್ಪಿಸುತ್ತಿದ್ದೆ. ಕುರ್‌ಆನ್ ಕಲಿಯುವ ಮದ್ರಸಾ ಮತ್ತು ಹಿಂದುಸ್ಥಾನಿ ಶಾಲೆಯ ಪಾಠಗಳಿಂದ ಬಿಡುವು ಸಿಕ್ಕಾಗಲೆಲ್ಲ ನೆರೆಮನೆಯ ದೇಜು ಮಾಸ್ತರರ ಮನೆಯಲ್ಲಿ ಸಾಗುವ ಮಹಾಭಾರತ ರಾಮಾಯಣ ಗ್ರಂಥಗಳನ್ನು ಓದುತ್ತಿದ್ದೆ. ಮೊಗವೀರ ಮಕ್ಕಳ ಜೊತೆಗೆ ದೋಣಿಯಲ್ಲಿ ಹೋಗಿ ಉದ್ಯಾವರ ಹೊಳೆಯಲ್ಲಿ ಗಾಳ ಹಾಕಿ ಮೀನು ಹಿಡಿಯುವುದನ್ನು ಕಲಿತಿದ್ದೆ. ಭತ್ತದ ಗದ್ದೆಗೆ ನೀರು ಹಾಯಿಸುವ ಏತದ ಕಟ್ಟೆಯಲ್ಲಿ ನೀರು ಹಾಯಿಸುವುದನ್ನೂ ಕಲಿತೆ.

ಮನೆಯ ಸಮೀಪದಲ್ಲಿರುವ ದೊಡ್ಡ ಹುಣಸೇಮರ. ಅದರಲ್ಲಿ ವಾಸಿಸಿವೆ ಎನ್ನಲಾದ ನೂರಾರು ಹೆಸರಿನ ಭೂತಪ್ರೇತಗಳು. ನಮ್ಮ ಪುಟ್ಟ ತೆಂಗಿನ ತೋಟಕ್ಕೆ ತಾಗಿರುವ ನಾಗ ಬನ. ನಾಗರ ಪಂಚಮಿಯ ದಿನ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಅದಕ್ಕೆ ಕೆಳಜಾತಿಯ ಹೆಂಗಸರು ಪೂಜೆ ಮಾಡಿಸುತ್ತಿದ್ದರು. ಬನದ ತುಸುದೂರದಲ್ಲಿ ನಿಂತು ಈ ಹೆಂಗಸರು, ಮಕ್ಕಳು ಕೈಮುಗಿದು ನಿಂತಿರುತ್ತಿದ್ದರು. ನಾವು ತೋಟದಲ್ಲಿ ಚೆಂಡಾಟ ಆಡುತ್ತಿರುವಾಗ ಅಕಸ್ಮಾತ್ತಾಗಿ ಚೆಂಡು ಬನದೊಳಗೆ ಹೋದರೆ ಗೆಳೆಯರು ನನ್ನನ್ನು ಬನದೊಳಗೆ ಹೋಗು ವಂತೆ ಹುರಿದುಂಬಿಸುತ್ತಿದ್ದರು. "ನಾವು ಹೋದ್ರೆ ನಾಗನಿಗೆ ಅಪವಿತ್ರವಾಗಿ ಸಿಟ್ಟು ಬರುತ್ತದೆ, ನಮ್ಮನ್ನು ಕೊಲ್ಲುತ್ತದೆ. ನೀನು ಹೋದರೆ ಏನೂ ಆಗುವುದಿಲ್ಲ"ವೆಂದು ಅವರು ಹೇಳುತ್ತಿ ದ್ದರು. ಭಯವಾದರೂ ಚೆಂಡಾಟದ ಆಸೆಯಿಂದ ಬನಹೊಕ್ಕು ಚೆಂಡನ್ನು ಹೆಕ್ಕಿ ತರುತ್ತಿದ್ದೆ. ವಿಷ ಸರ್ಪಗಳ ವಾಸಸ್ಥಾನವೆನಿಸಿದ ನಾಗಬನದೊಳಗೆ ಅವರು ಹೋದರೆ ಅಪವಿತ್ರವಾಗು ವುದು. ನಾನು ಹೋದರೆ ಅಪವಿತ್ರವಾಗದೆ ಇರುವುದು ಯಾಕೆಂದು ತಿಳಿಯದ ಕಗ್ಗಂಟಾಗಿತ್ತು.

ಮನೆಯ ಪರಿಸರದಿಂದಾಗಿ ಮುಸ್ಲಿಮ್ ಬದುಕನ್ನು ಇಡಿಯಾಗಿ ಅನುಭವಿಸುತ್ತಾ, ಹಿಂದೂ, ಕ್ರೈಸ್ತ ಧರ್ಮೀಯರ ಬದುಕನ್ನು ತಿಳಿದುಕೊಳ್ಳುವ ಅವಕಾಶ ದೊರೆತಿತ್ತು. ಜೊತೆಗೆ ಧರ್ಮವನ್ನು ಮೀರಿದ ವಾಸ್ತವತೆಯ ದರ್ಶನವೂ ನನಗಾಗಿತ್ತು. ನಾವು ನಂಬದ ಭೂತ ಬೊಬ್ಬರ್ಯ ನಮ್ಮನ್ನೂ ಸೇರಿದಂತೆ ಇಡೀ ಗ್ರಾಮವನ್ನು ಮಾರಿ ಪ್ರವೇಶಿಸದಂತೆ ಕಾವಲು ಕಾಯುತ್ತದೆ ಎಂದು ಓರಗೆಯ ಹಿಂದೂ ಗೆಳೆಯರು ಹೇಳಿದಾಗ ಆಶ್ಚರ್ಯಪಟ್ಟಿದ್ದೆ. ಈ ಬೊಬ್ಬರ್ಯ ಭೂತವು ಕೋಲದ ಸಂದರ್ಭದಲ್ಲಿ ತನ್ನ ಹೆತ್ತವರು ಮುಸ್ಲಿಮ್ ದಂಪತಿಗಳೆಂದು ಹೇಳಿಕೊಂಡು ಅಭಿಮಾನ ಪಡುವುದನ್ನು ಕಂಡು ವಿಚಿತ್ರ ಅನುಭವವಾಗಿತ್ತು. ಭಾರತೀಯ ಸಂಸ್ಕೃತಿಯ ಮೂಲರೂಪ ಪರಿಚಯವಾದದ್ದು ನನಗೆ ಇಲ್ಲಿಯೆ. ಬಹು ಸಂಖ್ಯಾತರಾದ ಹಿಂದೂಗಳ ಪ್ರೀತಿ ವಿಶ್ವಾಸವನ್ನು ನಾವು ಇಡಿಯಾಗಿ ಸವಿಯುತ್ತಿದ್ದ ಹಳ್ಳಿಯ ವಾತಾವರಣಕ್ಕೆ ಈ ಹಿನ್ನೆಲೆಯೇ ಕಾರಣವಾಗಿದ್ದರೂ, ಇತ್ತೀಚೆಗಷ್ಟೇ ಬೊಬ್ಬರ್ಯನ ಭೂತಕೋಲದ ಚಪ್ಪರದ ಮೇಲೆ ಹಾರಾಡುವ ಭಗವಾಧ್ವಜದೊಂದಿಗೆ ಪರಸ್ಪರ ಅವಿಶ್ವಾಸದ ಹೊಗೆ ಆವರಿಸಿಕೊಂಡಿರುವುದು ಕಂಡು ಆತಂಕಗೊಂಡಿದ್ದೇನೆ.

ಧರ್ಮನಿಷ್ಠಳಾದ ನನ್ನ ಅಮ್ಮನಿಗೆ ಬಕ್ರೀದ್, ರಮ್ಜಾನ್ ಹಬ್ಬಗಳಲ್ಲಿ ನೆರೆಹೊರೆಯ ಹಿಂದೂಗಳಿಗೆ ಸಿಹಿತಿಂಡಿ, ತುಪ್ಪದನ್ನ, ಮಾಂಸದ ಅಡುಗೆಯನ್ನು ಹಂಚುವುದು ಕೂಡಾ ಹಬ್ಬದ ಆಚರಣೆಯ ಭಾಗವೆಂಬಂತೆ ಆಗಿತ್ತು. ಜೊತೆಗೆ ದೀಪಾವಳಿ, ಚೌತಿ ಅಷ್ಟಮಿಯ ಹಬ್ಬಗಳಲ್ಲಿ ನೆರೆಹೊರೆಯವರು ಕೊಡುವ ತಿಂಡಿಗಳನ್ನು ನಮಗೆಲ್ಲರಿಗೂ ಹಂಚಿ ಸಂಭ್ರಮ ಪಡುತ್ತಿದ್ದಳು. 'ಕಡಲ ತೀರದಲ್ಲಿ ಬೆಂಕಿ ಬಿದ್ದದ್ದು' ಕತೆಯಲ್ಲಿ ಬಿದ್ದ ಬಡತನದ ಬೆಂಕಿ ಯೂಸೂಫನ ಕುಟುಂಬವನ್ನೂ ಅಣ್ಣಯ್ಯನ ಕುಟುಂಬಗಳನ್ನು ಏಕಕಾಲಕ್ಕೆ ಮುತ್ತಿಕೊಳ್ಳು ತ್ತದೆ. 'ಹತ್ಯೆ' ಕತೆಯಲ್ಲಿ ಬರುವ ಮುಸ್ಲಿಮ್ ಮಕ್ಕಳಂತೆಯೇ ನಮ್ಮಮ್ಮ ಸಾಕಿದ ಪ್ರೀತಿಯ ದನವನ್ನು ದೀಪಾವಳಿಯ ಗೋಪೂಜೆಯ ದಿನ ಮೀಯಿಸಿ, ಸಿಂಗರಿಸಿ, ಅದಕ್ಕೆ ಅಮ್ಮ ಮಾಡುವ ಅರಸಿನದೆಲೆಯ ಕಡುಬನ್ನು ತಿನ್ನಿಸಿ, ಸಂಭ್ರಮಪಡುತ್ತಿದ್ದೆವು.

**ಪೇಟೆಯ ಪ್ರಭಾವ**

ಹಳ್ಳಿಯ ವಾತಾವರಣದಲ್ಲಿ ಜನರ ಮಧ್ಯೆ ಇರುವ ಸ್ನೇಹ ವಿಶ್ವಾಸವನ್ನು ಕಂಡ ನನಗೆ ಪೇಟೆಯಲ್ಲಾದ ಅನುಭವವೇ ಬೇರೆ. ಪೇಟೆಯ ಶಾಲೆಯ ಏಳನೆಯ ತರಗತಿಯಲ್ಲಿ ಓದುವಾಗ ನನ್ನ ಸಹಪಾಠಿಗಳು ನಮ್ಮ ಜಾತಿ ಫಸ್ಟ್. ನಿಮ್ಮ ಜಾತಿ ಸೆಕೆಂಡ್, ಅವರದ್ದು ಥರ್ಡ್, ಬ್ಯಾರಿಗಳದ್ದು ಲಾಸ್ಟ್ ಜಾತಿ ಎನ್ನುವಾಗ ನಾನು ಬೆಪ್ಪನಂತೆ ಅವರ ಮಾತುಗಳನ್ನು ಕೇಳಿಕೊಳ್ಳುತ್ತಿದ್ದೆ. ಜೊತೆಗೆ ಅದೇ ಕ್ಲಾಸ್‌ನಲ್ಲಿ ರಜೆಯ ಅನುಭವವನ್ನು ಬರೆದು ತರಲು ಹೇಳಿದಾಗ, ಪ್ರಬಂಧ ರೂಪದಲ್ಲಿ ನಾನೊಬ್ಬನೇ ಬರೆದು ತಂದದ್ದನ್ನು ಅಧ್ಯಾಪಕರು ಓದಿ, "ಬ್ಯಾರಿ,.. ನೀನಾ ಬರ್ದದ್ದು?" ಎಂದು ಉದ್ಗಾರವೆತ್ತಿದ್ದರು. ಬೇರಿನ್ನೇನೂ ಹೇಳದ ಅವರ ಮಾತನ್ನು ಕೇಳಿ ಬ್ಯಾರಿ ಕನ್ನಡದಲ್ಲಿ ಬರೆಯುವುದು ತಪ್ಪೇನೋ ಅಂತ ನನಗನ್ನಿಸಿತ್ತು. ಇದರಿಂದಾಗಿ ಕಾಲೇಜಿನಿಂದ ಹೊರಬರುವ ತನಕವೂ ಬರವಣಿಗೆ ಎಂದರೆ ಒಂದು ತರದ ಅವ್ಯಕ್ತ ಭಯ ಆವರಿಸಿತ್ತು. ಕಾಲೇಜಿನಲ್ಲಿ ಕೈಬರಹದ ಪತ್ರಿಕೆಗೆ ಕೂಡಾ ಬರೆಯುವ ಧೈರ್ಯ ಮೂಡಲಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಅದರಲ್ಲೂ ಮುಖ್ಯವಾಗಿ ಅಧ್ಯಾಪಕರಲ್ಲಿ ಕಂಡು ಬಂದ ಕೋಮುವಾದದ ಮೂಲರೂಪ ಎಷ್ಟು ಅಪಾಯಕಾರಿಯಾದದ್ದೆಂದು ನನಗೆ ತಿಳಿದದ್ದು ತೀರಾ ಇತ್ತೀಚೆಗೆ.

ಕಾಲೇಜಿನಿಂದ ಹೊರಬಂದ ನಂತರ ಬರೆದ ನನ್ನ ಪ್ರಥಮ ಕತೆ 'ನಿಕಾಹ್ ' ಸುಧಾ ಪತ್ರಿಕೆಯಲ್ಲಿ ಪ್ರಕಟವಾಯಿತು. ಕನ್ನಡದಲ್ಲಿ ಪೂರ್ಣ ಪ್ರಮಾಣದ ಮುಸ್ಲಿಮ್ ವಸ್ತುವಿನ ಕತೆ ಇದೇ ಪ್ರಥಮದ್ದು ಅಂತ ನನ್ನ ಅಭಿಪ್ರಾಯ. ನನಗಿಂತ ಹಿಂದೆಯೇ ಮಮ್ತಾಜ್, ಬೊಳುವಾರು, ಅಬ್ದುಲ್ ಮಜೀದಖಾನ್, ರಮಜಾನ ದರ್ಗಾ, ಕೆ.ಎಸ್. ನಿಸಾರ್ ಅಹ್ಮದ್, ಅಕ್ಬರಲಿ ಮುಂತಾದವರು ಬರೆಯುತ್ತಿದ್ದರೂ ಮುಸ್ಲಿಮ್ ಸಮಾಜಕ್ಕೆ ಸಂಬಂಧಿಸಿದ ವಸ್ತುಗಳುಳ್ಳ ಕಥೆಗಳು ಬಂದದ್ದು ನನ್ನ ನಿಕಾಹ್ ಕತೆ ಪ್ರಕಟಗೊಂಡ ನಂತರದಲ್ಲಿ. ಅಂದರೆ ೭೦ರ ದಶಕದಲ್ಲಿ. ಹಿಂದೆ ಕಥೆಗಳಲ್ಲಿ ಅಲ್ಲಲ್ಲಿ ಮುಸ್ಲಿಮ್ ಪಾತ್ರಗಳೂ ಬರುತ್ತಿದ್ದವಾದರೂ, ಪೂರ್ಣಪ್ರಮಾಣದ ಮುಸ್ಲಿಮ್ ಬದುಕಿನ ಪರಿಚಯ ಕನ್ನಡ ಸಾಹಿತ್ಯಕ್ಕೆ ಉಂಟಾದದ್ದು ಈ ನಂತರದಲ್ಲಿ.

**ಕಥೆಗಳ ಹಿನ್ನೆಲೆ**

ನನ್ನ ಕಥೆ, ಕಾದಂಬರಿಗಳು ಹುಟ್ಟುಕೊಂಡದ್ದು, ನಾನು ಕಂಡು ಅನುಭವಿಸಿದ ಬದುಕಿನ ಘಟನೆಗಳ ಹಿನ್ನೆಲೆಯಲ್ಲಿ. ನನ್ನ ಸಹೋದರಿಯರ ಮದುವೆಯ ಸಂದರ್ಭದಲ್ಲಿ ಮತ್ತು ಸಂಬಂಧಿಕರ ಮನೆಯ ಹೆಮ್ಮಕ್ಕಳ ಮದುವೆಯ ಸಂದರ್ಭದಲ್ಲಿ. ವಧುಗಳು ಒಂದೇ ಸಮನೆ ಅಳುವುದು, ಉಳಿದವರಿಗೆಲ್ಲಾ ಸಂತೋಷ, ಸಂಭ್ರಮ ಪಡುವುದು ಕಂಡು ನಾನು ಬಾಲ್ಯದಲ್ಲಿ ನೊಂದುಕೊಳ್ಳುತ್ತಿದ್ದೆ. ಕೆಲವೊಮ್ಮೆ ಯಾಕೆಂದು ತಿಳಿಯದೆ ಅವರೊಂದಿಗೆ ನಾನೂ ಅಳುತ್ತಿದ್ದೆ. ಕೆಲವು ಸಂದರ್ಭದಲ್ಲಂತೂ ಈ ಮದುವೆ ಸಮಾರಂಭಗಳಿಗೆ ಹೋಗುವುದೇ ಬೇಡ ಎನ್ನುವಷ್ಟು ಜಿಗುಪ್ಸೆಯೂ ಉಂಟಾಗಿತ್ತು. ಇವೆಲ್ಲದರ ಬಗ್ಗೆ ಯೋಚಿಸುತ್ತಾ ಹೋದಂತೆ, ನಿಗೂಢವೆನಿಸುತ್ತಿತ್ತು. 'ನಿಕಾಹ್' 'ಅಕ್ಕನ ಮದುವೆ ಮತ್ತು ಆಡು' 'ಒಂದು

ಹಗಲು ಒಂದು ರಾತ್ರಿ' ಮುಂತಾದ ನನ್ನ ಕತೆಗಳು ಹುಟ್ಟಿಕೊಂಡದ್ದು ಈ ಅನುಭವಗಳ ಹಿನ್ನೆಲೆಯಲ್ಲಿ. 'ನಿಕಾಹ್'ನಲ್ಲಿ ಖೈರುನ್ನಿಸಾಳಿಗೆ ಸಂಪ್ರದಾಯದ ನೇಣಿಗೆ ಬದುಕನ್ನು ಬಲಿಕೊಡುವಂತಹ ಸನ್ನಿವೇಶ ಎದುರಾಗುತ್ತದೆ. 'ಅಕ್ಕನ ಮದುವೆ ಮತ್ತು ಆಡು' ಕಥೆಯಲ್ಲಿ ಕಟ್ಟುಪಾಡಿಗೆ ಬಂದಿಯಾದ ಅಕ್ಕ, ತಪ್ಪಿಸಿಕೊಂಡರೂ ಮತ್ತೆ ಸಿಕ್ಕಿಬಿದ್ದು ಬಲಿಯಾಗುವ ಆಡು ಇಬ್ಬರ ಪರಿಸ್ಥಿತಿಯೂ ಒಂದೇ ಆಗಿದೆ. ಈ ಎರಡು ಕಥೆಗಳ ಮಧ್ಯೆ, ಇವನ್ನು ಧಿಕ್ಕರಿಸುವ ವ್ಯಕ್ತಿತ್ವವೊಂದು ಹುಟ್ಟಿ ಬರುವ ಕನಸನ್ನು ಕಾಣುತ್ತಿದ್ದೆ. ಈ ಕನಸಿನ ಪ್ರತೀಕವಾಗಿ ಹುಟ್ಟಿದ ಕಥೆ 'ಒಂದು ಹಗಲು ಒಂದು ರಾತ್ರಿ' ಈ ಕಥೆಯ ನಾಯಕಿ ಸಂಪ್ರದಾಯದ ಕೋಟೆಯನ್ನು ಧರ್ಮದ ಚೌಕಟ್ಟಿನೊಳಗೆ ನಿಂತು ಧಿಕ್ಕರಿಸುತ್ತಾಳೆ, ಮಾತ್ರವಲ್ಲ, ಜಯವನ್ನೂ ಗಳಿಸುತ್ತಾಳೆ. ಈ ಕಥೆಯನ್ನೋದಿದ ಪ್ರಭಾವದಿಂದ 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯನ್ನು ಬರೆದೆನೆಂದು ಖಾಸಗಿಯಾಗಿ ಸಹೋದರಿ ಸಾರಾ ಅಬೂಬಕ್ಕರ್‌ರವರು ಹೇಳಿದಾಗ ನನಗೆ ಅತೀವ ಸಂತೋಷವಾಗಿತ್ತು. ಹಿಂದಿ, ಗುಜರಾತಿ ಭಾಷೆಗಳಿಗೆ ಅನುವಾದ ಗೊಂಡ 'ಜುಲೇಖ' ಕತೆಯ ನಾಯಕಿ ನಮ್ಮ ನಡುವೆ ಇಂದೂ ಬದುಕಿರುವವಳು. ಬಾಲ್ಯದ ನೆನಪುಗಳು ಇಡಿಯಾಗಿ 'ನೋಂಬು', 'ಅಪ್ಪ', 'ತೀರ್ಮಾನ', 'ವಂತಿಗೆ, 'ಕ್ರೌರ್ಯ', 'ಹತ್ಯೆ', 'ನೆರೆ' ಕತೆಗಳಲ್ಲಿ ಮೂಡಿಸಿದ್ದೇನೆ.

ಈ ದೇಶದ ಪ್ರಚಲಿತ ಸಮಸ್ಯೆಗಳು, ಘಟನೆಗಳು, ಕಥೆಗಾರನಾದ ನನ್ನನ್ನು ಗಾಢವಾಗಿ ಕಾಡುತ್ತವೆ. ಬರಹಗಾರ ಇವಕ್ಕೆ ಪ್ರತಿಕ್ರಿಯಿಸದಿದ್ದರೆ, ನನ್ನ ಮಟ್ಟಿಗೆ ಸರ್ವಪರಿತ್ಯಾಗ ಮಾಡಿ ಜೀವಂತ ಶವವಾಗಿರುವುದೇ ಆಗಿದೆ. ಒಬ್ಬ ಬರಹಗಾರನಾದವನಿಗೆ ಸಾಹಿತ್ಯ ಸೃಷ್ಟಿಯೇ ಜೀವನದ ಪ್ರಧಾನ ಉದ್ದೇಶವೇನೂ ಆಗಿರುವುದಿಲ್ಲ. ಎಲ್ಲ ಸಾಮಾನ್ಯ ಮನುಷ್ಯನಂತೆಯೇ ಬರಹಗಾರ ಕೂಡಾ ಸಮಾಜಜೀವಿಯಾಗಿರುತ್ತಾನೆ. ಸಾಹಿತ್ಯವನ್ನು ಸಮಾಜದ, ಸಂಸ್ಕೃತಿಯ ಉತ್ತಮ ಫಲವೆಂದು ನಾವು ಗುರುತಿಸುತ್ತೇವೆ. ಸಮಾಜವು ಧರ್ಮದ ಆಧಾರದ ಮೇಲೆ ಮುಖ್ಯವಾಗಿ ಗುರುತಿಸಲ್ಪಡುತ್ತದೆ. ಧರ್ಮಾಧಾರಿತ ಸಮಾಜವು ತಾನು ಪ್ರತಿನಿಧಿಸುವ ನಂಬಿಕೆಗಳು, ಹಳೆಯ ಪರಂಪರೆಗಳು, ಸಂಪ್ರದಾಯಗಳು, ಮೌಲ್ಯಗಳು ಶ್ರೇಷ್ಠ ಮತ್ತು ಪ್ರಶ್ನಾತೀತವೆಂಬ ಹಮ್ಮು ಬೆಳೆಸಿಕೊಂಡಿರುತ್ತದೆ. ಒಬ್ಬ ವ್ಯಕ್ತಿಯ ಧಾರ್ಮಿಕ ನಂಬಿಕೆಯ ಆಯ್ಕೆಯ ಬಗ್ಗೆ ಪ್ರಶ್ನಿಸುವುದು ಹೇಗೆ ತಪ್ಪಾಗುತ್ತದೋ ಹಾಗೆಯೇ ಒಬ್ಬ ಸೃಜನಶೀಲ ಲೇಖಕನು ಆಯ್ದುಕೊಳ್ಳುವ ವಸ್ತುವಿನ ಬಗ್ಗೆ ತಕರಾರೆತ್ತುವುದರ ಮೂಲಕ ಒತ್ತಡವನ್ನು ಹೇರುವುದು ಕೂಡಾ ತಪ್ಪಾಗುತ್ತದೆ. ಧರ್ಮ, ಸಮಾಜ ತನ್ನ ಒಡಲೊಳಗಿನ ಶ್ರೇಷ್ಠತೆಯ ಅಹಂಕಾರವನ್ನು ಯಾರೂ ಪ್ರಶ್ನಿಸದೆ ಸುಮ್ಮನಿದ್ದರೆ ಅಥವಾ ಹೊಗಳಿ ವೈಭವೀಕರಿಸಿದರೆ ಜನ ಪ್ರಸನ್ನರಾಗುತ್ತಾರೆ. ಬಹುಮಾನವನ್ನಿತ್ತು ಸನ್ಮಾನಿಸುತ್ತಾರೆ. ಸಮಾಜ ಒಪ್ಪಿ ಬಾಳುವ ಮೌಲ್ಯಗಳ ಚೌಕಟ್ಟನ್ನು ಮೀರಿದ ಜೀವನ ಸತ್ಯವನ್ನು ಕಾಣಿಸುವ ಪ್ರಯತ್ನವನ್ನು ಮಾಡುವ ಬರಹಗಾರರನ್ನು, ಸಮಾಜ ಸಂಶಯದ ದೃಷ್ಟಿಯಿಂದಲೇ ನೋಡುತ್ತದೆ. ಮನುಷ್ಯನ ಆತ್ಮವನ್ನು ತಟ್ಟಿ ಎಚ್ಚರಿಸಿ ತನ್ಮಯಗೊಳಿಸುವ ಮೋಡಿಗೊಳಿಸುವಂತಹ ಶಕ್ತಿಯು ಸಾಹಿತ್ಯ ಮತ್ತು ಧರ್ಮ ಎರಡಕ್ಕೂ ಇದೆ. ಇವೆರಡಕ್ಕೂ ಮನುಷ್ಯನ ಆತ್ಮಬಲವನ್ನು ಹೆಚ್ಚಿಸುವ ಶಕ್ತಿಗುಣ

ವನ್ನು ಹೊಂದಿದ್ದರೂ ಕೂಡ ಪರಸ್ಪರ ಮುಖಾಮುಖಿಯಾಗಿ ಸಂಘರ್ಷಕ್ಕಿಳಿಯುವುದು ಕಂಡುಬರುತ್ತದೆ. ಈ ಸಂಘರ್ಷದಿಂದ ಸಾಹಿತ್ಯಕ್ಕೇನೂ ಅಂತಹ ಲಾಭವಾಗಿಲ್ಲವೆನಿಸುತ್ತದೆ. ಧರ್ಮವೂ ತನ್ನ ಜನಾಕರ್ಷಣೆಯನ್ನು ಕಳಕೊಂಡಿಲ್ಲ. ಧರ್ಮದ ಅನುಯಾಯಿಗಳ ಬಗ್ಗೆಯೋ ಅಥವಾ ಕುರುಡು ಸಂಪ್ರದಾಯಗಳ ಬಗ್ಗೆಯೋ ಸಾಹಿತ್ಯವು ವಿಮರ್ಶೆಗೆ ಇಳಿದಾಗ, ತಮ್ಮ ಧರ್ಮಕ್ಕೆ ಅಪಾಯವಿದೆ ಎಂದು ಅನುಯಾಯಿಗಳು ಹೋರಾಟಕ್ಕೆ ಇಳಿದುಬಿಡುತ್ತಾರೆ. ಸಾಹಿತಿ ಕೂಡಾ ಧರ್ಮದ ಪಥವನ್ನು ಅಲುಗಾಡಿಸಿಬಿಡುತ್ತೇನೆಂದೋ, ಜನರನ್ನು ಧರ್ಮದ ಹಿಡಿತದಿಂದ ಮುಕ್ತಗೊಳಿಸಿಬಿಡುತ್ತೇನೆಂದೋ ಹೊರಟರೆ ತೀರಾ ಹುಂಬತನವಾಗುತ್ತದೆ. ಈ ಎರಡು ಬಣಗಳೂ ಹೀಗೆ ಘರ್ಷಣೆಗೆ ಇಳಿದಾಗ ತಮ್ಮ ಮೂಲದಲ್ಲಿರುವ ಮಾನವೀಯತೆಯನ್ನು ಮರೆತು ಬಿಡುತ್ತಾರೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ನನ್ನ ಕಥೆಗಳ ಬಗ್ಗೆ ಧಾರ್ಮಿಕ ಪ್ರತಿಭಟನೆ ಬಂದಾಗ ಪ್ರತಿಕ್ರಿಯಿಸಿದ್ದೇನೆ. ಶಾ ಬಾನು ಪ್ರಕರಣವು ಇಡೀ ದೇಶದಲ್ಲಿ ಚರ್ಚೆಗೆ ಬಂದಾಗ ಕನ್ನಡದ ಮುಸ್ಲಿಮ್ ಸಮಾಜದಿಂದ ಬಂದ ಬರಹಗಾರರು ತಳೆದ ನಿಲುವು ಪ್ರಗತಿಪರವಾದದ್ದು. ಧಾರ್ಮಿಕ ತತ್ವದ ಸೌಮ್ಯ ಮುಖವನ್ನು ಮುಂದಿಟ್ಟುಕೊಂಡು ಮಾಡಿದ ಚರ್ಚೆಗಳು ಆಳವಾಗಿ ಚಿಂತನೆಗೊಳಗಾದದ್ದು ಕಂಡು ಬಂತು. ಬಾನು ಮುಷ್ತಾಕ್‌ರವರ ನೇತೃತ್ವದಲ್ಲಿ ಹಾಸನದಲ್ಲಿ ಲೇಖಕರು ಒಂದಾಗಿ ಮಾಡಿದ ಚರ್ಚೆಯು ಬಹಳ ಸಮಯೋಚಿತವಾಗಿತ್ತು. ಜೊತೆಗೆ ಕುರ್‌ಆನ್‌ನ ಕನ್ನಡ ಅನುವಾದವು ಪ್ರಕಟಗೊಂಡದ್ದರಿಂದ ಕೆಲವೇ ಕೆಲವರ ಸೊತ್ತಾಗಿದ್ದ ಇಸ್ಲಾಮ್ ಸಂದೇಶಗಳ ನಿಕಟ ಪರಿಚಯವಾದದ್ದು ಬರಹಗಾರರಿಗೆ ವಿಶೇಷ ಅನುಕೂಲವಾಯಿತು. ಈ ಸಂದರ್ಭದಲ್ಲಿ ಅಲ್ಪಸಂಖ್ಯಾತರ ಕೋಮುವಾದದ ಅಪಾಯಕಾರಿ ಬೆಳವಣಿಗೆಯೂ ಕಂಡುಬಂತು.

ಈ ಹಿನ್ನೆಲೆಯಲ್ಲಿ ವೈಯಕ್ತಿಕ, ಕ್ರೌರ್ಯ, ಮುಸುಕು ಮುಂತಾದ ಕಥೆಗಳು ಹುಟ್ಟಿಕೊಂಡವು. ವಿವಾದಕ್ಕಾಗಿ ಅಥವಾ ವಿವಾದವನ್ನು ಸೃಷ್ಟಿಸುವ ಸಲುವಾಗಿ ಬರೆಯದಿರುವ ಬಗ್ಗೆ ಪ್ರಜ್ಞಾಪೂರ್ವಕ ಎಚ್ಚರವಹಿಸಿಕೊಳ್ಳುತ್ತೇವೆ. ಹೇಳಬೇಕಾದದ್ದನ್ನು ಯಾವ ಮುಲಾಜಿಲ್ಲದೆ ವ್ಯಕ್ತಪಡಿಸುವ ಉದ್ದೇಶ ನನ್ನದು. ಇದರಿಂದಾಗಿ ಧರ್ಮ ದ್ವೇಷವನ್ನು ಸಾಧಿಸದೆ ನನ್ನ ಕಥೆಗಳು ಬದುಕಿನ ಸತ್ಯಾನ್ವೇಷಣೆಯ ಭಾಗವಾಗಿ ಓದುಗರಿಗೆ ನೀಡುವ ನಮ್ರ ಪ್ರಯತ್ನಗಳಾಗಿವೆ.

**ಗಾಢವಾಗಿ ಕಲಕಿದ ಸಂಗತಿಗಳು**

ದೇಶದ ಎಲ್ಲೆಡೆಗಳಲ್ಲಿ ವ್ಯಾಪಿಸಿದ ಕೋಮುದ್ವೇಷ, ಕೋಮುಗಲಭೆಗಳು ಬರಹಗಾರನಾದ ನನ್ನನ್ನು ಬಹಳವಾಗಿ ಕಾಡಿವೆ. ಈ ದ್ವೇಷದ ಕಿಚ್ಚಿಗೆ ಅತ್ಯಂತ ಹೆಚ್ಚು ಪ್ರಮಾಣದಲ್ಲಿ ದೇಶದ ಪ್ರಮುಖ ಅಲ್ಪಸಂಖ್ಯಾತರಾದ ಮುಸ್ಲಿಮರು ಸೊತ್ತುಗಳು, ಪ್ರಾಣಗಳನ್ನು ಕಳೆದುಕೊಂಡಿರುವುದು, ವೈಯಕ್ತಿಕವಾಗಿ ಅನೇಕ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಾನು ದೇಶಕ್ಕೆ ನಿಷ್ಠನಾಗಿದ್ದೇನೆಂದು ಪ್ರಮಾಣ ಮಾಡಬೇಕಾಗಿ ಬರುವ ಒತ್ತಡ, ಯಾರೋ ಎಲ್ಲಿಯೋ ಮುಸ್ಲಿಮ್ ಹೆಸರಿನ ಅಪರಾಧಿಯೊಬ್ಬ ಮಾಡಿದ ತಪ್ಪಿಗೆ, ಅಪರಾಧಕ್ಕೆ ಇಡೀ ಮುಸ್ಲಿಮ್ ಸಮುದಾಯವನ್ನು ಜವಾಬ್ದಾರರನ್ನಾಗಿ ಮಾಡುವ ಸನ್ನಿವೇಶ ಎದುರಾಗುತ್ತಿರು

ವುದು, ನಮ್ಮಿಂದ ಉತ್ತರವನ್ನು ನಿರೀಕ್ಷಿಸುವುದು ಮುಂತಾದ ಎದುರಾಗುವ ಸಂದರ್ಭಗಳು ಅತ್ಯಂತ ನೋವಿನದ್ದು. ಆದರೂ ಈ ದೇಶದ ಬಹುಸಂಖ್ಯಾತ ಹಿಂದುಗಳು ಸ್ನೇಹಪರರು ಮತ್ತು ಸಹಿಷ್ಣುತೆಯ ಪ್ರತಿಪಾದಕರು ಎಂಬುದು ಸಾಂತ್ವನ ನೀಡುವ ಅಂಶ. ಎಲ್ಲ ರೀತಿಯ ಕೋಮುವಾದವನ್ನು ವಿರೋಧಿಸುತ್ತಲೇ ಮನುಷ್ಯನ ಒಳಗಿರುವ ಒಳ್ಳೆಯತನಕ್ಕೆ, ಮಾನವೀಯ ಮುಖವನ್ನು ತೋರಿಸಿ ಕೊಡುವುದಕ್ಕೆ ಒತ್ತುಕೊಟ್ಟ ಕಥೆಗಳನ್ನು 'ದಜ್ಜಾಲ' ಕಥಾ ಸಂಕಲನದಲ್ಲಿ ತಂದಿದ್ದೇನೆ. ಕೋಮುಗಲಭೆಗಳ ಹಿನ್ನೆಲೆಯನ್ನೊಳಗೊಂಡ ನನ್ನ ಕಥೆಗಳಲ್ಲಿ ಹಿಂದೂಗಳ ಹೃದಯದ ಒಂದಲ್ಲ ಒಂದು ಮೂಲೆಯಲ್ಲಿ ಮುಸ್ಲಿಮ್ ವಿರೋಧ ವಿದೆ ಎನ್ನುವುದನ್ನು ಪದಗಳ ಸರ್ಕಸ್ಸಿನ ಮೂಲಕ ಹೇಳುವುದನ್ನು ನಾನು ಇಷ್ಟಪಡುವುದಿಲ್ಲ. ಹಾಗೆಯೇ ಮುಸ್ಲಿಮರ ಬಗ್ಗೆ ಕೂಡಾ. ಎಲ್ಲರ ಬದುಕು ಕೂಡಾ ಒಳಿತು ಕೆಡುಕುಗಳ ಮಿಶ್ರಣವೆಂಬುದನ್ನು ವ್ಯಕ್ತಪಡಿಸಲು ಇಷ್ಟಪಡುತ್ತೇನೆ. 'ಒಸರು', 'ವ್ಯಾಜ್ಯ', 'ಹೃದಯ ಗಳು', 'ಬುರ್ಖಾ', 'ಕೋಮು', 'ಪಂಜರ' ಮುಂತಾದ ಕಥೆಗಳನ್ನು ಮುಸ್ಲಿಮ್ ಬದುಕು, ಮನಸ್ಸುಗಳನ್ನು ಮನುಷ್ಯತ್ವದ ಅನ್ವೇಷಣೆಗಳಿಗಾಗಿ ಬಳಸಿಕೊಂಡಿದ್ದೇನೆ. ಇಂತಹ ವಸ್ತುವಿನ ಬಗ್ಗೆ ಬರೆಯುವಾಗ ನನ್ನ ಹಳ್ಳಿಯ ಸೌಹಾರ್ದ ವಾತಾವರಣವನ್ನು ಮತ್ತೆಮತ್ತೆ ಮೂಡಿಸು ವುದು ನನಗೆ ಅನಿವಾರ್ಯ.

ಇಲ್ಲಿ ನನಗೆ ಉರ್ದು ಕವಿ ಫೈಜ್ ಅಹ್ಮದ್ ಫೈಜ್‌ರವರ ಕವನ 'ದುವಾ' ಅಥವಾ 'ಪ್ರಾರ್ಥನೆ' ಪ್ರಸ್ತುತವೆನಿಸುತ್ತದೆ. ಈ ಕವನದೊಂದಿಗೆ ಈ ಲೇಖನವನ್ನು ಮುಕ್ತಾಯಗೊಳಿಸು ತ್ತೇನೆ.

> ಬನ್ನಿನಾವೂ ಪ್ರಾರ್ಥಿಸೋಣ, ಕೈಯೆತ್ತಿ
> ಪ್ರಾರ್ಥನೆಯ ಸಂಪ್ರದಾಯ ಮರೆತ ನಾವು
> ಬೆಚ್ಚನೆಯ ಪ್ರೀತಿಯೊಂದನ್ನು ಬಿಟ್ಟು
> ಬೇರೇನನ್ನೂ ಅನುಭವಿಸಲಾರದವರು.
> ಮೂರ್ತಿಯನ್ನಾಗಲೀ, ದೇವರನ್ನಾಗಲೀ
> ಪೂಜಿಸಲರಿಯದವರು
> ಬನ್ನಿ ನಾವೂ ಪ್ರಾರ್ಥಿಸೋಣ ಕೈಯೆತ್ತಿ
> ಮೋಸ ವಂಚನೆಗಳೆಲ್ಲವೂ
> ಪಾಪವೆನ್ನುವ ಧರ್ಮನಿಷ್ಠರಲ್ಲಿ ತುಂಬಲಿ,
> ಧರ್ಮವ ಪ್ರಶ್ನಿಸುವ ಧೈರ್ಯ ನೆತ್ತಿಯ ಮೇಲೆ ತೂಗುವ ಕತ್ತಿಯ
> ಕ್ರೌರ್ಯದಡಿಯಲ್ಲಿ ಬದುಕುವ ದುರ್ಬಲರಲ್ಲಿ
> ದಂಡಿಸುವ ಕೈಗಳ ಕತ್ತಿಯ
> ಕಿತ್ತೆಸೆವ ಶಕ್ತಿ ತುಂಬಿ ಬರಲಿ
> ಬನ್ನಿ ನಾವೂ ಪ್ರಾರ್ಥಿಸೋಣ, ಕೈಯೆತ್ತಿ.

# ಬರೆಹ: ಸಂದರ್ಭದೊಂದಿಗೆ ನಡೆಸುವ ಸಂಘರ್ಷ

● ಬಂಜಗೆರೆ ಜಯಪ್ರಕಾಶ

ಈಗ ನಾನು ಯಾಕೆ ಬರೆಯುತ್ತಿದ್ದೇನೆ ಎಂದು ಹೇಳಲು ಹೊರಟರೆ, ಅದು ಬಹಳ ಮಟ್ಟಿಗೆ ಗೊಂದಲ ಹುಟ್ಟಿಸುವ ವಿಷಯವಾಗಿಬಿಡಬಹುದು. ಸಮಾಜದಲ್ಲಿ ಬದುಕುತ್ತಿರುವಾಗ ಸಹನೆ ಅಥವಾ ಅಸಹನೆ; ಮೆಚ್ಚುಗೆ ಅಥವಾ ಟೀಕೆ-ಹೀಗೆ ಏನನ್ನಾದರೂ ಹೇಳುತ್ತಿರಬೇಕಾದ ಅವಶ್ಯಕತೆ ಬರುತ್ತದೆ. ಕಾಣಲಿಕ್ಕೆ ಕೆಲವರಿಗೆ ಸಂಬಂಧಿಸಿದಂತೆ ಕಂಡರೂ ಆ ವಿಷಯದ ಆಯಾಮಗಳು ಹೆಚ್ಚು ಜನರನ್ನು ಒಳಗೊಂಡಂತಿರುವಾಗ, ಆ ಬಗ್ಗೆ ನಾನು ಹೇಳಬೇಕಾಗಿ, ರುವುದನ್ನು ಬರಹ ರೂಪದಲ್ಲಿ ಹೇಳುತ್ತೇನೆ ಎಂದು ಹೇಳುವ ಮುಖಾಂತರ ಈ ಗೊಂದಲವನ್ನು ಸ್ವಲ್ಪ ಸರಳಗೊಳಿಸಲು ಪ್ರಯತ್ನಿಸಬಹುದು.

ನಾನು ಮೊದಲು ಬರಹದ ಆಕರ್ಷಣೆಗೆ ಹೇಗೆ ಬಿದ್ದೆ ಎಂಬುದನ್ನು ಹುಡುಕುವುದು ಬಹುಶಃ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹುಡುಕುವ ಪ್ರಯತ್ನವಾಗಬಹುದು. ನನ್ನಲ್ಲಿ ಬರವಣಿಗೆಯ ಕಚ್ಚಾ ಪ್ರಯತ್ನಗಳು ಆರಂಭವಾಗಿದ್ದು ನಾನು ಹೈಸ್ಕೂಲು ಓದುತ್ತಿದ್ದಾಗ. ೧೯೭೮-೭೯ರ ಸಮಯ. ಚಳ್ಳಕೆರೆಯಲ್ಲಿ ಓದುತ್ತಿದ್ದಾಗ ನನಗೆ ಸಿನಿಮಾ ನೋಡುವ ಖಯಾಲಿ ಜಾಸ್ತಿ.

ದಾಸರಿ ನಾರಾಯಣರಾವ್ ನಿರ್ದೇಶಿಸಿದ್ದ 'ಶಿವರಂಜನಿ' ಎಂಬ ಸಿನಿಮಾ ಬಂದಿತ್ತು. ಅದರಲ್ಲಿದ್ದ 'ಶಿವರಂಜನಿ' ಎಂಬ ಹಾಡು ನನಗೆ ಬಹಳ ಇಷ್ಟವಾಗಿತ್ತು. ಅದನ್ನು ಹಾಡುತ್ತಿರು ವಾಗ ಅಪ್ರಯತ್ನವಾಗಿ ಇದನ್ನು ಕನ್ನಡಕ್ಕೆ ಬದಲಿಸಿಕೊಂಡರೆ ಹೇಗೆ ಎಂಬ ಆಲೋಚನೆ ಬಂತು. ತೆಲುಗು-ಸಂಸ್ಕೃತ ಮಿಶ್ರಣವಾದ ಆ ಹಾಡಿನ ಕೆಲವು ಸಾಲುಗಳು ಹೆಚ್ಚು ಶ್ರಮವಿಲ್ಲದೆ, ಅದೇ ರಾಗದಲ್ಲಿ ಕನ್ನಡಕ್ಕೆ ಬದಲಾವಣೆಗೊಳ್ಳುವಂತಿದ್ದವು. ಆದರೆ ಮಿಕ್ಕ ಸಾಲುಗಳು ಸುಲಭದ ಮಾತಾಗಿರಲಿಲ್ಲ. ಹಾದಿಯಲ್ಲಿ ಹೋಗಿ ಬರುತ್ತಾ ಅದನ್ನು ಅನುವಾದಿಸ ತೊಡಗಿದೆ. ಹಲವಾರು ದಿನಗಳ ಈ ಮೌಖಿಕ ಪ್ರಯತ್ನದ ಅಂಗವಾಗಿ ಅಂತೂ ಆ 'ಶಿವರಂಜನಿ' ಕನ್ನಡದ ಹಾಡಾಗಿ ಬದಲಾಗಿತ್ತು. ಆ ಹಾಡನ್ನು ಹೆಚ್ಚುಕಮ್ಮಿ ಎಲ್ಲರೂ ಗುನುಗುತ್ತಾ ಓಡಾಡುತ್ತಿದ್ದರಾದ್ದರಿಂದ, ಅದನ್ನು ನಾನು ಕನ್ನಡಕ್ಕೆ ಬದಲಾಯಿಸಿರುವುದು ಯಾರಿಗಾದರೂ ತಿಳಿಯಲಿ ಅಂತ, ಸೈಕಲ್ಲಿನಲ್ಲಿ ಹೋಗುವಾಗ ಗಟ್ಟಿಯಾಗಿ ಹಾಡಿಕೊಂಡು ಹೋಗುತ್ತಿದ್ದೆ. ಯಾರೂ ಗಮನಿಸಿದಂತಾಗಲಿಲ್ಲ.

ಆ ವಯಸ್ಸಿಗೆ ನನ್ನ ಮಟ್ಟಿಗೆ ಅದೊಂದು ಅದ್ಭುತ ಸಾಧನೆ ಅಂತ ಅನಿಸಿದ್ದರಿಂದ ಅದನ್ನು ಹೇಗಾದರೂ ಇತರರಿಗೆ ತೋರಿಸಬೇಕು ಅಂತ ಬಹಳ ಆಸೆಯಾಗುತ್ತಿತ್ತು.

ಚಳ್ಳಕೆರೆಯಲ್ಲಿ ಶಾಲೆಗೆ ಹೋಗುವ ಮೊದಲು ಹಾಗೂ ಶಾಲೆಯಿಂದ ಹಿಂತಿರುವಾಗ ನಾವು ಸ್ವಲ್ಪ ಕೂತಿರುತ್ತಿದ್ದ ಅಥವಾ ನಿಂತಿರುತ್ತಿದ್ದ ಪತ್ರಿಕೆ ಅಂಗಡಿಯೊಂದಿತ್ತು. ಆ ಅಂಗಡಿ ಬಳಿ ಪಿಯುಸಿ ಕಾಲೇಜಿನಲ್ಲಿ ಓದುತ್ತಿದ್ದ ಹಲವಾರು ಹುಡುಗರು ಸೇರುತ್ತಿದ್ದರು. ಇಡೀ

ಊರಿನ, ಕೆಲವೊಮ್ಮೆ ನಾಡಿನ ಆಗುಹೋಗುಗಳ ಬಗ್ಗೆ ಅವರದೇ ವಕ್ರ ಭಾಷ್ಯಗಳನ್ನು ಬಹಳ ಮನರಂಜನಾತ್ಮಕವಾಗಿ ಅವರೆಲ್ಲಾ ಚರ್ಚಿಸುತ್ತಿದ್ದರು. ನನಗೆ ಪುಗಸಟ್ಟೆಯಾಗಿ ಓದಲು ಅಲ್ಲಿ ಕಥೆ ಪುಸ್ತಕಗಳು ಸಿಗುತ್ತಿದ್ದುದರಿಂದ ತಪ್ಪದೆ ಅಲ್ಲಿಗೆ ಹೋಗುತ್ತಿದ್ದೆ.

ನನ್ನ ಅಣ್ಣನಿಗೆ ಗೆಳೆಯನಾಗಿದ್ದ ಆ ಅಂಗಡಿ ಹುಡುಗ ಕೆಲವು ಸಲ ನನ್ನನ್ನೇ ಅಂಗಡಿ ಪಾರುಪತ್ತೆಗೆ ಬಿಟ್ಟು ತನ್ನ ಗೆಳೆಯರೊಡನೆ ಸಿನಿಮಾಕ್ಕೋ, ಪಾರ್ಟಿಗೋ ಹೋಗಿಬಿಡುತ್ತಿದ್ದ. ಅಂತಹ ಸಮಯಗಳು ನನಗೆ ಬಹಳ ಇಷ್ಟದ ಸಮಯಗಳಾಗಿದ್ದವು. ಯಾಕೆಂದರೆ ಹಳೇ ಜೋಪಡಿಯಂತಿದ್ದ ಆ ಡಬ್ಬಾ ಪತ್ರಿಕೆ ಅಂಗಡಿಯಲ್ಲಿ ಎಂದೂ ಖರ್ಚಾಗದ ಎಷ್ಟೋ ಪತ್ರಿಕೆಗಳು ನೇತಾಡಿಕೊಂಡಿರುತ್ತಿದ್ದವು. ಅವುಗಳ ಹಿಂದೆ ಮೂಲೆಯಲ್ಲೆಲ್ಲೋ ಲೈಂಗಿಕ ಪುಸ್ತಕಗಳನ್ನು ಅಡಗಿಸಿಟ್ಟಿರುತ್ತಿದ್ದರು. ಬೇರೆ ಹುಡುಗರಿದ್ದಾಗ ನಾನು ಅವುಗಳನ್ನು ಓದಲು ಅನುಮತಿ ಇರಲಿಲ್ಲ. ಅವರು ಅವುಗಳನ್ನು ಓದುತ್ತಾರೆ ಎಂದು ತಿಳಿದುಕೊಂಡಿದ್ದೂ ಕೂಡ ಗುಟ್ಟಿನಲ್ಲೇ. ಅತ್ಯಂತ ಕಳಪೆಯಾಗಿ ಮುದ್ರಿತವಾಗಿರುತ್ತಿದ್ದ ಕಚಡಾ ಕನ್ನಡದಲ್ಲಿ ಬರೆಯಲ್ಪಟ್ಟಿರುತ್ತಿದ್ದ ಪುಸ್ತಕಗಳು ಅವು. ಆದರೂ ಆಗಿನ ರೋಮಾಂಚನ ಹೇಳತೀರದು.

ಹೀಗೇ ಒಂದು ಸಂಜೆ ಅವರೆಲ್ಲಾ ಆ ಅಂಗಡಿಯ ಬಳಿಯಿದ್ದಾಗ ನಾನು ಕನ್ನಡದಲ್ಲಿ ಪುನರ್ ರಚಿಸಿದ್ದ 'ಶಿವರಂಜನಿ' ಹಾಡು ಹೇಳಲು ಅವಕಾಶ ಕೇಳಿದೆ. ಅವರಿಗೆಲ್ಲಾ ನಾನು ಕಿರಿಯ. ಕಾಲೇಜು ಹುಡುಗರಿಗೆ ಹೈಸ್ಕೂಲಿನಲ್ಲಿರುವ ನಾನು ಬಚ್ಚಾ ಲೆಕ್ಕ. ಚೆನ್ನಾಗಿ ತೆಲುಗೇ ಗೊತ್ತಾಗುವಂತಿರುವಾಗ ಅದನ್ನು ಕನ್ನಡ ಮಾಡಬೇಕಾದ ಅಗತ್ಯವೇನು ಎಂಬುದು ಅವರ ನಿಲುವು. ಆದ್ದರಿಂದ ಇದೊಂದು ಶುದ್ಧ ತರಲೆ ಪ್ರಯತ್ನವೆಂಬ ಟೀಕು ಹೇಳಿ ಹಾಡಲು ಅನುಮತಿ ನೀಡಿದರು. ನಾನು ಹಾಡಿದ್ದನ್ನು ಗಂಭೀರವಾಗಿ ಅವರು ತೆಗೆದುಕೊಳ್ಳಲೇ ಇಲ್ಲ. ಆ ಉದ್ದ ಹಾಡನ್ನು ನಾನು ಕಷ್ಟಪಟ್ಟು ಹಾಡುತ್ತಿರುವಾಗಲೇ ಅವರು ತಮ್ಮ ವ್ಯಂಗ್ಯದ ಮಾತುಗಳನ್ನು ಆರಂಭಿಸಿದರು. ನನಗೆ ಬಹಳ ಮುಖಭಂಗವಾಯಿತು.

ಆ ರಾತ್ರಿ ಸಾಂಬಾರು ಕೊಂಡುಕೊಂಡು ಬರಲು ಹೋಗಿ ಬರುವಾಗ ಕತ್ತಲಿದ್ದ ರಸ್ತೆಯಲ್ಲಿ ಅಳುತ್ತಾ ಆ ಹಾಡನ್ನು ಜೋರಾಗಿ ಒಬ್ಬನೇ ಹಾಡಿಕೊಂಡು ಬಂದು ಸಮಾಧಾನ ಮಾಡಿಕೊಂಡೆ.

ಸ್ವಲ್ಪ ದಿನದ ನಂತರ ನನ್ನ ಅಣ್ಣನ ಮತ್ತೊಬ್ಬ ಗೆಳೆಯನ ಸ್ಟುಡಿಯೋಗೆ ಹೋಗಿದ್ದೆ. ಆತ ಉತ್ತಮ ಹಾಡುಗಾರ. ಗಂಭೀರವಾದ ವ್ಯಕ್ತಿ. ಬೇರೆ ಗೆಳೆಯರಿಂದ ಗೇಲಿಯೆಂಬಂತೆ ನನ್ನ ಹಾಡಿನ ಪುನಾರಚನೆಯ ಸಾಹಸವನ್ನು ಕೇಳಿಸಿಕೊಂಡಿದ್ದ ಆತ ಅದನ್ನು ಹಾಡಲು ಹೇಳಿದ. ಆ ಪ್ರಯತ್ನವನ್ನು ಸಾರ್ವಜನಿಕಗೊಳಿಸುವುದು ನಾಚಿಕೆಗೇಡು ಎಂದು ನಾನು ತೀರ್ಮಾನಿಸಿದ್ದರಿಂದ ಸುಲಭಕ್ಕೆ ಹಾಡಲು ಒಪ್ಪಲಿಲ್ಲ. ಬಿಡದೇ ಆತ ಆ ಹಾಡು ಹೇಳಿಸಿ, ಅದನ್ನು ಹಾಳೆಯೊಂದರ ಮೇಲೆ ಬರೆಸಿಕೊಂಡ.

ಆತ ಆರ್ಕೆಸ್ಟ್ರಾಗಳಲ್ಲಿ ಹಾಡಲು ಹೋಗುತ್ತಿದ್ದ. ಕಾರ್ಯಕ್ರಮವೊಂದರಲ್ಲಿ ನಾನು ಪುನರ್ ರಚಿಸಿದ್ದ ಶಿವರಂಜನಿ ಕನ್ನಡ ಹಾಡನ್ನು ಹಾಡಿದ. ಆ ಜನಪ್ರಿಯ ತೆಲುಗು ಗೀತೆ,

ಕನ್ನಡದಲ್ಲಿ ಕೇಳಿದ ಜನ ಬಹಳ ಮೆಚ್ಚಿಕೊಂಡರು. ಆತ ಬಹಳ ಕಡೆ ಅದನ್ನು ಹಾಡಿದ. ಮೊದಲ ಸಲಕ್ಕೆ ಅಕ್ಷರ ಮಾಧ್ಯಮದೊಂದಿಗಿನ ನನ್ನ ಪ್ರಯತ್ನ ಜನರಿಂದ ಮೆಚ್ಚುಗೆ ಪಡೆದಿತ್ತು. ಅದಕ್ಕಿಂತ ಮುಖ್ಯವಾಗಿ ನನ್ನನ್ನು ಮುಖಭಂಗಗೊಳಿಸಿದ್ದ ಗೇಲಿ ಗೆಳೆಯರ ಗ್ಯಾಂಗ್ ನನ್ನನ್ನು ಸ್ವಲ್ಪ ತೂಕದಿಂದ ನೋಡತೊಡಗಿತ್ತು.

ಆ ಗುಂಪಿನ ನಡುವೆ ಮಾನ್ಯತೆ ಪಡೆಯಲು ಬೇರೆ ಯಾವುದೇ ಬಲಗಳಿಲ್ಲದ್ದುದರಿಂದ ನಾನು 'ಒಂತರಾ' ಗಣ್ಯನಾಗತೊಡಗಿದ್ದು ನನ್ನ ಆತ್ಮವಿಶ್ವಾಸಕ್ಕೆ ಕಾರಣವಾಯಿತು. ಇದು ಬೇರೆ ಯಾವುದೋ ಕಾರಣಕ್ಕಾಗಿಯಲ್ಲದೆ, ನನ್ನ ಸ್ವಯಾರ್ಜಿತವಾಗಿ ಗಳಿಸಿದ ಪ್ರತಿಷ್ಠೆ ಎಂಬುದು ನನಗೆ ಅಸ್ಪಷ್ಟವಾಗಿ ತೃಪ್ತಿಯನ್ನು ತರತೊಡಗಿತ್ತು.

ಎಸ್‌ಎಸ್‌ಎಲ್‌ಸಿ ಮುಗಿಸಿದ್ದು ೧೯೮೦ರಲ್ಲಿ. ಅಲ್ಲಿಯವರೆಗೆ ಕೆಲವು ಭಕ್ತಿ ಗೀತೆಗಳನ್ನು ಬರೆದೆ. ಡಾ. ರಾಜ್ ಆಗ ತಾನೇ ರಾಘವೇಂದ್ರಸ್ವಾಮಿಯ ಹಾಡು ಹಾಡಿದ್ದರು. ಅವುಗಳ ನೇರ ಅನುಕರಣೆಯಾಗಿ ಗುರುವಾರದ ಬದಲು ಶನಿವಾರವನ್ನು, ರಾಘವೇಂದ್ರನ ಬದಲು ಹನುಮಂತನನ್ನೋ ಕೊಲ್ಲಾಪುರದಮ್ಮನನ್ನೋ ಇಟ್ಟು ಹಾಡು ಜೋಡಿಸುತ್ತಿದ್ದೆ. ಚೆನ್ನಾಗಿ ಹಾಡಲು ಬರುವ ಗೆಳೆಯರಿಗೆ ಇವನ್ನು ಹಾಡಿರೆಂದು ಪೀಡಿಸುತ್ತಿದ್ದೆ.

ನಂತರ ಚಿತ್ರದುರ್ಗಕ್ಕೆ ಪಿಯುಸಿ ಓದಲು ಬಂದೆ. ನಮ್ಮ ಹಳ್ಳಿ ಮೆದಕೇರಿಪುರದಿಂದ ದಿನವೂ ಕಾಲೇಜಿಗೆ ಓಡಾಡುತ್ತಿದ್ದಾಗ, ನನಗೆ ಅಕ್ಕನಂತಹ ಗೆಳತಿಯೊಬ್ಬಳು ಸಿಕ್ಕಳು. ಆಕೆ ಬಿಎ ಓದುತ್ತಿದ್ದಳು. ಆಕೆ ರೂಪಿನಲ್ಲಿ ಮಾತ್ರ ಹೆಣ್ಣು. ಮಿಕ್ಕಂತೆ ಸ್ವಭಾವವೆಲ್ಲ ಪುಂಡು ಹುಡುಗರಂತೆ. ಮನೆಯ ಮುಂದೆ ಯಾರೋ ನಿಲ್ಲಿಸಿದ್ದ ಮೋಟಾರ್ ಬೈಕನ್ನು ತಳ್ಳಿಕೊಂಡು ಬರಲು ನನಗೆ ಸೂಚಿಸಿ, ಮನೆಯಿಂದ ಮರೆಯಾದೊಡನೆ ಬೈಕ್ ಸ್ಟಾರ್ಟ್ ಮಾಡಿ ಒಂದು ರೌಂಡು ಹೊಡೆದು ಲಂಗ ತೊಡರಿಕೊಂಡು ಬಿದ್ದು, ನನಗೂ ಬೈಕ್ ಓಡಿಸುವ ಪಾಠ ಕಲಿಸಿದವಳು.

ಅವಳಿಗೆ ಕಾಲೇಜಿನಲ್ಲಿ ಪ್ರತಿಸ್ಪರ್ಧಿಯಾಗಿದ್ದ ನಮ್ಮದೇ ಊರಿನ ಮತ್ತೊಬ್ಬಳು ಸುಂದರಿ ಇದ್ದಳು. ಒಂದು ದಿನ ಈಕೆ ನನ್ನ ಬಳಿ ಬಂದು ಅ ಸುಂದರಿಗೆ ಒಂದು ಅನಾಮಿಕ ಪ್ರೇಮಪತ್ರ ಬರೆದುಕೊಡಲು ಕೇಳಿದಳು. ನನ್ನ ಭಕ್ತಿಗೀತೆ ರಚನಾ ಪ್ರತಿಭೆಯನ್ನು ಕಂಡಿದ್ದ ಆಕೆಗೆ ನಾನು ಬರೆಯಬಲ್ಲೆ ಎಂದು ಅನಿಸಿರಬೇಕು.

ಇವಳ ಪ್ರತಿಸ್ಪರ್ಧಿಯಾಗಿದ್ದ ಸುಂದರಿಗೂ ನಾನು ಅಕ್ಕ ಅನ್ನುತ್ತಿದ್ದುದರಿಂದ ಅನಾಮಿಕ ಪ್ರೇಮ ಪತ್ರ ಬರೆಯಲು ಮೊದಲು ನಾನು ಒಪ್ಪಲಿಲ್ಲ. ನಂತರ ಕೂತು ಎಕ್ಸೈಜಿನ ಇಡೀ ಎರಡು ಹಾಳೆಗಳ ತುಂಬ ನಾನು ಕತೆ ಬುಕ್ಕಿನಲ್ಲಿ ಓದಿದ್ದ ಸಾಲುಗಳನ್ನೆಲ್ಲ ನೆನಪಿಸಿಕೊಂಡು ಒಂದು ಪ್ರೇಮ ಪತ್ರ ಬರೆದುಕೊಟ್ಟೆ. ಅದನ್ನು ಓದಿ ಆಕೆ ಬಹಳ ಅಚ್ಚರಿಪಟ್ಟಳು. ಆ ಪ್ರೇಮಪತ್ರ ನಿಜದ್ದೇನಿಸುವಷ್ಟು ರಮ್ಯ ಕಲ್ಪನೆಗಳಿಂದ ಕೂಡಿತ್ತಂತೆ. ಕನ್ನಡ ಮೇಜರ್ ಓದುತ್ತಿದ್ದ ಆ ಅಕ್ಕನಂಥ ಗೆಳತಿ ಆ ಪತ್ರ ಓದಿ ನನ್ನನ್ನು 'ಕವಿ' ಎಂದು ಕರೆದಳು. ಸಾಲದ್ದಕ್ಕೆ 'ನೀನು ಬರೆದಿರುವ ರೀತಿ ನೋಡಿದರೆ ಯಾವಳಾದರೂ ಪ್ರೇಮಿಸಲು ಒಪ್ಪಿಕೊಂಡು

ಬಿಡುತ್ತಾಳೆ' ಎಂಬ ಅರ್ಹತಾ ಪತ್ರವನ್ನೂ ದಯಪಾಲಿಸಿದಳು.

ಆ ಅನಾಮಿಕ ಪ್ರೇಮಪತ್ರದಿಂದ ಸುಂದರಿಗೆ ಸ್ವಲ್ಪ ತೊಂದರೆಯಾಯಿತು. ಅದು ಬೇರೆ ಕಥೆ. ನಾನು ಸ್ವಲ್ಪ ದಿನ ಬಿಟ್ಟು ಅದೇ ಬಗೆಯ ಪ್ರೇಮಪತ್ರ ಬರೆದು ಮೊದಲ ಬಾರಿಗೆ ಅದರಲ್ಲಿ 'ಬಂಜಗೆರೆ ಜಯಪ್ರಕಾಶ' ಎಂಬ ಅಂಕಿತ ಬರೆದು ನಾನು ಪ್ರೀತಿಸುತ್ತಿದ್ದ ಹುಡುಗಿಗೆ ಕೊಟ್ಟೆ.

ಊರ ಹೆಸರಿನ ಸಮೇತ ಉದ್ದವಾಗಿ ನನ್ನ ಹೆಸರು ಬರೆಯಬೇಕೆಂಬ ಸ್ಫೂರ್ತಿ ನನಗೆ ಎಲ್ಲಿಂದ ಬಂತು ಎಂದು ಸರಿಯಾಗಿ ಗೊತ್ತಿಲ್ಲ. ಆದರೆ ತರಾಸು, ಕುವೆಂಪು ಹೀಗೆಲ್ಲಾ ಹೆಸರಿಟ್ಟುಕೊಳ್ಳುವುದು ಹಳೆಯ ಫ್ಯಾಶನ್ ಎಂದು ಹೊಳೆದಿತ್ತು. ಆಗಿನಿಂದ ನನ್ನ ಪ್ರೀತಿಯ ಹುಡುಗಿಗೆ ಪತ್ರ ಬರೆದಾಗಲೆಲ್ಲಾ ಅದರೊಂದಿಗೆ ಒಂದು ಕವಿತೆಯನ್ನೂ ಬರೆದು ಇಟ್ಟಿರುತ್ತಿದ್ದೆ.

ಅದು ೧೯೮೦-೮೧ ಇರಬೇಕು. ನಮ್ಮ ಅಣ್ಣ ಶಾಂತವೀರಣ್ಣ ಚಳ್ಳಕೆರೆ ರೋಟರ್‍ಯಾಕ್ಟ್‌ಗೆ ಅಧ್ಯಕ್ಷನಾದ. ನಾನು ಪಿಯುಸಿ ಮೊದಲ ವರ್ಷ ಮುಗಿಸಿದ್ದೆ. ರೋಟರ್‍ಯಾಕ್ಟ್ ವತಿಯಿಂದ ಸರಳ ಸಾಮೂಹಿಕ ವಿವಾಹ ಏರ್ಪಡಿಸಿ ಅದರ ಅಂಗವಾಗಿ ಸ್ಮರಣ ಸಂಚಿಕೆಯೊಂದನ್ನು ಪ್ರಕಟಿಸಲು ಉದ್ದೇಶಿಸಲಾಗಿತ್ತು. ನಾನು ಕವಿತೆ ಬರೆಯುತ್ತೇನೆ ಎಂದು ನಮ್ಮಣ್ಣನಿಗೆ ಹೇಗೆ ಗೊತ್ತಾಯಿತೋ! ಯಾಕೆಂದರೆ ಆವರೆಗಿನ ನನ್ನ ಕವಿತೆಗಳೆಲ್ಲ 'ಖಾಸಗಿ ಪ್ರಸಾರ'ಕ್ಕೆ ಸೀಮಿತ ವಾಗಿದ್ದವು. ಅಥವಾ ಶಿವರಂಜನಿ ಹಾಡನ್ನು ಕನ್ನಡಗೊಳಿಸಿದ್ದನ್ನೇ ನೆನಪಿಟ್ಟುಕೊಂಡಿರ ಬಹುದು. ಸ್ಮರಣ ಸಂಚಿಕೆಗೆ ಸರಳ ವಿವಾಹದ ಬಗ್ಗೆ ಕವಿತೆ ಬರೆದುಕೊಡಲು ಪತ್ರ ಬರೆದ. ಸರಳ ವಿವಾಹದ ಬಗ್ಗೆ ಹಾಗೂ ಅದರ ಪ್ರಾಯೋಜಕರಾಗಿದ್ದ ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರ ಬಗ್ಗೆ ಕೀರ್ತಿಸಿ ಪದ್ಯವೊಂದನ್ನು ಬರೆದೆ. ಅದು ಪ್ರಕಟವಾಯಿತು.

ಮುದ್ರಣದಲ್ಲಿ ಬಂದಿದ್ದ ಕವಿತೆಯಂತಹ ನನ್ನ ವಾಕ್ಯಗಳನ್ನು ಅದರ ಕೆಳಗೆ ಬಂಜಗೆರೆ ಜಯಪ್ರಕಾಶ ಎಂದು ಮುದ್ರಿತವಾಗಿದ್ದ ನನ್ನ ಹೆಸರನ್ನು ಒಂದು ದಿನದಲ್ಲಿ ಅದೆಷ್ಟೋ ಸಲ ನೋಡಿಕೊಂಡೆ. ನನ್ನ ಪ್ರೀತಿಯ ಹುಡುಗಿಗೆ ಅದನ್ನು ತೋರಿಸಿ ಮಹತ್ಸಾಧನೆಯೆಂಬಂತೆ ಸಂತಸಪಟ್ಟೆ. ಗೆಳೆಯರಿಗೆಲ್ಲಾ ತೋರಿಸಿದೆ. ಅಕ್ಷರ ಜಗತ್ತಿನ ನಿರ್ಮಾಪಕರ ಸಾಲಿನಲ್ಲಿ ನಾನೂ ಒಬ್ಬ ಎಂಬಂತಹ ಹುಸಿ ಸಂತಸ ಆಗ ನನ್ನದಾಗಿತ್ತು.

ಇದು ಈವರೆಗೆ ಹೀಗೆ ಕೇವಲ ಖಾಸಗಿ ಸಂತಸದ, ವ್ಯಕ್ತಿ ಪ್ರತಿಷ್ಠೆಯ ವಿಷಯವಾಗಿ ಮಾತ್ರ ಬಳಕೆಯಲ್ಲಿತ್ತು. ಈ ನಡುವೆ ಏನಾಯಿತೆಂದರೆ, ಸರಳ ಸಾಮೂಹಿಕ ವಿವಾಹಕ್ಕೆ ಅತಿಥಿಗಳಾಗಿ ಬಂದಿದ್ದ ವೀರೇಂದ್ರ ಹೆಗ್ಗಡೆ ತಮ್ಮ ಭಾಷಣದಲ್ಲಿ ಸ್ಮರಣ ಸಂಚಿಕೆಯಲ್ಲಿದ್ದ ನನ್ನ ಕವಿತೆಯನ್ನು ಪ್ರಸ್ತಾಪಿಸಿದರೆಂದು ಕಾಣುತ್ತದೆ. ರೋಟರ್‍ಯಾಕ್ಟ್ ಅಧ್ಯಕ್ಷನ ತಮ್ಮ ಎಂಬ ಕಾರಣಕ್ಕೂ ವೀರೇಂದ್ರ ಹೆಗ್ಗಡೆಯವರಿಗೆ ನನ್ನ ಕವಿತೆ ಪ್ರಸ್ತಾಪಾರ್ಹವಾಗಿ ಕಂಡಿರಬಹುದು.

ಆದರೆ, ಅಕ್ಷರ ಸಂಸ್ಕೃತಿಗೆ ಹೊಸದಾಗಿ ಅಲ್ಪ ಸ್ವಲ್ಪ ಪ್ರವೇಶ ಪಡೆದಿದ್ದ ನನ್ನ ಹಿಂದುಳಿದ ಬುಡಕಟ್ಟು ಜಾತಿಯ ಜನರಿಗೆ ಇದೊಂದು 'ಚೋಚಿಗ'ವಾಗಿತ್ತು. ವೃತ್ತ ಪತ್ರಿಕೆ ಓದುವಷ್ಟು

ಅಕ್ಷರ ಬಲ್ಲ ನನ್ನ ತಂದೆ ಹಾಗೂ ತಾಯಿಯ ಕಡೆಯ ತಾತಂದಿಬ್ಬರಿಗೆ ಮಾತ್ರ ಹೊಸ ಆಸ್ತಿ ಸಂಪಾದಿಸಿದಷ್ಟು ಸಂತಸವಾಗಿತ್ತು. ರೈತಾಪಿ ಸಮುದಾಯಕ್ಕೆ ಹೊಸ ಜಮೀನು ಸಂಪಾದಿಸುವುದು, ಮಕ್ಕಳು ಹಣ ಸಂಪಾದನೆ ಮಾಡಿದರೆ ಧನ್ಯತೆಯ ವಿಷಯ. ಆದರೆ ಮಾಮೂಲಿ ಧನ್ಯತೆಯ ಭಾಗವಾಗಿರದ ಈ ಸಾಧನೆ ಅವರಿಗೆ ವಿಶಿಷ್ಟ ಬಗೆಯದೆನಿಸಿರಬಹುದು. ಅವರ ಮೊಮ್ಮಗನ ಹೆಸರು ತಮ್ಮ ಸ್ವಂತ ಊರಿನ ಹೆಸರಿನ ಜೊತೆ ಮುದ್ರಣದಲ್ಲಿ ಅಜರಾಮರವಾಗ ತೊಡಗಿದೆಯೆಂಬ ಸಂಭ್ರಮದಲ್ಲಿ, ಅವರು ಕವಿತೆಯನ್ನು ಎಲ್ಲರಿಗೂ ತೋರಿಸುತ್ತಾ ಓಡಾಡಿದರು.

ಆ ಸಲದ ರಜಕ್ಕೆ ನಾನು ಬಂಜಗೆರೆಗೆ ಹೋದಾಗ ನನ್ನ ಓರಗೆಯ ಗೆಳೆಯರ ನಡುವೆ 'ಪುಟ್ಟ ಪ್ರಮಾಣದ ಹೀರೋ' ಆಗಿದ್ದೆ. ಅಕ್ಷರಗಳೊಡನೆ ಒಡನಾಡುವುದು ಸಾಮಾಜಿಕವಾಗಿ ಹಿಂದುಳಿದಿದ್ದ ನಮ್ಮ ಸಮಾಜದಲ್ಲೂ ಇಷ್ಟೊಂದು ಮೆಚ್ಚುಗೆ ಗಳಿಸುವ ವಿಷಯ ಎಂಬುದು ನನ್ನ ಅರಿವಿಗೆ ಬರತೊಡಗಿತು. ಅದೇ ಸಮಯದಲ್ಲಿ ನಾನು ಸಿನಿಮಾದಲ್ಲಿ ನಟಿಸಿ ಪ್ರತಿಷ್ಠೆ ಗಳಿಸಬೇಕೆಂದು ಪ್ರಯತ್ನಿಸಿದ್ದೆ. ಶಿಫಾರ್ಸು ಪತ್ರದೊಂದಿಗೆ ದ್ವಾರಕೀಶ್ ನಿರ್ಮಾಣದ 'ನ್ಯಾಯ ಎಲ್ಲಿದೆ' ಸಿನಿಮಾದ ಚಿತ್ರೀಕರಣಕ್ಕೆ ಹೋಗಿ, ಅವರು ಸೂಚಿಸಿದ ಸಣ್ಣ ಪಾತ್ರ ತೀರಾ ಕಳಪೆ ಅನ್ನಿಸಿ ಹಿಂತಿರುಗಿ ಬಂದಿದ್ದೆ.

ನನ್ನ ಸ್ವಂತಿಕೆಯನ್ನು ಸಾರ್ವಜನಿಕಗೊಳಿಸಿಕೊಳ್ಳುವ ಖರ್ಚುರಹಿತ ಹತ್ತಿರದ ದಾರಿಯಾಗಿ ನನಗೆ ಮುದ್ರಣ ಲೋಕ ತೆರೆದುಕೊಂಡಿತ್ತು. ಸಾಹಿತ್ಯದ ತೀವ್ರಾಭ್ಯಾಸಕ್ಕೆ ನಾನು ಬಿದ್ದೆ. ಪುಸ್ತಕ ಓದುತ್ತಿರುವಂತೆ ಸಾರ್ವಜನಿಕವಾಗಿ ಕಾಣಿಸಿಕೊಳ್ಳುವುದೇ ನನ್ನ ವಿಶಿಷ್ಟ ಹವ್ಯಾಸ ಎಂಬಂತಹ ಶೋಕಿಗೂ ಬಿದ್ದೆ.

ನನ್ನ ಪ್ರೀತಿಯ ಹುಡುಗಿ ಈ ನಡುವೆ ಅವಳಿಗೆ ಬರೆದಿದ್ದ ಪತ್ರಗಳ ಜೊತೆಗಿರುತ್ತಿದ್ದ ಕವಿತೆಗಳನ್ನು, ಪತ್ರವನ್ನು ಹೊರತುಪಡಿಸಿ ತನ್ನ ಸಹಪಾಠಿ ಹುಡುಗಿಯರಿಗೆ ಓದಿಸಿದ್ದಳು. ತಮ್ಮ ಗೆಳತಿಯ ಪ್ರೇಮಿಯನ್ನು ನೋಡಬೇಕೆಂದೋ ಕವಿತೆಯೆಂಬಂತದನ್ನು ಬರೆಯುವವನನ್ನು ನೋಡಬೇಕೆಂದೋ ಅವರೆಲ್ಲಾ ಬಂದು ನನ್ನನ್ನು ಪರಿಚಯಿಸಿಕೊಳ್ಳುತ್ತಿದ್ದರು. ಅವರ ನಡುವೆ ನಿಂತಿರುತ್ತಿದ್ದ ನನ್ನ ಹುಡುಗಿ ವ್ಯಕ್ತಪಡಿಸುತ್ತಿದ್ದ ಅರಳುಗಣ್ಣಿನ ಪ್ರಶಂಸೆ ಆಗ ನನಗೆ ಜ್ಞಾನಪೀಠ ಪ್ರಶಸ್ತಿಯಷ್ಟು ಮೌಲ್ಯದ್ದಾಗಿ ಕಾಣುತ್ತಿತ್ತು. ಸತ್ಯವೇನೆಂದರೆ ಆಗಿನ್ನೂ ನನಗೆ ಜ್ಞಾನಪೀಠವೆಂಬುದು ಸಾಹಿತ್ಯಕ್ಕೆ ನೀಡುವ ಬಹಳ ಪ್ರತಿಷ್ಠಿತ ಪ್ರಶಸ್ತಿ ಎಂಬುದೂ ಸ್ಪಷ್ಟವಿರಲಿಲ್ಲ.

ನಾನು ಬಿಎ ಓದಲು ಮೈಸೂರು ಮಹಾರಾಜಾ ಕಾಲೇಜಿಗೆ ಬಂದೆ. ಈ ನಡುವೆ ಜಾತಿ ಜಗಳದ ಕಾರಣದಿಂದ ನನ್ನ ಪ್ರೀತಿಯ ಹುಡುಗಿ ನನ್ನಿಂದ ದೂರವಾಗಿಸಲ್ಪಟ್ಟಿದ್ದಳು. ನನ್ನ ಎದೆಯಲ್ಲಿ ವಿಚಿತ್ರ ಕೋಲಾಹಲ, ದುಃಖ ಕಣ್ಣೀರು ತುಂಬಿ ಮೊರೆಯುತ್ತಿತ್ತು. ಬಿಎ ದಿನಗಳಲ್ಲಿ ಪ್ರತಿದಿನವೂ ನಾನು ಕವಿತೆ ಬರೆದೆ. ಬರೆಯುವಾಗ ಅತ್ತೆ. ಬರೆದುದನ್ನು ಓದಿದಾಗ, ಕೇಳಿಸಿಕೊಳ್ಳುವ ಗೆಳೆಯರೂ ಅತ್ತರು. ಅತ್ತು ಎದೆ ಹಗುರವಾಗುವ ಹೊತ್ತಿಗೆ ನನಗೆ

ಮೈಸೂರಿನ ವಿಶಾಲ ಪ್ರಪಂಚದಲ್ಲಿ ಹೊಸ ನೋವಿನ ಸವಾಲಿನ ಎಳೆಗಳು ಸುತ್ತಿಕೊಳ್ಳತೊಡಗಿದ್ದವು. ಸಾಂಸ್ಕೃತಿಕ ಶಿಷ್ಟತೆ, ಇಂಗ್ಲಿಶ್ ವ್ಯಾಮೋಹ, ಜಾತಿವಾದಿ ಗುಂಪುಗಾರಿಕೆಗಳು, ಉಳ್ಳ ವರ್ಗದ ಹುಡುಗರ ಗೇಲಿಗಳು ನಮ್ಮನ್ನು ವಿಚಿತ್ರ ಪರಕೀಯತೆಗೆ ಈಡು ಮಾಡತೊಡಗಿದ್ದವು. ನನ್ನ ಪರಿಚಿತ ಸಂದರ್ಭದಿಂದ ಹೊರಗಿನ ಸಮಾಜದಲ್ಲಿ ಮೊದಲ ಬಾರಿಗೆ ನನ್ನ ಜಾತಿ, ವರ್ಗಗಳ ನೆಲೆ ಬೆಲೆಗಳೇನು ಎಂಬ ವಾಸ್ತವಕ್ಕೆ ನಾನು ಮುಖಾಮುಖಿಯಾಗತೊಡಗಿದ್ದೆ.

ಆಗ ಕಮ್ಯೂನಿಸ್ಟ್ ಚಳುವಳಿಯ ಪ್ರಭಾವ ನನ್ನ ಮೇಲಾಯಿತು. ವ್ಯಕ್ತಿಗತ ಕೊರಗುಗಳು ಕೇವಲ ನಮ್ಮ ಸಂಪಾದನೆಗಳಾಗಿರದೆ ಅವಕ್ಕೆ ಸಾಮಾಜಿಕ ಆಯಾಮಗಳು, ಸಿಕ್ಕುಗಳಿವೆಯೆಂಬ ಸೈದ್ಧಾಂತಿಕ ತಿಳುವಳಿಕೆ ನನ್ನದಾಗತೊಡಗಿತು. ಹೀಗೆ ನನ್ನ ಬರಹಗಳು ನನ್ನನ್ನು ಒಳಗೊಂಡಿರುವಾಗಲೇ ನನ್ನಂತಹ ಎಷ್ಟೋ ಜನರನ್ನು ಒಳಗೊಳ್ಳಬಹುದಾಗಿದೆ ಎಂಬ ನಂಬಿಕೆಯಿಂದ ಬರೆಯತೊಡಗಿದೆ.

ಆಗ ನವ್ಯ ಮತ್ತು ಬಂಡಾಯಗಳೆರಡೂ ಸಕ್ರಿಯವಾಗಿ ನನ್ನೆದುರಿಗಿದ್ದವು. ನನ್ನ ಸಾಮಾಜಿಕ ವಾಸ್ತವದ ಕಾರಣಕ್ಕೆ ಬಂಡಾಯದ ಹಾದಿ ಹೆಚ್ಚು ಹತ್ತಿರವಾಗಿತ್ತು. ವ್ಯಕ್ತಿ ವೈಶಿಷ್ಟ್ಯದ ವ್ಯಾಮೋಹ ನವ್ಯ ಮಾರ್ಗದಲ್ಲೂ ಬರೆಯಬೇಕೆಂಬ ಹಂಬಲಗಳನ್ನು ತಂದಿಟ್ಟಿತ್ತು. ಏನೇ ಆದರೂ ನಾನು ಪ್ರಜ್ಞಾಪೂರ್ವಕವಾಗಿ ಬರೆಯುವ ಹಾದಿಗಳನ್ನು ಹುಡುಕಿಕೊಳ್ಳಲಿಲ್ಲ. ನನ್ನ ಎದೆಯೊಳಗೆ ಕುದ್ದ ಭಾವನೆಗಳು ಬರವಣಿಗೆಯಲ್ಲಿ ಬಂದವು. ಈ ನಡುವೆ ಕವಿತೆಯ ಬಗ್ಗೆ ನನಗೆ ಇನ್ನೊಂದು ಕೃತಜ್ಞತೆಯೂ ಸೇರಿಕೊಂಡಿತ್ತು. ಎಡಪಂಥೀಯ ಚಳುವಳಿಯ ಸಾಮೂಹಿಕತೆ ನಡುವೆ ನನ್ನ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳಲು ಒಂದು ಆಶ್ರಯವನ್ನು ನಿರ್ಮಿಸಿತ್ತು.

ನಾನು ಕವಿಯೆಂದಾಗ ವಿಶಿಷ್ಟ ಗೌರವದಿಂದ ಬರಮಾಡಿಕೊಂಡ ಕಮ್ಯೂನಿಸ್ಟ್ ಚಳುವಳಿಗಳು, ನಾನು ಅವರ ನಿರೀಕ್ಷೆಯ ಕಮ್ಯುನಿಸ್ಟ್ ಕವಿಯಾಗಲಿಲ್ಲ ಎಂದು ನಿರಾಶೆಪಟ್ಟುಕೊಂಡವು. ಹಾಗೆಯೇ ಸಮಾಜದ ಪ್ರತಿಷ್ಠಿತ ಸಾಹಿತ್ಯ ವಲಯಗಳು ನನ್ನನ್ನು ಸಮದೂರದಲ್ಲಿಟ್ಟವು. ಅವರ ಮಟ್ಟಿಗೆ ನಾನು ಕಟ್ಟಾ ಹೋರಾಟಗಾರ ಕವಿಯಾಗಿದ್ದೆ. ಇವೆಲ್ಲವೂ ನನ್ನನ್ನು ಈಗಲೂ ಬರಹ ಮಾಡುವುದನ್ನು ಕೌತುಕದ ಸಂತಸದ ವಿಷಯವಾಗಿ ಉಳಿಸಿವೆ. ಚರಬಂಡರಾಜುವಿನಲ್ಲಿ ನನ್ನ ಅಂತರಾಳದ ಆಕ್ರೋಶಕ್ಕೆ ಬಾಯಾಗಬಲ್ಲ ಮಾತುಗಳಿದ್ದವು. ನೆರೂದನಲ್ಲಿ ನನ್ನ ತಳಮಳಗಳನ್ನು ಸಂಕೀರ್ಣತೆಯಲ್ಲಿ ಗ್ರಹಿಸುವ ಅಭಿವ್ಯಕ್ತಿಯಿದ್ದಿತು.

ಹೀಗೇ ಬರೆಯಬೇಕು ಅಂತ ಬರೆದಾಗ ನಾನು ಬರೆದ ಧನ್ಯತೆ ದೊರೆತಿಲ್ಲ. ನಾನು ನಾನಾಗಿ ಬರೆದಾಗ ಮಾತ್ರ ಅವು ನನ್ನ ಅಸ್ತಿತ್ವದ ನಿಜಾಭಿವ್ಯಕ್ತಿಗಳಾಗಿ ನಿಂತಿವೆ. ಈಗ ನಾನು ಯಾಕೆ ಬರೆಯುತ್ತಿದ್ದೇನೆ ಎಂಬುದಕ್ಕಿಂತ ನಾನು ಯಾಕೆ ಬರೆಯತೊಡಗಿದೆ ಎಂಬುದೇ ಹೆಚ್ಚು ಅರ್ಥಪೂರ್ಣ ವಿವರಣೆ ಅನ್ನಿಸಿದೆ. ಬರವಣಿಗೆಯೆಂಬುದು ಈಗ ನನ್ನ ಸಂದರ್ಭದೊಂದಿಗೆ ನಾನು ನಡೆಸುವ ಒಂದು ಸಂಘರ್ಷ. ಅದೇ ಸಮಯದಲ್ಲಿ ಅದೊಂದು ಅನುಸಂಧಾನ.

●

# ನನ್ನ ಹಳ್ಳಿ ನನ್ನ ಬರವಣಿಗೆಯ ಸೆಲೆ

● ಬಸವರಾಜ ಕುಕ್ಕರಹಳ್ಳಿ

ಮೊದಲಿಗೆ ನನಗೆ ಅಕ್ಷರವಂತನಾಗಲು ಅವಕಾಶ ಮಾಡಿಕೊಟ್ಟ ಸಮಾಜಕ್ಕೆ ಅಂತಹ ಸಮಾಜದ ಹಂಬಲಕ್ಕಾಗಿ ಹೋರಾಡಿದ ಮಹಾನುಭಾವರಿಗೆ ನಾನು ಕೃತಜ್ಞನಾಗಿದ್ದೇನೆ. ನಮಗೆ ಈ ಅವಕಾಶ ಸಿಗದಿದ್ದರೆ ಅಕ್ಷರಗಳೊಳಗೆ ಅಡಗಿ ಕುಳಿತಿದ್ದ ನಮ್ಮ ಸಾಂಸ್ಕೃತಿಕ ಲೋಕದ ಅರಿವೇ ನಮಗಾಗುತ್ತಿರಲಿಲ್ಲವೇನೊ ಅನಿಸುತ್ತದೆ. ಇದರಿಂದಾಗಿ ನಾನು ಹುಲುಸಾದ ಜೋಳದ ತೆನೆಯಂತೆ ತುಂಬಿಕೊಂಡಿರುವ ಸಾಂಸ್ಕೃತಿಕ ಲೋಕದಲ್ಲಿ ಒಂದು ಕಾಳಾದೆ. ಬಡಿದು ಕೇರಿ ತೂರುವಾಗ ಮೂಟೆಯೊಳಗೆ ಸೇರಿಬಿಟ್ಟಿದ್ದರೆ ಯಾರದೋ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗುತ್ತಿದ್ದೆ. ಆಗಾಗಲು ಬಿಡದ ನನ್ನಪ್ಪ ಅವ್ವ ಕಾಳನು ಕೋಳಿ ಕಣ್ಣಿಂದಲೂ ತಪ್ಪಿಸಿ ಗುಡಾಣದಲಿ ಕೂಡಿ ಪೈರು ಮಾಡಿದರು. ಅವರು ಬೇಡಿ ಬೊಗಸೆಯೊಡ್ಡಿ ಕುಡಿಯುತ್ತಿದ್ದ ನೀರನ್ನು ಬಟ್ಟೆಗೆ ಚಲ್ಲಿಕೊಂಡು ಆ ಬಟ್ಟೆಯ ನೀರನು ತಂದು ಪೈರಿನ ಬುಡಕೆ ಹಿಂಡಿ ಪೈರನು ಕಾಪಾಡಿದರು. ಮಗ ಅಕ್ಷರವಂತನಾಗಲಿ ಎಂದು ನಕ್ಷತ್ರಗಳ ಎಣಿಸದೆ ಸೂರ್ಯಚಂದ್ರ ಕಾಣದೆ ಮಣ್ಣಿಗೆ ಮುಖವೊಡ್ಡಿ ದುಡಿದರು. ಪೈರು ಬೆಳೆದು ತೆನೆ ಬಿಟ್ಟಾಗ ಬಡಿದು ಕೇರಿ ತೂರುವ ಸಮಯಕ್ಕೆ ಕಣ್ಮರೆಯಾದರು. ಆ ತೆನೆ, ತೆನೆಯಲ್ಲಿ ಬಲಿತ ಕಾಳು ಮಳೆಯಲ್ಲಿ ನೆನೆದು ಬಿಸಿಲಲ್ಲಿ ಒಣಗಿ ನೆಲಕೊರಗಿದರೂ ಗೆದ್ದಲ್ಹಿಡಿಯಲುಬಿಡದೆ ಕಾಪಾಡಿದವರು ನೆರೆಯ 'ಮಾರ್ಕ್ಸ್‌ವಾದ' ಮತ್ತು 'ದಲಿತ ಸಂಘರ್ಷ ಸಮಿತಿ'. ಈಗ ಅವರು ಕೇರಿ ತೂರಿದ ಕಾಳು 'ನಾನು ಮತ್ತು ನನ್ನ ಬರವಣಿಗೆ'. ಸಾಹಿತ್ಯದ ವಿದ್ಯಾರ್ಥಿಯಲ್ಲದ ನನಗೆ ಸಾಹಿತ್ಯದ ಆಳ ಅರಿವು ಕಡಿಮೆ. ಹುಲುಸಾಗಿ ಬೆಳೆದು ಹಬ್ಬುತ್ತಿರುವ ಸಾಹಿತ್ಯದ ಬಳ್ಳಿಯಲ್ಲಿನ ಕುಡಿಯಾಗಿ ನಾನು ಹಬ್ಬುತ್ತಿದ್ದೇನೆಯೋ; ಹಲುಬುತ್ತಿದ್ದೇನೆಯೋ ತಿಳಿಯೆ!

ನನ್ನಪ್ಪ ಅವ್ವಂದಿರ ಆಸೆಯಂತೆ ವಿದ್ಯಾವಂತ ಬುದ್ಧಿವಂತನಾಗಲು ಓದುತ್ತಿದ್ದ ಕಾಲಕ್ಕೆ ಆಕಾಶದಲ್ಲಿನ ನಕ್ಷತ್ರ ಉರಿದು ಬಿದ್ದರೆ, ಬಿದ್ದಲ್ಲಿ ಸಾವು ಸಂಭವಿಸುತ್ತದೆ ಎಂದು ಎದುರಿ ರಾತ್ರಿಯ ವೇಳೆ ಆಕಾಶವನ್ನೇ ನೋಡುತ್ತಿರಲಿಲ್ಲ. ಅಳುವ ನಾಯಿಯನ್ನು ಕಿರುಚುವ ಕಾಗೆಯನ್ನು ಎದುರಿಸುತ್ತಾ, ಎದೆಗೆ ಹಿಟ್ಟೇರಿದರೆ 'ಏನೊ ಕಾರಣವಲ್ಲ' ಎಂದು ಆತಂಕ ಪಡುತ್ತಿದ್ದ ಅಪ್ಪ ಅವ್ವನ ಜೊತೆ ಪಲ್ಲಿ ಲೊಚಗುತ್ತಿದ್ದರೆ ನ್ಯಲ ಕುಟ್ಟುತ್ತಾ, ಬೇಸಿಗೆಯಲ್ಲಿ ಊರಿಗೆ ನುಗ್ಗುವ ಮಾರಿಯರಿಗೆ ಮುಖಾಮುಖಿಯಾಗುವ ನಮ್ಮೂರ ದೇವರ ಕಂಡಾಯಗಳ ಮೆರವಣಿಗೆಯಲ್ಲಿ, ರಾಮಮಂದಿರದ ಭಜನೆಯಲ್ಲಿ ಗರುಡಗಂಬವ ಹಿಡಿಯಲು ಓಡೋಡುತ್ತಿದ್ದೆ. ಕೋಳಿಯ ಕತ್ತನು ಸರ ಸರನೆ ಕುಯ್ದು ಬಟ್ಟಲಿಗೆ ಹಿಂಡುವ ರಕ್ತ ರಸಕೆ ಉಪ್ಪನು ಬೆರೆಸಿ ರಕ್ತ ಹೆಪ್ಪುಗಟ್ಟಿಸಿ ಅದರಿಂದ ಅವ್ವ ಮಾಡುತ್ತಿದ್ದ ಲಾಕಿಗೆ ಜೊಲ್ಲು ಸುರಿಸುತ್ತಿದ್ದೆ. ತಂಗಾಳಿ ಬಿರುಗಾಳಿಗಳ ವ್ಯತ್ಯಾಸವರಿಯದ ನಾನು ಹಣೆಗೆ ದೂಳತವನ್ನು ಅಂಟಿಸಿಕೊಂಡು

ನಮ್ಮೂರ ಸುಖ ದುಃಖಗಳಲ್ಲಿ ಲೀನವಾಗಿದ್ದ ಕಾಲ.

ಇಂತಹ ಮಾಗಿದ ಕಾಲಕ್ಕೆ ನಮ್ಮೂರಿಗೆ ಬಂದ ಅಪರಿಚತರು ಊರಿನ ಮೂಲೆಯಲ್ಲಿ ಜಾಗ ಹಿಡಿದು ಮಾರ್ಕ್ಸ್‌ವಾದಿ ಗ್ರಂಥಾಲಯ ಸ್ಥಾಪಿಸಿದರು. ಉಳ್ಳವರ ತಲೆಗಳಿಗೆ ಬಾಂಬಾಗುವ ಇಲ್ಲದವರ ತಲೆಗೆ ಹೂವಾಗುವ ಇದು ಮಾರ್ಕ್ಸ್‌ವಾದ ಎಂದರು. ಅದಾಗಲೆ ಅದೆಷ್ಟೊ ಕಾಡಿನ ನಾಡಿನ ಹೂಗಳನ್ನು ನೋಡಿದ್ದ ನಮಗೆ ಈ ಹೂವಿನ ಗಂಧ ಗಾಳಿ ತಿಳಿಯಲಿಲ್ಲ. ಅಷ್ಟಕ್ಕೆ ಅವರು ಬಿಡಲೂ ಇಲ್ಲ. ನಮ್ಮನ್ನೆಲ್ಲಾ ತಮ್ಮ ತೆಕ್ಕೆಯೊಳಗೆ ತೆಗೆದುಕೊಳ್ಳಲು ಆ ಹೂವಿನ ಪರಿಮಳವನ್ನು ನಮಗೆ ಪರಿಚಯಿಸಲು ಪ್ರಯಾಸಪಡುತ್ತಿದ್ದರು. ನಮ್ಮನ್ನು ಮುಟ್ಟಿಸಿಕೊಳ್ಳಲೂ ಅಸಹ್ಯಪಡುತ್ತಿದ್ದ ಕಾಲದಲ್ಲಿ ಈ ನಯಸಾದ ಗಮ್ ಅನ್ನುವ ಜನ ನಮ್ಮನ್ನು ಮುಟ್ಟಿದರು. 'ನಾವೂ ಮನಸ್ರು ಕಣ್ರಯ್ಯ' ಅಂದರು! ಆಗ ನಾವೆಲ್ಲಾ ಮನಸ್ರೇ ಆಗ್ಬುಟ್ವೊ. ಅವರ ಜೊತೆ ನಗತಾ ನುಡಿತಾ ಮಾತಾಡಕ್ಕೆ ಶುರು ಮಾಡೇ ಬಿಟ್ವೆ. ಅವರು ನಮ್ಮನ್ನು ಕೂರಿಸಿಕೊಂಡು ನಕ್ಷತ್ರ ಉದುರುವುದು ಸಹಜ. ಅದರಿಂದ ಅದು ನಾಶವಾಗುತ್ತದೆ. ಅದರಿಂದ ಮತ್ತೇನು ತೊಂದರೆ ಇಲ್ಲವೆಂದು ನಮ್ಮ ಪ್ರಶ್ನೆಗಳಿಗೆ ಉತ್ತರ ಹೇಳಿಕೊಟ್ಟರು. ವಿಜ್ಞಾನದಲ್ಲಿ ಇದಕ್ಕೆಲ್ಲಾ ಉತ್ತರವಿದೆ. ನೀವೆಲ್ಲಾ ವಿಜ್ಞಾನ ಓದಿ ವೈಜ್ಞಾನಿಕ ಮನೋಭಾವ ಬೆಳಸಿಕೊಳ್ಳಬೇಕು ಎಂದರು.

ಆಮೇಲೆ ಮೇಲು ಕೀಳುಗಳನ್ನೆಲ್ಲಾ ಅಲ್ಲಗಳೆಯುತ್ತಾ ತಿಂಗಳಾನುಗಟ್ಟಲೆ ಮಾನವರ ವಿಕಾಸದ ಬಗ್ಗೆ ಪಾಠ ಮಾಡಿದರು. ವಿಜ್ಞಾನ ಒಂದೇ ಮನುಷ್ಯ ಮನುಷ್ಯರ ನಡುವೆ ಸಮಾನತೆ ತರುವ ಸಾಧನ ಎನ್ನುವ ವಿಶ್ವಾಸವನ್ನು ನಮ್ಮಲ್ಲಿ ಮೂಡಿಸಿದರು. ಈ ಜ್ಞಾನ ನಮ್ಮ ತಲೆಯೊಳಗೆ ಸೇರುವ ಮುಂಚೆ ದೇವರೇ ನಮ್ಮ ಬಾಳಿನ ಸರ್ವಸ್ವ, ಒಳ್ಳೆಯದನ್ನೂ ಕೆಟ್ಟದ್ದನ್ನೂ ನಿರ್ಧರಿಸುವ ಅವನು ಒಳ್ಳೆಯವರಿಗೆ ವರವನ್ನೂ, ತಪ್ಪು ಮಾಡಿದವರಿಗೆ ಶಿಕ್ಷೆಯನ್ನೂ ವಿಧಿಸುತ್ತಾರೆ ಎಂದು ನಂಬಿ ನಡೆಯುತ್ತಿದ್ದ ನಾವು, ಆ ಕ್ಷಣದಿಂದಲೇ ನಮ್ಮ ತಲೆಗಳಲ್ಲಿ ತುಂಬಿಕೊಂಡಿದ್ದ ದೇವರುಗಳನ್ನು ಆಚೆಗೆ ಹಾಕಿ, ಬಾಲ್ಯದಿಂದಲೇ ಬಾಗಲಲ್ಲಿ ನೇತಾಡಿಸುತ್ತಿದ್ದ ದೇವರ ಫೋಟೊಗಳನ್ನು ಕಳಚಿಬಿಟ್ಟೆವು. ಮಾರ್ಕ್ಸ್‌ನೇ ಮೈಮೇಲೆ ಬಂದಂತೆ ದೇವರುಗಳನ್ನೂ, ದೇವರುಗಳ ಪೂಜಿಸುವ ನಮ್ಮ ಮನೆಯವರನ್ನೂ, ಪ್ರಶ್ನೆ ಮಾಡಲು ಶುರು ಮಾಡಿದೆವು. ಆಗ ನನ್ನಪ್ಪ ಅವ್ವ ಇರುವ ಒಬ್ಬ ಮಗ ನಾವು ಸತ್ತು ಕೆಟ್ಟ ಮೇಲೆ ಅನ್ನ ನೀರು ಹಾಕುತ್ತಾನೊ ಇಲ್ಲವೋ ಎನ್ನುವ ಅನುಮಾನ ಇಟ್ಟುಕೊಂಡೇ ಇಹಲೋಕ ತ್ಯಜಿಸಿದರು.

ಅಷ್ಟಷ್ಟು ತಿಳುವಳಿಕಸ್ತನಾಗಿ ನಾವು ಮೂಢನಂಬಿಕೆಗಳ ವಿರುದ್ಧ ತಿರುಗಿ ಬೀಳುವ ಕಾಲಕ್ಕೆ ಈಗಲೂ ನಮಗೆ ಜ್ಞಾನ ದೀವಿಗೆಯಾದವರು, ಮಾದರಿಯಾದವರು, ಡಾ. ರಾಮಲಿಂಗಮ್. ಇವರು ಶೋಷಣೆಗೆ ಮೂಢನಂಬಿಕೆಯೂ ಒಂದು ಮೂಲ ಕಾರಣ ಎಂದು, ಇದೂ ಜನರ ಮನಸ್ಸಿನಿಂದ ಹೋಗಲಾಡಿಸಲು ನಾನಾ ಸಾಂಸ್ಕೃತಿಕ ಮಾರ್ಗಗಳನ್ನು ಹುಡುಕುತ್ತಿದ್ದರು. ಕಡೆಗೆ ನಮ್ಮನ್ನೆಲ್ಲಾ ಕೂಡಿಸಿಕೊಂಡು ಒಂದು ಸಾಂಸ್ಕೃತಿಕ ತಂಡ ಕಟ್ಟಿದರು.

ಆಗ ಅವರಿಗೆ ಕನ್ನಡ ಅಷ್ಟಾಗಿ ಬರದಿದ್ದರೂ ಕನ್ನಡದಲ್ಲೆ ಮಾತನಾಡುತ್ತಾ, ಕನ್ನಡ ಅಕ್ಷರಗಳನ್ನು ಕಲಿಯುತ್ತಾ, ಅಲ್ಲಲ್ಲೆ ಶೋಷಣೆಯ ವಿರುದ್ಧ ಹಾಡುಗಳನ್ನು ಕಟ್ಟುತ್ತಾ ಚೆಂದದ ಧ್ವನಿ ಇಲ್ಲದಿದ್ದರೂ ಹಾಡುತ್ತಾ, ನಾಚುತ್ತಿದ್ದ ನಮಗೂ ಹಾಡುವಂತೆ ಮಾಡಿದರು, ಬರೆಯುವಂತೆ ಪ್ರೇರೇಪಿಸಿದರು. ಅವರಿಗಿದ್ದ ಶ್ರದ್ಧೆ ಮಾನವೀಯ ಕಳಕಳಿ ನಮ್ಮಲ್ಲಿದ್ದ ಚೈತನ್ಯವನ್ನು ಇಮ್ಮಡಿಗೊಳಿಸಿತು. ಅವರೇ ಹೇಳುವಾಗ ನಾವ್ಯಾಕೆ ಬರಿಯಬಾರದು ಎಂದು ನಾವೂ ಶೋಷಣೆಯ ವಿರುದ್ಧ, ರೈತ ಕಾರ್ಮಿಕರ ಪರವಾದ ಹಾಡು-ನಾಟಕಗಳನ್ನು ಬರೆಯಲು ಶುರು ಮಾಡಿದೆವು. (ಅವುಗಳಿಗೆ ವಿಮರ್ಶೆ ಇಲ್ಲ)ದ ಅವುಗಳನ್ನು ನಾವೇ ಕಲಿತು ಬೀದಿಗಳಲ್ಲಿ ಮೊಹಲ್ಲಾಗಳಲ್ಲಿ ಹಾಡಲು ಶುರು ಮಾಡಿದೆವು. ಆಗ ಭಿಕ್ಷುಕರು ಬಿಟ್ಟರೆ ನಾವೇ ಬೀದಿಯ ಹಾಡುಗಾರರು.

ಈ ಸಮಯಕ್ಕಾಗಲೇ ಕರ್ನಾಟಕದಲ್ಲೆಡೆ ದಲಿತ ಸಂಘರ್ಷ ಸಮಿತಿ ಒಡೆಯರಿಗೆ ಉರುಳಾಗಿ ದಲಿತರಿಗೆ ಬದುಕಾಗಿ ಜಾತಿಯ ಮೇಲು ಕೀಳುಗಳ ಅಂತರವನ್ನು ತಾಳಲಾರದೆ ತಲ್ಲಣಗೊಂಡು ಸ್ಫೋಟಿಸುತ್ತಿತ್ತು. ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯ, ದಬ್ಬಾಳಿಕೆ, ಅತ್ಯಾಚಾರ, ಅಸಮಾನತೆಗೆ, ಅಸ್ಪೃಶ್ಯತೆಯ ಆಚರಣೆ ಇವೆಲ್ಲವೂ ಸಾಹಿತ್ಯದ ಪರಿಭಾಷೆಗಳಾಗ ಬಲ್ಲವು ಎಂದು ಸಾರುತ್ತಾ, ದಲಿತ ಸಾಹಿತಿಗಳು ಹುಟ್ಟಿ ದಲಿತರ ಪರವಾದ ಹೋರಾಟಕ್ಕೆ ಹಾಡುಗಳನ್ನು ಬರೆಯುತ್ತಿದ್ದರು. ಸಾಹಿತ್ಯ ರಚಿಸುತ್ತಿದ್ದರು. ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರು ಕಾಲಿಗೆ ಗೆಜ್ಜೆ ಕಟ್ಟಿ ಈ ಹಾಡುಗಳನ್ನೂ ಹಾಡುತ್ತಾ ಬಂಡಾಯದ ಬಾವುಟ ಬೀಸುತ್ತಿದ್ದರು. ಇದರಲ್ಲಿ ನಾನೂ ಲೀನನಾದೆ.

ಹೀಗೆ ಒಂದು ಕಡೆ ಮಾರ್ಕ್ಸ್‌ವಾದ ಇನ್ನೊಂದು ಕಡೆ ದಲಿತ ಸಂಘರ್ಷ ಸಮಿತಿ -ಇವು ನನ್ನೊಳಗಿದ್ದ ಚೈತನ್ಯವನ್ನು ಚಿಗುರಿಸಿದವು. ಇದು ನನ್ನ ಜೀವನದ ಮುಖ್ಯವಾದ ಕಾಲಘಟ್ಟ. ಇಷ್ಟೇ ಆಗಿದ್ದರೆ ಅಲ್ಲೆ ನಿಂತುಬಿಡುತ್ತಿದ್ದನೇನೊ? ಅದರೆ ಮಾರ್ಕ್ಸ್‌ವಾದಿಯಾಗಿದ್ದ ಪರಿಚಯ ವಾದ ರಾಮು ನಮ್ಮ ದಿಕ್ಕನ್ನೇ ಬದಲಿಸಿಬಿಟ್ಟ. ಅವನ ಮಾನವೀಯ ಅಂತಃಕರಣ, ಅದಕ್ಕಿಂತ ಹೆಚ್ಚಿಗೆ ಅವನಲ್ಲಿರುವ ತಾಯ್ತನ, ಅವನನ್ನು ಬಿಟ್ಟು ಕದಲದಂತೆ ಮಾಡಿತು. ಇವತ್ತಿಗೂ ಅಂಥ ಕ್ರೂರಿ ಅವನು.

ಅದಾಗಲೆ ದಲಿತ ಸಾಹಿತ್ಯ ಅದರಲ್ಲೂ ದೇವನೂರರ ಸಾಹಿತ್ಯದಿಂದ ಪ್ರಭವಾತವಿನಾಗಿದ್ದ ರಾಮು, ನಮ್ಮೊಳಗೂ ಆ ಬೀಜ ಮೊಳೆಯಲು ಗೊಬ್ಬರ ನೀರು ಎರೆದವನು; ನಮ್ಮೊಳಗಿದ್ದ ಅಜಾಗೃತಚಿತ್ತ ವ್ಯಕ್ತಿಗತವಾಗಲು ಬಿಡದೆ ವ್ಯಕ್ತಾತೀತವಾಗಿ ಬೆಳೆಯಲು ಮಾರ್ಗ ತೋರಿಸಿದವನು. 'ಅನ್ನ ತಟ್ಟೆಯಲ್ಲಿಟ್ಟರೆ ಅಹಾರ, ದೇವರ ಮುಂದಿಟ್ಟರೆ ಪ್ರಸಾದ' ಎಂದು, ಹಸಿದಿದ್ದ ನಮಗೆ ಎರಡನ್ನೂ ನೀಡಿ; ಬರವಣಿಗೆಯ ರೂಪ ಪ್ರತಿರೂಪವಾಗಿದ್ದರೆ ಒಪ್ಪದೆ, ಅದನು ಮೀರುವ ಕ್ರಿಯೆಯಲ್ಲಿ ತೊಡಗುವ ಚಾಲೆಂಜನ್ನು ನನ್ನ ಮುಂದಿಟ್ಟು ಬರೆಯಲು ನಾನಾ ದಾರಿ ತೋರುತ್ತಿರುವವನು ರಾಮು.

ಹೀಗೆ ಎಲ್ಲೆಡೆಯಿಂದ ಜ್ಞಾನ ಪಡೆದ ನನಗೆ, ಬದುಕಿದ್ದಕ್ಕೆ ನನ್ನನ್ನು ನಾನು ಸಾರ್ಥಕ

ಪಡಿಸಿಕೊಳ್ಳಬೇಕಲ್ಲ ಅನಿಸಿತು. ಏನೂ ಕಲಿಯದಿದ್ದ ನನಗೆ ಅಲ್ಪಸ್ವಲ್ಪ ಬರೆಯಲು ಕಲಿತಿದ್ದದ್ದೆ ದಾರಿಯಾಯಿತು. ನನ್ನೂರಲ್ಲೆ ನನ್ನ ಬರವಣಿಗೆಯ ಬೇರುಗಳು ಮೊಳೆತು ಕತೆಗಳು ಹುಟ್ಟಲು ಶುರುವಾದವು. ಬರದದ್ದೇನೊ ಬರೆದೆ. ತೋರಿಸುವುದು ಯಾರಿಗೆ ಬೀನ್ಸ್ ಅನ್ನು 'ಬೀನೀಸ್ ಕಾಯಿ' ಅಂದದ್ದಕ್ಕೆ, ಕಾಲದಿಂದಲೂ ಬೀನ್ಸ್ ತಿಂದವರಿಂದ 'ಹಣ್ಣು ಬ್ಯಾರೆ ಇದೀಯೋ?' ಎಂದು ಚುಡಾಯಿಸಿ ಕೊಂಡಿದ್ದೆ. ಜೊತೆಗೆ ಶಿಷ್ಟವಲ್ಲದ ನನ್ನ ಭಾಷೆ ಯಲ್ಲಿ ಅಕ್ಷರ ಜೋಡಣೆ, ಪದಗಳ ಜೋಡಣೆ, ಕೊನೆಗೆ ಕಷ್ಟಪಟ್ಟು ಬರೆದರೂ ಅದು ಕತೆಯಾಗಿ ಬೆಳೆದಿಲ್ಲ ಬೆಳೆಯುವ ರೀತಿ, ಇನ್ನೂ ದಕ್ಕಿಲ್ಲ ಎನ್ನುವ ಪದಪುಂಜಗಳು ಬೇರೆ ನೆನಪಿಗೆ ಬಂದು ಪಟ್ಟಾಡುತ್ತಿದ್ದೆ. ಕಡೆಗೆ ಧೈರ್ಯಮಾಡಿ ಬಲ್ಲವರಿಗೆ ಒಂದೆರಡು ಕತೆ ಕೊಟ್ಟೆ! ಅವರು ಪರವಾಯಿಲ್ಲ ಅಂದಾಗ, ನನಗಾದ ಸಂತೋಷ ಅಷ್ಟಿಷ್ಟಲ್ಲ! ಪರವಾಗಿಲ್ಲ ಎಂದದ್ದಕ್ಕಲ್ಲ! ನಾನೇ ನನಗೂ ಬರಿಯಕ್ಕೆ ಬರುತ್ತಲ್ಲ ಅಂದುಕೊಂಡದ್ದಕ್ಕೆ! ಕತೆಯ ಅಂದ ಚಂದ ಆಮೇಲಿನದು.

ನನ್ನ ಮೊದಲ ಕಥಾ ಸಂಕಲನದ ಕತೆಗಳನ್ನು ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಬೆಂಗಳೂರು ಇವರಿಗೆ ದೇವನೂರು ಪರಿಚಯಿಸಿಕೊಟ್ಟರು. ಸಂಘದ ಚಿ. ಶ್ರೀನಿವಾಸರಾಜು ರವರು ಮುತುವರ್ಜಿವಹಿಸಿ ನನ್ನ 'ಮೊಕಾರ' ಕಥಾ ಸಂಕಲನ ತಂದರು. ಕೃತಿಯನ್ನು ಗಮನಿಸಿದ ಕೆಲವರ ಒಳ್ಳೆಯ ಮಾತುಗಳನ್ನು ಕೇಳಿ ಖುಷಿಯಾಯಿತು. ತೆಗಳಿದವರ ಮಾತನ್ನೂ ಕೇಳಿ ಸದ್ಯ ನನ್ನ ಕೃತಿಯನ್ನು ಲೆಕ್ಕಕ್ಕಾದರೂ ತೆಗೆದುಕೊಂಡರಲ್ಲ ಎಂದು ಸಮಾಧಾನವಾಯಿತು.

ಈ ಕೃತಿ ಬಂದಮೇಲೆ ನಮ್ಮ ಕಾಲೇಜಿನಲ್ಲಿ ನನ್ನ ಸಹೋದ್ಯೋಗಿಗಳು ಸನ್ಮಾನ ಏರ್ಪಡಿಸಿದ್ದರು. ನನ್ನ ಕಥಾ ಸಂಕಲನ ಹೊರ ಬರುವವರೆಗೂ ನನ್ನ ವ್ಯಕ್ತಿತ್ವವನ್ನೇ ಗಮನಿಸದ ಜನ, ನೌಕರನಾಗಿ ನನಗೆ ಸಿಕ್ಕ ಜವಾಬ್ದಾರಿ ಸಮರ್ಥವಾಗಿ ನಡೆಸಿಕೊಟ್ಟರೂ ಕುರ್ಚಿ ಕೊಡದ ಅಥವ ಕುರ್ಚಿ ಕೊಡಬೇಕೆಂದು ತಿಳಿಯದ- ಜನ, ನನ್ನನ್ನು ಸನ್ಮಾಸಿ ಗೌರವಿಸಿದರು. ಇದು ಇತಿಹಾಸದ ವ್ಯಂಗ್ಯ. ಆದರೂ ಆ ಗೌರವ ನನ್ನನ್ನೂ ವಿನಯವಂತನನ್ನಾಗಿಸಿತು. ಆ ಗೌರವ ನನ್ನ ತಂದೆ ತಾಯಿಗಳಿಗೆ, ನನ್ನ ಕತೆಗಳ ಸಾಂಸ್ಕೃತಿಕ ಲೋಕದ ನಾಯಕರಿಗೆ ಸಂದ ಗೌರವ ಎಂದು ಗಂಭೀರನಾದೆ.

ಇಂದು ನಾವು ಬದುಕುತ್ತಿರುವ ರೀತಿಗೆ ನಾವು, ನಾನು ರೂಢಿಸಿಕೊಂಡಿರುವ ಅರ್ಥವ್ಯರ್ಥ ಜೊತೆಗೆ ದುರಾಸೆಯ ಅಪೇಕ್ಷೆಗಳಿಂದಲೋ ಅಥವ ನಮ್ಮ ಬದುಕಿನ ಕ್ರಮವನ್ನೂ ನನ್ನ ಕೈಯಿಂದ ತಪ್ಪಿಸಿ ತಾವೇ ನಿಯಂತ್ರಿಸಲು ಹುಟ್ಟಿರುವ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ ಎಂಬ ಅಂತಾರಾಷ್ಟ್ರೀಯ ಕೂಟಗಳೂ, ಮಾನವನ ಬದುಕಿಗೆ ಅರ್ಥ ಕೊಡಬಹುದಾದ ಗಂಭೀರ ಭಾವನೆಗಳು ಭ್ರಷ್ಟಗೊಳಿಸುತ್ತಾ ನಮ್ಮ ಸಾಮಾಜಿಕ ರಾಜಕೀಯ ಬದುಕಿನ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತಿವೆ. ಈ ಸಂದರ್ಭದಲ್ಲಿ ಮನುಷ್ಯನ ಈ ಮೂಲಭೂತವಾದ ಭಾವನೆಗಳಿಗೆ ಧಕ್ಕೆಯಾಗದಂತೆ ನಶಿಸದಂತೆ ಅವುಗಳನ್ನು ಕಾಪಾಡುವುದ ರಲ್ಲಿ ಸಾಹಿತ್ಯದ ಬಹುಮುಖ್ಯ ಪಾತ್ರವಿದೆ.

ಬರವಣಿಗೆಯಿಂದ ಅಂತಹದ್ದೇನನ್ನು ಸಾಧಿಸದಿರುವ ನಾನು ಸಾಹಿತ್ಯದಿಂದ ಕಲಿತದ್ದು, ಒಂದು ಸೃಜನಶೀಲ ಮನಸ್ಸು ಸುಪ್ತಸ್ಥಿತಿಯಿಂದ ಜಾಗೃತಗೊಂಡದ್ದು, ನನ್ನ ಬದುಕಿನ ಸಾರ್ಥಕತೆಯ ಬಗ್ಗೆ ನಾನಾ ಪ್ರಶ್ನೆ ಕೇಳುತ್ತಾ, ಅವಕ್ಕೆ ನಾನಾ ಉತ್ತರ ಹುಡುಕಿಕೊಂಡದ್ದು. ಅದರಿಂದಾಗಿ ನಾನು ಬೆಳೆದ ರೀತಿಯೇ ನಾನು ಸಾಹಿತ್ಯದಿಂದ ಪಡೆಯಬಹುದಾದ ಲಾಭ ಎನಿಸುತ್ತದೆ.

ಕಡೆಗೆ ನನ್ನ ಹುಟ್ಟೂರಾದ ನನ್ನ ಹಳ್ಳಿ ಇಂದಿಗೂ ನನ್ನ ಬರವಣಿಗೆಯ ಸೆಲೆ ನೆಲೆ. ನನ್ನ ಮಾನಸಿಕ ಪ್ರಪಂಚದ ಭಾವನೆಗಳ ಮೂರ್ತಿಗಳನ್ನು ರೂಪಿಸಿದ ಕಥಾನಾಯಕ ಮಂಚಿ ಮಗನಂತಹ ನಾಯಕರು, ನನ್ನನ್ನೂ ಕಾಡಿ ಮಾನವೀಯವೂ ಸಹಜವೂ ಆದ ಬದುಕನ್ನೂ ಪ್ರೀತಿಸುವಂತೆ ಅಂತಹ ಸಾಹಿತ್ಯವನ್ನೂ ರಚಿಸುವಂತೆ ಪ್ರೇರೇಪಿಸಿದರು. ನಾನು ಅದಕೆ ಅವರಿಗೆ, ಋಣಿ.



## ತುಂಗಭದ್ರೆಯ ಸ್ಪಂದನವಿಲ್ಲದೆ ನನ್ನ ಬರೆಹವಿಲ್ಲ

● ಬಿದರಹಳ್ಳಿ ನರಸಿಂಹಮೂರ್ತಿ

ನಾನೆಂದರೆ ಯಾರು? ತೊಟ್ಟ ಬಟ್ಟೆಯೊಳಗಿರುವ ಈ ದೇಹವೆ? ಕನ್ನಡಿಯೊಳಗೆ ಕಾಣುವ ಪ್ರತಿಬಿಂಬವೆ? ನೌಕರಿ ಡೋಕಿ ಸಂಸಾರ ನಿಭಾಯಿಸಲು ಹೆಣಗುತ್ತಿರುವ ನನ್ನ ಹೆಸರಿನ ವ್ಯಕ್ತಿಯೆ? ನನ್ನ ಹೆಸರಿಗಂಟಿದ ಹಳ್ಳಿಯೆ? ಕನಸು ಕಲ್ಪನೆಗಳಿಗೆ ಮಾರುಹೋದ ಒಂದು ಹೃದಯವೆ? ಚಿಂತೆ ಚಿಂತನೆಗಳ ತಿಂದು ಹಾಕುತ್ತಿರುವ ಒಂದು ಮೆದುಳೆ? ಇದುವರೆಗೆ ಮಾಡಿರುವ ಒಂದು ಮುಷ್ಟಿ ಬರಹವೇ? ನಾನು ಯಾರು? ನನಗಂತೂ ಗೊತ್ತಿಲ್ಲ.

ನನ್ನ ಹೆಸರಿಗಂಟಿದ ಹಳ್ಳಿ ಮೊದಲು ಧಾರವಾಡ ಜಿಲ್ಲೆಯಲ್ಲಿತ್ತು. ಇದೀಗ ಗದಗ ಜಿಲ್ಲೆಗೆ ಬಂದಿದೆ. ಆದರೆ ಆಗಲೂ ಅದು ತುಂಗಭದ್ರೆಯ ದಂಡೆಯ ಮೇಲಿತ್ತು, ಈಗಲೂ ಅಲ್ಲೇ ಇದೆ. ಮುಂದೂ ಅಲ್ಲೇ ಇರುತ್ತದೆ ಎಂಬುದಂತು ಗ್ಯಾರಂಟಿ. ವಿಚಿತ್ರ ಸತ್ಯ ಒಂದಿದೆ. ನನ್ನ ಮೂವತ್ತೆರಡನೇ ವಯಸ್ಸಿನವರೆಗೂ ನನ್ನ ಹೆಸರಿಗಂಟಿದ ಈ ಹಳ್ಳಿಯನ್ನು ನಾನು ನೋಡಿಯೇ ಇರಲಿಲ್ಲ. ಬಿದಿರು ಬೆಳೆಯುವಲ್ಲೆಲ್ಲ ಒಂದೊಂದು ಬಿದರಹಳ್ಳಿ ಇರುತ್ತದೆ. ಹೆಚ್ಚು ಕಡಿಮೆ ಪ್ರತಿ ತಾಲೂಕಿನಲ್ಲು ಒಂದೊಂದು ಬಿದರಹಳ್ಳಿ ಇರುವಂತಿದೆ. ಆದರೆ ನನ್ನ ಹೆಸರಿಗೆ ಅಂಟಿ ನನಗೆ ಗಂಟು ಬಿದ್ದಿರುವುದು ಅವು ಯಾವೂ ಅಲ್ಲ. ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಬಿದರಹಳ್ಳಿ. ತುಂಗಭದ್ರೆಯ ಆಚೆದಂಡೆಗೆ ಮಾಗಳ. ಬಳ್ಳಾರಿ ಜಿಲ್ಲೆ ಅದು. ಪರಿಚಿತರು ಅಪರಿಚಿತರು ನನ್ನ ಊರು ಎಲ್ಲಿದೆ ಎಂದು ಕೇಳಿ, ಇಂಥಾ ಕಡೆ

ಇದೆ ಅಂತ ತಾವೇ ಊಹಿಸಿಕೊಂಡು ನನ್ನ ಉತ್ತರ ನಿರೀಕ್ಷಿಸುವುದು ಹೆಚ್ಚಾದಾಗ ಒಮ್ಮೆ ಆ ಹಳ್ಳಿಯನ್ನು ಅರಸಿ ಹೊರಟೆ. ಸುಮಾರು ಮುನ್ನೂರು ವರ್ಷಗಳ ಹಿಂದೆಯೆ ಆ ಹಳ್ಳಿ ಬಿಟ್ಟ, ನಮ್ಮ ಹಿರೀಕರು ಗುಳೆ ಹೊರಟು ತುಂಗಭದ್ರಾ ನದಿ ದಂಡೆಯತ್ತ ನಡೆಯುತ್ತಾ ಬಂದು, ಈಗ ನಾನಿರುವ ಹೊನ್ನಾಳಿಯಲ್ಲಿ ನೆಲೆ ನಿಂತರಂತೆ. ನಾ ಹೋಗಿ ಕಂಡ ಆ ಹಳ್ಳಿ ಬಯಲಸೀಮೆಯ ಒಂದು ಸಾಧಾರಣ ಹಳ್ಳಿಯಾಗಿತ್ತು. ಧೂಳು, ಮುಳ್ಳು, ಬಡತನ ಅಜ್ಞಾನಗಳ ಹಳ್ಳಿಯಾಗಿತ್ತು. ವಾಗಳದಲ್ಲಿ ಬಸ್ಸಿಳಿದು ದೋಣಿಯಲ್ಲಿ ಕೂತು ತುಂಗಭದ್ರೆಯನ್ನು ದಾಟಿ ಬಿದರಹಳ್ಳಿಗೆ ಕಾಲಿಟ್ಟಿದ್ದೆ. ಅಷ್ಟಿಷ್ಟು ಹಂಕಲ ಬೆಳೆ, ಬಿದರಹಳ್ಳೆವ್ವನ ಗುಡಿ, ಅಶ್ವತ್ಥನಾರಾಯಣ ಗುಡಿಗಳ ನಡುವೆ ಚತುರ್ಮುಖಿ ಲಿಂಗವನ್ನು ಕಂಡೆ. ಅದು ಬಯಲಲ್ಲೆ ಸ್ಥಾಪಿತವಾಗಿತ್ತು. ಲಿಂಗ ನಾಕೂ ದಿಕ್ಕಿಗೆ ಒಂದೊಂದು ಮುಖಮಾಡಿ ನೋಡುತ್ತಿತ್ತು. ಅದರ ನೆತ್ತಿಯ ಮೇಲೂ ಒಂದು ಮುಖವಿತ್ತೊ ನೆನಪಿಗೆ ಬರುತ್ತಿಲ್ಲ. ತಟ್ಟಿ ತಡಿಕೆಯ ಚಾದಂಗಡಿಯಲ್ಲಿ ಮಂಡಾಳು ತಿಂದೆ. ಹಾಳು ಬಿದ್ದ ಮನೆಗಳು, ಬಡವರ ಗುಡಿಸಲುಗಳು, ಹಂಡಾಬಂಡ ಓಣಿಗಳು ಕಂಡವು. ನಮ್ಮ ಹಿರೀಕರು ವಿರಕ್ತರು. ಅವರು ಯಾವ ಲೌಕಿಕ ಕುರುಹುಗಳನ್ನು ಬಿಟ್ಟು ಹೋಗಿರಲಿಲ್ಲ.

ಆ ಬಿದರಹಳ್ಳಿಗೂ ಈ ಹೊನ್ನಾಳಿಗೂ ನಡುವೆ ಹರಿಯುತ್ತಿರುವ ಸಮಾನ ಜೀವನಧಾರೆ ಎಂದರೆ ತುಂಗಭದ್ರೆ. ಅವಳೆ ನನ್ನ ಇಷ್ಟ ದೇವತೆ. ನನ್ನ ಎಲ್ಲ ಬರೆಹಗಳ ಮೂಲ ಪ್ರೇರಣೆ. ನನ್ನನ್ನು ನನ್ನಿಂದ ಬಿಡಿಸಿಕೊಂಡು ತನ್ನ ಲಹರಿಗಳಲ್ಲಿ ತೇಲಿಸುವಾಕೆ. ಆ ಲಹರಿಗಳೆ ಒಮ್ಮೊಮ್ಮೆ ಕತೆ, ಕವಿತೆಗಳಾಗಿ ಒಡಮೂಡುವುದುಂಟು. ಅವೆ ನನ್ನ ಬರೆಹಗಳು ಎಂದರೆ ನನ್ನದೇನು ತಕರಾರಿಲ್ಲ. ಅವುಗಳಿಗೆ ನನ್ನ ಹೆಸರಂಟಿ ಪ್ರಸಾರಗೊಂಡು ಪಡೆವ ಪ್ರಚಾರ ಒಂದು ಮಗ್ಗುಲು ಮಾತ್ರ. ಇನ್ನೊಂದು ಮಗ್ಗಲು, ಅದಕ್ಕಿಂತ ಮುಖ್ಯವಾದ ಮಗ್ಗುಲು, ಈ ಒಂದು ಮುಷ್ಟಿ ಬರೆಹಗಳು ಜೀವನ ಶ್ರದ್ಧೆಯನ್ನು ಬೆಳೆಸುತ್ತವೆಯೆ? ಬದುಕನ್ನು ಕುರಿತ ತಿಳುವಳಿಕೆಯನ್ನು ಒಂದು ಗುಲಗುಂಜಿಯಷ್ಟಾದರೂ ಹೆಚ್ಚಿಸುತ್ತವೆಯೇ? ಎಲ್ಲ ವೈರುಧ್ಯಗಳನ್ನೂ ಮೀರಿ ನಿಲ್ಲುವ ಅಥವಾ ಒಗ್ಗೂಡಿಸುವ ಶಕ್ತಿಯ ಸಾಧ್ಯತೆಯನ್ನು ಸೂಚಿಸುತ್ತವೆಯೆ? ಎಂಬುದು.

ನನ್ನ ತಿಳುವಳಿಕೆ ಕಣ್ಣು ಬಿಟ್ಟಾಗಿಂದಲೂ ಈ ಹೊನ್ನಾಳಿ ನನ್ನನ್ನ ತನ್ನವನನ್ನಾಗಿಸಿಕೊಂಡು ತಬ್ಬಿಕೊಂಡಿದೆ. ಇಡೀ ಗ್ಯಾಲಕ್ಸಿಯಲ್ಲೆ ನನಗೆ ಅತ್ಯಂತ ಆಪ್ತವಾದ ಸ್ಥಳ ಯಾವುದು ಎಂದು ಕೇಳಿದರೆ ತಟ್ಟನೆ ಹೊನ್ನಾಳಿ ಎಂದು ಬಿಡುತ್ತೇನೆ. ಇದೇ ನನ್ನ ಸಿದ್ಧಿಸ್ಥಳ. ನನ್ನ ತಲೆ ಕಾಯುವ ಹಿರೀಕ ಶಕ್ತಿಗಳ ಕೂಟವೊಂದು ಇಲ್ಲಿದೆ. ತುಂಗಭದ್ರೆಯಂತು ನನ್ನ ಕನಸು ಮನಸು ನನಸುಗಳುದ್ದುಕ್ಕು ಹರಿಯುತ್ತಲೆ ಇದ್ದಾಳೆ. ನನ್ನ ಪ್ರತಿಭಾ ಪ್ರವಾಹವೆ ಅವಳು. ನನ್ನ ಗುರಿ ಮುಟ್ಟಿಸುವವಳೂ ಅವಳೆ.

ಆದರೂ ಈ ಹೊನ್ನಾಳಿಯಲ್ಲಿ ಹುಟ್ಟಿದವವನಲ್ಲ ನಾನು. ಆವಾಗ ನಮ್ಮಪ್ಪ ಇದೇ ಹೊನ್ನಾಳಿಯಲ್ಲಿ ನೌಕರಿಯಲ್ಲಿದ್ದುದ್ದು ನಿಜ. ನಮ್ಮ ಸೋದರಮಾವ ಭದ್ರಾವತಿ ತಾಲೂಕಿನ

ಹೊಳೆಹೊನ್ನೂರಿನಲ್ಲಿ ಇದ್ದರಂತೆ. ನನ್ನ ಅಮ್ಮ ಚೊಚ್ಚಲು ಬಾಣಂತನಕ್ಕೆಂದು ಅಣ್ಣನಿದ್ದ ತವರಿಗೆ ಹೋಗಿದ್ದಳಂತೆ. ಹೀಗಾಗಿ ನಾ ಹುಟ್ಟಿದ್ದು ಹೊಳೆಹೊನ್ನೂರಿನಲ್ಲಿ. ಅಂದರೆ ಮಲೆನಾಡ ತುಂಗೆ ಮತ್ತು ಭದ್ರೆಯರು ಸಂಗಮಿಸುವ ಕೂಡಲಿ ಪಕ್ಕದಲ್ಲಿ. ಅದಕ್ಕೇ ಇರಬೇಕು ನನಗೆ ಬೇರೆ ಬೇರೆ ಧರ್ಮದ ನದಿಗಳನ್ನು, ವೈರುಧ್ಯಗಳೆನಿಸುವ ಚಿಂತನಾಧಾರೆಗಳನ್ನು, ಪ್ರತ್ಯೇಕವೆನಿಸುವ ಸಾಂಸ್ಕೃತಿಕ ಪರಂಪರೆಗಳನ್ನು, ಭಾಷಾಭಂಡಾರಗಳನ್ನು ಒಗ್ಗೂಡಿಸಿ ನೋಡುವ, ಅವೆಲ್ಲವೂ ಒಟ್ಟಿನ ಒಳಿತಿಗಾಗಿ ಬಳಕೆಯಾಗಲಿ ಎಂದು ಹಂಬಲಿಸುವ ಹವ್ಯಾಸ ಬೆಳೆದು ಬಂದಿರುವುದು.

ಮಲೆನಾಡ ತುಂಗೆ ಮತ್ತು ಭದ್ರೆಯರು ಕೂಡಲಿಯ ಕೂಡುಸ್ಥಳದಲ್ಲಿ ಒಗ್ಗೂಡಿ ಮುಂದೆ ಬಯಲುಸೀಮೆಯ ಪರಿಸರ ವೈವಿಧ್ಯವನ್ನು ಶ್ರೀಮಂತಗೊಳಿಸುತ್ತ ಕೃಷ್ಣಾನದಿಯಲ್ಲಿ ಲೀನವಾಗಿ, ತಾವೇ ಕೃಷ್ಣಾ ಆಗಿ, ಇನ್ನೂ ಮುಂದೆ ನಾಗಾರ್ಜುನ ಸಾಗರದಲ್ಲಿ ಸಿಹಿ ರಸದ ಬುದ್ಧಭಾವದ ಧ್ಯಾನ ಜಲಧಿಯಾಗಿ, ಕಡೆಗೆ ಬಂಗಾಳಾಕೊಲ್ಲಿಯಲ್ಲಿ ಸೇರುವ ಮೂಲಕ ತಾವೆ ಸಮುದ್ರವಾಗಿ, ನಾವು ನಮ್ಮ ಅನುಕೂಲಕ್ಕೆಂದು ಪ್ರತ್ಯೇಕಿಸಿಕೊಂಡಿರುವ, ಹಿಂದೂ ಮಹಾಸಾಗರ ಹಾಗು ಅರಬ್ಬೀ ಸಮುದ್ರಗಳಲ್ಲಿ ಒಂದಾಗಿ ಹೋಗುತ್ತಾರೆ. ಇಬ್ಬರೂ ಒಬ್ಬರೇ ಆಗುವ, ಎಲ್ಲವೂ ತಾನೆ ಆಗುವ ಅರಿವನ್ನು ಈ ತುಂಗಭದ್ರೆ ಆಳವಾಗಿ ಊರಿಬಿಟ್ಟಿದ್ದಾಳೆ ನನ್ನೊಳಗೆ. ತುಂಗಭದ್ರೆಯ ಸ್ಪಂದಗಳಿಲ್ಲದೆ ನಾನು ಎಂಬುದಕ್ಕಾಗಲಿ ನನ್ನ ಬರೆಹ ಎಂಬುದಕ್ಕಾಗಲಿ ಕವಡೆಯ ಬೆಲೆಯೂ ಇಲ್ಲ. ನಾನು ಎಂಬುದು ಅಹಂಕಾರ. ನನ್ನ ಬರೆಹ ಎಂಬುದು ಮಮಕಾರ. ತಾಯಿ ತುಂಗಭದ್ರೆ ಪದೆಪದೆ ನನ್ನನ್ನ ಮೀಯಿಸುತ್ತ ನನ್ನ ಮೈಮನಸ್ಸಿನ ಬಗೆ ಬಗೆಯ ಮಲವನ್ನು ತೊಳೆಯುತ್ತಿರಲಿ, ಅಷ್ಟೆ.

ಹೊರಗೆ ಎಲ್ಲರಿಗು ಕಾಣುವಂತೆ ಹರಿಯುತ್ತಿರುವ ತುಂಗಭದ್ರೆ ನನ್ನ ಪಾಲಿಗೆ ಬರಿ ಒಂದು ನದಿಯಲ್ಲ. ಇಡೀ ನಿಸರ್ಗದ ಸಂಕೇತ ಅವಳು. ಕುಲದೇವತೆ ಬನದಮ್ಮನ ಅಮ್ಮ ಅವಳು. ನನ್ನ ವಂಶದ ಮೂಲಪುರುಷ ಶ್ರೀನಿವಾಸ ತೀರ್ಥನ ಜ್ಞಾನಪ್ರವಾಹ ಅವಳು. ಕನ್ನಡವನ್ನು ಕಾಲಾತೀತತೆಗೆ ಹೀಚಿ ಅನಾದಿ-ಅನಂತದ ಅರಿವು ನೀಡಿದ ಅಲ್ಲಮನ ಅನುಭಾವ ಪ್ರವಾಹ ಅವಳು. ಹೀಗಾಗಿ ಅವಳು ಹೊರಗಷ್ಟೆ ಹರಿಯದೆ, ಒಳಗೆ ಧಮನಿ ಧಮನಿಗಳಲ್ಲಿ ಸದಾ ಹರಿಯುತ್ತಿರುತ್ತಾಳೆ. ನನ್ನ ಮಾತು-ಮೌನ, ಸಿಟ್ಟು-ಸಂತೋಷ, ಸಿದ್ಧಿ-ಪ್ರಸಿದ್ಧಿ ಮುಂತಾದವೆಲ್ಲ ಅವಳದೆ ವಿಭಿನ್ನ ಭಾವಗಳ ಅಭಿವ್ಯಕ್ತಿ ಎಂದು ನಂಬಿದ್ದೇನೆ.

ಬರೆಹಗಳು ಹುಟ್ಟುವಾಗಿನ ಪ್ರೇರಣೆಗಳು ಹಲವಾರು ಇದ್ದರೂ, ಅವು ಒಂದಕ್ಕೊಂದು ಸಂಬಂಧಪಡದ ಸಂಗತಿಗಳಾಗಿರಬಹುದು. ಆ ಪ್ರೇರಣೆಗಳಿಗೂ, ಅವುಗಳಿಂದ ಹುಟ್ಟಿದ ಕೃತಿ ಉಂಟುಮಾಡುವ ಪರಿಣಾಮಗಳಿಗೂ ಅರ್ಥಾರ್ಥ ಸಂಬಂಧವಿರದೇ ಹೋಗಬಹುದು. ಪ್ರೇರಣೆಗಳನ್ನೆ ಮಾನದಂಡ ಮಾಡಿಕೊಂಡು ಒಂದು ಕಲಾಕೃತಿಯನ್ನು ತೂಗಿನೋಡುವುದು ತಪ್ಪೂ ಆಗಬಹುದು. ಪರಿಣಾಮ ಕೂಡ ವ್ಯಕ್ತಿ ವಿಶಿಷ್ಟವಾದದ್ದಾಗಿ ಬಿಡಬಹುದು. ಓದುಗನ ಇತರೆ ಓದೆಲ್ಲ ಅವನ ಸದ್ಯದ ಓದಿನ ಆಸ್ವಾದನೆಗೆ ಅಡ್ಡಗಾಲು ಹಾಕಿಬಿಡಬಹುದು. ಹೀಗೆಲ್ಲ

ಗೋಜಲಾಗುವುದಾದರೆ ಬರೆಹದ ಹಿಂದಿನ ಪ್ರೇರಣೆಯ ಹಂಗು ನಮಗೆ ಯಾಕೆ ಅನ್ನಿಸ ಬಹುದು. ಸುಮ್ಮನೆ ಕೈಗೆ ಬಂದ ಕೃತಿಯನ್ನು ಸಾಧ್ಯವಾದಷ್ಟೂ ನಿರ್ವಾತ ಮನಸ್ಸಿನಿಂದ ಓದಿದರೆ ಸಾಲದೆ ಎಂಬ ಪ್ರಶ್ನೆ ಹುಟ್ಟುಬಹುದು. ಅದೇ ಕೃತಿನಿಷ್ಠ ವಿಮರ್ಶೆಗೆ ಕಾರಣವೂ ಆಗಬಹುದು.

ಪ್ರೇರಣಾ ಪರಿಕರಗಳ ಪ್ರಸ್ತಾಪ ಕೃತಿಯ ಆಸ್ವಾದನೆಗೆ ಪ್ರಸ್ತುತವಲ್ಲದಿದ್ದರೂ, ಕೃತಿಯ ವಿಮರ್ಶೆಗೆ ಅಷ್ಟೇನೂ ಅಗತ್ಯವಲ್ಲದಿದ್ದರೂ, ಈ ಲೇಖನದ ಚೌಕಟ್ಟಿನಲ್ಲಿ ಅಷ್ಟು ಅಪ್ರಸ್ತುತ ವೇನಲ್ಲ. ಮೇಲಾಗಿ ಬರಹಗಾರರ ಕಷ್ಟವನ್ನು, ವಿನಾಕಾರಣ ಅವರ ಮೇಲೆ ಮುಗಿಬೀಳುವ ಅಸಡ್ಡಾಳ ಟೀಕೆಗಳ ಟೊಳ್ಳುತನವನ್ನೂ ಈ ಪ್ರೇರಣಾ ಪರಿಕರಗಳ ಪ್ರಸ್ತಾಪ ಅನಾವರಣ ಮಾಡಬಲ್ಲದು ಎನಿಸುತ್ತದೆ. ಯಾವುದೇ ಲೇಖಕ ತನ್ನ ಎಲ್ಲ ಪ್ರೇರಣೆಗಳನ್ನೂ ತೆರೆದಿಡಲಾರ. ಆದರೆ ಕೆಲವೊಮ್ಮೆ ಆ ಪ್ರೇರಣೆ ವಿಚಿತ್ರವೆನಿಸುವಂತಿರುತ್ತದೆ. ಅಂಥ ಒಂದು ಪ್ರೇರಣಾ ಪರಿಕರಗಳ ಸಮುಚ್ಚಯದ ಒಂದು ಸ್ಯಾಂಪಲ್ ಇಲ್ಲಿದೆ.

ನಾಕಾರು ವರ್ಷಗಳ ಹಿಂದೆ ನಮ್ಮ ಮಗ ಅಂತಃಕರಣ ಎಲ್ಲಿಂದಲೊ ಒಂದು ಬೀದಿ ನಾಯಿ ಹಿಡಿದುಕೊಂಡು ಬಂದ. ಅದಕ್ಕೆ ಮೋಂಗ್ರಿ ಎಂದು ಹೆಸರಿಟ್ಟ. ಒಂದೆರಡು ದಿನಗಳ ನಂತರ ಯಾರೊ ಹುಡುಗರು ಬಂದಾಗ '' ಇವತ್ತೆ ಕಡೆ ಸಲ. ಕರಕೊಂಡು ಹೋಗಿ. ಅದು ತಿರುಗಾ ವಾಪಸ್ ಬಂದರೆ ನಾ ಕಳಸೋದೂ ಇಲ್ಲ, ನೀವು ಕೇಳೋ ಹಂಗೂ ಇಲ್ಲ'' ಅಂದೆ. ಹುಡುಗರು ಒಪ್ಪಿ ಮೋಂಗ್ರಿಯನ್ನು ಎಳೆದುಕೊಂಡು ಹೋದರು. ಅವತ್ತೆ ಸಂಜೆ ಹೊತ್ತಿಗೆ ಮತ್ತೆ ಹಾಜರಾಯಿತು ನಾಯಿ. ಅವತ್ತಿನಿಂದ ಇವತ್ತಿನವರೆಗು ನಮ್ಮ ಜೊತೆಗೇ ಇದೆ. ನಮ್ಮ ಹುಡುಗನ ಸಹವಾಸದಲ್ಲಿ ಮೋಂಗ್ರಿ ಮೆಲ್ಲಗೆ ನಾಯಿಗುಣಗಳನ್ನ ಕೈಬಿಟ್ಟು ಮನುಷ್ಯಗುಣಗಳನ್ನ ಕಲಿಯತೊಡಗಿತು. ಮನೆಯೊಳಗೆ, ಪೋರ್ಟಿಕೋದಲ್ಲಿ ಉಚ್ಚೆ ಕೂಡ ಹೊಯ್ಯದೆ ಅವರಸರವಾದಾಗ 'ಕರಕೊಂಡು ಹೋಗು' ಎಂದು ಕೂಗತೊಡಗಿತು. ತನ್ನ ಊಟದ ಟೈಂ ಬಂದ ಕೂಡಲೆ "ನನಿಗೆ ಹಸಿವಾಗೇತಿ ಇನ್ನೂ ಉಣ್ಣಾಕೆ ನೀಡಿಲ್ಲ್ಯಾಕೆ" ಎಂದು ರೋಷ ಹೊಡೆಯತೊಡಗಿತು. ಬರ್ತಾ ಬರ್ತಾ ಅದು ಎಷ್ಟು ಹೂಮನಸಾಯಿತು ಎಂದರೆ ಮೂತಿ ಚೂಪುಮಾಡಿ ಕಾಲಮೇಲೆ ಇಟ್ಟುಕೊಂಡು, ನಾವು ಕೇಳುತ್ತಿರುವ ಹಿಂದೂಸ್ತಾನಿ ಸಂಗೀತವನ್ನೂ ಆಲಿಸಿ ಆಸ್ವಾದಿಸತೊಡಗಿತು. ನಮ್ಮ ಮನೆಯವರೆಲ್ಲರ ಸ್ವಭಾವಗಳನ್ನೂ ಅರಿತು ಅದಕ್ಕನುಗುಣವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸಲು ಪ್ರಾರಂಭಿಸಿತು. ಈ ಮೋಂಗ್ರಿಯ ಕಣ್ಣುಗಳು ಬಹಳ ಪವರ್‌ಫುಲ್ ಆಗಿವೆ. ಅದರ ಮುಖಲಕ್ಷಣ ಸಿಂಹದ ಮುಖ ಲಕ್ಷಣವನ್ನು ಹೋಲುತ್ತದೆ. ಅದರ ಮೈಬಣ್ಣವೂ ಸಿಂಹದ ಮೈಬಣ್ಣವೇ... ಈ ಮೋಂಗ್ರಿಯೇ 'ಜೀವಹಂಸ' ಕತೆಯ ಸಿಂಹರಾಜನಾಗಿ ಕಲಾತ್ಮಕ ಜೀವ ಪಡೆದದ್ದು. ಜೊತೆಗೆ ಪಂಡಿತ್ ಓಂಕಾರ್ ನಾಥ್ ಠಾಕೂರರು ರಾಗ್ ಮಾಲಕೌಂಸ್ ಹಾಡಿ ಸಿಂಹದ ಕಣ್ಣಲ್ಲಿ ನೀರು ತರಿಸಿದರೆಂಬ ಕಥೆ ಕೇಳಿದ್ದೆ. ಅಲ್ಲದೆ ತುಂಗಾಮೂಲದ ಪರಿಸರ ಹೋರಾಟದಲ್ಲಿ ಮೊದಲಿಂದಲೂ ಆಸಕ್ತಿವಹಿಸುತ್ತಾ ಬಂದಿದ್ದೆ. ಇನ್ನು ಹದಿಹರೆಯದಲ್ಲಿ ತೀರ್ಥಹಳ್ಳಿಯ

ನೈಸರ್ಗಿಕ ಸೊಬಗಿಗೆ ಮಾರು ಹೋದದ್ದು, ಮೇಗರಹಳ್ಳಿಯಲ್ಲಿದ್ದಾಗ ಉಪನ್ಯಾಸಕ ವೃತ್ತಿ ಜೊತೆಗೆ ಕಾಡುಗುಡ್ಡ ಅಬ್ಬಿ ನದಿ ಕಣಿವೆಗಳನ್ನ ಅಂಡಲೆವ ಪ್ರವೃತ್ತಿ ಬೆಳೆಸಿಕೊಂಡದ್ದು ಎಲ್ಲವೂ ಮುಪ್ಪುರಿಗೊಂಡು 'ಜೀವಹಂಸ' ಕತೆ ಮೈದಾಳಿತು.'ಸುಧಾ' ವಾರಪತ್ರಿಕೆಯಲ್ಲಿ ವಿಶೇಷ ಕತೆಯಾಗಿ ಪ್ರಕಟವಾಯಿತು. ಮುಖಪುಟದಲ್ಲಿ ಚಂದ್ರನಾಥರು ಬರೆದ ಸಿಂಹಮುಖ ರಾರಾಜಿಸುತ್ತಿತ್ತು. ಕತೆಗೆ ಬಹಳ ಅದ್ಭುತವಾದ ಪ್ರತಿಕ್ರಿಯೆಗಳೂ ಪ್ರಕಟವಾದವು. ಯಾರೋ ಪುಕುವೋಕಾಗೆ ಹೋಲಿಸಿದರು. ಅತಿರೇಕದ ಹೊಗಳಿಕೆ ಅತಿರೇಕದ ತೆಗಳಿಕೆ ಎರಡಕ್ಕೂ ಒಂದೇ ಬೆಲೆ. ಆದರೆ ಯಾರೊ ಪುಣ್ಯಾತ್ಮ, ಅವ ಇಂಗ್ಲಿಶ್ ಮಾಸ್ತರನೇ ಇರಬೇಕು, ನಾನು ಜಾಕ್ ಲಂಡನ್ ಎಂಬುವನನ್ನ ಕಾಪಿ ಹೊಡೆದಿದ್ದೇನೆ, ಹೆಮಿಂಗ್ ವೇನಿಂದ ಪ್ರಭಾವಿತನಾಗಿದ್ದೇನೆ ಎಂದೆಲ್ಲ ಬರೆದಿದ್ದ. ಇವತ್ತಿಗು ಈ ಜಾಕ್ ಲಂಡನ್ ಯಾರು ಎಂಬುದೆ ನನಗೆ ಗೊತ್ತಿಲ್ಲ. ಅವನ ಒಂದೇ ಒಂದು ಸಾಲನ್ನೂ ನಾನು ಓದಿಲ್ಲ. ಇನ್ನು ಹೆಮಿಂಗ್ ವೇ ನನಗೆ ಇಷ್ಟವೇ ಆಗದ ಲೇಖಕ. ಅವನ 'ಓಲ್ಡ್ ಮ್ಯಾನ್ ಅಂಡ್ ದ ಸೀ' ನನಗೆ ಎಂಎನಲ್ಲಿ ಟೆಕ್ಸ್ಟ್ ಆಗಿತ್ತು ನಿಜ. ಆದರೆ, ಮೆಲ್‌ವಿಲ್‌ನ 'ಮಾಬಿಡಿಕ್' ಮುಂದೆ ಅದು ತೀರಾ ಸಪ್ಪೆ ಕೃತಿ ಅನಿಸಿತು. ತಾವು ಓದಿಕೊಂಡದ್ದನ್ನೆಲ್ಲ ಅರಗಿಸಿಕೊಳ್ಳಲಾಗದೆ, ಅದರ ಪಡಿನೆಳಲುಗಳನ್ನ ತಾವು ಓದುವ ಕೃತಿಗಳ ಮೇಲೆ ಹರಡುವ, ಹೇರುವ ಒಂದು ವಿಚಿತ್ರ ವಿಮರ್ಶಾ ಸಂಪ್ರದಾಯ ಡಿ. ಅರ್. ನಾಗರಾಜ್ ಥರದ ಬುದ್ಧಿಜೀವಿಗಳಿಂದ ಕನ್ನಡದಲ್ಲಿ ಕಾಲಿಟ್ಟು ಅಪಹಾಸ್ಯಕ್ಕೆ ಒಳಗಾದದ್ದು ಈಗಾಗಲೆ ಹಳೆಯ ಮಾತು.

ಎಪ್ಪತ್ತರ ದಶಕದ ಕೊನೆಯಿಂದ ಎಂಭತ್ತರ ದಶಕದ ಮುಕ್ಕಾಲು ಭಾಗದವರೆಗೆ ನನ್ನ ಜೀವನದಲ್ಲಿ ಶುದ್ಧಸಾಹಿತ್ಯ ಮಾರ್ಜಿನ್ ಲೈಸ್ ಆಗಿ ಮೂಲೆಗೆ ತಳ್ಳಲ್ಪಟ್ಟಿತ್ತು. ಮಾರ್ಕ್ಸ್‌ವಾದವನ್ನು ಪಟ್ಟಾಗಿ ಕೂತು ಅಭ್ಯಾಸಮಾಡಿದರೆ ಎಲ್ಲಿ ಆ ಸಿದ್ಧಾಂತದ ಪಂಡಿತನಾಗಿ ಬರಿ ಆರ್ಮಚೇರ್ ರೆವಲೂಷನರಿ ಆಗಿ ಕೊಳೆತುಹೋಗುತ್ತೇನೊ ಎಂದು ಹೆದರಿ, ಬೀದಿಗಿಳಿವ ಆ್ಯಕ್ಟಿವಿಸ್ಟ್‌ಗಳ ಸಹವಾಸ ಮಾಡಿದೆ. 'ವಿಚಾರಿ' ಎಂಬ ಕಿರು ವಾರಪತ್ರಿಕೆಗೆ ಕೈಯಿಂದ ದುಡ್ಡು ಹಾಕಿ ಬೆಳೆಸಿದೆ. ಸುತ್ತಮುತ್ತಲ ಸಮಾಜದ ಅನ್ಯಾಯಗಳನ್ನು ಅತಿರೇಕಗಳನ್ನು ತೀಕ್ಷ್ಣವಾಗಿ ಖಂಡಿಸುವ ಸಲುವಾಗಿ ಅನೇಕ ಗುಪ್ತನಾಮಗಳನ್ನು ಆರೋಪಿಸಿಕೊಂಡೆ. ಶಿವಪ್ಪನಾಯಕ, ಜೀವಂದೂರು ಭಾರ್ಗವ, ಕೀಟಲೆದೇವಿ, ರಂಗ ಆದಿಕರುನಾಟಕರ, ಬೀನಾ ಇತ್ಯಾದಿ ಹೆಸರುಗಳಲ್ಲಿ ಹೊಟ್ಟೆಯಲ್ಲಿ ಹೊಕ್ಕು ಬೆನ್ನಲ್ಲಿ ಬರುವಷ್ಟು ತೀಕ್ಷ್ಣಶೈಲಿಯ ಬರೆಹಗಳನ್ನು ಬರೆದೆ. ಸುತ್ತಮುತ್ತ ಬದಲಾವಣೆಯಾಗುತ್ತಿದೆ ಎಂದು ಭಾವಿಸಿದೆ. ಕ್ರಾಂತಿಗೆ ಬುನಾದಿ ಹಾಕುತ್ತಿದ್ದೇವೆಂಬ ಗುಂಪಿನಲ್ಲಿ ಕೂತು ಬೀಗಿದೆ. ಆಗ ನನ್ನ ಅಭಿಮಾನಿಯಾಗಿ ಬಂದ ಜಾರ್ಜ್ ಸಾಲ್ಡಾನಾ ಎಂಬ ಅಶಿಕ್ಷಿತ ಗೆಳೆಯ ಒಬ್ಬ ಕ್ರಾಂತಿಕ್ರಿಸ್ತನಾಗಿ ಕಂಗೊಳಿಸಿ, ನಾನೇ ಅವರ ಅಭಿಮಾನಿಯಾಗಿಹೋದೆ.

ಆದರೆ ವಯಸ್ಸಿನ ಕಾವು ಕುದಿ ಕಡಿಮೆಯಾದಂತೆ, ಈ ದೇಹದ ಇತಿಮಿತಿಗಳು ಅರ್ಥವಾದಂತೆ, ಬದುಕಿನ ಸ್ಥಿತ್ಯಂತರಗಳು ಪಾಠ ಕಲಿಸಿದಂತೆ ಅನುಭವಗಳು ಮಾಗತೊಡಗಿದವು.

ಗೆಳೆಯ ಜಾರ್ಜ್‌ರಂತೆ ಬುದ್ಧಿಭಾವಗಳ ಹರೆಯದಲ್ಲಿಯೆ ನಿಂತುಬಿಡುವುದು ಸಾಧ್ಯವಾಗ ಲಿಲ್ಲ. ಬೆಳೆಯುವುದು, ಮಾಗುವುದು, ವಿಕಸನಗೊಳ್ಳುವುದು ಅನಿವಾರ್ಯವಾಯಿತು. ಕ್ರಾಂತಿಗಳು ತರುವ ಬದಲಾವಣೆಗಳು ತತ್ಕಾಲೀನ; ಆದರೆ ಸಮಾಜ ತಾನಾಗೇ ಅರಿತು ಅಳವಡಿಸಿಕೊಳ್ಳುವ ಬದಲಾವಣೆಗಳು ಹೆಚ್ಚು ಬಾಳಿಕೆ ಬರುವಂಥವು ಎಂಬ ಪಾಠ ಹೇಳಿತು ಮನುಕುಲದ ಚರಿತ್ರೆ. ಸಾವಿನ ರಹಸ್ಯ ಒಡೆಯುವವರೆಗೂ ಬದುಕಿನ ನಿಗೂಢತೆ ಸಾಯ ಲಾರದು ಎನಿಸಿತು. ಕಾಲುಗಳಿಗೆ ತಟ್ಟುವ ಭೂಮಿಯ ಲೌಕಿಕ ಬದುಕು ಸಾಲದೆ ಕೈಗಳಿಗೆ ಸಿಗದ ಆಕಾಶದ ಅಲೌಕಿಕಕ್ಕೂ ಎದೆ ಚಾಚಿಕೊಳ್ಳತೊಡಗಿತು. ಅಲ್ಲಮನ ಕನ್ನಡದ ಬೆಡಗು, ಅವನ ಅನುಭಾವಿಕ ಅರಿವು ಮನಸ್ಸಿಗೆ ತಟ್ಟತೊಡಗಿತು. ನಮ್ಮ ತತ್ವಪದಕಾರರ, ಸಂತರ, ಸೂಫಿಗಳ, ದಾಸರ, ಶರಣರ ನುಡಿಗಳು ಕಿವಿಗೆ ಹೊಸತಾಗಿ ಕೇಳತೊಡಗಿದವು. ದೇವರನ್ನು ಕೈಬಿಟ್ಟಿದ್ದ ನಾನು ಮತ್ತೆ ಗುರುವನ್ನು ಅರಸತೊಡಗಿದೆ. ಕಾಣುವ ಗುರು ಕಾಣದ ದೇವರಿಗಿಂತ ದೊಡ್ಡವ ಎಂಬುದು ಅನುಭವಕ್ಕೆ ಬರತೊಡಗಿತು. ಬದುಕು ಅನುಭವಗಳ ಕಮ್ಮಟವಾಯಿತು. ಭಾಷೆ ತುಂಗಭದ್ರೆಯ ತಿಳಿನೀರಾಯಿತು. ಹೆಸರಾಸೆಯ ಬರೆಹಗಾರರಿಗಿಂತ, ಹೆಸರು ಹೇಳದೆ ಹೋದ ಜಾನಪದ ಕವಿಗಳು ಕವಯಿತ್ರಿಯರು, ಇಷ್ಟದೈವದ ಅಂಕಿತಗಳಲ್ಲಿ ಕರಗಿ ಅದ್ವೈತ ಸಾಧಿಸಿದ ತತ್ವಪದಕಾರರು, ದಾಸರು, ಶರಣರು ದೊಡ್ಡವರು ಎನಿಸಿತು. ಜಾಹೀರುಗೊಂಡ ನನ್ನ ಹೆಸರಿಗೆ ನಾನೆ ಹೆದರಿ, ಗುಪ್ತನಾಮ 'ಶಿವಪ್ಪನಾಯಕ'ನ ಪಟ್ಟದಿಂದ 'ಶಿವದಾಸ' ಎಂಬ ಅಂಕಿತದ ಪಾಣಿಪೀಠದಲ್ಲಿ ಲಯವಾದೆ.



## ಕವಿತೆ ಎಂಬುದು ಮನಸ್ಸಿನ ಹಾಜರಿ

• ಎಸ್ ಮಂಜುನಾಥ್

'ನೀನು ಚೆನ್ನಾಗಿ ಚಿತ್ರ ಬರೆಯುವುದನ್ನು ಕಲಿ. ದೊಡ್ಡವನಾದ ಮೇಲೆ ಒಂದು ರಾತ್ರಿ ಮಲಗುವ ಮುಂಚೆ ಸರಿಯಾಗಿ ಅಮ್ಮನನ್ನು ಪ್ರಾರ್ಥಿಸಿಕೊಂಡು ಮಲಗು. ಆಗ ನಿನ್ನ ಕನಸಲ್ಲಿ ಅಮ್ಮ ಕಾಣಿಸಿಕೊಳ್ಳುತ್ತಾಳೆ. ಅದನ್ನೇ ನೆನಪಿಟ್ಟುಕೊಂಡು ಬೆಳಗ್ಗೆ ಅವಳ ಚಿತ್ರ ಬರೆದುಕೊಡು'. ತೀರಿಹೋದ ನನ್ನ ತಾಯಿಯ ಒಂದು ಫೋಟೋ ನಮ್ಮ ಮನೆಯಲ್ಲಿರಲಿಲ್ಲ ವಾದ್ದರಿಂದ, ನನ್ನಕ್ಕ ಚಿಕ್ಕವನಿದ್ದ ನನಗೆ ತಾಕೀತು ಮಾಡುತ್ತಿದ್ದುದು ಹೀಗೆ. ನನ್ನ ಬಾಲ್ಯದಲ್ಲಿ ನಾನೊಬ್ಬ ವಿಶೇಷ ವ್ಯಕ್ತಿ ಎನ್ನುವಂತೆ ನನ್ನನ್ನು ಕಂಡಿದ್ದು ಅವಳೇ. ಅವಳ ಮಾತಿನಿಂದಾಗಿ ನಾನು ಚಿತ್ರಕಾರನಾಗಲು ಪ್ರಯತ್ನಿಸಿದೆ. ಚಿತ್ರಗಳನ್ನು ಬರೆದೂ ಬರೆದೂ ಇಟ್ಟೆ. ಆದರೆ ಸ್ವಲ್ಪ ದೊಡ್ಡವನಾದ ಹೊತ್ತಿಗೆ ನನಗೆ ಗೊತ್ತಾಯಿತು - ನನಗೆ ಕಾಪಿ ಮಾಡಲು ಮಾತ್ರ

ಬರುತ್ತದೋ ಹೊರತು ಸ್ವಂತ ಏನೂ ಬರೆಯಲು ಬರುತ್ತಿಲ್ಲ ಎಂಬುದು. ಆದರೆ ಭಾಷೆಯಲ್ಲಿ ಯಾವುದೇ ಭಾವನೆಯನ್ನಾಗಲೀ, ಚಿತ್ರವನ್ನಾಗಲೀ ನಾನು ಬರೆಯ ಬಲ್ಲೆ ಎಂಬುದೂ ತಿಳಿಯಿತು. ಇದರಿಂದಾಗಿಯೇ ಬಹುಶಃ ನನಗೆ ಪದ್ಯದ ಕಡೆ ಮನಸ್ಸಾಯಿತು.

ಹೈಸ್ಕೂಲಿನಲ್ಲಿ ಮುಗ್ಧವಾಗಿ ರಮ್ಯವಾಗಿ ಬರೆಯುತ್ತಿದ್ದುದೇನೋ ಸರಿ. ಕಾಲೇಜಿಗೆ ಬಂದಾಗ ನವ್ಯಕವಿತೆ ಎಂದು ನಾನು ಅಪಾರ್ಥ ಮಾಡಿಕೊಂಡಿದ್ದನ್ನು ಬರೆದು ಹಾಕಿದೆ. ಅಂಥದೇ ತುಂಬಿದ್ದ ಒಂದು ಬರಹದ ಪುಸ್ತಕವನ್ನು ತೆಗೆದುಕೊಂಡು ಹೋಗಿ ಅನಂತಮೂರ್ತಿಯವರನ್ನು ಮುಗ್ಧತೆಯ ಧಾರ್ಷ್ಟ್ಯದಿಂದ ಭೇಟಿಯಾದ್ದನ್ನು ನೆನೆದರೆ ಈಗ ನಗು ಬರುತ್ತದೆ. ಅದರಲ್ಲೂ ಒಂದು ಪದ್ಯ, ಒಂದೆರೆಡು ಸಾಲುಗಳನ್ನು ಅವರು ಗುರುತಿಸಿದರು. 'ನೀನು ಲೇಖಕನಾಗಬೇಕಾದರೆ........' ಎಂದೇನೋ ಗೌರವ ಕೊಟ್ಟು ಮಾತಾಡಿದರು. ನಂತರ, ಬರೆದಿದ್ದೆಲ್ಲವನ್ನು ಅವರಿಗೆ ತೋರಿಸಲು ಶುರುಮಾಡಿದೆ. ಚೆನ್ನಾಗಿದೆ, ಚೆನ್ನಾಗಿಲ್ಲ ಎಂಬುದನ್ನಷ್ಟೇ ಅವರು ತೋರಿಸಿಕೊಡುತ್ತಿದ್ದುದು. 'ಒಂದು ಪದ್ಯ ಯಾಕೆ ಚೆನ್ನಾಗಿದೆ ಎಂದು ಹೇಳಬಹುದು. ಚೆನ್ನಾಗಿಲ್ಲದಿರುವುದಕ್ಕೆ ಹೇಳಲಾರದಷ್ಟು ಕಾರಣಗಳಿರುತ್ತವೆ' ಎಂಬ ಅವರ ಮಾತು ನೆನಪಿದೆ. ಅವರಿಂದ ಮುಖ್ಯವಾಗಿ ನಾನು ಕಲಿತಿದ್ದೇನೆಂದರೆ 'ನಿನಗೇ ಹೇಗೆ ಕಾಣುತ್ತದೋ ಹಾಗೆ ಬರಿ' ಎಂಬುದನ್ನು. ನನಗೇ ಹೇಗೆ ಕಾಣುತ್ತದೆ ಎಂದು ಗ್ರಹಿಸುವ ಯತ್ನದಲ್ಲಿ ವಿಕ್ಷಿಪ್ತನಾಗಿ ನೋಡಿದ್ದೂ ಆಯಿತು. ಆದರೆ, ಸ್ವಾನುಭವನಿಷ್ಠೆ ಎನ್ನುವುದು ಸಾಹಿತ್ಯಕನ ಪ್ರಥಮ ಧರ್ಮ ಎಂಬ ಪಾಠ ನನಗೆ ಸಿಕ್ಕಂತಾಯಿತು.

ಚಿತ್ರಕಾರನಾಗಲು ಆಸೆಯಿದ್ದುದಕ್ಕೋ ಏನೋ ನನ್ನ ಕವಿತೆಗಳು ಹೆಚ್ಚಾಗಿ ಕಣ್ಣಿಗೆ ಇರುತ್ತಿದ್ದವು. ಕವಿತೆಗಳಲ್ಲಿ ಮುಖ್ಯವಾಗಿ ಕಣ್ಣಿಗಾಗಿ ಇರುವುವು, ಕಿವಿಗಾಗಿ ಇರುವುವು ಎಂಬ ಎರಡು ಭೇದಗಳಿವೆ ಎಂದು ನನ್ನ ಭಾವನೆ. ಒಂದು ಅರ್ಥಗರ್ಭಿತ ಬಿಂದುವಿನಿಂದ ಶುರುವಾಗಿ ಗೆರೆ ಮೂಡುತ್ತ ಚಿತ್ರವಾಗುವುದನ್ನು ಕಣ್ಣರಳಿಸಿ ನೋಡುವುದು ನನ್ನ ಕವಿತೆಯ ನಿಲುವಾಯಿತು.

> 'ಪೆನ್ನನ್ನು ಪರೀಕ್ಷಿಸಲು ಗೀಚುತ್ತಿರುವಾಗೊಮ್ಮೆ
> ಎಲೆಲೆ ಗುಬ್ಬಚ್ಚಿ
> ಮೂಡಿಬಿಡುತ್ತೆ' ('ಗುಬ್ಬಿ' - 'ಹಕ್ಕಿಪಟ್ಟಿ' ಸಂಕಲನ)

ಹಾಗೆ ತಕ್ಷಣವನ್ನು ಒಳಗೊಳ್ಳುವ ಹವಣಿಕೆ ಮೂಲತಃ ನನಗೆ ಕವಿತೆಯ ದಾರಿ ತೋರಿಸಿದಂಥದು. ಕ್ಷಣದೊಂದಿಗೆ ತೊಡಗಿದ ಈ ಗಂಟು ಮುಂದೆ ನನ್ನ ಕವಿತೆಯಲ್ಲಿ ಬಿಗಿಯುತ್ತ ಹೋಯಿತು. ಸದ್ಯದ ಕ್ಷಣವನ್ನು ಅನಾವರಣಗೊಳಿಸಿಕೊಳ್ಳುವುದು, ಸ್ವಾನುಭವನಿಷ್ಠೆ ಮತ್ತು ಅನುಭವ ಪ್ರಾಮಾಣಿಕ - ಇವು ನನ್ನ ಕವಿತೆಯ ಸ್ವರೂಪವಾಗತೊಡಗಿತು. ಏನಾಗುತ್ತದೋ, ಎಷ್ಟಾಗುತ್ತದೋ ಅಷ್ಟನ್ನೇ ನುಡಿಗೊಳಿಸಬೇಕು ಎನ್ನುವುದು ಕವಿತೆಯ ಶೀಲ ಎಂಬಂತೆ ನಾನು ಭಾವಿಸಿದೆ. 'ಆಗಾಗುವ ಮುನ್ನವೆ ತಾನಾದೆನೆಂಬುವರ ಬಳಿಗೆ ಅಡಿಯಿಡುವವನಲ್ಲ ನಮ್ಮ ಗುಹೇಶ್ವರ' ಎನ್ನುತ್ತಾನೆ ಅಲ್ಲಮ. ಆ ಮಾತು ನನಗೆ ಒಂದು ರೀತಿಯ

ಘೋಷವಾಕ್ಯದಂತಿತ್ತು. ಈ ರೀತಿಯ ನಿಯಮಗಳಿಂದ ಗ್ರಹಿಕೆಯನ್ನು ರೂಢಿಸಿಕೊಳ್ಳುವುದ ರೊಂದಿಗೆ ನನ್ನ ಕವಿತೆ ತಿದ್ದಿಕೊಳ್ಳುತ್ತ ಹೋಯಿತು. ಹೀಗೆ ನಾನು, ಬರಹ ಎರಡೂ ಪರಸ್ಪರ; ಒಂದರಿಂದೊಂದು ಪಳಗುತ್ತ ವಿಕಾಸವಾಗುತ್ತ ಹೋಗುವಂಥವಾಗಿದ್ದವು.

ಅತಿಬಾಲ್ಯದಲ್ಲಿ ನಾನೊಬ್ಬ ವಿಶೇಷ ಜೀವಿ ಎನ್ನುವಂತೆ ಪುರಸ್ಕರಿಸಿದ ನನ್ನಕ್ಕ ನನ್ನಲ್ಲಿ ವಿಶೇಷವಾದ್ದೇನೋ ಒಂದನ್ನು ಬಿತ್ತಿದ್ದಳು. ಅವಳು ಬಿತ್ತಿದ್ದು ಬಹುಶಃ ಮನಸ್ಸನ್ನೇ. ಯಾಕೆಂದರೆ ಮನಸ್ಸು ಎಂಬುದೇ ಒಂದು ವಿಶೇಷ ಪರಿಮಳ ದ್ರವ್ಯ. ಪುನುಗು ಬೆಕ್ಕಿಗೆ ಬಹುಶಃ ಲೋಕವೆಲ್ಲ ಪುನುಗೇ. ಕಸ್ತೂರಿ ಮೃಗಕ್ಕೆ ಕಸ್ತೂರಿಯೇ. ಅವುಗಳ ಘ್ರಾಣೇಂದ್ರಿಯವೇ ಆ ಪರಿಮಳಗಳಿಂದ ಟಂಕಿತ. ತನ್ನೊಂದು ವಿಶೇಷ ಪರಿಮಳದ ಪರಿವೆಯುಂಟಾದವನು ಮೊದಲು ಹಾಗೆ ಇಡೀ ಲೋಕವನ್ನು ಗ್ರಹಿಸುತ್ತಾನೆ. ನನಗೂ ನನ್ನದೊಂದು ವಿಶಿಷ್ಟ ಮನಸ್ಸಿದೆ ಎಂದು ನಂಬಿಕೆ ಗಾಢವಾಗಿತ್ತು. ಆಗ ಅದಕ್ಕೆ ಸೂಕ್ತವಾದ ಮೌಲ್ಯಗಳನ್ನೇ ನಾವು ಆಯ್ದುಕೊಳ್ಳುವುದು. ಸ್ವಾನುಭವ ನಿಷ್ಠೆ ಎಂಬುದು ಹೀಗೆ ಒಂದು ವಿಶಿಷ್ಟವಾದ ಸಂವೇದನೆಗೇ ಒತ್ತಾಸೆಯಾಗಿ ನಿಂತಿತು. ಆದರೆ ನಂತರ ನನ್ನ ಮನಸ್ಸು ಮತ್ತೆ ಸ್ವಲ್ಪ ಬೇರೆಯಾಗತೊಡಗಿತು. ಇಲ್ಲಿ ತೀರ ಸ್ವಂತದ್ದು ಇದೆಯೇ? ಜೀವನವೇ ಎಲ್ಲರೂ ಹಂಚಿಕೊಂಡ ಅನುಭವವಲ್ಲವೆ? ಮಹತ್ತರವಾದುದೆಲ್ಲವೂ ಗಾಳಿ ಬೆಳಕು ಮಳೆ ಕತ್ತಲು ಹಸಿವು ವತನ ನಿದ್ರೆ ಇವುಗಳ ಹಾಗೆ ಎಲ್ಲರ ಮೇಲೂ ಸಮಾನವಾಗಿ ಸುರಿಯುವಂತೆ ತೋರುತ್ತದೆ. ನನ್ನ ಕಲ್ಪನೆ ಹೀಗಿತ್ತು: ಕೇಂದ್ರದಿಂದ ಪರಿಧಿಯ ಕಡೆ ಸರಿದಷ್ಟೂ ನಾವು ಹೆಚ್ಚೆಚ್ಚು ವಿಶಿಷ್ಟ ವ್ಯಕ್ತಿಗಳಾಗುತ್ತ ಹೋಗುತ್ತೇವೆ. ಪರಿಧಿಯಲ್ಲಿ ಅಸಂಖ್ಯ ಖಾಸಗೀ ಜನರಾಗಿರುತ್ತೇವೆ. ಕೇಂದ್ರದತ್ತ ಚಲಿಸಿದಂತೆ ಸಾಮ್ಯತೆ ಹೆಚ್ಚಾಗುತ್ತ ಕೇಂದ್ರದಲ್ಲಿ ಮನುಷ್ಯ ಮಾತ್ರವಾಗಿರುತ್ತೇವೆ. ಅಲ್ಲಿಂದ ನಾವೆಲ್ಲ ಒಬ್ಬ ಮನುಷ್ಯನ ಅಸಂಖ್ಯ ಮುಖಗಳ ಹಾಗೆ ಕಾಣುತ್ತೇವೆ. ಹಾಗಾಗಿ, ವಿಶಿಷ್ಟ ಸಂವೇದನೆಯ ಮೂಲಕ ಸಾಮಾನ್ಯತೆಯನ್ನು ಸಾಧಿಸುವುದೇ ಮುಖ್ಯವಿರಬೇಕೆನ್ನಿಸಿತು. ಸೋಜಿಗವೇನೆಂದರೆ ಬರೆದವನ ವ್ಯಕ್ತಿತ್ವ ಇಂಗಿ ಹೋದಷ್ಟೂ ಕವಿತೆಯ ಹಾಜರಿ ದಟ್ಟವಾಗುವುದು. ಈ ಅರಿವು ನನ್ನ ಕವಿತೆಯ ಅಭಿವ್ಯಕ್ತಿಯನ್ನು ಸಹಜತೆಯ ಕಡೆಗೆ ನಡೆಸತೊಡಗಿತು. ಅಂದರೆ, ಅನುಭವದ ಗ್ರಹಿಕೆಯನ್ನೂ ಬದಲಿಸಿತು.

ಈ ವೇಳೆಗೆ ನಾನು ತಾವೋ ಪದ್ಯಗಳನ್ನು ಅನುವಾದಿಸಿದೆ. ಕನ್ನಡದ ಅಲ್ಲಮ, ಕುಮಾರವ್ಯಾಸ, ಬೇಂದ್ರೆ, ಪುತಿನರ ಸ್ಪರ್ಶ ಪಡೆದೆ. ಇವರುಗಳಿಂದ ಒಂದು ಹೊಸ ರೀತಿಯ ಅರಿವು ಉಂಟಾಗುವಂತೆ ತೋರಿತು. ಯಾವುದೂ ನಮ್ಮಿಂದ ಹೊಸದಾಗಿ ಸೃಷ್ಟಿಯಾಗುವುದಿಲ್ಲ. ಭಾವಗಳು, ಅರ್ಥಗಳು, ಲಯಗಳು ಎಲ್ಲವೂ ತಮ್ಮಷ್ಟಕ್ಕೇ ಇರುತ್ತವೆ. ನಾವು ಅವನ್ನು ಮುಟ್ಟುತ್ತೇವೆ ಅಥವಾ ಅವು ನಮ್ಮನ್ನು ಆಯ್ದುಕೊಳ್ಳುತ್ತೇವೆ, ನಮ್ಮ ಮನಸ್ಸನ್ನು ಬಾಡಿಗೆಗೆ ಪಡೆಯುತ್ತವೆ. ನಮ್ಮನ್ನು ಆಗಿಸುತ್ತವೆ-ಹೋಗಿಸುತ್ತವೆ. 'ಬಾಹುಬಲಿ', 'ನಂದಬಟ್ಟಲು' ಸಂಕಲನಗಳಲ್ಲಿ ಕವಿತೆಗೆ ನಾನು ಹೀಗೆ ತೆರೆದುಕೊಳ್ಳತೊಡಗಿದೆ. 'ಅದು' ಯಾರಿಗಿಂತಲೂ ದೊಡ್ಡದು. ಅದು ಇದೆ ಹರಿಯುವ ನದಿಯ ಹಾಗೆ. ನಾನು ಅದನ್ನು

ಮುಟ್ಟಿ ಮುಳುಗು ಹಾಕಬಹುದೋ ಹೊರತು ಅದನ್ನು ಸ್ವಾಮ್ಯ ಮಾಡಿಕೊಳ್ಳಲಾಗದು. ಹೀಗೆಲ್ಲ, ಮುಜುಗರವಾಗುವಂತೆ ಅನುಭವದ ಅಂಚಲ್ಲಿ ಹರಿಯುವ ಸೂಕ್ಷ್ಮ ಅಭಿಪ್ರಾಯ ಗಳು ನನ್ನಲ್ಲಿ ಬರತೊಡಗಿದವು.

ಆದರೆ, ಕವಿತೆ ಹೊರಳಿಕೊಳ್ಳುತ್ತಲೇ ಇರಬೇಕಾಗುತ್ತದೆ. ಅದೆಂದೂ ಒಂದು ನಿಶ್ಚಯದ ನಿಲುವಿಗೆ ಬರಲಾಗುವುದಿಲ್ಲ. ಆದರೆ ನನ್ನ ಮಟ್ಟಿಗೆ ಕವಿತೆ, ಲೋಕದೊಂದಿಗೆ ನನ್ನ ಅಹಂಕಾರ ವನ್ನು ಸರಿಯಾದ ಸಮತೋಲನದಲ್ಲಿರಿಸುವ ತಕ್ಕಡಿಯ ಸೂಚೀ ಕಡ್ಡಿಯಂತೆ ವರ್ತಿಸಿದೆ ಎನಿಸುತ್ತದೆ.

ನನ್ನ ಕವಿತೆಗೆ ಮೊದಲಿನಿಂದಲೂ ಇರುವ ಒಲವು ಏನೆಂದರೆ 'ಏನೋ ಆಗುವುದಕ್ಕಿಂತಲು ಇರುವುದರ ಬಗ್ಗೆ ಹೆಚ್ಚು ಗಮನ'. ಕವಿತೆಯೇ ನನ್ನಲ್ಲಿ ರೂಢಿಸುತ್ತ ಬಂದ ಧೋರಣೆಯೆಂದರೆ ಬದುಕು ಎಲ್ಲೆಡೆಯೂ ಯಾವಾಗಲೂ ಸಂಪೂರ್ಣವಾದುದು ಎಂದು. ನೆನಪು ಕನಸುಗಳ ಲ್ಲಲ್ಲದೆ ಮನಸ್ಸನ್ನು ಕಣ್ಣೆದುರಿಗಿನ ಕ್ಷಣದಲ್ಲಿ ಕರಗಿಸುವುದು ನನ್ನ ಕವಿತೆಯ ಪ್ರಯತ್ನ ವಾಯಿತು. The immediate is my god ಎನ್ನುವ ಭಕ್ತಿ ನನ್ನಲ್ಲಿ ಕುದುರಿತು. ಈ ಲೋಕವೇ ಒಂದು ಕಂಗಳ ಭೋಗ ಎನ್ನುವ ಭಾವನೆಗೂ ಸದ್ಯದ ಕ್ಷಣಕ್ಕೆ ಅಂಟಿಕೊಳ್ಳುವ ನಿಷ್ಠೆಗೂ ಸಂಬಂಧವಿರಬಹುದು. ಹಾಗಾಗಿ ಕವಿತೆಯ ವಸ್ತುವಿನೊಂದಿಗೆ ಕವನ ಪ್ರಕ್ರಿಯೆ ಅನಾವರಣಗೊಳ್ಳುವುದು ನನಗೆ ಮುಖ್ಯವಾದ್ದೆನಿಸಿತು. ಅಂದರೆ ಕವಿತೆ ನನ್ನ ಮನಸ್ಸಿನ ಅನಾವರಣವೆಂದಾಯಿತು.

ನನ್ನ ಈಚಿನ ಸಂಕಲನ 'ಮೌನದ ಮಣಿ' ಎಂಬುದರ ಶುರುವಿನಲ್ಲಿ, ನಾನು ಅಲ್ಲಮನ 'ಪರಿಣಾಮದೊಳಗೆ ಮನದ ಪರಿಣಾಮ ಅತಿ ಚೆಲುವು' ಎನ್ನುವ ಸಾಲನ್ನು ಹಾಕಿಕೊಂಡಿದ್ದೇನೆ. ಮನದ ಪರಿಣಾಮವೆಂದರೆ ಮನಸ್ಸಿನ ಮೇಲಾಗುವ ಪರಿಣಾಮವಲ್ಲ, 'ಮನಸ್ಸು ಪರಿಣಮಿಸುವುದು'. ಮನಸ್ಸು ಉಂಟಾದ ಎಡೆಯಲ್ಲಿ ಒಂದು ಹಾಜರಿ ಸೃಷ್ಟಿಯಾಗುವುದು. ಎಲ್ಲದರ ಅರ್ಥಪೂರ್ಣತೆಯೂ ಅದೇ - ಶಬ್ದದ್ದೂ ಅರ್ಥದ್ದೂ. ಅಂಥ ಅರ್ಥಪೂರ್ಣದ ಇರುವು ಎಲ್ಲೆಲ್ಲೂ ಹರಡಿರುವಂಥದು. ಅದರ ಸುಳುಹಿನ ದಾಖಲೆ ನನಗೆ ಕವಿತೆಯೆನಿಸುತ್ತದೆ.

> ಮಾತು ಮಂತ್ರ ಕವಿತೆ ಎಂಬೆಲ್ಲ ಕರಣಗಳಿಂದ
> ನಿನ್ನಾಕೃತಿಯ ತಡವಲು ಹವಣಿಸುತ್ತಿರುವ
> ಮೂಕಮಕ್ಕಳು ನಾವು-ನುಡಿಯೇ!
> ನಿನ್ನ ಸುಳಿವೆಂತು ದೊರಕೀತು ನಮಗೆ

ಈ ರೀತಿಯ ನಂಬಿಕೆಯೊಂದಿಗೆ ನನ್ನ ಈಚಿನ ಕವಿತೆಗಳು ಬಂದಿವೆ. ಮುಂದೆ? ಈ ಬರಹದ ವಾಕ್ಯಗಳನ್ನು ಬರೆಯುವಾಗ ನನ್ನಲ್ಲಿ ಉಂಟಾಗುತ್ತಿರುವ ಅತೃಪ್ತಿ ನನ್ನನ್ನು ನಿರ್ದೇಶಿಸುತ್ತದೆ.



## ಕೆಂಗೆಟ್ಟ ಮನಸ್ಸು ಹುಡುಕಿಕೊಂಡ ಹೊರದಾರಿ

● ರಾಘುವೇಂದ್ರ ಪಾಟೀಲ

ಈ ಅಕ್ಷರ ಲೋಕದ ಮೋಹಿನಿ ನನ್ನನ್ನು ಸೆಳೆದದ್ದು ಹೇಗೆ ಎನ್ನುವುದೇ ನನ್ನ ನೆನಪಿಗೆ ಬರುತ್ತಿಲ್ಲ. ಸಣ್ಣ ಬಾಲಕ ನಾನು. ಗೊತ್ತಿಲ್ಲದಂತೆ ಬಲೆಗೆ ಕೆಡವಿಕೊಂಡು ಬಿಟ್ಟಿದ್ದಳು. ಒಂಬತ್ತನೆಯ ಕ್ಲಾಸಿನಲ್ಲಿ ಓದುತ್ತಿದ್ದಾಗ ಧಾರವಾಡ ಆಕಾಶವಾಣಿಯವರು (೧೯೬೫) ನಾಟಕ ರಚನಾ ಸ್ಪರ್ಧೆಯೊಂದನ್ನು ಏರ್ಪಡಿಸಿದರು. ಆ ಸ್ವಯಂವರದಲ್ಲಿ ನಾನೂ ಪಾಲ್ಗೊಳ್ಳ ಬೇಕೆನ್ನುವ ಹುಡುಗುತನದ ಧೈರ್ಯ ಮಾಡಿಯೇ ಬಿಟ್ಟೆ. ಮಾಸ್ತಿಯವರ 'ನಿಜಗಲ್ಲಿನ ರಾಣಿ' ಕಥೆಯನ್ನು ತೆಗೆದುಕೊಂಡು ಅದನ್ನು ನಾಟಕಕ್ಕೆ ಅಳವಡಿಸಿದೆ..... ಒಂದು ವಾರ ಕೂತು ಬರೆದು-ಕಾಟುಹಾಕಿ-ಬರೆದು, ಅಂತೂ ನಿಜಗಲ್ಲಿನ ರಾಣಿ ನಾಟಕವನ್ನು ಸಿದ್ಧಪಡಿಸಿದೆ. ಆ ನಾಟಕದ ಸ್ಕ್ರಿಪ್ಟನ್ನು ಮೊದಲು ನನ್ನ ಅಣ್ಣ ಓದಿದ..... ಅವನಲ್ಲಿ ಕಣ್ಣೀರಿನ ಸೆಲೆ ಬಹಳ ಮೇಲೇಯೇ ಇವೆ. ಸಂತೋಷವಾಗಲಿ-ದುಃಖವಾಗಲಿ ಸಳ್ ಎಂದು ಅವನ ಕಣ್ಣಲ್ಲಿ ಕಣ್ಣೀರು ಚಿಮ್ಮುತ್ತವೆ. ಅವನು ನಾಟಕವನ್ನು ಓದಿ ಕಣ್ಣಲ್ಲಿ ನೀರು ತಂದುಕೊಂಡು 'ಭಾಳ ಛಲೋ ಬರದೀ...' ಎಂದು ತನ್ನ ಬಿಗಿದ ಕಂಠದಿಂದ ಹೇಳಿದ. ಆಮೇಲೆ ನನ್ನ ಅಕ್ಕಂದಿರು ಓದಿದರು. ನನ್ನ ಅಕ್ಕಂದಿರಲ್ಲಿ ಒಬ್ಬಳು - ಅಲಕನಂದಾ ಎಂದು ಅವಳ ಹೆಸರು - ಅವಳು ಆಗಲೇ ಎರಡು ಕಥೆಗಳನ್ನು ಬರೆದು ಶಭಾಸಗಿರಿ ಪಡೆದಿದ್ದಳು. (ಮುಂದೆ ತನ್ನ ಸಂಸಾರದ ತಾಪತ್ರಯದಲ್ಲಿ ಆಕೆ ಏನನ್ನೂ ಬರೆಯಲಿಲ್ಲ.) ಅಲಕನಂದಾ ಮತ್ತು ತಾಯಕ್ಕನೆಂದು ಕರೆಯುತ್ತಿದ್ದ ಓದಿನ ರುಚಿ ಇರುವ-ಸರಯೂ ಎನ್ನುವ ಇನ್ನೊಬ್ಬ ನನ್ನ ಅಕ್ಕ, 'ನಿಜಗಲ್ಲಿನ' ರಾಣಿ ಎನ್ನುವ ನಾನು ಬರೆದ ನಾಟಕವನ್ನು ಓದಿ ನನ್ನ ಬೆನ್ನುತಟ್ಟಿ, 'ಸ್ಪರ್ಧೆಯಲ್ಲಿ ಆಕಾಶವಾಣಿಯ ಖೂಳೂರು ನಿನಗಲ್ಲದೆ ಬೇರೆ ಯಾರಿಗೂ ಬಹುಮಾನ ನೀಡಲಾಗದು' ಎಂದು ಘೋಷಿಸಿದರು. ಆಮೇಲೆ ನನ್ನ ಶಾಲೆಯ ಹೆಡ್‌ಮಾಸ್ಟರ್ ಮತ್ತು ಇಂಗ್ಲಿಶ್ ಮಾಸ್ತರರಾದ ಶ್ರೀ ಗದಗನವರ್ ಅವರಿಗೆ ನಾನು ಬರೆದ ಆ ನಾಟಕವನ್ನು ಓದಲು ವಿನಂತಿಸಿ ಕೊಂಡು ಕೊಟ್ಟೆ. ಓದಿದ ಅವರು, ನಮ್ಮ ಕ್ಲಾಸಿನಲ್ಲಿ 'ನಮ್ಮ ಶಾಲೆಯಲ್ಲಿ ಒಬ್ಬ ಲೇಖಕ ಬೆಳೆಯುತ್ತಿದ್ದಾನೆ ಎಂದು ಉದ್ಘೋಷಣೆ ಮಾಡಿ ಬೆನ್ನು ತಟ್ಟಿ ಪ್ರೋತ್ಸಾಹಿಸಿದರು. ಇದಕ್ಕಿಂತ ಹೆಚ್ಚಿಗೆ ಏನು ಬೇಕು ಹೇಳಿ?... ಮೋಹಿನಿಯ ಸಹವಾಸ ಹದಿನಾಲ್ಕರ ಹುಡುಗನಿಗೆ ದೊರಕಿಸಿದ ಸುಖದಾಯಕ ಅನುಭವ ಅವಳ ಸಹವಾಸವನ್ನು ಹೆಚ್ಚು ಹೆಚ್ಚು ಅಪೇಕ್ಷಿಸುವಂತೆ ಮಾಡಿತು.

ಅಕ್ಷರ ಲೋಕದ ಈ ಮೋಹಿನಿಯು ನನ್ನನ್ನು ಹಿಡಿದುಕೊಳ್ಳಲು ಸಾಧ್ಯವಾಗುವಂತೆ ಮಾಡಿದ್ದು ಬಾಲ್ಯದಲ್ಲಿ ನನಗೆ ಒದಗಿದ ಮನೆಯೊಳಗಿನ ಆವರಣ ಮತ್ತು ನನಗೆ ಲಭ್ಯವಾದ ಓದು. ನಮ್ಮದು ದೊಡ್ಡ ಕುಟುಂಬ. ಜೊತೆಗೆ ಮನೆಗೆ ಬರುತ್ತಿದ್ದ ಸಂಬಂಧಗಳು.

ಸಂಜೆಯಾಗುತ್ತಲೇ ನಮ್ಮ ಮನೆಯಲ್ಲಿ ಹಾಡಿನ ಸಂದುಕಗಳು ತೆರೆದುಕೊಳ್ಳುತ್ತಿದ್ದವು. ನಮ್ಮ ತಂದೆ-ಅಕ್ಕಂದಿರು ದೇವರನಾಮಗಳನ್ನು ಹೇಳುತ್ತಿದ್ದರು. ಈ ಹಾಡಿನ ಒಡನಾಟದಲ್ಲಿ ನನಗೆ ಶಬ್ದಗಳು ಅವುಗಳ ನಾದ ಮಾಧುರ್ಯದ ಜೊತೆಗೇ ಕಾಣಿಸಿಕೊಂಡವು. ಸಾಹಿತ್ಯದಲ್ಲಿ ಅಂತರ್ಗತವಾಗಿರುವ ಬಹು ಪ್ರಮುಖವಾದ ಊರ್ಜೆ, ನಾದ ಅಥವಾ ಸಂಗೀತ ಎಂದು ನನ್ನ ಮನಸ್ಸಿಗೆ ತೋರಿತು. ಇಂದಿಗೂ ನಾನು ಕಥೆ ಬರೆಯುವಾಗ ನನಗೆ ನಾನೇ ಎತ್ತರದ ಧ್ವನಿಯಲ್ಲಿ ಓದಿಕೊಂಡು ನನ್ನ ಕಿವಿಯ ತೀರ್ಮಾನಕ್ಕೆ ಒಪ್ಪಿಸುತ್ತೇನೆ. ಕಿವಿಯು ಒಪ್ಪದಿರುವುದನ್ನು ಹೊಡೆದು ಹಾಕುತ್ತಾನೆ ಅಥವಾ ಸರಿಪಡಿಸಿ ಮತ್ತೆ ಅದರ ಅವಗಾಹನೆಗೆ ಒಪ್ಪಿಸುತ್ತೇನೆ.

ಅನಕೃ-ತರಾಸು-ಕೃಷ್ಣಮೂರ್ತಿ ಪುರಾಣಿಕ ಇವರ ಸಾಮಾಜಿಕ ಕಾದಂಬರಿಗಳನ್ನು ನಾನು ನಾಲ್ಕು-ಐದನೆಯ ತರಗತಿಗಳಲ್ಲಿ ಓದುತ್ತಿರುವಾಗಲೇ ಓದಿದೆ. ಅನಕೃ ಅವರ 'ನಟಸಾರ್ವಭೌಮ' ತುಂಬ ಹಿಡಿಸಿತ್ತು. ಹೀಗಿದ್ದರೂ ನನಗೆ ಇವರ ಕಾದಂಬರಿಗಳು ಯಾಕೋ ಏನೋ ಪ್ರಭಾವಿಯಾದವುಗಳು ಅನ್ನಿಸಲಿಲ್ಲ. ಸಣ್ಣ ಹುಡುಗನ ಅನಿಸಿಕೆಗಳಿಗೆ ಕಾರಣಗಳು ಗೊತ್ತಿಲ್ಲ. ಅಂದು ನನ್ನ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಪರಿಣಾಮ ಬೀರಿದವುಗಳೆಂದರೆ ಶೇಕ್ಸ್ಪಿಯರ್‌ನ ನಾಟಕಗಳ ಕಥೆಗಳ ಪುಸ್ತಿಕೆಗಳು. ಇವು ನಾನು ಐದನೆಯ ತರಗತಿಯಲ್ಲಿದ್ದಾಗ ನಮ್ಮ ಶಾಲೆಯ ಗ್ರಂಥಾಲಯಕ್ಕೆ ಬಂದವು. ಭೀಮಣ್ಣ ಮಾಸ್ತರು (ಇವರು ವಾವೆಯಲ್ಲಿ ನನ್ನ ಅಣ್ಣನೂ ಹೌದು) ಈ ಕಥೆಗಳನ್ನು, ಕ್ಲಾಸಿನಲ್ಲಿನ ಎಲ್ಲ ವಿದ್ಯಾರ್ಥಿಗಳಿಗೆ ನನ್ನಿಂದ ಓದಿಸಿ ಕೇಳಿಸಿದರು.... ಶೇಕ್ಸ್ಪಿಯರನಿಗೆ ನಾನು ಕೃತಜ್ಞನಾಗಿದ್ದೇನೆ. ನನ್ನ ಮನಸ್ಸಿನ ಮೇಲೆ ಪರಿಣಾಮ ಬೀರಿದ ಇನ್ನೊಂದು ಪುಸ್ತಕವೆಂದರೆ, ಗಂಗಾಧರ ಮಡಿವಾಳೇಶ್ವರ ತುರಮರಿಯವರು ಕನ್ನಡಕ್ಕೆ ಅನುವಾದಿಸಿದ 'ಮೃಚ್ಛಕಟಿಕ' ನಾಟಕ. ಈ ಪುಸ್ತಕವನ್ನು ನಾನು ಆರನೆಯ ತರಗತಿಯ ಪರೀಕ್ಷೆ ಮುಗಿಸಿ ರಜೆಗೆ ಧಾರವಾಡದಲ್ಲಿನ ನನ್ನ ಚಿಕ್ಕಪ್ಪನ ಮನೆಗೆ ಹೋದಾಗ ಓದಿದೆ. ಶಕಾರನ ಮಾತುಗಳು ತುಂಬ ಮೋಜಿನವೆನಿಸಿದವು. ಈಗ ಈ ಲೇಖನ ಬರೆಯುತ್ತಿರುವಾಗ ನನಗೆ ಹೊಳೆಯುತ್ತಿದೆ - ನನ್ನ ಬಾಲ್ಯದ ಸಂದರ್ಭದಲ್ಲಿ ನನ್ನ ಮೇಲೆ ಪ್ರಭಾವ ಬೀರಿದ ಸಾಹಿತ್ಯ ಪ್ರಭೇದವು ಪ್ರಮುಖವಾಗಿ ನಾಟಕವಾಗಿದೆ.

ನಾನು ನನಗೆ ನಾನೇ ಬರೆಹಕ್ಕೆ ಸಂಬಂಧಪಟ್ಟಂತೆ ಕಟ್ಟುಪಾಡನ್ನು ವಿಧಿಸಿಕೊಂಡಾದ ಮೇಲೆ, ಕಾಲೇಜಿನ ದಿನಗಳಲ್ಲಿ ಮುಖ್ಯವಾಗಿ ಓದಿದ ಪುಸ್ತಕಗಳೆಂದರೆ ಕಾರಂತರ ಕಾದಂಬರಿಗಳು. ಮೊದಲು ಅವರ ಒಂದೆರಡು ಕಾದಂಬರಿಗಳನ್ನು ಪಟ್ಟುಬಿದ್ದು - ಆಚೆಗೆ ನೂಕುತ್ತಿದ್ದರೂ - ಬಿಡದೆ ಓದಿದೆ. ಹಾಗೆ ಓದಿದ ಮೇಲೆ ಅವುಗಳ ಒಂದು ವಿನ್ಯಾಸ ಹೊಳೆಯಿತು. ಅದೇನೆಂದರೆ - ಕಾರಂತರ ಕಾದಂಬರಿಗಳ ಮೊದಲ ಐವತ್ತು ಅರವತ್ತು ಪುಟಗಳು ಓದುಗನನ್ನು ದೂರತಳ್ಳುವಂತಿರುತ್ತವೆ ಮತ್ತು ಆ ಪುಟಗಳನ್ನು ಓದಿ ಮುಗಿಸಿದ ಮೇಲೆ ಕಾದಂಬರಿಗಳು ಓದುಗನನ್ನು ತಮ್ಮೊಂದಿಗೆ ಕರೆದುಕೊಂಡು ಹೋಗುತ್ತವೆ. ಕಾರಂತರ ಕಾದಂಬರಿಗಳ ಓದು ಅವರು ವರ್ಣಿಸುವ ಜೀವನದ ಬಗೆಗಿನ ನೋಟವನ್ನಲ್ಲದೆ, ಬರೆಯುವುದನ್ನು ಕುರಿತಂತೆ ಒಂದು ಬಗೆಯ ನಿಲುವನ್ನು ತಾಳುವಲ್ಲಿ ತರಬೇತಿಯನ್ನು ನೀಡಿದವು.

ಬರಹ ಕೇವಲ ಮನರಂಜನೆಗಾಗಿ ಅಲ್ಲ; ಬರಹ ಹಗುರ ಓದಿನ ಓದುಗನನ್ನು ರಂಜಿಸಿ, ಮನ ಒಲಿಸಿಕೊಳ್ಳಲು ಪ್ರಯತ್ನಿಸಬೇಕಾಗಿಲ್ಲ; ಬರಹವು ತನ್ನ ಮತ್ತು ತನ್ನನ್ನು ಓದುವವನ, ಪರಸ್ಪರ ಆತ್ಮಗೌರವವನ್ನು ಗುರುತಿಸುವ ನೆಲೆಯಲ್ಲಿ ಎದುರುಗೊಳ್ಳುತ್ತದೆ. ಹೀಗೆ ಇತ್ಯಾದಿ.... ಇದಲ್ಲದೆ ಕಾರಂತರು ತಮ್ಮ ಕಾದಂಬರಿಗಳ ಆರಂಭದ ಐವತ್ತು-ಅರವತ್ತು ಪುಟಗಳಲ್ಲಿ ಒಂದು ವೈಚಾರಿಕ ಹೈಪಾಥಿಸಿಸನ್ನು ಕಟ್ಟಿಕೊಡುವ ರೀತಿಯನ್ನು ಕಾಣುತ್ತೇವೆ. ಕಾರಂತರ ಇಂಥ ರೀತಿ ಕೂಡ ನನ್ನ ಮೇಲೆ ಪ್ರಭಾವ ಬೀರಿದೆ.

ನನ್ನ ಬರಹದ ಬದುಕಿನ ಆರಂಭದಲ್ಲಿ ನನ್ನನ್ನು ಆಳಿದ್ದು ನವ್ಯ ಸಾಹಿತ್ಯ.

ಇದೆಲ್ಲ ಕಥೆ ನನ್ನ ಬರಹದ ಸ್ವರೂಪವನ್ನು ದೊರಕಿಸಿಕೊಳ್ಳುವ ಪ್ರಯಾಣದ ಮಾರ್ಗ ಕ್ರಮಣವನ್ನು ಹೇಳುತ್ತದೆ. ಇದೇನಿದ್ದರೂ ನನ್ನ ಬರಹದ ಶರೀರಶಾಸ್ತ್ರ! ನನ್ನ ಬರಹದ ಮನಃಶಾಸ್ತ್ರ-ಜೀವರಸಾಯನಶಾಸ್ತ್ರದ ಆರಂಭ ಕೂಡ ಬಾಲ್ಯದಲ್ಲಿಯೇ ಇದೆ.

ನಾನು ಬಾಲ್ಯದಲ್ಲಿ ತೀವ್ರವಾಗಿ ಅನುಭವಿಸಿದ್ದು ತೀಕ್ಷ್ಣವಾದ ದ್ವಂದ್ವಗಳನ್ನು. ನಮ್ಮದು ದೊಡ್ಡ ಜಮೀನುದಾರರ ಮನೆತನ. ನೂರೋ ಎಷ್ಟೋ ಕೂರಿಗಿ ಜಮೀನು ನಮ್ಮದಾಗಿತ್ತು. ಆದರೆ ಪ್ರಾಪ್ತಿ ಮಾತ್ರ ನಾಸ್ತಿ! ಹೊಟ್ಟೆಗೆ ಸಾಕಾಗುವಷ್ಟು ಕಾಳುಕಡಿ ಮಾತ್ರ ಬರುತ್ತಿದ್ದವು. ಬಟ್ಟೆಬರೆಗೆ-ಮದಿವೆ ಮುಂಜಿಗಳಿಗೆ ಯಾವಾಗಲೂ ತತ್ವಾರ. ಇಷ್ಟರ ಮೇಲೆ ದೊಡ್ಡ ಸಂಸಾರ ಮತ್ತು ಪರಂಪರೆಯಿಂದ ಬಂದ ಹಬ್ಬ ಹರಿದಿನಗಳು ಮತ್ತು ಶ್ರಾದ್ಧಕರ್ಮಾದಿಗಳ ಹಾವಳಿ. ಬೆಲ್ಲವಿದ್ದರೆ ಬೇಳೆಯಿಲ್ಲ - ಬೇಳೆಯಿದ್ದರೆ ಬೆಲ್ಲವಿಲ್ಲ! ನಮ್ಮ ತಂದೆ ಒಂದು ರೀತಿಯ ಮುಗ್ಧ ದೊಡ್ಡಸ್ಥಿಕೆಯಲ್ಲಿಯೇ ಇದ್ದು ಬಿಡುತ್ತಿದ್ದರು. ಜೊತೆಗೆ ಯಾವಾಗಲೂ ಬೆಳಗಾವಿ-ಗೋಕಾಕ್ ಅಂತೆನ್ನುವ ಓಡಾಟಗಳು. ಪರಂಪರೆಯ ಸಂಪೂರ್ಣ ಭಾರವನ್ನು ನಿರ್ವಹಿಸುವುದು ನನ್ನ ತಾಯಿಯ ಹಣೆಬರೆಹವಾಗಿದ್ದಿತು. ಬೆಟಗೇರಿಯ ಗೌಡ-ಜಮೀನುದಾರನ ಹೆಂಡತಿಯ ಕೈಯಲ್ಲಿ ವಾಸ್ತವವಾಗಿ ಒಂದು ಅಗೋಚರವಾದ ಭಿಕ್ಷಾಪಾತ್ರೆ! ನನ್ನ ಕಣ್ಣಿಗೆ ಅವಳ ಕೈಯಲ್ಲಿನ ಭಿಕ್ಷಾಪಾತ್ರೆ ಕಾಣುತ್ತಿದ್ದಿತು! ನಾನು ಒಳಚಡ್ಡಿಯಿಲ್ಲದೇ ಬರೀ ಹಾಫ್ ಪ್ಯಾಂಟ್ ಹಾಕಿಕೊಳ್ಳುತ್ತಿದ್ದೆ. ಆರನೆಯ ತರಗತಿಯಲ್ಲಿದ್ದಾಗಿನ ಸಂಗತಿಯದು..... ಭೀಮಣ್ಣ ಮಾಸ್ತರರು ನನಗೆ ಬೈದು ಹೇಳಿದರು: "ಏ ತಮ್ಮಾ... ಧೊಡ್ಡಾಂವ ಆಗೀ ಮಗನs..... ಇನ್ನರೇ ಚಡ್ಡೀ ಒಳಗ ಒಂದ ಅಂಡರ್ ವಿಯರು ಹಾಕ್ಕೋ....." ಕ್ಲಾಸಿನಲ್ಲಿ ನನ್ನ ಜೋಡೀ ಕುಳಿತಿದ್ದ ಹುಡುಗ-ಹುಡುಗಿಯರು 'ಗೊಳ್...' ಎಂದು ನಕ್ಕರು. ಉಳ್ಳವರಂತಿದ್ದೂ ಇಲ್ಲದವರಾಗಿರುವುದು ಬಹುಶಃ ಹೆಚ್ಚು ತೀಕ್ಷ್ಣವಾದ ನೋವು-ಅವಮಾನಗಳನ್ನು ನೀಡುತ್ತಿರಬಹುದು. ಗೊತ್ತಿಲ್ಲ!

ಇನ್ನು, ನನ್ನ ತಂದೆ ಗೌಡನೆಂದು ಹೇಳಿದೆನಲ್ಲ. ಅವನು ತನ್ನ ೬೪ನೆಯ ವಯಸ್ಸಿನಲ್ಲಿ ತನ್ನ ಗೌಡಕಿಯಿಂದ ನಿವೃತ್ತನಾದ. ತನ್ನ ಹದಿನಾರನೆಯ ವರ್ಷದಿಂದ ಗೌಡಕಿಯನ್ನು ನಡೆಸಿಕೊಂಡು ಬಂದ ನಮ್ಮ ತಂದೆ, ಗೌಡಿಕಿಯನ್ನು ಬಿಟ್ಟುಕೊಟ್ಟ ಹತ್ತಾರು ವರ್ಷಗಳ ಕಾಲ ಮೂರ್ತ-ಅಮೂರ್ತ ಅವಮಾನಗಳನ್ನು ಅನುಭವಿಸುವಂತಿದ್ದನು. ಯಾವತ್ತೂ ಜನರೊಂದಿಗೆ ಬೆರೆತು ಜನರ ಒಳಿತಿಗಾಗಿಯೇ ಕೆಲಸ ಮಾಡಿದಂತಿದ್ದ ನನ್ನ ತಂದೆಗೆ, ಜನರು

ತನ್ನನ್ನು ದೂರ ಮಾಡುತ್ತಿದ್ದಾರೆ, ತನಗೆ ಸಹಜವಾಗಿ ಸಲ್ಲಬೇಕಾದ ಪಾರಂಪರಿಕವಾದ ಗೌರವಗಳನ್ನು ಬೇಕೆಂತಲೇ ತಪ್ಪಿಸುತ್ತಿದ್ದಾರೆ. ಸಾಧ್ಯವಾದಾಗಲೆಲ್ಲ ತನ್ನನ್ನು ಅವಮಾನಿಸಲು ಪ್ರಯತ್ನಿಸುತ್ತಾರೆ ಎಂತೆನ್ನುವ ಸೂಕ್ಷ್ಮ ಭಾವನೆಗಳು ಕಾಡಿಸುತ್ತಿದ್ದವು. ಅವನ ಪ್ರತಿಕ್ರಿಯೆಗಳು ನನ್ನ ಮನಸಿಗೆ ಅವನ ಅವಮಾನಗಳ ಸಂಗತಿಯನ್ನು ತಿಳಿಸಿದವು. ಅಷ್ಟೇ ಅಲ್ಲ, ಕ್ರಮೇಣವಾಗಿ ಅವನ ಅವಮಾನಗಳು ಅವನವು ಅಲ್ಲ, ಅವು ನನ್ನವೇ ಅನಿಸಿದವು.

ಇನ್ನು ಬೆಳೆಯುತ್ತಿದ್ದಂತೆ ನಾನು ಕಣ್ಣು ತೆರೆದು ಕಂಡ ಊರಿನ ಸಂಗತಿಗಳು. ನನ್ನ ತಂದೆ ಯಾವತ್ತೂ ವಿರೋಧ ಪಕ್ಷ. ಹಳ್ಳಿಯಲ್ಲಿನ ಆಳುವವರ್ಗದ ಲಂಚಕೋರತನವನ್ನು ಬೆಟ್ಟು ಮಾಡಿ ತೋರಿಸಿ ನಿರ್ಭಿಡೆಯಿಂದ ಮಾತಾಡುವವನು. ಊರಿನ ಸಾಮೂಹಿಕ ಹಿತದ ಕೆಲಸಗಳಿಗೆ ಹಿನ್ನಡೆಯಾಗಿ ವೈಯಕ್ತಿಕ ಸ್ವಾರ್ಥಗಳು ಬಲಶಾಲಿಯೂ ಹೆಚ್ಚು ಕ್ರಿಯಾಶೀಲವೂ ಆಗುತ್ತಿದ್ದವು. ಬಡವರೂ ಅಮಾಯಕರೂ ಶಕ್ತಿವಂತರಿಂದ ಶೋಷಣೆಗೆ ಒಳಗಾದಾಗ, ನನ್ನ ತಂದೆ ತೊಂದರೆಗೆ ಒಳಗಾದವರ ಪರವಾಗಿ ನಿಂತು, ಅವರಿಗೆ ಕಾನೂನಿನ ಸಲಹೆ, ಸಹಾಯ ನೀಡುತ್ತಿದ್ದುದರಿಂದ, ಬಲಿಷ್ಠರಿಂದ ತರಲೆ ಎನ್ನುವ ಪಟ್ಟವನ್ನು ಪಡೆದುಕೊಂಡನು. ನನ್ನ ತಂದೆಯ ನಂತರ ಗೌಡನಾಗಿ ಬಂದ ಗಿರಣಿಯ ರಾಮ ಎಂಬವನು ಹಾಡು ಹಗಲೇ ಸಗಾರಿ ಬಾಳ್ಯಾ ಎಂಬುವವನ ಹೆಂಡತಿಯನ್ನು ನಾಲ್ಕು ಜನ ಆಳುಗಳಿಂದ ಹೊರಿಸಿಕೊಂಡು ತನ್ನ ಮನೆಗೆ ಒಯ್ದು ಭೋಗಿಸಿದನು. ನನ್ನ ತಂದೆ ಒಬ್ಬನೇ ಸಗಾರಿ ಬಾಳ್ಯಾನ ಪಕ್ಷದಲ್ಲಿ ನಿಂತು ಈ ಅನ್ಯಾಯವನ್ನು ಪ್ರತಿಭಟಿಸಿದನು. ಅವನೊಂದಿಗೆ ಕೋರ್ಟು ಕಚೇರಿ ಅಲೆದಾಡಿದನು. ಒಂದು ಘಟನೆ ಸ್ಪಷ್ಟವಾಗಿ ನೆನಪಿದೆ.... ಮಾಳೇದವರ ಕಲ್ಲಪ್ಪ ಅನ್ನುವವ ನಮ್ಮ ಮನೆಗೆ ಬಂದು ಪಡಸಾಲೆಯಲ್ಲಿ ಕೂತಿದ್ದ ನಮ್ಮ ತಂದೆಗೆ 'ಗೌಡಪ್ಪಾs ನೀನs ಸರಪಂಚ ಆದರ ಪಾಡ ಆಗತೈತ.... ಊರಿಗೆ ಏನರs ಛಲೋ ಆಗಬೇಕಂದರ ನಿನ್ನಿಂದನs ಆಗಬೇಕು' ಎಂದು ಹೇಳಿದ. ನಮ್ಮ ತಂದೆ ತನ್ನ ಕೈಗಳನ್ನು ಜೋಡಿಸಿ 'ಒಣಾ ಉಸಾಬರೀ ಬ್ಯಾಡ.... ಜನಾ ಅನುಭವಿಸಬೇಕಾದ್ದನ್ನು ಅನುಭವಿಸಲಿ. ನನಗ ಏನೂ ಬ್ಯಾಡ' ಅಂತ ಹೇಳಿದನು. ಕಲ್ಲಪ್ಪ 'ಏ ಹಂಗ ಅಂದರ ಹೆಂಗ.... ಹಂಗ ಮಾಡಬ್ಯಾಡ.....' ಅಂತ ಹೇಳಿ ಎದ್ದು ಹೋದ. ಮರುದಿವಸ ನಾನು ಸಾಲಿಗೆ ಹೋಗುವಾಗ ಹಿಂದಿನ ಟರ್ಮಿನ ಸರಪಂಚನಾಗಿದ್ದ ಕ್ಯಾಣ್ಯಾರ ಭೀಮಪ್ಪನ ಹತ್ತರ ಅದೇ ಕಲ್ಲಪ್ಪನು 'ಆ ಬಲರಾಮಪ್ಪಗೌಡ ನೋಡದs.... ತಾ ಸರಪಂಚ ಆಗಬೇಕಂತ ನನಗೆ ಹೇಳಿ ಕಳಿಸಿದ್ದ..... ಅಂವ ಆಗಧಂಗ ಮಾಡಬೇಕು. ಅಂವ ಆದರ ಎಲ್ಲಾದಕೂ ತರಾಸ.... ನೀನs ಸರಪಂಚ ಆಗು' ಎಂದು ಹೇಳುತ್ತಿದ್ದನು.

ನಮ್ಮ ಮನೆಯಲ್ಲಿ ಬ್ರಾಹ್ಮಣಿಕೆ ವ್ಯಕ್ತವಾಗುತ್ತಿದ್ದುದು ನಮ್ಮ ತಂದೆಯ ದೈವಭಕ್ತಿ, ದೇವರಪೂಜೆ, ಹಬ್ಬಹರಿದಿನ, ರಾಘುವೇಂದ್ರ ಸ್ವಾಮಿಗಳ ಆರಾಧನೆ, ಅನಂತನ ವ್ರತ ಮತ್ತು ಶ್ರಾದ್ಧಕರ್ಮಾದಿಗಳ ಮೂಲಕ ಮತ್ತು ಈ ಸಂದರ್ಭಗಳಲ್ಲಿ ನನ್ನ ತಾಯಿಯು ಮಾಡುತ್ತಿದ್ದ ಅಡಿಗೆಗಳ ಮೂಲಕ. ಇವುಗಳನ್ನು ಬಿಟ್ಟರೆ ನಾವು ಬ್ರಾಹ್ಮಣರೆಂದು ನನ್ನ ಪ್ರಜ್ಞೆಗೆ

ಬರುತ್ತಿದ್ದುದು ನನ್ನ ವಾರಿಗೆಯ ಹುಡುಗರು ನನ್ನನ್ನು ಕೈಲಾಗದ ಬ್ರಾಹ್ಮಣನೆಂದು ಲೇವಡಿ ಮಾಡಲು, ನನ್ನನ್ನು 'ಏ ಅಳ್ಳಿಟ್ಟು....' ಎಂದು ಕರೆದಾಗ. ಉಳಿದಂತೆ ನಮ್ಮ ಮನೆ ಸಂಪೂರ್ಣ ವಾಗಿ ಸುತ್ತಲಿದ್ದ ಎಲ್ಲರ ಜೊತೆಗೆ ಬೆರೆತುಕೊಂಡಿದ್ದಿತು. ಅಜ್ಜ, ದೊಡ್ಡಪ್ಪ, ಕಾಕಾ, ಚಿಗವ್ವ, ಮಾಮಾ, ಯಣ್ಣ, ತಮ್ಮ, ತಂಗಿ ಎಂದು ನಮ್ಮ ಮನೆಮಂದಿಯೆಲ್ಲ ಸುತ್ತಲಿನವರೊಂದಿಗೆ ಸಂಬಂಧಿಕರಾಗಿದ್ದರು. ಒಂದೆಕರೆ ವ್ಯಾಪಿಸಿದ್ದ ನಮ್ಮ ಹಾಳುಮಣ್ಣಿನ ಮನೆಯುದ್ದಕ್ಕೂ ಲಿಂಗಾಯತರು-ಕುರುಬರು-ಉಪ್ಪಾರರು ಹಾದಾಡುತ್ತಿದ್ದರು. ಅಡಿಗೆ ಮಾಡುವ ಜಾಗಕ್ಕೆ ಮಾತ್ರ ಯಾರೂ ಹೋಗುತ್ತಿರಲಿಲ್ಲ. ಅಡಿಗೆ ಮಾಡುವವರಿಗೆ ಮತ್ತು ದೇವರ ಪೂಜೆ ಮಾಡುವವರಿಗೆ ಮಾತ್ರ ಮಡಿ. ಮನೆಯವರೂ ಆಗ ಅವರನ್ನು ಮುಟ್ಟುತ್ತಿರಲಿಲ್ಲ. ನಮ್ಮ ತಂದೆಯ ಬೇರಾವುದೇ ಸಾತ್ವಿಕ ನಡವಳಿಕೆಗಿಂತ ಅವನ ದೈವಭಕ್ತಿ-ದೇವರ ಪೂಜೆಗಳಂತಹ ಬ್ರಾಹ್ಮಣಿಕೆಯ ಆಚರಣೆಗಳು ಜನರಲ್ಲಿ ಅವನ ಬಗೆಗೆ ಗೌರವವನ್ನು ಹುಟ್ಟಿಸುತ್ತಿದ್ದವು!

ನನಗೆ ಗೊತ್ತು. ಈ ಚಿತ್ರಗಳನ್ನೆಲ್ಲ ನಾನು-ನನ್ನ ಕಣ್ಣುಗಳಿಂದ ನೋಡಿದವುಗಳು. ಅದೇನಿದ್ದರೂ ಈ ದ್ವಂದ್ವಮಾನಗಳ ಚಿತ್ರಗಳು ನನ್ನಲ್ಲಿ ಮೂಡಿಸಿದ ನೋವು-ಅವಮಾನಗಳು ನನ್ನನ್ನು ಅಂತರ್ಮುಖತೆಯ ಕೂಪಕ್ಕೆ ದೂಡಿದವು. ಅಪಾರವಾದ ಗೊಂದಲ-Chaos ನನ್ನ ಈ ಅಂತರ್ಮುಖತೆಯ ಘಟಕಗಳು. ಈ ಗೊಂದಲದಿಂದ ಕಂಗೆಟ್ಟ ನನ್ನ ಮನಸ್ಸು ಹುಡುಕಿಕೊಳ್ಳಲು ಪ್ರಯತ್ನಿಸಿದ ಹೊರದಾರಿ ಬರಹವಾಯಿತು.

ಮತ್ತೆ ಬರೆಯಲು ಆರಂಭಿಸಿದ್ದು ಕವನಗಳೊಂದಿಗೆ. ನವ್ಯದ ಹಣೆಪಟ್ಟಿ ಕಟ್ಟಿಕೊಂಡ ಸಾಲುಗಳು (ಬರೇ ಸಾಲುಗಳೇ ಇದ್ದಿರಬಹುದು..... ಕಾವ್ಯದ ಸುದ್ದಿ ಇರಲಿಕ್ಕಿಲ್ಲ!) ೧೯೭೭ರಲ್ಲಿ ಪ್ರೇಮದ ಗೊಂದಲ. ಪ್ರೇಮಿಸಿದ ಹುಡುಗಿಯ ಚೆಲ್ಲುತನ (ನನ್ನ ಚೆಲ್ಲುತನವೂ ಇರಲಿಲ್ಲವೆ? ಇಲ್ಲ ಐ ವಾಜ್ ಸೀರಿಯಸ್. ಐ ನೆವರ್ ಮಿಸ್ ಯೂಜಡ್ ಹರ್) - ಹಿಪಾಕ್ರಸಿ-ನನ್ನ ಕೌಟುಂಬಿಕ ಜವಾಬ್ದಾರಿ, ಇವುಗಳ ಜಗ್ಗಾಟಗಳು, ನನ್ನ ಅಂತರಂಗದಲ್ಲಿ ಹೊಸ ಗೊಂದಲಗಳನ್ನು-ಹೊಸ ತಳಮಳಗಳನ್ನು ಹುಟ್ಟಿಹಾಕಿದವು. ಈ ಗೊಂದಲಗಳಿಂದ ತಪ್ಪಿಸಿಕೊಳ್ಳಲು ಪದ್ಯಬರೆದೆ. ಈ ಪದ್ಯಗಳ ನಡುವೆ 'ವೈಲ್ಡ್ ಸೀಡ್' ಎನ್ನುವ ಝುಕ್ ಕಾದಂಬರಿಯನ್ನು ಓದಿ ಥಕ್ಕಾದೆ. ರಶಿಯದ ಆಕ್ರಮಣದ ಸಂದರ್ಭದಲ್ಲಿ ತನ್ನ ತಂದೆ ತಾಯಿಗಳನ್ನು ಕಳೆದುಕೊಂಡ ಹುಡುಗಿಯೊಬ್ಬಳು ಮುಂದೆ ಬೆಳೆದು ದೊಡ್ಡವಳಾಗಿ ತನ್ನ ಕಳೆದುಹೋದ ತಂದೆ ತಾಯಿಗಳನ್ನು ಹುಡುಕಿಕೊಳ್ಳಲು ಧಾವಂತಪಡುವ ಕಥೆ.... ಆಕೆ ಪತ್ರಿಕೆಗಳಲ್ಲಿ ಜಾಹೀರಾತುಗಳನ್ನು ಕೊಟ್ಟು ದಿನಾಲು ಅಂಚೆ ಕಚೇರಿಗೆ ಹೋಗಿ ತನ್ನ ತಂದೆ-ತಾಯಿಯ ಪತ್ರ ಬರುತ್ತದೆಂದು ತಳಮಳದಲ್ಲಿ ಕಾಯುತ್ತಿರುತ್ತಾಳೆ. ಆ ಕಾದಂಬರಿಯ ಭಾವಲೋಕ-ಅದನ್ನು ಹಿಡಿದು ಕೊಡುವ ಚೂಪಾದ ಭಾಷೆ, ಅನುಭವಗಳ ತೀವ್ರ ಪ್ರಾಮಾಣಿಕತೆ ಇವೆಲ್ಲ (ನವ್ಯ ಸಾಹಿತ್ಯದ ಲಕ್ಷಣಗಳು) ನನ್ನನ್ನು ಗದ್ಯ ಬರೆಯುವಂತೆ ಪ್ರಚೋದಿಸಿದವು. ನನ್ನ ಮನದ ತಿರುಗಣಿ ಮಡುವಿನ ಚಿತ್ರ ಬರೆಯಲು ಆಗ ಗದ್ಯದ ಮೂರು ಪುಟಗಳನ್ನು ಬರೆದೆ. ಬರೀ ಬಣ್ಣಗಳು...... ಭಾವವನ್ನು ಹಿಡಿಯಲು ಪ್ರಯತ್ನಿಸಿದ

ಬಣ್ಣಗಳ ಅಮೂರ್ತ ವಿನ್ಯಾಸ!.... ನಾನು ಆ ಮೂರು ಪುಟಗಳಿಂದ ಕಥೆಗಾರನಾಗಿ ಹುಟ್ಟಿ ಬಂದೆ. ಆ ಮೂರು ಪುಟಗಳನ್ನು ಓದಿ 'ಪಾಟೀಲ್..... ನೀವು ಗದ್ಯ ಬರೆಯಬೇಕು. ಪವರ್‌ಫುಲ್ ಗದ್ಯ ಬರೆಯುತ್ತೀರಿ' ಎಂದು ಹೇಳಿ ಗೆಳೆಯ ಎಚ್.ಎಸ್. ವೆಂಕಟೇಶಮೂರ್ತಿಯವರು ನನ್ನನ್ನು ಪದ್ಯದ ಕ್ಯಾಪ್ಟಿವಿಟಿಯಿಂದ ಬಿಡುಗಡೆಗೊಳಿಸಿ ಕಥನದ ಸೆರಗಿಗೆ ಕಟ್ಟಿದರು!



# ಬರೆಯುವುದು ಸಂತೋಷದಾಯಕ ಕ್ರಿಯೆ

● ಸಿ ಎನ್ ರಾಮಚಂದ್ರನ್

ನನ್ನ ಬರಹದ ಬಗ್ಗೆ ನಾನೇ ಹೇಳುವುದು ಎಷ್ಟು ಉಚಿತ ಎಂಬ ಸಂಶಯದೊಡನೆಯೇ, ನಾನು ಬರಹಗಾರನಾದ ಬಗ್ಗೆ ಕೆಲವಂಶಗಳನ್ನು ಓದುಗರೊಡನೆ ಹಂಚಿಕೊಳ್ಳಲು ಅವಕಾಶ ಮಾಡಿಕೊಟ್ಟಿರುವ ನಿಮಗೆ ಕೃತಜ್ಞನಾಗಿದ್ದೇನೆ.

ಪ್ರಾಯಃ, ನನ್ನ ಬಾಲ್ಯದ ವಾತಾವರಣ ಲೇಖಕನಾಗಲು ನನ್ನನ್ನು ಪ್ರೇರೇಪಿಸಿರಬೇಕು. ನನ್ನ ತಂದೆಯವರು ಸಂಸ್ಕೃತ-ಕನ್ನಡ ಸಾಹಿತ್ಯಗಳಲ್ಲಿ ಅದ್ವಿತೀಯ ಪಂಡಿತರಾಗಿದ್ದರು; ಮತ್ತು ಅನೇಕ ವರ್ಷಗಳ ಕಾಲ ಒಂದು ವೇದ ಪಾಠಶಾಲೆಯನ್ನೂ ನಡೆಸುತ್ತಿದ್ದರು. ಅತಿ ಚಿಕ್ಕ ವಯಸ್ಸಿನಿಂದಲೇ ಅವರು ನನಗೆ ಸಂಸ್ಕೃತ ಕಾವ್ಯ-ನಾಟಕಗಳನ್ನು ಮತ್ತು 'ಜೈಮಿನಿ ಭಾರತ', 'ರಾಜಶೇಖರ ವಿಳಾಸ' ಮುಂತಾದ ಕನ್ನಡ ಕಾವ್ಯಗಳನ್ನೂ ಪಾಠ ಮಾಡಿದ್ದರು. ('ಪರೀಕ್ಷಿತ' ಇತ್ಯಾದಿ ಕೆಲವು ನಾಟಕಗಳನ್ನೂ ಅವರು ರಚಿಸಿದ್ದರು.) ಅನಂತರ, ನನ್ನ ಮಿಡ್ಲ್‌ಸ್ಕೂಲ್,-ಹೈಸ್ಕೂಲ್ ಘಟ್ಟದಲ್ಲಿ ಹಿಂದಿ ವಿದ್ವಾಂಸರಾಗಿದ್ದ ನನ್ನ ಸೋದರಮಾವನವರು ಕ್ರಮವಾಗಿ ನನಗೆ ಹಿಂದೀ ಸಾಹಿತ್ಯದ ಪಾಠ ಮಾಡುತ್ತಿದ್ದರು; ಮತ್ತು ಅವರೂ ಕಥೆ-ನಾಟಕಗಳನ್ನು ಬರೆಯುತ್ತಿದ್ದರು. ಇಂತಹ ಸಾಹಿತ್ಯಕ ವಾತಾವರಣದಲ್ಲಿ ಬೆಳೆದ ನನಗೆ ಬದುಕಿನಲ್ಲಿ ಇದ್ದರೆ ಅದು ಸಾಹಿತ್ಯರಚನೆ ಎಂಬ ನಂಬಿಕೆ ಆಳವಾಗಿ ಬೇರೂರಿತು. ಈ ನಂಬಿಕೆಯನ್ನು ಆ ಕಾಲಘಟ್ಟದಲ್ಲಿ ಅತಿ ಜನಪ್ರಿಯರಾಗಿದ್ದ ಅನಕೃ, ತರಾಸು ಮುಂತಾದವರ ಕೃತಿಗಳು ಬಲಪಡಿಸಿದುವು. ಹೈಸ್ಕೂಲ್‌ನಲ್ಲಿದ್ದಾಗಲೇ ಒಂದೆರಡು ಕಥೆಗಳನ್ನು ಬರೆದು, ಸ್ಥಳೀಯ ಸ್ಪರ್ಧೆಗಳಲ್ಲಿ ಬಹುಮಾನ ಪಡೆದಿದ್ದೆನೆಂದು ನೆನಪು. ಅನಂತರ, ಆನರ್ಸ್ ವಿದ್ಯಾರ್ಥಿಯಾಗಿ ಮಹಾರಾಜಾಸ್ ಕಾಲೇಜ್ ಸೇರಿದ ನಂತರ (೫೪ರಲ್ಲಿ) ಅನಂತಮೂರ್ತಿಯವರ ಮತ್ತು ನವ್ಯ ಕಥೆ-ಕಾದಂಬರಿಗಾರರ ಪ್ರಭಾವಕ್ಕೊಳಗಾಗಿ, ಅವರ ಹಾಗೆ ಬರೆಯಬೇಕೆಂಬ ಹಂಬಲ ಕಾಡತೊಡಗಿತು.

ಪ್ರಕಟವಾದ ನನ್ನ ಮೊದಲ ಕಥೆ "ಹೆಗಲೇರಿದ ಮುದುಕ", ೧೯೬೪ರಲ್ಲಿ. ಅದು "ಸುಧಾ" ದಲ್ಲಿ ಪ್ರಕಟವಾದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. (ಆ ಕಥೆಗೆ ಸಂಭಾವನೆಯಾಗಿ

ಬಂದ ೧೫ರೂ.ಗಳನ್ನು ಬಹಳ ಕಾಲ ಖರ್ಚು ಮಾಡದೆ ಇಟ್ಟುಕೊಂಡಿದ್ದೆ.) ಅನಂತರ, ಇನ್ನೂ ಕೆಲವು ಕಥೆಗಳನ್ನು "ಪ್ರಜಾವಾಣಿ", "ಜನಪ್ರಗತಿ" ಇತ್ಯಾದಿ ಪತ್ರಿಕೆಗಳು ಪ್ರಕಟಿಸಿ ಲೇಖಕನಾಗಬಹುದೆಂಬ ನಂಬಿಕೆಯನ್ನು ನನಗೆ ಕೊಟ್ಟುವು. (ಹಾಗೆಯೇ, "ಹಿಮಗಿರಿಯ ಕಂದರ"ದ ಮಾದರಿಯಲ್ಲಿ ನಾನು ಬರೆದ 'ನವ್ಯ' ನೀಳ್ಗವನವನ್ನು ಓದಿ, ಪ್ರೊ. ರಾಮರಾವ್ ಅವರು "ಕೀಪ್ ಯುವರ್ ವರ್ಕ್ಸ್ ಫಾರ್ ನೈನ್ ಯಿಯರ್ಸ್".. ನಿನ್ನ ಬರಹಗಳನ್ನು ಒಂಭತ್ತು ವರ್ಷಗಳವರೆಗೆ ಮೂಲೆಯಲ್ಲಿಟ್ಟಿರು- ಎಂಬ ಪೋಪ್ ಕವಿಯ ಬುದ್ಧಿವಾದವನ್ನೂ ನನಗೆ ಕೊಟ್ಟಿದ್ದರು) ನನ್ನ ಕಿರು ಕಾದಂಬರಿ "ಶೋಧ" ಶಾಂತಿನಾಥ ದೇಸಾಯರ ಅಭಿಮಾನದ ಫಲವಾಗಿ ೧೯೭೮ ರಲ್ಲಿ ಪ್ರಕಟವಾಯಿತು. ಮುಂದೆ ನಾನೂ ಪ್ರಖ್ಯಾತ ಕಥೆಗಾರ/ ಕಾದಂಬರಿಗಾರನಾಗುತ್ತೇನೆಂಬ ಕನಸು ಕಾಣುತ್ತಾ, ಅನೇಕ ಕಥೆ-ಕಾದಂಬರಿಗಳ ರೂಪು-ರೇಷೆಗಳನ್ನು ಮನಸ್ಸಿನಲ್ಲಿಯೇ ಕಟ್ಟುತ್ತಾ, ಅಂದಿನ ದಿನಗಳಲ್ಲಿ ಚಡಪಡಿಸುತ್ತಿದ್ದೆ.

ನಾನು 'ವಿಮರ್ಶಕನಾದುದು ಆಕಸ್ಮಿಕ' (ಅಹುದೆ?-- ನಾನು ಕಾಲೇಜು-ವಿ.ವಿ.ಗಳಲ್ಲಿ ಅಧ್ಯಾಪಕನಾಗಿದ್ದಾಗ ನನಗೆ ಅತಿ ಪ್ರಿಯವಾಗಿದ್ದ ವಿಷಯವೆಂದರೆ 'ಕಾವ್ಯಮೀಮಾಂಸೆ.' ಕಲಿಸುವ ವಿಷಯಗಳು ವರ್ಷದಿಂದ ವರ್ಷಕ್ಕೆ ಬದಲಾಗುತ್ತಿದ್ದರೂ ನಾನು ಕಡ್ಡಾಯವಾಗಿ ಯಾವಾಗಲೂ ಕಲಿಸುತ್ತಿದ್ದ ಒಂದು ವಿಷಯವೆಂದರೆ ವಿಮರ್ಶೆ ಮತ್ತು ಕಾವ್ಯಮೀಮಾಂಸೆ)

ಅಮೆರಿಕಾದಿಂದ ನಾನು ೧೯೮೩ರಲ್ಲಿ ಮರಳಿ, ಮಂಗಳೂರು ವಿ.ವಿ. ಸೇರಿದಾಗ, ಆಗತಾನೆ ಹೊರಬಂದಿದ್ದ ಚದುರಂಗರ 'ವೈಶಾಖ' ಕಾದಂಬರಿಯನ್ನು ಓದಿ ತುಂಬಾ ಮೆಚ್ಚಿಕೊಂಡಿದ್ದೆ; ಮತ್ತು ಅದರ ಬಗ್ಗೆ ಆಗಾಗ ಮಾತನಾಡುತ್ತಿದ್ದೆ. ಆಗ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ. ಶ್ರೀನಿವಾಸ ಹಾವನೂರರು ಅದರ ಬಗ್ಗೆ ಒಂದು ದೀರ್ಘ ಲೇಖನ ಬರೆಯಲು ಪ್ರೇರೇಪಿಸಿದರು; ಮತ್ತು ಅನಂತರ ಅದು 'ಋಜುವಾತು'ವಿನಲ್ಲಿ ಪ್ರಕಟವಾಯಿತು. ಅನಂತರ ಅವರು ಮುಂಬಯಿ ವಿ.ವಿ.ಗೆ ಹೋದನಂತರ ನನ್ನನ್ನು ಅಲ್ಲಿಗೆ ಕರೆಸಿ, ಮೂರು ಭಾಷಣ ಗಳನ್ನು ಏರ್ಪಡಿಸಿ, ಆಮೇಲೆ ಅವುಗಳನ್ನು ವಿಭಾಗದ ವತಿಯಿಂದಲೇ ಪ್ರಕಟಿಸಿದರು ('ಸ್ವರೂಪ').. ೧೯೮೬ರಲ್ಲೆಂದು ಕಾಣುತ್ತದೆ; ಆಗ ವಿಭಾಗ ಮುಖ್ಯಸ್ಥರಾಗಿದ್ದ ಪ್ರೊ. ವಿವೇಕ ರೈ ಅವರು ಕನ್ನಡದ ಮೊದಲ ಕಾದಂಬರಿಗಳ ಮೇಲೆ ಮೂರು ದಿನಗಳ ವಿಚಾರ ಸಂಕಿರಣವನ್ನು ಏರ್ಪಡಿಸಿದ್ದರು; ಮತ್ತು ಅದರಲ್ಲಿ ಒಂದು ಪ್ರಬಂಧವನ್ನು ಮಂಡಿಸಲು ನನ್ನನ್ನು ಆಹ್ವಾನಿಸಿದರು. ಆಗ ನನಗೆ, ಮೊದಲ ಬಾರಿಗೆ, ಕನ್ನಡದ ಎಲ್ಲಾ ಪ್ರಮುಖ ವಿಮರ್ಶಕರನ್ನೂ ಭೇಟಿ ಮಾಡುವ ಅವಕಾಶ ದೊರಕಿತು. ಹೀಗೆ, ಮುಖ್ಯವಾಗಿ ಹಾವನೂರರ ಮತ್ತು ವಿವೇಕ ರೈಗಳ ಪ್ರೋತ್ಸಾಹ-ಪ್ರೇರಣೆಗಳಿಂದ ನಾನು ವಿಮರ್ಶಕನಾದೆ ಎಂದು ಹೇಳಬಹುದು. ಅನಂತರ, ಜಿ.ಎಸ್.ಎಸ್, ಅನಂತಮೂರ್ತಿ, ಗಿರಡ್ಡಿ ಇತ್ಯಾದಿ ಕನ್ನಡದ ಹಿರಿಯ ವಿದ್ವಾಂಸರು ವಿಮರ್ಶೆಯ ಕ್ಷೇತ್ರದಲ್ಲಿ ನಾನು ಬೆಳೆಯಲು ಸಹಕಾರ-ಪ್ರೋತ್ಸಾಹ ಗಳನ್ನು ನೀಡಿದ್ದಾರೆ. ಈ ಮಾತನ್ನು ಏಕೆ ಹೇಳುತ್ತಿದ್ದೇನೆಂದರೆ, ಸೃಜನಶೀಲ ಲೇಖಕನೊಬ್ಬ, ಪ್ರಾಯಃ ಬೆಳೆಯಲು ತನ್ನ ಪ್ರತಿಭೆಯೊಂದನ್ನೇ ನೆಚ್ಚಿಕೊಂಡಿದ್ದರೆ ಸಾಕು; ಆದರೆ, ವಿಮರ್ಶಕ ಬೆಳೆಯಬೇಕಾದರೆ, ಇತರರ ಸಹಕಾರ ಹಾಗೂ ಪ್ರೋತ್ಸಾಹ ಬೇಕೇಬೇಕು.

ನಾನು ಇಂಗ್ಲಿಶ್ ಮತ್ತು ಕನ್ನಡ ಇವೆರಡು ಭಾಷೆಗಳಲ್ಲೂ ಸಾಹಿತ್ಯ, ಶಿಕ್ಷಣ, ಸಂಸ್ಕೃತಿ ಇತ್ಯಾದಿ ವಿಷಯಗಳ ಬಗ್ಗೆ ಬರೆಯುತ್ತೇನೆ. ನನ್ನ ನಂಬಿಕೆಯೇನೆಂದರೆ, ಇಂದಿನ ಬಹುಭಾಷಾ ಭಾರತೀಯ ಸಮಾಜದಲ್ಲಿ ಎಲ್ಲರೂ ದ್ವಿಭಾಷಿಗಳು, ಸಾಧ್ಯವಿದ್ದರೆ ತ್ರಿಭಾಷಿಗಳಾಗಿರಬೇಕು; ಮತ್ತು ಭಾಷೆ-ಭಾಷೆಗಳ ನಡುವೆ ಸೇತುವೆ ಕಟ್ಟುವುದು ಇಂದಿನ ಇಂಗ್ಲಿಶ್ ವಿದ್ಯಾರ್ಥಿಯ/ ಶಿಕ್ಷಕನ ಆದ್ಯ ಕರ್ತವ್ಯ. ಈ ನೆಲೆಯಲ್ಲಿ ನಾನು ಇಂಗ್ಲಿಶ್‌ನಲ್ಲಿ ಐದು ಪುಸ್ತಕಗಳನ್ನು, ಕನ್ನಡದಲ್ಲಿ ಹತ್ತು ಪುಸ್ತಕಗಳನ್ನು ಬರೆದಿದ್ದೇನೆ; ಮತ್ತು ಕನ್ನಡದ ಕಾವ್ಯ-ಕಥೆ-ಕಾದಂಬರಿ ಗಳನ್ನು ಇಂಗ್ಲಿಶ್ ಭಾಷೆಗೆ ಅನುವಾದಿಸಿದ್ದೇನೆ.

ನನ್ನ ಎಲ್ಲಾ ವಿಮರ್ಶಾ ಲೇಖನಗಳಲ್ಲಿಯೂ ಸಮಾನ ಪ್ರಮಾಣದಲ್ಲಿ ಕಾವ್ಯಮೀಮಾಂಸೆ ಮತ್ತು ಕೃತಿ ವಿಮರ್ಶೆ ಬೆರೆತಿವೆ; ಮತ್ತು ಒತ್ತು ತೌಲನಿಕ ಅಧ್ಯಯನದ ಮೇಲಿದೆ. ವಿಮರ್ಶಕನಾಗಿ, ನನ್ನ ವೈಚಾರಿಕ ನೆಲೆಯೆಂದರೆ ಸಾಹಿತ್ಯಕೃತಿಯೆಂಬ ಒಂದು 'ರಚನೆ'ಯ ಸ್ವರೂಪ ಅತ್ಯಂತ ಸಂಕೀರ್ಣ; ಮತ್ತು ಇದರ ಆಕೃತಿಯಲ್ಲಿ ವೈಚಾರಿಕ-ಕಲಾತ್ಮಕ-ಸಾಮಾಜಿಕ ವಿನ್ಯಾಸಗಳ ಅನೇಕ ಪದರುಗಳಿರುತ್ತವೆ. ಆದ್ದರಿಂದ, ಯಾವುದೇ ಒಂದು ಸಂಸ್ಕೃತ/ಕನ್ನಡ/ ಇಂಗ್ಲಿಶ್ ವಿಮರ್ಶಾ ಪ್ರಸ್ಥಾನವೂ ಅಂತಹ 'ರಚನೆ'ಯನ್ನು ಸಂಪೂರ್ಣವಾಗಿ ಅರ್ಥೈಸಲು ಸಾಧ್ಯವಿಲ್ಲ. ಆದ್ದರಿಂದ, ನನ್ನ ಲಕ್ಷ್ಯ ಯಾವಾಗಲೂ ನೂತನ ವಿಮರ್ಶಾ ಮಾರ್ಗಗಳಿಂದ (ಈ ಮಾರ್ಗಗಳು ಭಾರತೀಯವಿರಬಹುದು ಅಥವಾ ಪಾಶ್ಚಿಮಾತ್ಯವಿರಬಹುದು) ನಮ್ಮ, ಎಂದರೆ ಭಾರತೀಯ ಇಂಗ್ಲಿಶ್ ಮತ್ತು ಕನ್ನಡ ಸಾಹಿತ್ಯಗಳ ವಿಶ್ಲೇಷಣೆ ಮತ್ತು ವ್ಯಾಖ್ಯಾನ. ನನ್ನ ಇನ್ನೊಂದು ದೃಢ ನಂಬಿಕೆಯೆಂದರೆ, ಸಾಹಿತ್ಯಕೃತಿಯ ಸಂಕೀರ್ಣತೆಯ ಅರಿವಿನಿಂದ ಹೊರಡುವ ಉತ್ತಮ ಸಾಹಿತ್ಯ ವಿಮರ್ಶೆ ಉತ್ತಮ ಸಾಮಾಜಿಕ-ಸಾಂಸ್ಕೃತಿಕ ವಿಮರ್ಶೆಯೂ ಆಗಿಯೇ ಇರುತ್ತದೆ.

ಪ್ರಾಯಃ, ಈ ಸಂದರ್ಭದಲ್ಲಿ ನಾನು ವಿಮರ್ಶಕನ ನೆಲೆಯಲ್ಲಿ ನನ್ನ ಕಹಿ-ಸಿಹಿ ಅನುಭವಗಳನ್ನು ಪ್ರಸ್ತಾಪಿಸಬೇಕು. ಸರಕಾರಿ-ಅರೆಸರಕಾರಿ ಸಂಸ್ಥೆಗಳಿಂದ ನನಗಾಗಿರುವ ಹೆಚ್ಚಿನ ಅನುಭವ ಕಹಿಯೇ. ಉದಾಹರಣೆಗೆ: ನನ್ನ ಒಂದು (ಆಹ್ವಾನಿತ) ಕೃತಿಯು ಒಂದು ರಾಷ್ಟ್ರೀಯ ನೆಲೆಯ ಸಂಸ್ಥೆಯಿಂದ ಪ್ರಕಟವಾಗಲು ಐದಕ್ಕಿಂತಲೂ ಹೆಚ್ಚು ವರ್ಷಗಳು ಬೇಕಾದುವು; ಮತ್ತೊಂದು ಸಂಸ್ಥೆ ನನ್ನ ಮೊದಲ ಹಸ್ತಪ್ರತಿಯನ್ನು ಕಳೆದು, ಎರಡನೆಯ ಹಸ್ತಪ್ರತಿಯನ್ನು ಹುಡುಕಲು ನನ್ನನ್ನೇ ಕೇಳಿತು-- ಎರಡು ವರ್ಷಗಳ ನಂತರ; ಮೂರನೆಯ ಸಂಸ್ಥೆಯಾದರೋ ತಾನೇ ಕೇಳಿ ಪ್ರಕಟಿಸಿದ ಕೃತಿಯೊಂದರ ಗೌರವ ಸಂಭಾವನೆಯನ್ನು ಇನ್ನೂ- - ಎಂದರೆ ಎರಡು ವರ್ಷಗಳ ನಂತರವೂ -- ಕೊಟ್ಟಿಲ್ಲ. ಪ್ರಾಯಃ ಇಂತಹ ಅನುಭವವು ಪ್ರತಿಷ್ಠಿತರಲ್ಲದ ಎಲ್ಲಾ ಲೇಖಕರಿಗೂ ಒಂದಲ್ಲ ಒಂದು ಸಂದರ್ಭದಲ್ಲಿ ಆಗಿಯೇ ಇರುತ್ತದೆ. (ಖಾಸಗಿ ಪ್ರಕಾಶಕರಂತೂ ಗೌರವ ಧನವನ್ನು ನೀಡುವುದೂ ಇಲ್ಲ, ನಾನು ನಿರೀಕ್ಷಿಸುವುದೂ ಇಲ್ಲ.)

ಹಾಗೆಯೇ, ಇಂದಿನ ದಿನಗಳಲ್ಲಿ ನಮ್ಮ ಸಮಾಜದಲ್ಲಿ ಅಸಹನೆ ಹೆಚ್ಚುತ್ತಿದೆಯೇನೋ

ಎಂಬ ಸಂಶಯ ನನಗೆ ಬರುತ್ತದೆ. (ಆದರೆ ಒಂದು ಬಗೆಯ ಅಸಹನೆ ಎಲ್ಲಾ ಕಾಲದಲ್ಲಿಯೂ ಇರುತ್ತೆಯೇನೋ ಅಥವಾ, ಇದು ನನ್ನ ಭ್ರಮೆಯೂ ಇರಬಹುದು.) ನಿದರ್ಶನಾರ್ಥವಾಗಿ ಒಂದೆರಡೇ ಘಟನೆಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ. ಒಂದು ಸಂಕಿರಣದಲ್ಲಿ ನಾನು ಇಂದಿನ ವಸಾಹತೋತ್ತರ ಚಿಂತನೆಯನ್ನಾಧರಿಸಿ, 'ಕನ್ನಡದಲ್ಲಾಗಲೀ ಇಂಗ್ಲಿಶ್‌ನಲ್ಲಾಗಲೀ', 'ಪಂಪನಿಂದ ಕುವೆಂಪುವರೆಗೆ' ಇತ್ಯಾದಿ ಒಂದು ಪರಂಪರೆಯನ್ನು ಕಟ್ಟುವುದು, ಅಖಂಡ ಸಾತತ್ಯವನ್ನು ಗುರುತಿಸುವುದು, ಪ್ರಾಯಃ, ಸಲ್ಲ;ಸಾತತ್ಯ, ಪರಂಪರೆ ಇತ್ಯಾದಿ ನಮ್ಮ ದೃಷ್ಟಿಕೋನವನ್ನನುಸರಿಸಿ ಬದಲಾಗುತ್ತವೆ' ಎಂದು ಮಂಡಿಸಿದೆ. ಇದು ಚರ್ಚಾಸ್ಪದ ಅಂಶವಿರಬಹುದು; ಆದರೆ, ಅನಂತರ ಮಾತನಾಡಿದ ಕನ್ನಡದ ಹೆಸರಾಂತ ವಿದ್ವಾಂಸರೊಬ್ಬರು ಈ ವಿಷಯವನ್ನು ಕುರಿತು, 'ಕನ್ನಡತನ, ಕನ್ನಡ ಸತ್ವ ತಿಳಿದಿರುವವರಿಗೆ ಇದು ಪ್ರಶ್ನೆಯಾಗುವುದಿಲ್ಲ; ಕೇವಲ ಇಂಗ್ಲಿಶ್ ಓದಿಕೊಂಡು ಮಾತನಾಡುವವರಿಗೆ ಇದು ಹೇಗೆ ಗೊತ್ತಾಗಬೇಕು?' ಎಂದು ನಾನೇನೂ ಒಂದು ಅಪರಾಧ ಮಾಡಿರುವಂತೆ, ತಮ್ಮ ಅಧ್ಯಕ್ಷ ಭಾಷಣವನ್ನೆಲ್ಲಾ ವೈಯಕ್ತಿಕವಾಗಿ ನನ್ನನ್ನು ಟೀಕಿಸಲು ಉಪಯೋಗಿಸಿದರು. ಇನ್ನೊಂದು ಸಂದರ್ಭ: ಮಂಗಳೂರಿನಲ್ಲಿ ಒಂದು ಜಾನಪದ ಸಂಶೋಧನಾ ಕೃತಿಯನ್ನು ಬಿಡುಗಡೆ ಮಾಡುತ್ತಾ, ಅಲ್ಲಿಯವರೆಗೆ ನಡೆದಿದ್ದ ಚರ್ಚೆಯನ್ನು ಗಮನಿಸುತ್ತಾ, ನನ್ನ ಅಧ್ಯಕ್ಷ ಭಾಷಣದಲ್ಲಿ 'ವ್ಯವಸ್ಥೆಯ ವಿರುದ್ಧ ಹೋರಾಡುವ ಕೆಳವರ್ಗಗಳ ಸಾಂಸ್ಕೃತಿಕ ನಾಯಕರೆಲ್ಲರೂ ಪಟ್ಟಭದ್ರರಿಗೆ 'ಪುಂಡ'ರಾಗಿಯೇ ಕಾಣುತ್ತಾರೆ; ಇದರ ಬಗ್ಗೆ ನಾವು ಚಿಂತಸಬೇಕಾದ್ದಿಲ್ಲ' ಎಂದು ಆನುಷಂಗಿಕವಾಗಿ ಹೇಳಿದೆ.ಆ ಒಂದು ಹೇಳಿಕೆಯನ್ನು ಒಂದು ಪತ್ರಿಕೆ ಹೈಲೈಟ್ ಮಾಡಿದ್ದರಿಂದ, ಒಂದು ಸಮುದಾಯಕ್ಕೆ ನಾನು ಅವಮಾನ ಮಾಡಿದ್ದೇನೆಂದು ಆ ಸಮುದಾಯದವರು ಪ್ರತಿಭಟಿಸಿ, ಇಡೀ ಒಂದೆರಡು ವಾರ ನಾನು ಉದ್ವಿಗ್ನತೆಯಲ್ಲಿ ಕಳೆಯುವಂತಾಗಿತ್ತು. (ನನ್ನ ಹಿರಿಯ ಮಿತ್ರರೊಬ್ಬರ ಸಹಾಯವಿಲ್ಲದಿದ್ದರೆ ಈ ಪ್ರಕರಣ ಇನ್ನೂ ಎಷ್ಟು ಗಂಭೀರವಾಗುತ್ತಿತ್ತೋ ಗೊತ್ತಿಲ್ಲ.) ಇವೆಲ್ಲದಕ್ಕಿಂತ ವಿಚಿತ್ರವಾದುದೆಂದರೆ, ಒಂದು ಕೃತಿ-ಬಿಡುಗಡೆಯ ಸಂದರ್ಭದಲ್ಲಿ ನಾನು 'ಪ್ರವಾದಿಯ ನೆಲೆಯಲ್ಲಿ ಮಾತನಾಡುವವರು ಕವಿಯಾಗಲಾರ' ಎಂದುದು ಮತ್ತೊಂದು ಸಮುದಾಯದ ಭಾವನೆಗಳಿಗೆ ನೋವುಂಟು ಮಾಡಿದೆಯೆಂದು ('ಪ್ರವಾದಿ' ಶಬ್ದವನ್ನು ಉಪಯೋಗಿಸಿದ್ದರಿಂದ) ಒಂದೆರಡು ದಿನ ಪತ್ರಿಕೆಗಳಲ್ಲಿ ನನ್ನ ಬಗ್ಗೆ ಉಗ್ರ ಟೀಕೆ ಪ್ರಕಟವಾಗಿತ್ತು. ಪ್ರಾಯಃ, ಸಾರ್ವಜನಿಕ ಸಭೆಗಳಲ್ಲಿ ಮಾತನಾಡುವ ಚಟವಿರುವವರಿಗೆ ಇಂತಹ ಅನುಭವಗಳು ಅನಿವಾರ್ಯವೇನೂ!

ಆದರೆ, ಒಟ್ಟಾರೆಯಾಗಿ ಹೇಳಬೇಕಾದರೆ, ಸಿಹಿ ಅನುಭವಗಳೇ ಹೆಚ್ಚು; ಕರ್ನಾಟಕದ ವಿದ್ವಾಂಸರು ಮತ್ತು ಓದುಗರು ನನಗೆ ಅತಿಶಯ ಪ್ರೀತಿ-ಪ್ರೋತ್ಸಾಹಗಳನ್ನು ನೀಡಿದ್ದಾರೆ; ವಿಮರ್ಶೆಯ ಮೂಲಕ, ಪತ್ರ-ದೂರವಾಣಿ ಕರೆಗಳ ಮೂಲಕ ತಮ್ಮ ಮೆಚ್ಚುಗೆ-ಅಭಿಮಾನಗಳನ್ನು ಸೂಚಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ, ಇಂತಹ ಪ್ರೀತ್ಯಭಿಮಾನಗಳಿಗೆ ನಾನು ಅರ್ಹನೆ ಎಂಬ ಸಂಶಯವೂ ನನ್ನನ್ನು ಕಾಡಿದ್ದಿದೆ.

ಈಗ ನಾನು ಇಲ್ಲಿಯ ತನಕ ಮುಂದೂಡುತ್ತಿದ್ದ 'ನಾನೇಕೆ ಬರೆಯುತ್ತೇನೆ?' ಎಂಬ ಪ್ರಶ್ನೆಗೆ ಉತ್ತರಿಸಲು ಪ್ರಯತ್ನಿಸಬೇಕು. ಆದರೆ, ಪ್ರಜ್ಞಾಪೂರ್ವಕವಾಗಿ ಕೊಡುವ ಈ ಉತ್ತರ ಗಳು ಎಷ್ಟು ಸತ್ಯದೂರವಾಗಿರುತ್ತವೆ, ಗೊತ್ತಿಲ್ಲ. ನಾನು ಏನನ್ನಾದರೂ ಬರೆಯುವುದೇ ಕೆಂದರೆ, ಬರೆಯುವುದು ಒಂದು ಸಂತೋಷದಾಯಕ ಕ್ರಿಯೆ. ಒಂದು ಕೃತಿಯನ್ನು ಓದಿದಾಗ, ಒಂದು ಘಟನೆ ಅಥವಾ ಅನುಭವ ನನ್ನನ್ನು ಆಳವಾಗಿ ತಟ್ಟಿದಾಗ, ಅದಕ್ಕೊಂದು ರೂಪವನ್ನು ಕೊಡಲು ನನ್ನಲ್ಲೇ ಚಡಪಡಿಕೆ ಪ್ರಾರಂಭವಾಗುತ್ತದೆ. ಬರೆಯುವುದು ಕಥೆಯಾಗಲಿ ಅಥವಾ ವಿಮರ್ಶಾಲೇಖನವಾಗಲಿ, ಅನುವಾದವಾಗಲಿ, ಬರೆಯುವ ಸಂದರ್ಭದಲ್ಲಿ ನಾನು ಅನುಭವಿಸುವ ಮಾನಸಿಕ ಒತ್ತಡಗಳು ಒಂದೇ ಬಗೆಯದಾಗಿರುತ್ತವೆ. ಬಹಳಷ್ಟು ಸಲ, ಒಂದು ಲೇಖನವನ್ನು ಪ್ರಾರಂಭಿಸುವುದು ನನಗೆ ತುಂಬಾ ಕಷ್ಟಕರವಾಗಿ ಕಂಡಿದೆ. ಸಾಧ್ಯವಿದ್ದಷ್ಟು ಸಮಯ ಆ ಲೇಖನದ ಸ್ವರೂಪದ ಬಗ್ಗೆ ಚಿಂತಿಸಿ, ನಂತರವೂ ಅದರ ಮೊದಲ ಪ್ಯಾರಾ/ಪುಟ/ಅಧ್ಯಾಯವನ್ನು ಐದಾರು ಸಲ ಬರೆದು, ಅತೃಪ್ತಿಯಿಂದ ಹೊಡೆದು ಹಾಕಿದ್ದಿದೆ. ಮೊದಲ ಪ್ಯಾರಾ/ಪುಟ/ಅಧ್ಯಾಯವನ್ನು ಬರೆದ ನಂತರ ಉಳಿದ ಭಾಗವನ್ನು ಬರೆಯುವುದು ಸುಲಭವಾಗುತ್ತದೆ. ಇಷ್ಟೆಲ್ಲಾ ಚಿಂತಿಸಿ, ಬರೆದು ನಂತರ ನನಗೆ ತೃಪ್ತಿಯಾಗುವ ಹಾಗೆ ಆ ಲೇಖನ/ಪ್ರಬಂಧ ರೂಪುಗೊಂಡರೆ (ಅನೇಕ ಸಂದರ್ಭಗಳಲ್ಲಿ ಇದು ಸಾಧ್ಯವೇ ಆಗುವುದಿಲ್ಲ; ಇನ್ನೂ ಚೆನ್ನಾಗಿ ಬರೆಯಬಹುದಿತ್ತು ಎಂಬ ಕೊರಗು ಉಳಿದೇ ಉಳಿಯುತ್ತದೆ.) ಅದು ನನಗೆ ಕೊಡುವ ಸಂತೋಷ ಅಪಾರ--ಬಾಲ್ಯದಲ್ಲಿ, ನನ್ನ ತೋಟದಲ್ಲಿ, ನಾನೇ ಕೈಯ್ಯಾರ ಪಾತಿ ಮಾಡಿ ನೆಟ್ಟು, ನೀರು-ಗೊಬ್ಬರ ಹಾಕಿ, ಬೆಳಸಿದ ಮಾರುದ್ದದ ವೀಳೆಯದ ಹಂಬು ಅಡಿಕೆ ಮರವನ್ನು ತಬ್ಬಿಕೊಂಡು ಎತ್ತರಕ್ಕೆ ಹಬ್ಬಿ, ಚಿನ್ನದ ಎಲೆಗಳನ್ನು ಮೈತುಂಬಾ ಹೊದ್ದುಕೊಂಡು, ಗಾಳಿಯಲ್ಲಿ ಒನೆದಾಡುವುದನ್ನು ನೋಡಿದಾಗ ಆಗುತ್ತಿದ್ದ ಮೈಮರೆಯುವ ಅನುಭವ.

ಎರಡನೆಯದಾಗಿ, ನನಗೆ ಪರಿಚಿತ-ಅಪರಿಚಿತ ಓದುಗರು ಮತ್ತು ನಾನು ಗೌರವಿಸುವ ಹಿರಿಯರು ನಾನು ಬರೆದುದನ್ನು ಓದಿ, ಮೆಚ್ಚಿ, ಅದನ್ನು ನನಗೆ ತಿಳಿಸಿದಾಗ ಆಗುವ ಸಂತೋಷ, ಪ್ರಾಯ ಮತ್ತೊಂದು ಕಾರಣ. ಪರಿಚಿತರಿಂದ/ಅಪರಿಚಿತರಿಂದ ದೊರಕುವ ಇಂತಹ 'ಗುರುತಿಸುವಿಕೆ' ನನ್ನಲ್ಲೇ ನನಗೆ ನಂಬಿಕೆಯಿರಲು ಬಹು ಮುಖ್ಯವೆನಿಸಿದೆ. ನಾನು ಬರೆಯುವುದಕ್ಕೆ ಬೇರೆ ಕಾರಣಗಳೂ ಇವೆಯೋ ನನಗೆ ಗೊತ್ತಿಲ್ಲ. ಆದರೆ, ಒಂದಂತೂ ನಿಜ: ಮಮ್ಮಟನು ಹೇಳುವ "ಯಶಸೆ, ಅರ್ಥಕೃತೆ..." ಇತ್ಯಾದಿ ಕಾವ್ಯಪ್ರಯೋಜನೆಗಳಲ್ಲಿ 'ಅರ್ಥಕೃತೆ' ಅಂತೂ ಕನ್ನಡ ವಿಮರ್ಶೆಗೆ ಅಪ್ರಸ್ತುತ.

ಇಂದು ಕನ್ನಡ ವಿಮರ್ಶೆ ವ್ಯಾಪಕವಾಗಿ, ಗಂಭೀರವಾಗಿ, ಪ್ರಬುದ್ಧವಾಗಿ ಬೆಳೆದಿದೆ, ಬೆಳೆಯುತ್ತಿದೆ. ಇಂತಹ ಸಂದರ್ಭದಲ್ಲಿ ಕನ್ನಡದಲ್ಲಿ ಬರೆಯಲು ಸಾಧ್ಯವಾಗುತ್ತಿರುವುದು ನನಗೆ ತುಂಬಾ ಸಂತೋಷದ ಸಂಗತಿಯಾಗಿದೆ.

●

# ಜನಪ್ರಿಯತೆಗೆಂದೇ ಬರೆದವನಲ್ಲ

● ಬಿ ಆರ್ ಲಕ್ಷ್ಮಣರಾವ್

ಮೊದಲಿಗೆ, ನಾನು ಕವಿ ಹೇಗಾದೆ ಎಂಬ ಬಗ್ಗೆ ಹೇಳುತ್ತೇನೆ. ನಮ್ಮದು ಕೆಳ ಮಧ್ಯಮ ವರ್ಗದ ಒಂದು ದೊಡ್ಡ ಬ್ರಾಹ್ಮಣ ಕುಟುಂಬ. ತಾಯಿ ತಂದೆಗೆ ನಾವು ಒಂಬತ್ತು ಮಂದಿ ಮಕ್ಕಳು. ನಾಲ್ಕು ಗಂಡು, ಐದು ಹೆಣ್ಣು. ತಂದೆ ಫೋಟೋಗ್ರಾಫರ್. ಅವರ ಸಂಪಾದನೆಯೊಂದೇ ಇಡೀ ಕುಟುಂಬಕ್ಕೆ ಆಧಾರ. ಬಡತನವಿಲ್ಲದಿದ್ದರೂ ಸಿರಿವಂತಿಕೆಯಂತೂ ಇರಲಿಲ್ಲ. ನಾನೇ ದೊಡ್ಡ ಮಗ. ನಾನೂ ಫೋಟೋಗ್ರಫಿ ಕಲಿತು ತನಗೆ ಉದ್ಯೋಗದಲ್ಲಿ ನೆರವಾಗಬೇಕೆಂದು ಅಪ್ಪನ ಆಸೆ. ಆದರೆ ನಾನು ಓದಿನಲ್ಲಿ ಚುರುಕಾಗಿದ್ದೆ. ಜೊತೆಗೆ ಸಂಗೀತ, ಸಾಹಿತ್ಯದ ಹುಚ್ಚೂ ಚಿಕ್ಕಂದಿನಿಂದೇ ಇತ್ತು. ಸಂಗೀತದ ಆಸಕ್ತಿ ಅಪ್ಪನಿಂದಲೇ ವಂಶ ಪಾರಂಪರ್ಯವಾಗಿ ಬಂದಿದ್ದೀತು. ಅವರು ಚೆನ್ನಾಗಿ ಹಾಡ್ತಾ ಇದ್ದರು. ಪಿಟೀಲು ನುಡಿಸುತ್ತಿದ್ದರು. ನನಗೆ ಸಾಹಿತ್ಯದಲ್ಲಿ ಆಸಕ್ತಿ ಯಾಕೆ ಬಂತೋ ಗೊತ್ತಿಲ್ಲ. ಅಪ್ಪ ಅಮ್ಮ ಅಷ್ಟಾಗಿ ಓದಿದವರಲ್ಲ. ಮನೆಯಲ್ಲಿ ಸಾಹಿತ್ಯ ವಾತಾವರಣವೇನೂ ಇರಲಿಲ್ಲ. ಆದರೂ ನಾನು ಬಾಲ್ಯದಿಂದಲೇ ತುಂಬಾ ಓದ್ತಾ ಇದ್ದೆ. ಬರೆಯುವುದಕ್ಕೂ ಪ್ರಯತ್ನಿಸುತ್ತಿದ್ದೆ.

ತಾಯಿ ತಂಗಿಯರ ಪ್ರೀತಿ ನನಗೆ ಧಾರಾಳವಾಗಿ ಸಿಕ್ಕಿತ್ತು. ಬೇಕಾದಷ್ಟು ಪುಂಡ ಗೆಳೆಯರೂ ಜೊತೆಗಿದ್ದರು. ಆದರೆ ಅಪ್ಪನೊಂದಿಗೆ ಮಾತ್ರ ಸದಾ ಜಗಳ. ಮೂರು ಹೊತ್ತು ರೇಡಿಯೋಲಿ ನಾನು ಸಿನಿಮಾ ಹಾಡು ಕೇಳೋದು, ಹಾಡೋದು, ಪುಸ್ತಕಗಳ ಓದಿನಲ್ಲಿ ತಲ್ಲೀನನಾಗಿರೋದು ಕಂಡರೆ ಅಪ್ಪ ಉರಿದು ಬೀಳುತ್ತಿದ್ದರು. "ಫೋಟೋಗ್ರಫಿ ಕಲಿತುಕೋ" ಅಂತ ಅವರ ಒತ್ತಾಯ. ಏನೇ ಆಗಲೀ, ಅಪ್ಪನ ಈ ಉದ್ಯೋಗಕ್ಕೆ ಬಿಲ್‌ಕುಲ್ ಬರಬಾರದೆಂದು ನನ್ನ ಹಠ. ಅದೃಷ್ಟಕ್ಕೆ ಎಸ್ಸೆಲ್ಸಿಯಲ್ಲಿ ನನಗೆ ಫಸ್ಟ್ ಕ್ಲಾಸ್ ಬಂತು. ಅಪ್ಪ ನನ್ನನ್ನು ಮುಂದಕ್ಕೆ ಓದಿಸಲೇ ಬೇಕಾಯಿತು. ಜೊತೆಗೆ ಚಿಂತಾಮಣಿಯಲ್ಲಿ ಆಗ್ಗೆ ಕಾಲೇಜಿರಲಿಲ್ಲ. ಮೊದಲೇ ಪೋಲಿ, ಇನ್ನು ಬೆಂಗಳೂರಲ್ಲಿ ಸೇರಿಸಿದರೆ ಕುಲಗೆಟ್ಟು ಹೋಗ್ತಾನೆ. ಅಂತ ದಾವಣಗೆರೆಯಲ್ಲಿ ಪಿಯುಸಿಗೆ ಸೇರಿಸಿದರು. ಅಲ್ಲಿ ಸೋದರತ್ತೆ ಮನೆಯಲ್ಲಿ ನನ್ನ ಬಿಡಾರ. ದಾವಣಗೆರೆಯಲ್ಲೇ ಬಿಎಸ್ಸಿಗೆ ಸೇರಿಕೊಂಡೆ. ಅಲ್ಲಿ ಡಿ.ಕೆ. ಸೀತಾರಾಮಶಾಸ್ತ್ರಿ, ಜನಾರ್ಧನ ಅಯ್ಯಂಗಾರ್ ಮತ್ತು ಪ್ರಹ್ಲಾದರಾವ್ ನನಗೆ ಇಂಗ್ಲಿಶ್ ಅಧ್ಯಾಪಕರಾಗಿದ್ದರು. ತುಂಬಾ ಚೆನ್ನಾಗಿ ಪಾಠ ಮಾಡುತ್ತಿದ್ದರು. ಅವರ ಮೂಲಕ ಮತ್ತೆ ನನಗೆ ಸಾಹಿತ್ಯದಲ್ಲಿ ಆಸಕ್ತಿ ಕುದುರಿತು. ಪ್ರಕಾಶ್ ಅಂತ ಒಬ್ಬ ಆಪ್ತಮಿತ್ರನಿದ್ದ. ಬುದ್ಧಿವಂತ, ಪದ್ಯ ಬರೀತಿದ್ದ. ಒಮ್ಮೆ ಅವನು ಬರೆದು ತಂದ ಪದ್ಯ ನನಗೆ ತೋರಿಸಿದ. 'ಸುಮಾರಾಗಿದೆ, ಅಷ್ಟೆ' ಅಂದೆ. ಅವನಿಗೆ ರೇಗಿಹೋಯಿತು. 'ಪದ್ಯ ಬರೆದರೆ ಅದರ ಕಷ್ಟ ಗೊತ್ತಾಗುತ್ತೆ', ಅಂದ. ಅವನ ಮೇಲೆ ಚಾಲೆಂಜಿಗೆ ನಾನೊಂದು ಪದ್ಯ ಬರೆದೆ. ಸ್ವತಃ ಅವನೇ ಅದನ್ನು ತುಂಬಾ ಮೆಚ್ಚಿಕೊಂಡ. ನನಗೆ ಧೈರ್ಯ ಬಂತು.

ಕಾಲೇಜ್ ಮ್ಯಾಗಸಿನ್‌ಗೆ ಕೊಟ್ಟೆ. ಅದು ಸೀತಾರಾಮಶಾಸ್ತ್ರಿ ಅವರ ಗಮನಕ್ಕೆ ಬಂತು. ಅಂದಿನಿಂದ ಅವರ ಒಡನಾಟ ಹೆಚ್ಚಾಯಿತು. ನರಸಿಂಹಸ್ವಾಮಿ ಅವರ 'ಮನೆಯಿಂದ ಮನೆಗೆ' ಓದಲು ಕೊಟ್ಟರು. ಸುಮಾರಾಗಿ ಅರ್ಥವಾಯಿತು. ಅಡಿಗರ 'ಭೂಮಿಗೀತೆ' ಕೊಟ್ಟರು. ತಲೆ ಬುಡ ಅರ್ಥವಾಗಲಿಲ್ಲ. ನನ್ನನ್ನು ಕೂರಿಸಿಕೊಂಡು ಅವರೇ ಅದನ್ನು ಅರ್ಥ ಹೇಳಿದರು. ಅಂದಿನಿಂದ ಕಾವ್ಯವನ್ನು ಗಂಭೀರವಾಗಿ ತೆಗೆದುಕೊಂಡು, ಅಧ್ಯಯನಕ್ಕೆ ತೊಡಗಿದೆ. ಸಾಹಿತ್ಯದಲ್ಲಿ ನನ್ನ ಅಭಿರುಚಿ, ಆಸಕ್ತಿ ಕಂಡು 'ನೀನೇಕೆ ಬಿಎಸ್ಸಿ, ಬಿಟ್ಟು ಬಿಎ ಸೇರಿಕೊಳ್ಳಬಾರದು?' ಎಂದು ಪ್ರಹ್ಲಾದರಾವ್ ಅವರು ಸಲಹೆ ಕೊಟ್ಟರು. 'ಹೌದಲ್ಲ' ಅನ್ನಿಸಿ ಅಪ್ಪನ ಮನ ಒಲಿಸಿ, ಬೆಂಗಳೂರಿಗೆ ಬಂದು ೧೯೬೪ರಲ್ಲಿ GAS ಕಾಲೇಜಿನಲ್ಲಿ ಬಿಎ ಸೇರಿಕೊಂಡೆ.

ಅದು ಕನ್ನಡದಲ್ಲಿ 'ನವ್ಯ' ಚಳುವಳಿ ವಿಜೃಂಭಿಸುತ್ತಿದ್ದ ಕಾಲ. ಲಂಕೇಶ್ GAS ಕಾಲೇಜಿನಲ್ಲಿ ಒಂದು ವರ್ಷ ನನಗೆ ಇಂಗ್ಲಿಶ್ ಸಾಹಿತ್ಯದ ಅಧ್ಯಾಪಕರಾಗಿದ್ದರು. ಬಹುಬೇಗ ಅವರ ಪಟ್ಟಶಿಷ್ಯನಾದೆ. ಅಲ್ಲೇ ನಿಸಾರ್ ಅಹಮದ್ ಅವರ ಪರಿಚಯವೂ ಆಯಿತು. ನನ್ನ ಕೆಲವು ಕವಿತೆಗಳನ್ನು ಅವರಿಗೆ ಅಂಜಂಜುತ್ತ ತೋರಿಸಿದೆ. ಅವರು ಮುಕ್ತಕಂಠದಿಂದ ಹೊಗಳಿ ಹುರಿದುಂಬಿಸಿದರು. ಲಂಕೇಶ್ ಮೂಲಕ ವೈಯನ್ಕೆ ಮತ್ತು ಸುಮತೀಂದ್ರ ನಾಡಿಗರು ಪರಿಚಿತರಾದರು. ಇವರೆಲ್ಲರ ಒಡನಾಟದಲ್ಲಿ ನಾನು ಬೆಂಗಳೂರಿನಲ್ಲಿದ್ದ ಮೂರು ವರ್ಷಗಳಲ್ಲಿ ಕನ್ನಡ ಮತ್ತು ಇಂಗ್ಲಿಶ್ ಸಾಹಿತ್ಯದ ಅನೇಕ ಅತ್ಯುತ್ತಮ ಕೃತಿಗಳನ್ನು ಓದಿದೆ. ಸಾಹಿತ್ಯಸೂಕ್ಷ್ಮಗಳನ್ನು ಹಾಗೂ ಕಾವ್ಯಮರ್ಮಗಳನ್ನು ತಿಳಿದುಕೊಂಡೆ. ಆ ವೇಳೆಗೆ 'ಲಹರಿ', 'ಗೋಕುಲ' ಮತ್ತು 'ಸಂಕ್ರಮಣ'ಗಳಲ್ಲಿ ನನ್ನ ಕವನಗಳು ಬೆಳಕು ಕಂಡಿದ್ದವು. 'ಪ್ರಜಾವಾಣಿ' ತನ್ನ ಸಾಪ್ತಾಹಿಕ ಪುರವಣಿಯಲ್ಲಿ ಕವಿತೆಗಳನ್ನು ಪ್ರಕಟಿಸಲು ಪ್ರಾರಂಭಿಸಿತ್ತು. ಅಲ್ಲಿ ಕವಿತೆ ಪ್ರಕಟವಾಗುವುದು ಆಗ ಪ್ರತಿಷ್ಠೆಯ ವಿಷಯವಾಗಿತ್ತು. 'ಗೆಳೆಯರು' ಅನ್ನೋ ಕವಿತೆ ಅದರಲ್ಲಿ ಪ್ರಕಟವಾಯಿತು. ೧೯೭೦ರಲ್ಲಿ ಲಂಕೇಶ್ 'ಅಕ್ಷರ ಹೊಸಕಾವ್ಯ' ಸಂಪಾದಿಸುವಾಗ, ನನ್ನ ಕೆಲವು ಕವಿತೆಗಳನ್ನು ಅದರಲ್ಲಿ ಸೇರಿಸಿ, ನನ್ನನ್ನು ಭರವಸೆಯ ಯುವಕವಿಯೆಂದು ಪರಿಚಯಿಸಿ ದರು. ಅಡಿಗರ ಒತ್ತಾಸೆಯಿಂದ ಮತ್ತು ಗೆಳೆಯ ಬಾಕಿನ ಕಾರಣವಾಗಿ, ೧೯೭೧ರಲ್ಲಿ 'ಅಕ್ಷರ ಪ್ರಕಾಶನ'ದಿಂದ ನನ್ನ ಮೊದಲ ಕವನ ಸಂಕಲನ 'ಗೋಪಿ ಮತ್ತು ಗಾಂಡಲೀನ' ಲಂಕೇಶರ ಮುನ್ನುಡಿಯೊಂದಿಗೆ ಪ್ರಕಟವಾಯಿತು. ಕಾವ್ಯ ರಸಿಕರೂ ವಿಮರ್ಶಕರೂ ನನ್ನ ಆ ಸಂಕಲನದಲ್ಲಿ ಅಂದಿನ ಯುವ ಜನಾಂಗದ ತಳಮಳಗಳನ್ನು ಮತ್ತು ಆಶೋತ್ತರಗಳನ್ನು ಗುರುತಿಸಿ ಮೆಚ್ಚಿಕೊಂಡರು. ಹೀಗೆ ನನ್ನಲ್ಲಿ ಸಹಜವಾಗಿದ್ದ ಕಾವ್ಯಾಸಕ್ತಿ ಮತ್ತು ಕಿಂಚಿತ್ ಕಾವ್ಯ ಪ್ರತಿಭೆಗೆ ಅದೃಷ್ಟದ ಧಾರಾಳ ಬೆಂಬಲ ದೊರೆತು, ನಾನು ಕವಿ ಅನ್ನಿಸಿಕೊಂಡೆ.

ಅಂದಿನಿಂದ ಇಂದಿನವರೆಗೆ, ಸುಮಾರು ೩೫ ವರ್ಷಗಳಷ್ಟು ಕಾಲ ನಾನು ಸತತವಾಗಿ ಕಾವ್ಯರಚನೆ ಮಾಡುತ್ತ ಬಂದಿದ್ದೇನೆ. ಈ ಅವಧಿಯಲ್ಲಿ ನಾನು ವಿಮರ್ಶಕರ ನಿರೀಕ್ಷೆಯ ಮಟ್ಟದ ಬೆಳವಣಿಗೆ ಸಾಧಿಸಲು ಸಾಧ್ಯವಾಗದೆ ಹೋಗಿರಬಹುದು. ಆದರೆ ಅವರ

ನಿರ್ಲಕ್ಷ್ಯಕ್ಕಂತೂ ಪಾತ್ರನಾಗಿಲ್ಲ. ಸಾಕಷ್ಟು ಜನಪ್ರೀತಿ, ಮನ್ನಣೆ ನನಗೆ ಸಿಕ್ಕಿವೆ.

ಕನ್ನಡ ಕಾವ್ಯ ನವೋದಯ, ನವ್ಯ ಮತ್ತು ಬಂಡಾಯ ಮಾರ್ಗಗಳಲ್ಲಿ ಹಾದು, ಇಂದು ಆ ಎಲ್ಲ ಮಾರ್ಗಗಳ ಗುಣಾತ್ಮಕ ಅಂಶಗಳನ್ನೂ ಒಳಗೊಂಡು, ಋಣಾತ್ಮಕ ಅಂಶಗಳನ್ನು ನಿವಾರಿಸಿಕೊಂಡು, ಒಂದು ಹೊಸ ಸಮನ್ವಯ ಮಾರ್ಗದ ಆವಿಷ್ಕಾರದಲ್ಲಿ ತೊಡಗಿರುವಂತೆ ನನಗೆ ತೋರುತ್ತದೆ. ನವೋದಯ ಹೃದಯವಂತಿಕೆ ಮತ್ತು ಭಾವಗೀತಾತ್ಮಕತೆ, ನವ್ಯದ ವಿಚಾರವಂತಿಕೆ ಮತ್ತು ಧ್ವನಿ ಸೂಕ್ಷ್ಮತೆ, ಬಂಡಾಯದ ಸಾಮಾಜಿಕ ಕಳಕಳಿ ಮತ್ತು ಹೊಣೆಗಾರಿಕೆ ಇವುಗಳನ್ನು ಮೈಗೂಡಿಸಿಕೊಳ್ಳಲು ಇಂದಿನ ಕಾವ್ಯ ಯತ್ನಿಸುತ್ತಿದೆ. ಹಾಗೆಯೇ ನವೋದಯದ ಅತಿವಾಚ್ಯತೆ ಮತ್ತು ಭಾವಾತಿರೇಕದಿಂದ, ನವ್ಯದ ಅತಿಕ್ಲಿಷ್ಟತೆ ಮತ್ತು ಸಿನಿಕತನದಿಂದ, ಬಂಡಾಯದ ಆಕ್ರೋಶ ಮತ್ತು ಆರ್ಭಟಗಳಿಂದ ಪಾರಾಗಲೂ ಸಹಾ ಇಂದಿನ ಕಾವ್ಯ ಬಯಸುತ್ತಿದೆ.

ಪ್ರತಿಮೆಗಳಿಂದ ಇಡಿಕಿರಿದು, ಜಟಿಲ ಹೆಣಿಗೆಯಿಂದ ಕೂಡಿ, ಸಂಕೀರ್ಣವಾಗಿರುವ ಸುಲಭಗ್ರಾಹ್ಯವಲ್ಲದ ಕಾವ್ಯವೇ ಶ್ರೇಷ್ಠಕಾವ್ಯ ಎಂಬ ಹಠ ಇಂದು ಸಡಿಲಗೊಂಡಿದೆ. ಕಾವ್ಯ ಸರಳವಾಗಿದ್ದೂ ಗಹನವಾಗಿರಲು, ಮಹತ್ವದ್ದಾಗಿರಲು ಸಾಧ್ಯ ಎಂಬ ನಂಬಿಕೆ ಇಂದು ಬಲಗೊಳ್ಳುತ್ತಿದೆ. ಹೀಗಾಗಿ ಕಾವ್ಯ ತನ್ನ ಜನ ಸಂಬಂಧಿತ್ವವನ್ನು ಮತ್ತು ಸಂವಹನ ಶೀಲತೆಯನ್ನು ಇಂದು ಮತ್ತೆ ಗಳಿಸಿಕೊಳ್ಳುತ್ತಿದೆ. ನವೋದಯ ಕಾಲದ ಮುಕ್ತ ಮನಸ್ಸು, ವೈವಿಧ್ಯತೆ ಮತ್ತು ಪ್ರಯೋಗಶೀಲತೆ ಇಂದು ಕಾವ್ಯಕ್ಕೆ ಮತ್ತೆ ಹಿಂತಿರುಗುತ್ತಿವೆ. ನವ್ಯದ ಏಕಶಿಲಾರೂಪ ಮಾಯವಾಗಿ, ಮತ್ತೆ ಕಥನ ಕವನ, ಸುನೀತ, ಭಾವಗೀತೆ, ಅನುಭಾವ ಕವಿತೆ, ಹನಿಗವಿತೆ, ಹಾಸ್ಯ ಕವಿತೆ, ಮಕ್ಕಳ ಕವಿತೆ ಇಂದು ಮರುಹುಟ್ಟು ಪಡೆಯುತ್ತಿವೆ. ಮಹತ್ವದ ಸಂಗತಿಯೆಂದರೆ, ಕಾವ್ಯದಲ್ಲಿ ಇಂದು ಪಾಶ್ಚಾತ್ಯ ಪ್ರಭಾವ ಕುಗ್ಗುತ್ತಿದೆ. ದೇಸಿ ಗುಣ, ಕನ್ನಡತನ ಹೆಚ್ಚುತ್ತಿವೆ.

ಇಂದು ಅತ್ಯಂತ ಪ್ರಭಾವಶಾಲಿ ಸಮೂಹ ಮಾಧ್ಯಮಗಳಾದ ಪತ್ರಿಕೆಗಳು, ನಿಯತಕಾಲಿಕೆಗಳು, ರೇಡಿಯೋ, ಟಿ.ವಿ., ಸಿನಿಮ, ಆಡಿಯೋ ಮತ್ತು ವಿಡಿಯೋ ಕ್ಯಾಸೆಟ್ಟುಗಳು ಕೇವಲ ವ್ಯಾಪಾರೀ ದೃಷ್ಟಿಯಿಂದ, ಅಗ್ಗದ ಜನಪ್ರಿಯತೆಗೆ ಆದ್ಯತೆ ನೀಡಿ, ಜನತೆಯ ಅಭಿರುಚಿಯನ್ನು ಹದಗೆಡಿಸುತ್ತಿವೆ ಮತ್ತು ಬಹುಪಾಲು ಅನಕ್ಷರಸ್ಥರೇ ಆದ ನಮ್ಮ ಗ್ರಾಮೀಣ ಜನರ ಜನಪದ ಸಂಸ್ಕೃತಿ ಹಾಗೂ ಲಲಿತ ಕಲೆಗಳ ಮೇಲೆ ದುರಾಕ್ರಮಣ ಮಾಡಿ, ಅವುಗಳನ್ನು ಹಾಳುಗೆಡವುತ್ತಿವೆ ಎಂಬ ಆರೋಪ ಬಹುಮಟ್ಟಿಗೆ ನಿಜ. ಹಾಗೆಂದು, ಗಂಭೀರ ಸಾಹಿತ್ಯ, ಅದರಲ್ಲೂ ಕಾವ್ಯ ಈ ಸಮೂಹ ಮಾಧ್ಯಮಗಳನ್ನು ಸಾರಾಸಗಟಾಗಿ ಧಿಕ್ಕರಿಸಿ, ಬಹಿಷ್ಕರಿಸಿ, ತಾನೊಂದು ಪ್ರತ್ಯೇಕ ದ್ವೀಪವಾಗಿ ಉಳಿಯಬೇಕೆ? ಅಥವಾ, ಇನ್ನೊಂದು ಅನಿವಾರ್ಯ ಸಾಂಸ್ಕೃತಿಕ ಸವಾಲಾಗಿ ಸ್ವೀಕರಿಸಿ, ಈ ಸಮೂಹ ಮಾಧ್ಯಮಗಳನ್ನು ಔಚಿತ್ಯಪೂರ್ಣವಾಗಿ ಬಳಸಿಕೊಂಡು, ತನ್ನನ್ನು ಹಾಗೂ ತನ್ನ ಸಂಸ್ಕೃತಿಯ ಬೇರುಗಳನ್ನು, ಎಲ್ಲ ಗಂಭೀರ ಕಾಳಜಿಗಳನ್ನು, ಉನ್ನತ ಮೌಲ್ಯಗಳನ್ನು ಕಾಪಾಡಿಕೊಳ್ಳಲು ಯತ್ನಿಸಬೇಕೆ? ಈ ಪ್ರಶ್ನೆ ಇಂದು ಎಲ್ಲ ಸೃಜನಶೀಲ ಬರಹಗಾರರನ್ನೂ ಬಾಧಿಸುತ್ತಿದೆ.

ನನ್ನ ಮಟ್ಟಿಗೆ, ನಾನು ನನ್ನ ಕಾವ್ಯದ ಸಂವಹನಕ್ಕಾಗಿ ಸಮೂಹ ಮಾಧ್ಯಮಗಳನ್ನು ಬಳಸಿಕೊಳ್ಳಲು ಎಂದೂ ಹಿಂಜರಿದವನಲ್ಲ. ಅವು ನನ್ನ ಕಾವ್ಯ ಸತ್ವವನ್ನು ಭ್ರಷ್ಟಗೊಳಿಸಬಹುದೆಂಬ, ದುರ್ಬಲಗೊಳಿಸಬಹುದೆಂಬ ಭಯ ನನಗಿಲ್ಲ. ಏಕೆಂದರೆ ನನಗೆ ನಾನು ಸುಳ್ಳಾಗಿ, ಆತ್ಮವಂಚನೆಯಿಂದ ಎಂದೂ ಬರೆದವನಲ್ಲ. ನಾನೂ ವ್ಯಕ್ತಿಯಾಗಿ ಮತ್ತು ಕವಿಯಾಗಿ ಬೇರೆಬೇರೆಯಲ್ಲ. ನಾನೇನೋ ನನ್ನ ಕಾವ್ಯವೂ ಅದೇ. ನನ್ನಲ್ಲಿ ಪ್ರೀತಿ, ಸ್ನೇಹ, ವಿಷಾದ, ಹಾಸ್ಯ ಮತ್ತು ಖುಷಿ ಸಹಜವಾಗಿ ಇರುವುದರಿಂದಲೇ ನನ್ನಿಂದ ಪ್ರೇಮಕವಿತೆ, ಹಾಸ್ಯಕವಿತೆ, ಹನಿಗವಿತೆ ಇತ್ಯಾದಿಗಳು ಮೂಡಿಬಂದಿವೆಯೆಂದು ಭಾವಿಸುತ್ತೇನೆ. ಹಾಗೆಯೇ ನನ್ನಲ್ಲಿ ಗಂಭೀರ ಕಾಳಜಿಗಳೂ ಇರುವುದರಿಂದ ಗಂಭೀರವಾದ ಕವಿತೆಗಳನ್ನೂ ಬರೆದಿದ್ದೇನೆ. ನನ್ನ ಕಾವ್ಯ ಸಹೃದಯರನ್ನು ತಲುಪಿದಾಗಲೇ ಅದರ ಸಾರ್ಥಕತೆ ಎಂಬ ನಿಲುವು ನನ್ನದು. ಹಾಗೆಂದು ಜನಪ್ರಿಯತೆಗೆಂದೇ ನಾನು ಬರೆದವನಲ್ಲ. ನನ್ನ ಹಲಕೆಲವು ಕವಿತೆಗಳನ್ನು ಮತ್ತು ಹಾಡುಗಳು ತಮ್ಮಲ್ಲಿರಬಹುದಾದ ಕಾವ್ಯಗುಣಗಳಿಂದ ಸಹೃದಯರಿಗೆ ಪ್ರಿಯವಾಗಿದ್ದಲ್ಲಿ, ಅದು ನನ್ನ ತಪ್ಪಲ್ಲ.

ಇಷ್ಟಾಗಿ ನಾನು ಸಂತುಷ್ಟನೇನಲ್ಲ. ಆಳದಲ್ಲಿ ತೀವ್ರವಾಗಿ ಅತೃಪ್ತ ನನಗಿದೆ. ಇನ್ನೂ ಉತ್ತಮವಾದ, ಅನನ್ಯವಾದ, ಮೌಲಿಕವಾದ ಕಾವ್ಯವನ್ನು ಸೃಷ್ಟಿಸಬೇಕೆಂಬ ಹಂಬಲ ನನಗಿದೆ. ಇದಕ್ಕಾಗಿ ನನ್ನ ಪ್ರಯತ್ನ ಮತ್ತು ಪರಿಶ್ರಮ ನನ್ನ ಪರಿಮಿತಿಗಳಲ್ಲಿ ಮುಂದುವರಿಯುತ್ತಿದೆ. ಆದರೆ ಇಂಥ ಸಿದ್ಧಿ ಕೇವಲ ಹಠ ಹಿಡಿದು ಕೂತು ಸಾಧಿಸಿದರೆ ವಶವಾಗುವಂಥದಲ್ಲ; ಸಾಧಕನಿಗೆ ಅದು ಬಾಹ್ಯದ ಚಾರಿತ್ರಿಕ ಒತ್ತಡ ಮತ್ತು ಆಂತರ್ಯದ ಸ್ವಯಂಸ್ಫೂರ್ತಿಯಿಂದ ತಾನಾಗಿ ಒದಗಿ ಬರುವಂಥದು ಎಂಬ ಪರಿಜ್ಞಾನವೂ ನನಗಿದೆ.



## ಬರೆಯಲು ಬಿಡುವು ಬೇಕು, ಸ್ಫೂರ್ತಿಯಲ್ಲ

● ವಸುಮತಿ ಉಡುಪ

ನನ್ನ ತೌರೂರು ಮಲೆನಾಡಿನ ಒಂದು ಹಳ್ಳಿ. ಅಡಿಕೆಕೊಯ್ಲಿನ ಕಾಲದಲ್ಲಿ ನಡುರಾತ್ರಿಯವರೆಗೆ ಕೂತು ಅಡಿಕೆ ಸುಲಿಯುತ್ತಿದ್ದ ಮನೆಯ ಕೆಲಸದಾಳುಗಳು ಕುಗುರಿ ಬೀಳುವುದನ್ನು, ಏಕತಾನತೆಯ ಬೇಸರವನ್ನು, ಕಳೆಯಲು ಹೇಳಿಕೊಳ್ಳುತ್ತಿದ್ದ ಜನಪದ ಕತೆ, ಒಗಟುಗಳನ್ನು ಆಸಕ್ತಿಯಿಂದ ಕೇಳಿಸಿಕೊಳ್ಳುತ್ತಾ ಬೆಳೆದವಳಿಗೆ ಕೇಳುವ ಚಪಲ ಹೇಳುವ ಬಯಕೆಯಾಗಿ ಪರಿಣಮಿಸಿದ್ದು, ನನಗೇ ಅರಿವಿಲ್ಲದ ಒಂದು ಬೆಳವಣಿಗೆ.ಹದಿವಯಸ್ಸಿನ ಆರಂಭದ ವರ್ಷಗಳಲ್ಲಿ ಯಾವುದೊಂದು ನಿಶ್ಚಿತ ಗುರಿ ಇಲ್ಲದೆ ಕವಿತೆ ಬರೆಯುವುದರೊಡನೆ ಪ್ರಾರಂಭ

ಗೊಂಡ ನನ್ನ ಬರವಣಿಗೆ ನಂತರದ ದಿನಗಳಲ್ಲಿ ಕಥಾಮಾಧ್ಯಮದ ಕಡೆಗೆ ದಿಕ್ಕು ಬದಲಿಸಿತು. ಈ ಬದಲಾವಣೆಯನ್ನು ಯಾವಾಗ, ಏಕೆ, ಸ್ವೀಕರಿಸಿದೆನೆಂದು ಹೇಳಲು ಆಸಮರ್ಥಳಾದರೂ ಕಥಾರಚನೆಯ ಸೆಳೆತಕ್ಕೆ ನಾನು ಒಳಗಾಗಿದ್ದು ನಿಜ. ನನ್ನ ಅಂತರಂಗದ ಅನುಭವಗಳ ಸಮರ್ಥ ಅಭಿವ್ಯಕ್ತಿಗೆ ಈ ಮಾಧ್ಯಮ ಸೂಕ್ತವಾದುದೆಂಬ ದೊಡ್ಡ ದೊಡ್ಡ ಪದಗುಚ್ಛಗಳ ಕಲ್ಪನೆ ಇಲ್ಲದ ಒಂದು ವಯಸ್ಸಿನಲ್ಲಿ ನಾನು ಕತೆಗಳನ್ನು ಬರೆದೆ. ಈಗಿನಂತೆ ವಾರಪತ್ರಿಕೆ, ಮಾಸಪತ್ರಿಕೆಗಳ ಮಹಾಪೂರವಿರದಿದ್ದ ಕಾಲದಲ್ಲಿ ನನ್ನ ಕತೆಯೊಂದನ್ನು ಗುಂಡನೆಯ ಅಕ್ಷರಗಳಲ್ಲಿ ಪೋಣಿಸಿ ಪ್ರಸಿದ್ಧ ಪತ್ರಿಕೆಯೊಂದಕ್ಕೆ ಕಳಿಸಿಕೊಟ್ಟೆ. ಪ್ರಕಟವಾಗಿ ಬರಬಹುದಾದ ನನ್ನ ಕತೆಗೆ ವಾರವಾರ ಕಾದು ನಿರಾಶೆಗೊಂಡೆ. ಕತೆ ಪ್ರಕಟವಾಗದಿದ್ದುದಕ್ಕೆ ಅದರ ಅನರ್ಹತೆ ಕಾರಣವಾಗಿದ್ದಿರಬಹುದಾದಂತೆ, ಕತೆಯನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಬರೆದು ಕಳಿಸಿ ಕೊಡಬೇಕೆಂಬುದುದನ್ನು ತಿಳಿಯದಿದ್ದ ನನ್ನ ಅಜ್ಞಾನವೂ ಕಾರಣವಾಗಿರಬಹುದು. ಏನೇ ಇರಲಿ, ಈ ಸೋಲು ನನ್ನ ಉತ್ಸಾಹವನ್ನು ಕುಂದಿಸಲಿಲ್ಲವೆನ್ನುವುದು ನಿಜ. 'ಮರಳಿ ಯತ್ನವ ಮಾಡು' ಎನ್ನುವುದರಲ್ಲಿ ಗಟ್ಟಿ ನಂಬಿಕೆ ಇರಿಸಿ ನನ್ನ ಕಾಯಕವನ್ನು ಮುಂದುವರಿಸಿದೆ. ಹತ್ತೊಂಬತ್ತರ ವಯಸ್ಸಿನಲ್ಲಿ ಪ್ರಸಿದ್ಧ ವಾರಪತ್ರಿಕೆಯೊಂದರಲ್ಲಿ ನನ್ನದೊಂದು ಕಿರುಲೇಖನ ಪ್ರಕಟವಾಯ್ತು. ಅದರ ಬೆನ್ನ ಹಿಂದೆ ಒಂದು ಕತೆ, ನಂತರ ಒಂದು ನಗೆಬರೆಹ. ಇದು ನನ್ನ ಬರೆಹಗಳ ಹುಟ್ಟಿನ ಕತೆ.

ಇಷ್ಟು ಹೊತ್ತಿಗಾಗಲೇ ನನ್ನ ಮದುವೆಯಾಗಿತ್ತು. ಪಿಯುಸಿ ಮುಗಿಯುತ್ತಿದ್ದಂತೆ ಮದುವೆಯಾಗಿ ಅನಿವಾರ್ಯವಾಗಿ ಓದು ಮುಕ್ತಾಯವಾದಾಗ ಕಾಲೇಜು ಉಪನ್ಯಾಸಕ ರಾಗಿದ್ದ ಯಜಮಾನರನ್ನು ಬೇರ‍್ಯಾವ ರೀತಿಯಿಂದಲಾದರೂ ಸರಿಗಟ್ಟಬೇಕೆಂಬ ಉತ್ಸುಕತೆ ಅಥವಾ ಪೈಪೋಟಿ ಕೂಡಾ ನನ್ನ ಬರವಣಿಗೆಗೆ ಪ್ರಚೋದಕ ಅಂಶಗಳಾಗಿದ್ದುವೆಂಬುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತೇನೆ. ನನಗೆ ನನ್ನದೇ ಆದ ಕೌಟುಂಬಿಕ ಜವಾಬ್ದಾರಿಗಳಿದ್ದವು. ಜೊತೆಗೆ ಕೋರ್ಟು ಕಛೇರಿ, ಖಾಯಿಲೆ ಕಸಾಲೆ, ಅಡಿಕೆ ಮಾರಾಟ ಇತ್ಯಾದಿಗಳಿಗೆಂದು ಮಲೆನಾಡಿನ ಕೇಂದ್ರಸ್ಥಳವಾದ ಶಿವಮೊಗ್ಗದಲ್ಲಿದ್ದ ನಮ್ಮ ಮನೆಗೆ ಹಲವಾರು ಬಂಧು ಮಿತ್ರರು ಸದಾ ಬಂದುಹೋಗುತ್ತಿರುತ್ತಿದ್ದರು. ಈ ಎಲ್ಲವುಗಳ ನಿರ್ವಹಣೆಯ ನಡುವೆಯೂ ನನಗೆ ಸಿಗುತ್ತಿದ್ದ ಅತ್ಯಲ್ಪ ಬಿಡುವಿನ ವೇಳೆಯನ್ನು ಕಡ್ಡಾಯವಾಗಿ ಬರವಣಿಗೆಗೆಂದು ನಾನು ಮೀಸಲಾಗಿಡುತ್ತಿದ್ದೆ. ಬರೆಯಲು ನನಗೆ ಬಿಡುವು ಬೇಕಾಗಿತ್ತೇ ಹೊರತು ಸ್ಫೂರ್ತಿ ಅಲ್ಲ. ಇದು ನನ್ನ ಮನೋಧರ್ಮ.

ನಾನು ಅನುಭವಿಸಿದ, ಘಟನೆಯೊಂದರ ತುಣುಕು ಮನಸ್ಸನ್ನು ಕೆಣಕಿ ಅದನ್ನು ಕತೆಯಾಗಿಸಲು ಪ್ರೇರೇಪಿಸಿದಾಗ ವಾಸ್ತವತೆ ಕಲ್ಪನೆಯ ಗರಿ ಬೆಳೆಸಿಕೊಂಡು ತನ್ನ ಮೂಲರೂಪವನ್ನೇ ಮರೆಸುವಷ್ಟು ಬದಲಾದದ್ದಿದೆ. ಅದೇನಿದ್ದರೂ ನನ್ನ ಕತೆಗಳು ಸಹಜತೆಯ ಚೌಕಟ್ಟನ್ನು ಮೀರದಂತೆ, ಪಾತ್ರಗಳು ನೆಲ ಬಿಟ್ಟು ಆಕಾಶಕ್ಕೆ ಜಿಗಿಯದಂತೆ, ಎಚ್ಚರಿಕೆ ವಹಿಸಲು ನಾನು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇನೆ. ನನ್ನ ಹಚ್ಚಿನ ಕತೆಗಳ ಪಾತ್ರಗಳು ನಮ್ಮ ಸುತ್ತಮುತ್ತ

ಕಾಣುವಂತಹ ಮಧ್ಯಮ, ಕೆಳಮಧ್ಯಮ ವರ್ಗದ ಜೀವನದಿಂದ ನೇರವಾಗಿ ಎದ್ದುಬಂದವುಗಳು; ನನ್ನ ಹಳ್ಳಿಯ ಬದುಕಿನಲ್ಲಿ ನಾನು ನೋಡಿ, ಕೇಳಿದಂತಹವುಗಳು. ಅವರ ಯೋಚನಾ ಧಾಟಿ, ಅವರ ರೀತಿನೀತಿಗಳು, ಭಾಷೆ, ಸಮಸ್ಯೆಗಳಿಗೆ ಅವರು ಸ್ಪಂದಿಸುವ ಪರಿ, ನನ್ನ ಮನಸ್ಸನ್ನು ಮಿಡಿದು ಕತೆಯಾಗಲು ಕಾತರಿಸುತ್ತವೆ. ಹೀಗಿದ್ದರೂ ಉದ್ದೇಶಪೂರ್ವಕವಾಗಿ ಯಾರಿಗೂ ನೋವುಂಟು ಮಾಡಬಾರದೆನ್ನುವುದು ನನ್ನ ಧ್ಯೇಯ. ನನ್ನ ಕಥಾನಾಯಕ ನಾಯಕಿಯರು ನಿಜ ಜೀವನದಿಂದ ಹೆಕ್ಕಿ ತೆಗೆದವರಾಗಿದ್ದರೂ, ದಟ್ಟ ಪ್ರಸಾಧನಗಳಿಂದ ಅವರಿಗೇ ಅವರ ಗುರುತು ಸಿಗದಂತೆ ಮಾರ್ಪಡಿಸಿ ಚಿತ್ರಿಸುವುದು ನನ್ನ ಪರಿ. ಇಲ್ಲಿ ಒಬ್ಬನೇ ವ್ಯಕ್ತಿ ಹಲವು ವ್ಯಕ್ತಿಗಳ ಗುಣ,ಸ್ವಭಾವಗಳ ಸಮ್ಮಿಶ್ರಣವಾಗಿರುವುದುಂಟು. ಕತೆಯ ಆರಂಭ, ಅಂತ್ಯಗಳ ಬಗ್ಗೆ ಒಂದು ನಿರ್ದಿಷ್ಟ ಕಲ್ಪನೆಯಿಟ್ಟುಕೊಂಡು ಆರಂಭವಾಗುವ ಬರವಣಿಗೆ ತನ್ನಷ್ಟಕ್ಕೆ ಮುಂದುವರಿದು ಕೆಲವೊಮ್ಮೆ ಪೂರ್ವಯೋಜಿತ ಅಂತ್ಯವನ್ನೂ ತನ್ನ ವಶಕ್ಕೆ ತೆಗೆದುಕೊಂಡು ಮತ್ತೊಂದೇ ರೀತಿಯಲ್ಲಿ ಮುಕ್ತಾಯವಾಗುವುದಿದೆ.

ಒಟ್ಟಿನಲ್ಲಿ ನನ್ನ ಬಿಡುವಿನ ವೇಳೆಯನ್ನು ಸದುಪಯೋಗಪಡಿಸಿಕೊಂಡ ಸಾರ್ಥಕತೆಯ ಭಾವವನ್ನು ತಂದುಕೊಡುವ ಬರವಣಿಗೆ ನನಗೆ ಖುಷಿ ಕೊಡುವ ಹವ್ಯಾಸ. ನನ್ನ ಅಂತರ್ಮುಖಿ ಸ್ವಭಾವಕ್ಕೆ ಸರಿಹೊಂದುವಂತಹ ಸಣ್ಣ ಕತೆಗಳ ಪ್ರಕಾರ ನನಗೆ ಹೆಚ್ಚು ಪ್ರಿಯ. ಕಾದಂಬರಿಯೊಂದು ಬೇಡುವ ಸಮಯ, ಮಗ್ನತೆ ಹಾಗೂ ಶ್ರಮ ನನ್ನಿಂದ ಪೂರೈಸಲಾಗದ್ದರಿಂದ ನಾನು ಕಾದಂಬರಿ ರಚನೆಗೆ ಕೈಹಾಕಿದ್ದು ಕಡಿಮೆ. ಕತೆಗಳು ಜನಪ್ರಿಯ ವಾರ ಹಾಗೂ ಮಾಸಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಆದರೆ ಜನಪ್ರಿಯತೆಯನ್ನೇ ಗುರಿಯಾಗಿಟ್ಟುಕೊಂಡು ಯಾವೊಂದು ಕತೆಯನ್ನೂ ನಾನು ಬರೆದದ್ದಿಲ್ಲ. ನನ್ನ ಸಾಮರ್ಥ್ಯದ ಅಳವಿನಲ್ಲಿ ನನಗೆ ಸಾಧ್ಯವೆನಿಸಿದುದನ್ನು ನಾನು ಬರೆಯುತ್ತೇನೆ. ಪತ್ರಿಕೆಯ ಅಭಿರುಚಿಗೆ ಅದು ಸೂಕ್ತವೆಂದಾದಲ್ಲಿ ಸಂಪಾದಕರು ಪ್ರಕಟಿಸುತ್ತಾರೆ. ಜನಪ್ರಿಯ ಸಾಹಿತ್ಯ, ಗಟ್ಟಿ ಸಾಹಿತ್ಯಗಳ ದ್ವಂದ್ವ ನನ್ನನ್ನು ಕಾಡುವುದಿಲ್ಲ. ಇಸಂಗಳ ಬಗ್ಗೆ ನಾನು ತಲೆಕೆಡಿಸಿಕೊಳ್ಳುವುದಿಲ್ಲ. ನನ್ನ ಬರವಣಿಗೆಯ ಬಗ್ಗೆ ಯಾವುದೇ ಥರದ ಭ್ರಮೆಗಳನ್ನೂ ನಾನು ಇಟ್ಟುಕೊಂಡಿಲ್ಲ. ನಾನು ಈ ಬರೆಯುತ್ತಿರುವಂತಲ್ಲದೆ ಬೇರಾವ ರೀತಿಯಲ್ಲೂ ಬರೆಯಲಾರೆನೆಂಬ ಸ್ಪಷ್ಟ ತಿಳುವಳಿಕೆ ನನಗಿದೆ. ನನ್ನ ಮಿತಿಯ ಅರಿವು ನನಗಿರುವುದರಿಂದ ನನಗೆ ಮಹತ್ವಾಕಾಂಕ್ಷೆ ಇಲ್ಲ, ಅತೃಪ್ತಿಯೂ ಇಲ್ಲ.

ಎಷ್ಟೋಸಲ ಈ ಬರವಣಿಗೆ ಕೂಡಾ ಒಂದು ಗೀಳು ಎಂದು ನನಗೆ ಅನ್ನಿಸಿದ್ದಿದೆ. ಅನಿವಾರ್ಯ ಕಾರಣದಿಂದ ಕೆಲವು ತಿಂಗಳು ಬರೆಯಲಾಗದಿದ್ದರೆ ಏನೋ ಚಡಪಡಿಕೆ ಶುರುವಾಗಿಬಿಡುತ್ತದೆ. ನನ್ನ ಮಟ್ಟಿಗೆ ಬರವಣಿಗೆ ಎನ್ನುವುದು ನಿರಂತರತೆಯನ್ನು ಅಪೇಕ್ಷಿಸುತ್ತದೆ. ಈ ಕಾರಣದಿಂದ ಬರೆದದ್ದೆಲ್ಲಾ ಉತ್ತಮ ಬರೆಹಗಳಾಗದೆ ಕಾಳಿನ ಜೊತೆ ಜೊಳ್ಳು ಸೇರುವ ಸಾಧ್ಯತೆಯುಂಟು. ಹತ್ತು ಕತೆ ಬರೆದಲ್ಲಿ ಒಂದೆಡೆರಾದರೂ 'ಪರವಾಗಿಲ್ಲ ಎನ್ನುವಂತವು ಬಂದರೆ ಸಾಕು ಎನ್ನುವುದು ನನ್ನ ನಿರೀಕ್ಷೆ. ಬರವಣಿಗೆ ಆರಂಭಿಸಿದಾಗಿನ, ಬರೆಯುವಾಗಿನ, ಅಮುಕಿ ಹಿಡಿದ ಸ್ಪ್ರಿಂಗಿನಂತಹ ಒಂದು ಒತ್ತಡದ ಮನೋಸ್ಥಿತಿ ಅಂಗಗಳಂತೆ ನನಗೆ ಸುಪರಿಚಿತವಾಗಿವೆ.

ಇನ್ನೊಂದು ಸಂಗತಿಯ ಕುರಿತಾಗಿಯೂ ನನಗೆ ಕಳವಳವಾಗುವುದುಂಟು. ಬೇರೆಯವರ ದುಃಖದುಮ್ಮಾನಗಳು, ನೋವು ತಲ್ಲಣಗಳು, ಕತೆಯಾಗುವುದಕ್ಕಷ್ಟೇ ನನ್ನನ್ನು ತೀವ್ರವಾಗಿ ಕಾಡುತ್ತವೆಯೇ ಎನ್ನುವ ಸಂಶಯ, ದಿಗಿಲು. ಯಾವುದೇ ಮನಕಲಕುವ ಘಟನೆ ಇರಲಿ, ಸಂದರ್ಭ ಇರಲಿ, ಅದನ್ನು ಒಂದು ಚೌಕಟ್ಟಿನಲ್ಲಿರಿಸಿ ಕತೆಯಾಗಿಸುವ ಸಾಧ್ಯಾಸಾಧ್ಯತೆಯ ಕುರಿತು ಮನಸ್ಸು ಚಿಂತಿಸತೊಡಗುತ್ತದೆ. ವಾಕ್ಯಗಳು ತನ್ನಷ್ಟಕ್ಕೆ ರೂಪಗೊಳ್ಳತೊಡಗುತ್ತವೆ. ಇದೂ ಒಂದು ದೌರ್ಬಲ್ಯವಿರಬಹುದೇ ಎನ್ನುವ ಭಾವನೆ ಬೆಚ್ಚಿ ಬೀಳಿಸುತ್ತದೆ. ನನ್ನ ಮೊದಲ ಬರೆಹ ಪ್ರಕಟವಾದ ನಂತರದ ಮೂವತ್ನಾಲ್ಕು ವರ್ಷಗಳ ಈ ಸುದೀರ್ಘ ಅವಧಿಯಲ್ಲಿ ನನ್ನ ಬರವಣಿಗೆ ನನಗೆ ಅನೇಕ ಪತ್ರಮಿತ್ರರನ್ನು, ಹಿತೈಷಿಗಳನ್ನು ಸಂಪಾದಿಸಿ ಕೊಟ್ಟಿದೆ. ನಾನಾ ಸ್ವಭಾವದ ಜನರನ್ನು ಪರಿಚಯಿಸಿದೆ. ತಮಾಷೆಯಾದ ಒಂದು ಪ್ರಸಂಗವನ್ನು ಉಲ್ಲೇಖಿಸಬೇಕು. ವಾರಪತ್ರಿಕೆಯಲ್ಲಿ ನನ್ನದೊಂದು ಕತೆ ಪ್ರಕಟವಾಗಿತ್ತು. ಅವಿವಾಹಿತ ಹೆಣ್ಣೊಬ್ಬಳ ಮಾನಸಿಕ ತುಮುಲವನ್ನು ಕುರಿತಾದ ಕತೆ. ಇದಕ್ಕೆ ಪ್ರತಿಕ್ರಿಯೆಯಾಗಿ ನನ್ನ ವಿಳಾಸಕ್ಕೆ ಬಂದ ಪತ್ರಗಳಲ್ಲಿ ಒಂದು ಅಂತರ್ದೇಶೀಯ ಪತ್ರವೂ ಇತ್ತು. ಓದುಗರೊಬ್ಬರು ಬರೆದಿದ್ದರು. "ನೀವು ನಿಮ್ಮದೇ ಕತೆಯನ್ನು ಬರೆದಿದ್ದೀರಿ ಅಂದುಕೊಂಡಿದ್ದೇನೆ. ನೀವು ಹೇಗೇ ಇರಿ, ನಾನು ನಿಮ್ಮನ್ನು ಮದುವೆಯಾಗುತ್ತೇನೆ. ಉಟ್ಟ ಬಟ್ಟೆಯೊಡನೆ ಈ ವಿಳಾಸಕ್ಕೆ ಬನ್ನಿ. ನಿಮ್ಮ ಜವಾಬ್ದಾರಿ ನನ್ನದು" ಎನ್ನುವ ಬಲವಾಗಿ ಮೂರೂ ಕಡೆ ಗೋಂದು ಅಂಟಿಸಿದ, ಬೆಂಗಳೂರಿನಿಂದ ಬಂದ ಪತ್ರ. ಬರೆದವನ ಮುಗ್ಧತೆಗೆ ಕನಿಕರಿಸಬೇಕೋ ಅಥವಾ ನನ್ನ ಕಥನಕಲೆಗೆ ನಾನೇ ಬೆನ್ನು ತಟ್ಟಿಕೊಳ್ಳಬೇಕೋ ಅರ್ಥವಾಗದ ಪರಿಸ್ಥಿತಿ.

ಆಜೀವ ಕಾರಾಗೃಹವಾಸಕ್ಕೆ ಒಳಗಾದ ವ್ಯಕ್ತಿಯೊಬ್ಬನು 'ನಿಮ್ಮ ಕತೆಗಳನ್ನೆಲ್ಲಾ ದಯವಿಟ್ಟು ಕಳಿಸಿಕೊಡಿ' ಎನ್ನುವ ಪತ್ರ ಬರೆದಿದ್ದನು. ಡಾಕ್ಟರೊಬ್ಬರು 'ನಿಮ್ಮ ಕತೆಯನ್ನೋದಿ ಆತ್ಮಹತ್ಯೆಯ ಪ್ರಯತ್ನ ಕೈಬಿಟ್ಟು ಬದುಕನ್ನು ಎದುರಿಸಲು ನಿಶ್ಚಯಿಸಿದ್ದೇನೆ' ಎಂದು ಬರೆದಿದ್ದರು. ನೆನಪನ್ನು ಕೆದಕುತ್ತಾ ಹೋದರೆ ಇಂತಹ ಮನ ಕಲಕುವ ಹಲವಾರು ಉದಾಹರಣೆಗಳು ಸಿಕ್ಕುತ್ತವೆ. 'ನೀವು ನನ್ನ ಕತೆಯನ್ನೇ ಬರೆದಿದ್ದೀರಿ' ಎಂದು ಗುರುತಿನವರು ಹೇಳುವಾಗಿನ ದನಿಯ ಆಕ್ಷೇಪಣೆ, ಅದೇ ಕತೆಗೆ ಅದೇ ಪ್ರತಿಕ್ರಿಯೆಯ ಅಪರಿಚಿತರ ಪತ್ರಗಳು, ಎರಡನ್ನೂ ನಾನು ಒಟ್ಟೊಟ್ಟಿಗೆ ಅನುಭವಿಸಿದ್ದುಂಟು. ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಅದೇ ಕತೆಗಳು ಈ ಲೋಕದಲ್ಲಿ ಗಿರಕಿ ಹೊಡೆಯುತ್ತಿರುತ್ತವೆ ಎನ್ನುವ ಸತ್ಯವನ್ನು ಕಂಡುಕೊಂಡದ್ದೂ ಉಂಟು.

ನನ್ನದಾದ ಹತ್ತು ಹಲವು ಜವಾಬ್ದಾರಿಗಳ ನಡುವಿನ ಬಿಡುವಿನಲ್ಲಿ ಕಲ್ಪಿಸಿಕೊಳ್ಳುವ ಅವಕಾಶವನ್ನು ಬರವಣಿಗೆಗಾಗಿ ಉಪಯೋಗಿಸಿಕೊಳ್ಳುವುದು ನನಗೆ ನೆಮ್ಮದಿ ತರುವ ವಿಚಾರ. ಹೀಗೆ ಬರವಣಿಗೆ ನನ್ನ ಬದುಕಿನ ಒಂದು ಅವಿಭಾಜ್ಯ ಅಂಗವಾಗಿ, ಅದಿಲ್ಲದ ಬದುಕು ಅಪೂರ್ಣ ಎನಿಸುವುದರಿಂದ ನಾನು ಬರೆಯುತ್ತೇನೆ ಮತ್ತು ಬರೆದಿದ್ದೇನೆ.

# ಮನುಷ್ಯರಲ್ಲಿ ಮನುಷ್ಯರ ಹುಡುಕುವುದು

● ಎಚ್ ಎಸ್ ವೆಂಕಟೇಶಮೂರ್ತಿ

ಇತ್ತ ಮಲೆನಾಡೂ ಅಲ್ಲ; ಅತ್ತ ಬಯಲು ಸೀಮೆಯೂ ಅಲ್ಲ. ಅಂಥ ಒಂದು ಸಂಧಿಸೀಮೆಯಲ್ಲಿ ನಾನು ಹುಟ್ಟಿದೆ. ಹೋದಿಗ್ಗೆರೆ ಅಂತ ಊರಿನ ಹೆಸರು. ಐನೂರು ಮನೆಗಳ ಸಣ್ಣ ಹಳ್ಳಿ. ಶಿವಮೊಗ್ಗ ಜಿಲ್ಲೆಯ ಗಡಿಯಲ್ಲಿರುವ ಕಡೆಯ ಹಳ್ಳಿ. ಮೂವತ್ತು ಮೈಲಿ ಪೂರ್ವಕ್ಕೆ ಹೋದರೆ ಕಲ್ಲುಬೆಟ್ಟಗಳ ಚಿತ್ರದುರ್ಗ. ಮೂವತ್ತು ಮೈಲಿ ಪಶ್ಚಿಮಕ್ಕೆ ಹೋದರೆ ತುಂಗಾ ನದಿಯ ದಂಡೆಯ ಮೇಲೆ ಇರುವ ಶಿವಮೊಗ್ಗ. ಈ ಕಡೆ ಚಿನ್ಮೂಲಾದ್ರಿ, ಆ ಕಡೆ ಸಹ್ಯಾದ್ರಿ. ನಡುವೆ ಬಯಲು-ಬೆಟ್ಟಗಳ ನಡುವೆ ಜೋಲಿಯಾಡುತ್ತಾ ನಾನು ಬೆಳೆದೆ. ಪ್ರಕೃತಿಯ ಎರಡು ಮುಖ, ಸಂಸ್ಕೃತಿಯ ಎರಡು ಮುಖ, ಭಾಷೆಯ ಎರಡು ಮುಖ ನೋಡುತ್ತಾ ನನ್ನ ಮನಸ್ಸಿನ ಆಳದಲ್ಲಿ ನನ್ನದೇ ಪ್ರಪಂಚವೊಂದು ಸೃಷ್ಟಿಯಾಗತೊಡಗಿದ್ದು ಈ ಹಿನ್ನೆಲೆಯಲ್ಲಿ. ದಾವಣಗೆರೆ ಮತ್ತು ಶಿವಮೊಗ್ಗೆಯ ಭಾಷೆಯ ನಡುವೆ ಎಂಥ ಅಂತರವಿದೆ ಎಂಬುದನ್ನು ಬಲ್ಲವರು ಬಲ್ಲರು. ಹಾಗೇ ಜೋಳದಹಾಳು ಗುಡ್ಡಗಳಿಗೂ ಚಿತ್ರದುರ್ಗದ ಕಲ್ಲುಮರಡಿಗಳಿಗೂ ವಿನ್ಯಾಸ-ವರ್ಣ ಎಲ್ಲದರಲ್ಲೂ ಸ್ಪಷ್ಟವಾದ ವ್ಯತ್ಯಾಸವುಂಟು. ಹಾಗೇ ತುಂಗಾ, ಭದ್ರಾನದಿಗಳ ಸ್ವರೂಪವೇ ಬೇರೆ, ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆಗಾಲದಲ್ಲಿ ಮಾತ್ರ ಹರಿಯುವ ವೇದಾವತಿಯ ಸ್ವರೂಪವೇ ಬೇರೆ. ಚಿತ್ರದುರ್ಗಕ್ಕೆ ನಾವು ಪ್ರಯಾಣ ಮಾಡುವಾಗ ಬಟಾಬಯಲು. ಉದ್ದಕ್ಕೂ ರಾಗಿ ಜೋಳ ಹತ್ತಿ ಸೇಂಗಾ ಹೊಲಗಳು ಕಂಡಾವು. ಶಿವಮೊಗ್ಗೆಯ ಕಡೆ ಪ್ರಯಾಣ ಮಾಡಿದರೆ, ಚೆನ್ನಗಿರಿ ದಾಟಿದರೆ ಸಾಕು, ಭತ್ತ, ಕಬ್ಬಿನ ಗದ್ದೆಗಳು, ಕಾಡು ಬೆಟ್ಟಗಳು, ಕಣಿವೆಗಳು.

ನನ್ನ ಬಾಲ್ಯ, ಓದು ಈ ಎರಡು ವಿಭಿನ್ನ ಧ್ರುವಗಳ ನಡುವೆ ಸಾಗಿದವು. ನನ್ನ ಬದುಕಿನ ಮೊದಲ ೨೭ ವರ್ಷಗಳನ್ನು ನಾನು ಸಹ್ಯಾದ್ರಿ ಮತ್ತು ಚಿನ್ಮೂಲಾದ್ರಿಗಳ ನಡುವೆ ಕಳೆದೆ. ಆ ಇಪ್ಪತ್ತೇಳು ವರ್ಷಗಳಲ್ಲಿ ಚಿತ್ರದುರ್ಗ ಮತ್ತು ಭದ್ರಾವತಿಯಲ್ಲಿ ನಾನು ಕಳೆದ ಐದುವರ್ಷಗಳನ್ನು ಕಳೆದರೆ, ಉಳಿದ ಇಪ್ಪತ್ತೆರಡು ವರ್ಷಗಳನ್ನು ನಾನು ಹಳ್ಳಿಗಳಲ್ಲೇ ಬದುಕಿದ್ದೇನೆ. ಹಾಗಾಗಿ ಹಳ್ಳಿಯ ಬದುಕು, ಭಾಷೆ, ವಾತಾವರಣ ನನ್ನ ಬದುಕಿನ ಆಧಾರ ಭಿತ್ತಿ.

ನಾನು ಹುಟ್ಟಿ ಬೆಳೆದ ಹೋದಿಗ್ಗೆರೆ ಬಹು ಸುಂದರವಾದ ಹಳ್ಳಿ. ನಮ್ಮೂರಿನ ಪೂರ್ವಕ್ಕೆ ಒಂದು ಕೆರೆ; ಪಶ್ಚಿಮಕ್ಕೆ ಒಂದು ಕೆರೆ. ನಮ್ಮ ಸಂಪರ್ಕ ಹೆಚ್ಚಾಗಿ ಪಶ್ಚಿಮದ ಕೆರೆಯೊಂದಿಗೆ. ಎರಡು ತೂಬುಗಳಿದ್ದ ನಮ್ಮ ಕರೆಯ ಕೋಡಿಯ ಚೆಲುವೇ ಚೆಲುವು. ಕೆರೆ ತುಂಬಿ ಕೋಡಿ ಬಿದ್ದಾಗ ವಿಶಾಲವಾದ ಕೋಡಿಯ ತುಂಬ ಜಾರು ಜಲಪಾತದ ಹಾಗೆ ಜುಳುಜುಳು ಹರಿಯುವ ನೀರಿನಲ್ಲಿ ಹುಡುಗರಾಗಿದ್ದ ನಮಗೆ ಎಷ್ಟು ನೀರಾಟ ಆಡಿದರೂ ತೃಪ್ತಿಯಾಗದು. ಕೆರೆ ತುಂಬಿದಾಗ ಗ್ರಾಮದೇವತೆಯ ತೆಪ್ಪೋತ್ಸವ ವಿಜೃಂಭಣೆಯಿಂದ ನಡೆಯುತ್ತಿತ್ತು.

ಉರುಮೆಯ ಲಯಬದ್ಧ ಬಡಿತದೊಂದಿಗೆ ನಾವೆಲ್ಲಾ ಕುಣಿದು ಕುಣಿದು ನಲಿಯುತ್ತಿದ್ದೆವು. ಈ ಕರೆ ಏರಿಯ ಇನ್ನೊಂದು ಪಕ್ಕ ತೆಂಗು, ಅಡಿಕೆ ತೋಟಗಳು. ಭತ್ತದ ಗದ್ದೆಗಳು. ನೇರಿಲೆ ಮರಗಳು. ಹುಡುಗರು ಈಜು ಕಲಿಯುತ್ತಿದ್ದ ದೇಕೋವಿಶಾಲವಾದ ತೋಟದ ಬಾವಿಗಳು.

ನಾನು ಕಲಿಯುತ್ತಿದ್ದ ಶಾಲೆ, ಕೆರೆಯ ಇನ್ನೊಂದು ತುದಿಯಲ್ಲಿ ದಕ್ಷಿಣಭಾಗಕ್ಕೆ ಇತ್ತು. ಶಾಲೆಯ ಪಕ್ಕದಲ್ಲೇ ಮಾವಿನ ತೋಪುಗಳು. ಅದೇ ಹುಡುಗರ ಮರಗೋತಿ ಆಟದ ಕ್ರೀಡಾಂಗಣ ಕೂಡ! ಈ ಮಾವಿನ ತೋಪುಗಳನ್ನು ದಾಟಿದರೆ ಈಚಲುವನ ಪ್ರಾರಂಭವಾಗು ತ್ತಿತ್ತು. ನೂರಾರು ಈಚಲುಮರಗಳ ದಟ್ಟಣೆ ನಮ್ಮ ಪಾಲಿಗೆ ನಿಗೂಢವಾದ ಒಂದು ಜಗತ್ತನ್ನು ನಿರ್ಮಿಸಿತ್ತು. ಮಟ್ಟಿಯವರೆಗೂ ಈಚಲು ವನ ಹಬ್ಬಿತ್ತು. ಮಟ್ಟಿಯ ಮೇಲೆ ಒಂದು ಸಣ್ಣಗುಡಿ. ಅಲ್ಲಿ ರಂಗನಾಥನ ಉದ್ಭವ ಮೂರ್ತಿ. ಆ ಮಟ್ಟಿಗೆ ಕಂತರಂಗಪ್ಪನ ಮಟ್ಟಿ ಎಂದು ಕರೆಯುತ್ತಿದ್ದರು. ಅಂದರೆ ನಮ್ಮ ಊರಿನ ಮಟ್ಟಿಗೆ ಅದೇ ಸೂರ್ಯ ಕಂತುವ (ಮುಳುಗುವ) ಬೆಟ್ಟ ಅದಕ್ಕೆ ಅದು ಕಂತರಂಗನ ಮಟ್ಟಿ.

ನಾನು ಹುಡುಗನಾಗಿದ್ದ ಕಾಲಕ್ಕೆ ನಮ್ಮೂರಿನಲ್ಲಿ ವಿದ್ಯುದ್ದೀಪಗಳಿರಲಿಲ್ಲ. ರಾತ್ರಿಯಾದರೆ ದಾರಿಯುದ್ದಕ್ಕೂ, ಮನೆ ಬಾಗಿಲಿಂದ ರಸ್ತೆ ಬಂದು ಬೀಳುತ್ತಿದ್ದ ಬೆಳಕಿನ ಚಾಪೆಗಳು. ಬೆಳದಿಂಗಳಿಲ್ಲದ ದಿನಗಳಲ್ಲಿ ಜನ ಬ್ಯಾಟರಿಯನ್ನೋ ಲಾಟೀನನ್ನೋ ಹಿಡಿದು ಓಡಾಡುತ್ತಿ ದ್ದದ್ದು ಸಾಮಾನ್ಯ ದೃಶ್ಯವಾಗಿರುತ್ತಿತ್ತು.

ನಮ್ಮೂರಿಗೆ ವಿದ್ಯುತ್ ಬಂದ ಸಂಭ್ರಮವನ್ನು ನಾನಿನ್ನೂ ಮರೆತಿಲ್ಲ. ಮಟ್ಟಿಯ ಹಾದಿಯಲ್ಲಿ ಸಾಲುಸಾಲು ಬಂಡಿಗಳು ಕಂಬಗಳನ್ನು ಹೇರಿಕೊಂಡು ಊರಿಗೆ ಬಂದ ದಿನ ನನಗೆ ನೆನಪಿದೆ. ಬಂಡಿಯಲ್ಲಿ ಬಂದವರೆಲ್ಲ ನೀಲಿಬಣ್ಣ ಸಮವಸ್ತ್ರಧಾರಿಗಳು. ಊರಿನಲ್ಲಿ ದಾರಿಯುದ್ದಕ್ಕೂ ಕಂಬಗಳನ್ನು ಹೂಳಿ, ತಂತಿ ಬಿಗಿದು, ಆ ಮಾಯಾವಿಗಳು ಒಂದು ರಾತ್ರಿ ಊರಲೆಲ್ಲ ದೀಪಗಳನ್ನು ಬೆಳಗಿಸಿ ಮಾಯವಾಗಿಬಿಟ್ಟರು. ಮತ್ತೆ ಆ ನೀಲಿ ಬಟ್ಟೆಯ ಮಾಯದ ಮಂದಿ ನಮ್ಮ ಕಣ್ಣಿಗೆ ಬೀಳಲೇ ಇಲ್ಲ. ಆ ವಿದ್ಯುತ್ತಿನ ಆಗಮನ ನಮ್ಮ ಹಳ್ಳಿಯ ಜೀವನ ಕ್ರಮವನ್ನೇ ಬದಲಿಸಿಬಿಟ್ಟಿತು. ಎಂಟುಗಂಟೆಗೆಲ್ಲಾ ಹಾಸಿಗೆ ಸೇರುತ್ತಿದ್ದ ಜನ, ಈಗ ಹತ್ತುಗಂಟೆಯಾದರೂ ಬೀದಿಯಲ್ಲಿ ಅಲೆಯುತ್ತಾ ಇದ್ದರು. ದೆವ್ವಭೂತಗಳೆಲ್ಲಾ ಊರ ಹೊರಗೆ ಗಡೀಪಾರಾದವು. ಗಿರರ್‍ರ್ ಎಂದು ಕರ್ಕಶವಾಗಿ ಕೂಗುತ್ತಾ ಹಿಟ್ಟಿನ ಗಿರಣಿ, ವಿದ್ಯುತ್ ಚಾಲಿತ ಎಣ್ಣೆಗಾಣ ತಿರುಗತೊಡಗಿದವು. ಹಾಗೇ ಸ್ಥಿತಿವಂತರ ಮನೆಗಳಲ್ಲಿ ರೇಡಿಯೋ ಎಂಬ ಮಾಯಾಪೆಟ್ಟಿಗೆ ಇನಿದನಿಗಳನ್ನು ಹೊರಡಿಸಲಿಕ್ಕೆ ಶುರುಹಚ್ಚಿತು. ದೇವಸ್ಥಾನಕ್ಕೆ ಲೈಟು ಹಾಕಿಸುವ ಹೊಸಸೇವೆಯ ಉಪಕ್ರಮ ಶುರುವಾಯಿತು. ಪಾಪ, ಪೆಟ್ರೋಮ್ಯಾಕ್ಸ್, ಲಾಟೀನುಗಳು ಮನೆಯ ಅಟ್ಟದಲ್ಲಿ ಮರೆಯಾದವು.

ನನ್ನ ಬಾಲ್ಯದ ದಿನಗಳಲ್ಲಿ ನನ್ನ ಮೇಲೆ ಗಾಢ ಪ್ರಭಾವ ಬೀರಿದ್ದು - ಯಕ್ಷಗಾನ ಗೊಂಬೆ ಮೇಳ. ನಮ್ಮೂರಿನ ಪಕ್ಕದ ಗಂಗೂರು ಎಂಬ ಗ್ರಾಮದಲ್ಲಿ ಮೇಳದವರ ಮನೆತನ ಇತ್ತು.

ಸೇವಾಕರ್ತರು ಗಂಗೂರಿಗೆ ಹೋಗಿ ಅವರಿಗೆ ವೀಳ್ಯ ಕೊಟ್ಟು ಬರುತ್ತಿದ್ದರು. ಆಗ ಮೇಳದವರು ನಮ್ಮೂರಿಗೆ ಬಂದು ಗೊಂಬೆಯಾಟ ಆಡುತ್ತಿದ್ದರು. ೩-೪ ಅಡಿ ಎತ್ತರದ ಸೂತ್ರದ ಬೊಂಬೆಗಳನ್ನು ತುಂಬಿಕೊಂಡು ಬರುತ್ತಿದ್ದರು. ಒಂದು ಪಾಂಡವರ ಪೆಟ್ಟಿಗೆ. ಇನ್ನೊಂದು ಕೌರವರ ಪೆಟ್ಟಿಗೆ. ಪಾಂಡವರು ಕೌರವರನ್ನು ಒಂದೇ ಪೆಟ್ಟಿಗೆಯಲ್ಲಿ ಇಟ್ಟರೆ ಪರಸ್ಪರ ರಾತ್ರಿಯೆಲ್ಲಾ ಜಗಳವಾಡಿ ಕೈಕಾಲು ಮುರಿದುಕೊಳ್ಳುತ್ತಾರಂತೆ! ಈ ಬಗ್ಗೆ ಹುಡುಗರಾದ ನಮಗೂ ದೃಢವಾದ ನಂಬಿಕೆ ಇತ್ತು.

ಊರ ಹೊರಗೆ ಕಣಗಳಲ್ಲಿ ಇರುತ್ತಿದ್ದ ರೋಂಡುಗಲ್ಲುಗಳನ್ನು ಊರಿನ ಒಳಗೆ ಯಾರಾದರೂ ಉರುಳಿಸಿಕೊಂಡು ಬರುತ್ತಿದ್ದರೆ, ಅವತ್ತು ಗೊಂಬೆಯಾಟ ಎಂಬುದು ನಮಗೆ ಖಾತ್ರಿಯಾಗುತ್ತಿತ್ತು. ಏಕೆಂದರೆ ಆ ರೋಂಡುಗಲ್ಲುಗಳ ಮೇಲೆ ನಮ್ಮೂರಿನಲ್ಲಿ ಹಲಗೆ ಹರಡಿ ಅಟ್ಟ ಮಾಡುತ್ತಿದ್ದರು. ಅದರ ಮೇಲೆ ಆಟ ನಡೆಯುತ್ತಿತ್ತು. ಸಾಮಾನ್ಯವಾಗಿ ಎಲ್ಲವೂ ಮಹಾಭಾರತದ ಪ್ರಸಂಗಗಳು, ಕಲ್ಯಾಣ ಅಥವಾ ಕಾಳಗ. ರಾತ್ರಿಯೆಲ್ಲ ನಡೆಯುತ್ತಿದ್ದ ಈ ಯಕ್ಷಗಾನ ಪ್ರಸಂಗಗಳು ನಮ್ಮ ಮನಸ್ಸಿನಲ್ಲಿ ಬಣ್ಣಬಣ್ಣದ ಒಂದು ಮಾಯಾಲೋಕವನ್ನೇ ಸೃಷ್ಟಿಸುತ್ತಿದ್ದವು. ರತೀಕಲ್ಯಾಣ, ಕೃಷ್ಣಾರ್ಜುನರ ಕಾಳಗ, ಸುಭದ್ರಾ ಸ್ವಯಂವರ, ಐರಾವತ-ಇವೆಲ್ಲಾ ಜನಪ್ರಿಯವಾದ ಪ್ರಸಂಗಗಳು. ಅದರಲ್ಲೂ ಈ ಐರಾವತದ್ದು ವಿಶೇಷ. ಇಲ್ಲಿ ಅಟ್ಟದ ಮೇಲೆ ಅಟ್ಟ ಕಟ್ಟಿ, ಎರಡು ವೇದಿಕೆಗಳನ್ನು ಸಿದ್ಧಮಾಡುತ್ತಿದ್ದರು. ಕೆಳಗಿನದು ಭೂಲೋಕ. ಮೇಲಿನದು ಇಂದ್ರನ ಅಮರಾವತಿ. ಇಂದ್ರನ ಅಮರಾವತಿಯಿಂದ 'ಐರಾವತ' ಎಂಬ ಆನೆ ಭೂಮಿಗೆ ಬರುವುದು ನಮಗೆ ಪವಾಡ ಸದೃಶ ದೃಶ್ಯವಾಗಿತ್ತು.

ನಮ್ಮೂರಿನಲ್ಲಿ ನಾಟಕದ ಹುಚ್ಚಿನ ಕೆಲವು ಜನ ಇದ್ದರು. ಅವರು ಕಂಪನಿ ಶೈಲಿಯ ಸಂಗೀತ ನಾಟಕಗಳನ್ನು ವರ್ಷಕ್ಕೆ ಒಮ್ಮೆಯಾದರೂ ಅಭಿನಯಿಸುತ್ತಿದ್ದರು. ಅವೆಲ್ಲಾ 'ರಾಜಾ ವಿಕ್ರಮ', 'ಲಂಕಾದಹನ' ಮೊದಲಾದ ನಾಟಕಗಳು. ನಾಯಕಿಯ ಪಾತ್ರ ವಹಿಸುವುದಕ್ಕೆ ಚಿತ್ರದುರ್ಗದಿಂದ ಒಬ್ಬ ಹುಡುಗಿಯನ್ನು ಕರೆಸುತ್ತಿದ್ದರು. ಇವೆಲ್ಲಾ ನಮ್ಮೂರಿನಲ್ಲಿ ರೋಮಾಂಚನ ಸಂಗತಿಗಳಾಗುತ್ತಿದ್ದವು! ಜೊತೆಗೆ 'ಕರೀಭಂಟನ ಕಾಳಗ' ಎಂಬ ಬಯಲಾಟ ಹೊರಕೇರಿಯವರೂ ಪ್ರತಿವರ್ಷವೂ ಪ್ರಯೋಗಿಸುತ್ತಿದ್ದರು. ಇದರಲ್ಲಿ ಬರುವ ರಾಕ್ಷಸಿ ಪಾತ್ರವನ್ನು ವಹಿಸುತ್ತಿದ್ದ ಅಗಸರ ಬಸಪ್ಪ ಆರಡಿಯ ಆಜಾನುಬಾಹು. ಎಂಟೋ-ಹತ್ತೋ ಸೀರೆಗಳನ್ನು ಸುತ್ತಿಕೊಂಡು ಅವನು ರಂಗದ ಮೇಲೆ ಬಂದರೆ ನೋಡುವುದಕ್ಕೆ ಎರಡು ಕಣ್ಣು ಸಾಲದು. ಕರ್ಣಾರ್ಜುನ ಕಾಳಗದಲ್ಲಿ ಶಂಕ್ರಪ್ಪ ಕರ್ಣನ ಪಾತ್ರವನ್ನೂ, ಕೆಂಚಲಿಂಗಪ್ಪ ಅರ್ಜುನನ ಪಾತ್ರವನ್ನೂ ನಿರ್ವಹಿಸಿದರೆ, ಮಂಚಿನ ಹಲಗೆಗಳೇ ಮುರಿದು ಹೋಗುತ್ತಿದ್ದವು! ಹಾಗೆ ಕುಣಿಯುತ್ತಿದ್ದರು. ಇವರಿಗೆ ನಾಟಕ ಕಲಿಸುವುದಕ್ಕೆ ಬಂದಿದ್ದ, ಉದ್ದಕೂದಲಿನ ಗುರುಸ್ವಾಮಿ ಎಂಬ ಸುಂದರಪುರುಷ ನನಗಂತೂ ವೇಷಾಂತರದಲ್ಲಿರುವ ರಾಜಪುತ್ರನಂತೆಯೇ ಕಾಣುತ್ತಿದ್ದ!

ಮಾರಿಹಬ್ಬ, ಅಲಾಬಿ ಹಬ್ಬ, ತೆಪ್ಪೋತ್ಸವ, ಬಯಲು ಬಸವನ ಪರೇವು, ಭೂತನ

ಮಣೆ, ಬೊಂಬೆಯಾಟ, ಸಂಗೀತ ನಾಟಕ, ಬಯಲಾಟ, ಕೆಂಚಮ್ಮನ ಅಡ್ಡಪಲ್ಲಕ್ಕಿ ಉತ್ಸವ ಹೀಗೆ ಊರಿಗೆ ಊರೇ ಒಂದಾಗಿ ನಲಿಯುತ್ತಿದ್ದ ದಿನಗಳಲ್ಲಿ, ಇದ್ದಕ್ಕಿದ್ದಂತೆ ಯಾವುದೋ ಕ್ಷುಲ್ಲಕ ಕಾರಣಕ್ಕೆ ವೈಮನಸ್ಯ ಹುಟ್ಟಿ ರಾಣಾರಂಪ ಆಗುತ್ತಿದ್ದುದೂ ಉಂಟು. ಕಂತೆ ಭಿಕ್ಷದ ನೆಪದಲ್ಲಿ ಇಂಥ ಒಂದು ಕಾಳಗ ನಡೆದದ್ದು ನೆನಪಿದೆ. ಇನ್ನೊಂದು ಜಗಳದ ಸಂದರ್ಭದಲ್ಲಿ ಒಂದು ಗುಂಪಿನವರು ಬಂಡಿಯ ಕಣಗೆಗಳನ್ನು ಹಿಡಿದುಕೊಂಡು, ಕೇವಲ ಚಡ್ಡಿಧಾರಿಗಳಾಗಿ, ಮೈ ತುಂಬ ಎಣ್ಣೆ ಬಳಿದುಕೊಂಡು, ತಮಟೆಯ ಸದ್ದಿನ ಕೂಡೆ ಮೆರವಣಿಗೆ ಮಾಡಿದ ಕರಾಳ ದೃಶ್ಯ ನೆನೆದಾಗ ಈಗಲೂ ಎದೆ ಝಲ್ಲೆನ್ನುತ್ತದೆ.

ನಾನು ಹುಟ್ಟಿದ್ದು ಸಾಮಾನ್ಯವಾದ ಒಂದು ಕೆಳ ಮಧ್ಯಮ ವರ್ಗದ ಕುಟುಂಬದಲ್ಲಿ. ತಂದೆ ಕಣ್ಣು ಮುಚ್ಚಿದ ಮೂರು ತಿಂಗಳ ನಂತರ ಕಣ್ಣು ಬಿಚ್ಚಿದ ಪುಣ್ಯಪುರುಷ ನಾನು! ತಂದೆ ಇಲ್ಲದ್ದು ಒಂದು ಅರಕೆಯಾಗದ ಹಾಗೆ ನನ್ನನ್ನು ಬೆಳೆಸಿದ್ದು ನನ್ನ ಅಜ್ಜ-ಅಜ್ಜಿ-ಅಮ್ಮ-ದೊಡ್ಡಜ್ಜಿ. ನನ್ನ ಆರೋಗ್ಯ, ಕ್ಷೇಮದ ಬಗ್ಗೆ ಅವರ ಅತಿಯಾದ ಕಾಳಜಿ ನನ್ನ ದೇಹದ ಸೂಕ್ಷ್ಮತೆಗೆ ಕಾರಣವಾದಂತೇ, ಮನಸ್ಸಿನ ಸೂಕ್ಷ್ಮತೆಗೂ ಕಾರಣವಾಯಿತು. ನನ್ನ ಬಾಲ್ಯ ಗೆಳೆಯರೆಲ್ಲಾ ಈಜು ಕಲಿಯುವುದಕ್ಕೆ ತೋಟದ ಬಾವಿಗೆ ಹೋದರೆ, ನಾನು ಒಬ್ಬನೇ ನಮ್ಮ ಐದಂಕಣದ ದೆವ್ವದಂಥ ದೊಡ್ಡಮನೆಯಲ್ಲಿ, ಜೋಲಿಯಲ್ಲಿ ಜೀಕುತ್ತ, ನೀರನ್ನೂ ಅಲೆಯನ್ನೂ ಕಲ್ಪಿಸುತ್ತಾ ಕಾಲ ಕಳೆಯುತ್ತಿದ್ದೆ. ಇದು ನನಗೆ ನಿರ್ವಾತದಲ್ಲಿ ಏನೇನನ್ನೋ ಹುಟ್ಟಿಸುವುದನ್ನು ಕಲಿಸಿತು. ಅನೇಕ ಬಾರಿ ನನಗೆ ನಾನೇ ಮಾತಾಡಿ ಕೊಳ್ಳುತ್ತಿದ್ದೆ ಅಥವಾ ಕೆಲವು ಗೆಳೆಯರನ್ನು ಸೃಷ್ಟಿಸಿಕೊಂಡು ಸಂವಾದಕ್ಕೆ ತೊಡಗುತ್ತಿದ್ದೆ. ಗಳಗನಾಥರ ಭಾರತ, ವೆಂಕಟಾಚಾರ್ಯರ ಕಾದಂಬರಿಗಳು, ಬಿ.ಪಿ. ಕಾಳೆಯವರ ಪತ್ತೇದಾರಿಗಳು ನನ್ನ ಏಕಾಂತವನ್ನು ದೂರ ಮಾಡುತ್ತಿದ್ದವು. ಸಂಕೋಚ ನಾಚಿಕೆ ಹಿಂಜರಿಕೆ ಇವು ನನ್ನ ಬಾಲ್ಯದ ಸ್ವಭಾವಗಳಾಗಿದ್ದವು. ನನ್ನ ತಂದೆ ಯಾವುದೋ ಊರಿಗೆ ಹೋಗಿದ್ದಾರೆ, ಅವರು ಮತ್ತೆ ಬರುತ್ತಾರೆ ಎಂದು ನಾನು ನಂಬಿ ಕೊಂಡಿದ್ದೆ. ಹೀಗಾಗಿ ನಿರಂತರ ನಿರೀಕ್ಷೆ ನನ್ನ ಒಳಮನಸ್ಸಿನ ತುಡಿತವಾಗಿ ಬಿಟ್ಟಿತ್ತು. ಈಗಲೂ ನಾನು ಕಾಯುತ್ತಾ ಇರುತ್ತೇನೆ. ಪತ್ರಕ್ಕಾಗಿ, ಗೆಳೆಯ ಆಗಮನಕ್ಕಾಗಿ. ಇದ್ದಕ್ಕಿದ್ದಂತೆ ನಂಟರು ಬರಬಹುದು ಎಂಬ ನಿರೀಕ್ಷೆಯಲ್ಲಿ. ಒಂದು -ಒಂದೇ ಒಂದು ಘನವಾದ ಕವಿತೆಗಾಗಿ, ಪಾತ್ರಕ್ಕಾಗಿ, ಪಾತ್ರಧಾರಿಗಾಗಿ, ಆತಂಕ-ಭಯದಿಂದ ನನ್ನನ್ನು ಜರ್ಝರಿತಗೊಳಿಸಬಲ್ಲ ಒಂದು ವಾರ್ತೆಗಾಗಿ ಕೂಡ.

ಆಕಾಶ ಭೂಮಿಯನ್ನು ತಬ್ಬಿಕೊಳ್ಳಬೇಕೆಂಬ ತವಕದಿಂದ ಸದಾ ಭೂಮಿಯ ಮೇಲೆ ಬಾಗಿದೆ. ಆದರೆ ಮಣ್ಣಿನ ಮುತ್ತು ಯಾವತ್ತೂ ಅದಕ್ಕೆ ದೊರೆತಿಲ್ಲ- ಇದು ನನ್ನನ್ನು ಕಾಡುವ ಒಂದು ಪ್ರತಿಮೆ. ಸ್ನೇಹಕ್ಕಾಗಿ, ಸಂಬಂಧಕ್ಕಾಗಿ ನಾವೆಲ್ಲಾ ಹಪಹಪಿಸುತ್ತಿದ್ದೇವೆ. ಸಮಾಜಗಳು, ಧಾರ್ಮಿಕ ಗುಂಪುಗಳು, ದೇಶಗಳು ಕೂಡ ಹತ್ತಿರ ಬರುತ್ತವೆ, ದೂರ ಸಿಡಿಯುತ್ತಿವೆ. ಮತ್ತೆ ಹೊಸ ಸಂಬಂಧಗಳ ಹುಡುಕಾಟ. ಇದು ನಿರಂತರ ನಡೆಯುತ್ತಲೇ ಇದೆ. ಎಲ್ಲ ನೆಲೆಯಲ್ಲಿ ಈ ಆಕರ್ಷಣೆ-ವಿಕರ್ಷಣೆ. ಈ ಕರ್ಷಣವೇ ನನ್ನ ಕವಿತೆಗಳನ್ನು ಹುಟ್ಟಿಸಿದೆ; ನಾಟಕಗಳನ್ನು

ಹುಟ್ಟಿಸಿದೆ. ನನ್ನದು ಪಾವಿತ್ರ್ಯದ ಹುಡುಕಾಟವಲ್ಲ. ಮನುಷ್ಯತ್ವದ ಮೆಲುದನಿಗಾಗಿ ವಿಹ್ವಲತೆಯ ತಡಕಾಟ. ಮನುಷ್ಯನಾಗುವುದೆಂದರೆ ಇನ್ನೊಬ್ಬ ಮನುಷ್ಯನನ್ನು ಪ್ರೀತಿಸುವುದು; ಸಮಾಜವನ್ನು ಪ್ರೀತಿಸುವುದು; ನನ್ನ ಊರನ್ನು, ನನ್ನ ಊರಿನ ಕೆರೆ, ತೋಪು, ಗದ್ದೆ, ಬಯಲುಗಳನ್ನು ಪ್ರೀತಿಸುವುದು; ನನ್ನ ಕವಿತೆಗಳನ್ನು ಮಾತ್ರವಲ್ಲ, ಜೀವಂತವಿರುವ ಇನ್ನೊಬ್ಬರ ಕವಿತೆಗಳನ್ನೂ ಪ್ರೀತಿಸುವುದು; ಪ್ರೀತಿಸುವುದು ಕಷ್ಟವಾದರೆ, ಪ್ರೀತಿಸಲಿಕ್ಕೆ ಹೆಣಗಾಡುವುದು. ಕಡೇಪಕ್ಷ ದ್ವೇಷಿಸದೆ ಇರುವುದಕ್ಕೆ ಶತಾಯಗತಾಯ ಹೋರಾಡುವುದು. ವಿಫಲತೆಯ ನಡುವೆಯೇ ಹೋರಾಟ ಮುಂದುವರೆಸುವುದು.

ಲೇಖಕನ ಬದುಕು ಮತ್ತು ಬರಹ ಅವಿನಾ ಸಂಬಂಧವನ್ನು ಹೊಂದಿವೆ. ನನ್ನ ಬದುಕೇ ನನ್ನ ಬರಹವನ್ನು ರೂಪಿಸಿದೆ. ಬರಹಕ್ಕೂ ನನ್ನ ಬದುಕಿನ ಮೇಲೆ ಒಂದು ಕಣ್ಣು ಇದ್ದೇ ಇದೆ. ಬದುಕು ನನ್ನ ಬರಹದ ಆಸ್ತಿ. ಬದುಕಿನ ನಾಳೆ, ಬರಹದ ಆಸಕ್ತಿ. ನಡೆದಂತೆ ನುಡಿಯಬೇಕು ಎನ್ನುವುದು ಬದುಕಿನ ನಿರ್ದೇಶನ. ನುಡಿದಂತೆ ನಡೆಯಬೇಕು ಎನ್ನುವುದು ಬರಹದ ಆಗ್ರಹ. ನೂರಕ್ಕೆ ನೂರು ಎರಡೂ ನಡೆಯಲಾರದೇನೋ...?

ಬದುಕು ಬರಹದಲ್ಲಿ ಹೇಗೆ ಕಾಣಿಸಿಕೊಂಡೀತು ಎಂಬುದು ಬದುಕಿನ ಮರ್ಜಿ. ಸಿಂದಬಾದಿನಲ್ಲಿ ನಾನಿದ್ದೇನೆಯೇ, ಸೌಗಂಧಿಕಾದಲ್ಲಿ ನಾನಿದ್ದೇನೆಯೇ, ವಿಸರ್ಗದಲ್ಲಿ ನಾನಿದ್ದೇನೆಯೇ ಎಂದರೆ 'ಇದ್ದೇನೆ' ಎಂಬುದು ಲೇಖಕನ ನಮ್ರ ಉತ್ತರ. ಹೇಗೆ? ಎಂದರೆ ಮಾರುವೇಷದಲ್ಲಿ ಎಂದು ಉತ್ತರಿಸಿಯೇನು! ಸೌಗಂಧಿಕಾದಲ್ಲಿ, ಒಂದು ಹೂವಿಗಾಗಿ ದ್ರೌಪದಿ ತಹತಹಿಸುತ್ತಾಳೆ. ಅವಳ ಗಂಡಂದಿರು ಕಳೆದು ಹೋದ ರಾಜ್ಯವನ್ನು ದೊರಕಿಸುವುದಕ್ಕಾಗಿ ಕ್ರಿಯಾಶೀಲರಾಗಿದ್ದಾರೆ. ಆ ಘಳಿಗೆಯಲ್ಲಿ ದ್ರೌಪದಿಗೆ ರಾಜ್ಯ ಬೇಕಾಗಿಲ್ಲ. ಬೇಕಾಗಿರುವುದು ಕೇವಲ ಒಂದು ಹೂವು. ಅದನ್ನು ತನಗೆ ಕೊಡಬಲ್ಲ ಗಂಡನ ಪ್ರೀತಿ. ಗಂಡ ತಂದುಕೊಡುವ ಒಂದು ಹೂವು ದಾಂಪತ್ಯಕ್ಕೆ ಕೊಡಬಹುದಾದ ಚೆಲುವು ಅತ್ಯಮೂಲ್ಯವಾದದ್ದು. ಇದು ಭೀಮನಿಗೆ ತಿಳಿಯದೆ ಹೋಯಿತು. ಅದು ಪದ್ಯದ ಕೊನೆಯಲ್ಲಿ ತಿಳಿದಾಗ ಅವನ ಕಣ್ಣು ಅರಳಿತು. ದ್ರೌಪದಿಯ ಪಾಲಿಗೆ ಅದೇ ಸೌಗಂಧಿಕ. ಭೀಮನ ಅವಜ್ಞತೆಯಲ್ಲಿ ನಾನಿದ್ದೇನೆ.

ಹೀಗೆಯೇ ನನ್ನ ಬರವಣಿಗೆಯಲ್ಲಿ ನಾನು ಹಾಸು ಹೊಕ್ಕಾಗಿದ್ದೇನೆ. ನಾನು ಕಂಡದ್ದು, ಉಂಡದ್ದು, ಅನುಭವಿಸಿದ್ದು ಅಲ್ಲಿ ಇವೆ. ನನ್ನ ಊರು, ತೋಪು, ಕೆರೆ, ಕಂತರಂಗನ ಮಟ್ಟಿ, ಈಚಲವನ, ನನ್ನೂರ ಜನ ಬಣ್ಣ ಬಳಿದುಕೊಂಡು ನನ್ನ ಬರಹದಲ್ಲಿ ತಹರಾವರಿ ಕಾಣಿಸಿಕೊಳ್ಳುತ್ತಾ ಉಂಟು. ನನ್ನ 'ಚಿನ್ನಾರಿ ಮುತ್ತ' ನನ್ನ ಹಾಗೇ ನಮ್ಮೂರಿನಲ್ಲಿ ಹುಟ್ಟಿ ಬೆಳೆದ ಪೋರ. ಅದಕ್ಕೆ ಅವನು ಹಾಗೆ ಆಡುತ್ತಾನೆ; ಹಾಗೆ ಓಡುತ್ತಾನೆ, ಹಾಗೆ ಬೆಳೆಯುತ್ತಾನೆ. ಈ ಚಿನ್ನಾರಿಮುತ್ತನೇ ಬಣ್ಣದವೇಷದಲ್ಲಿ ವಿಮುಕ್ತಿಯ ಗರುಡನಾಗಿದ್ದಾನೆ!

ಕಂಚಿನ ತೇರುವಿನ ರಾಜಕುಮಾರಿ, ಶಿಶಿರದ ಪಾಡುವಿನ ಸೀತೆ, ಸೌಗಂಧಿಕಾದ ದ್ರೌಪದಿ, ರಾಗ-ವಿ-ರಾಗದ ಅಮೃತಮತಿ, ಶುಕ್ಲಪಕ್ಷದ ಅಹಲ್ಯೆ, ಹರಿಗೋಲು ಕಾವ್ಯದ ತಾಯಿ,

ವಿಮುಕ್ತಿಯ ವಿನತೆ-ಎಷ್ಟೊಂದು ಜನ ಹೆಣ್ಣುಮಕ್ಕಳು ನನ್ನ ಕವಿತೆಯಲ್ಲಿ! ಎಷ್ಟೊಂದು ಮಾದರಿಗಳು ಆ ಹೆಣ್ಣುಮಕ್ಕಳಲ್ಲಿ! ಇಲ್ಲೆಲ್ಲಾ ಕಾಣುವುದು ಅನುಕಂಪವಲ್ಲ, ಅವಿನಾಭಾವ. ಪ್ರೀತಿಗಿಂತ ಒಂದು ತೂಕ ಹೆಚ್ಚೆನ್ನುವ ಗೌರವ ಮತ್ತು ಪುರುಷನಾಗಿ ಪಡುವ ಪಾಪಪ್ರಜ್ಞೆ. ಕೊರಳು ಒಸುಕುವ ಉತ್ಕಂಠಭಾವ. ಅದರ ಪ್ರತಿಮಾತ್ಮಕ ಅಭಿವ್ಯಕ್ತಿ ಶಿಶಿರದ ಪಾಡು ಕವಿತೆಯಲ್ಲಿ ಹೀಗೆ ಅಭಿವ್ಯಕ್ತಿವಾಗಿದೆ.

> ಸೀತೆ ನಿಟ್ಟುಸಿರಿಡಲು ಬೋಳು ಆಲದ ಬೆರಳು
> ಬೆರಳಲ್ಲಿ ಕಂಬನಿಯ ನೀಲ ಹರಳು
> ಅದರ ಸುತ್ತಲು ಕಪ್ಪು ದಟ್ಟವಾಗುತ್ತಿರಲು
> ದನಿ ಹೂತು ಕಂಪಿಸಿತು ಕವಿಯ ಕೊರಳು (ಶಿಶಿರದ ಹಾಡು)

ನನ್ನ ಚಿತ್ರಪಟ ನಾಟಕದಲ್ಲಿ ಸೀತೆ-ರಾಮ-ರಾವಣರನ್ನು ಬೇರೆ ನೆಲೆಯಲ್ಲೇ ಚಿತ್ರಿಸಿದ್ದೇನೆ. ಬಿ. ಜಯಶ್ರೀ ಅವರು ಈ ನಾಟಕ ಪ್ರಯೋಗಿಸಿದಾಗ ಆದ ಆಘಾತದಿಂದ ವ್ಯಗ್ರರಾದ ಸ್ನೇಹಿತರು ಕೆಲವರು ನನ್ನನ್ನು ಪ್ರಶ್ನಿಸಿದರು:

'ಪವಿತ್ರತೆಯ ಪ್ರತೀಕವೂ, ನಮ್ಮ ಆರಾಧ್ಯಮೂರ್ತಿಯೂ ಆದ ಸೀತೆಯನ್ನು ನೀವು ಹೀಗೆ ಚಿತ್ರಿಸಬಹುದೇ?'

ನಾನು ಉತ್ತರಿಸಲಿಲ್ಲ. ಈಗ ಹೇಳುತ್ತೇನೆ: ದೇವತೆಗಳಲ್ಲಿ, ರಾಕ್ಷಸರಲ್ಲಿ, ಮನುಷ್ಯರಲ್ಲಿ ಕೂಡ-ನಾನು ಮನುಷ್ಯರನ್ನು ಹುಡುಕುತ್ತಿದ್ದೇನೆ. ಮನುಷ್ಯರನ್ನು ಹುಡುಕುವುದೇ ನನ್ನ ಬರವಣಿಗೆಯ ಪರಮ ಪುರುಷಾರ್ಥ.

●

## ಬದುಕಿನ ಅರ್ಥ ತಿಳಿಸಿದ ಮುಂಬಯಿ

● ವ್ಯಾಸರಾಯ ಬಲ್ಲಾಳ

ಬದುಕಿನ ವಿಸ್ಮಯಗಳ ಬಗೆಗೆ ಕುತೂಹಲ ಕುದುರತೊಡಗಿದ್ದ ನನ್ನ ಬಾಲ್ಯದಲ್ಲಿ, ಪ್ರಶ್ನಿಸುವ ಅಧಿಕಾರವೇ ನನಗೆ ಇಲ್ಲವೇನೋ ಎಂದು ಭಾಸವಾಗುವಂತಹ ಮಡಿವಂತಿಕೆಯ ಶಿಸ್ತು. ಪ್ರತಿಭಟನೆ ಹೇಗೆ ಸಾಧ್ಯ ಎನ್ನುವಂತಹ ಕಠಿಣ ಸಂಪ್ರದಾಯ ಬದ್ಧ ಕೌಟುಂಬಿಕ ಪರಿಸರದಲ್ಲಿ ಎಲ್ಲ ವಿಧಿ ನಿಷೇಧಗಳೇ. ನಮ್ಮ ಎಲ್ಲ ನೀತಿ ಮೌಲ್ಯಗಳೂ ಸಾಂಪ್ರದಾಯಿಕತೆಯ ಮಡಿವಂತಿಕೆಯ ಶಿಸ್ತಿನಲ್ಲಿ ನಿರ್ಧಾರವಾಗಬೇಕು ಎಂಬ ನನ್ನ ಬಾಲ್ಯದ ಆವರಣದಲ್ಲಿ, ಯಾಕೆ ಎಂದು ಕೂಗಿ ಕೇಳಬೇಕು ಎಂಬ ಆಸೆಗೂ ಮಾತಿನ ರೂಪ ಕೊಡಲು ಸಾಧ್ಯವಾಗದಂತಹ ಪರಿಸ್ಥಿತಿಯಿತ್ತು. ಬಾಲ್ಯದಲ್ಲಿ ನಾನು ನೆಚ್ಚಿಕೊಂಡದ್ದು ಏಕಾಂತತೆಯನ್ನು; ಕಟ್ಟಿಕೊಂಡದ್ದು ನನ್ನ

ಸುತ್ತಮುತ್ತ ನಡೆಯುತ್ತಿರುವುದೆಲ್ಲ ವಾಸ್ತವವೇ ಎಂಬ ಕುತೂಹಲವನ್ನು. ಕೆಳ ಮಧ್ಯಮ ವರ್ಗದ, ದೊಡ್ಡ ಸಂಸಾರದ ಆರ್ಥಿಕ ಬವಣೆ, ಅಸಹನೀಯವೆನಿಸುವ ಮಡಿವಂತಿಕೆ ಇವುಗಳಿಂದ ಪಾರಾಗುವುದು ಹೇಗೆ ಎಂಬ ಚಿಂತನೆಯಲ್ಲಿ ನಾನು ನನ್ನ ಬಾಲ್ಯದ ವಿದ್ಯಾಭ್ಯಾಸದ ಹಲವು ವರ್ಷಗಳನ್ನು ಕಳೆಯಬೇಕಾಗಿತ್ತು. ಅದೇ ಸಂದರ್ಭದಲ್ಲಿ ತಿಳಿವಳಿಕೆ ಬೆಳೆಯುತ್ತಿದ್ದಂತೆ ನನ್ನ ಪರಿಸರದಲ್ಲಿ ಕಾಣತೊಡಗಿದ್ದ ಸ್ತ್ರೀ ಶೋಷಣೆಯ ಹಲವು ಮುಖಗಳು, ಕ್ರೌರ್ಯ ಶೋಷಣೆಯ ನಡುವೆಯೂ ಆಕೆ ಉಳಿಸಿಕೊಳ್ಳುತ್ತಿದ್ದ ಚೆಲುವಿನ ಪ್ರಜ್ಞೆ ಇವುಗಳ ವೈರುಧ್ಯ ನನ್ನ ಸೃಜನಶೀಲತೆಗೆ ರೂಪುಗೊಟ್ಟವು.

ನಮ್ಮ ಕುಟುಂಬದ ಮಡಿವಂತಿಕೆಯ ಶಿಸ್ತಿಗೆ ತಾಯಿ ತನ್ನನ್ನು ಒಗ್ಗಿಸಿಕೊಂಡಿದ್ದರೂ ಅವರ ತಂದೆ, ನನ್ನ ಅಜ್ಜ, ದೀರ್ಘ ಕಾಲ ಕೊಡಗಿನಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದವರು. ಆಧುನಿಕ ಶಿಕ್ಷಣದ ಸಂಸ್ಕಾರವನ್ನು ನೆಚ್ಚಿಕೊಂಡಿದ್ದವರು. ಅವರ ದೊಡ್ಡ ಮಗ, ನನ್ನ ಸೋದರ ಮಾವ, ಆಗಿನ ಮದಾರಾಸು ಪ್ರಾಂತ್ಯದಲ್ಲಿ ಇಂಜಿನಿಯರ್ ಆಗಿ ದುಡಿಯುತ್ತಿದ್ದವರು; ನಿರ್ಭೀತ, ಅತ್ಯಂತ ಪ್ರಾಮಾಣಿಕ ಅಧಿಕಾರಿಯೆಂದು ಹೆಸರು ಗಳಿಸಿದ್ದವರು; ಬ್ರಿಟಿಶ್ ಮೇಲಾಧಿಕಾರಿಗಳ ಕೈ ಕೆಳಗೆ ದುಡಿಯಬೇಕಾಗಿದ್ದರೂ ಗಾಂಧೀಜಿಯವರಿಂದ ಪ್ರಭಾವಿತರಾಗಿ ಖಾದಿಯನ್ನೆ ಧರಿಸುತ್ತ, ತಕಲಿಯಲ್ಲಿ ನೂಲುತ್ತ ಸಾಯುವ ತನಕವೂ ಗಾಂಧಿ ಭಕ್ತರಾಗಿದ್ದವರು. ನಮ್ಮ ಮನೆಯ ಮಡಿವಂತಿಕೆಯ ಕತ್ತಲಲ್ಲೂ ನಾನು ಒಂದು ರೀತಿಯ ಬೆಳಕನ್ನು ಕಾಣತೊಡಗಿದ್ದಾಗ, ನನ್ನ ಸೋದರ ಮಾವನ ಮೂಲಕ ಅವರು ಕೆಲಸದ ಪ್ರವಾಸಕ್ಕೆಂದು ಹೋಗಬೇಕಾಗಿದ್ದಾಗ, ಓದಲೆಂದು ಬುಟ್ಟಿ ತುಂಬ ಗ್ರಂಥಗಳನ್ನು ಒಯ್ಯುತ್ತಿದ್ದುದೂ, ನಾನು ನನ್ನ ಓದಿನ ಹಸಿವನ್ನು ಹೆಚ್ಚಿಸಿಕೊಳ್ಳಲು ಕಾರಣ. ಈ ಕತ್ತಲು ಬೆಳಕಿನ ವೈರುಧ್ಯವೂ ನನಗೆ ನನ್ನ ಪರಿಸರದಿಂದ ಬಿಡುಗಡೆ ಬೇಕು ಎಂಬ ಆಸೆ ಹುಟ್ಟಿಕೊಳ್ಳಲೂ ಹಾಗೆಯೇ ನನ್ನ ಕಳವಳವನ್ನು ಯಾರೊಡನಾದರೂ ತೋಡಿಕೊಳ್ಳಬೇಕು ಎಂಬ ಅಭಿವ್ಯಕ್ತಿಯ ಆಸೆಯನ್ನು ಬೆಳೆಸಿಕೊಳ್ಳಲೂ ಮುಖ್ಯ ಕಾರಣ.

ನಮ್ಮ ಕುಟುಂಬದ ೧೩ ಮಕ್ಕಳಲ್ಲೆ ನಾನು ಹಿರಿಯನಾಗಿದ್ದವನು. ನನಗೆ ಉಚ್ಚ ಶಿಕ್ಷಣ ಸಂಸ್ಕಾರವನ್ನು ಕೊಡಿಸಲೇಬೇಕು ಎಂಬ ಆಸೆಯಿರಿಸಿಕೊಂಡಿದ್ದ ನನ್ನ ಅಜ್ಜ, ನನ್ನ ಹದಿಮೂರನೆಯ ವಯಸ್ಸಿನಲ್ಲೆ ತೀರಿಕೊಂಡಾಗ, ಈ ಆಸೆ ನಿಜವಾಗುವ ಸಾಧ್ಯತೆ ಕಡಿಮೆ ಎನಿಸಿತು. ನಮ್ಮ ಕುಟುಂಬದ ಆರ್ಥಿಕ ಪರಿಸ್ಥಿತಿಯಿಂದಾಗಿ, ನನ್ನ ಮೆಟ್ರಿಕ್ ಮುಗಿಸಿದಾಗಲೇ ಉದ್ಯೋಗ ಬೇಟೆ ಆರಂಭಿಸಬೇಕಾಗಿ ಬಂದಿತು. ಎರಡನೆಯ ಮಹಾಯುದ್ಧ ಆರಂಭವಾದ ವರ್ಷ. ನಿರುದ್ಯೋಗದ ಸಮಸ್ಯೆ ಅತ್ಯಂತ ತೀಕ್ಷ್ಣವಾಗಿ ಕಾಡುತ್ತಿದ್ದ ಕಾಲ. ಒಂದು ಸಾಮಾನ್ಯ ಕಾರಕೂನಿಕೆಯ ಕೆಲಸ ಸಿಗಬಹುದು ಎಂಬ ಆಸೆಯಿಂದ ಅದನ್ನು ದೊರಕಿಸಿಕೊಡಬಹುದಾದ ಸಾಧನವೆಂದು, ಉಡುಪಿಯ ಜಿಲ್ಲಾ ಬೋರ್ಡು ಕಚೇರಿಯಲ್ಲಿ ನಾನು ಪಗಾರವಿರದೆಯೇ ದುಡಿಯಲಾರಂಭಿಸಿದೆ. ಎರಡು ವರ್ಷ ಕಾಲದ ಈ ರೀತಿಯ ದುಡಿಮೆ ನನ್ನ ಸಾಹಿತ್ಯಕ ಜೀವನಕ್ಕೆ ಅತ್ಯಂತ ಉಪಯುಕ್ತ ವರ್ಷಗಳಾಗಿ ಪರಿಣಮಿಸಿತು. ಇದಲ್ಲದ ಕಾರಣ ಈ

ಅವಧಿಯಲ್ಲಿ ನಾನು ನನಗೆ ಅಂಟಿಸಿಕೊಂಡ ಓದಿನ ಆಸಕ್ತಿ. ನನ್ನ ಹುಟ್ಟೂರಾದ ಉಡುಪಿ ಯಂತಹ ಸಣ್ಣ ಪಟ್ಟಣದಲ್ಲೂ ಆಗ ಇದ್ದ ಮ್ಯುನಿಸಿಪಲ್ ಗ್ರಂಥಾಲಯ, ಒಂದು ಸಮೃದ್ಧ ಗ್ರಂಥ ಭಂಡಾರವಾಗಿತ್ತು. ಅಪಾರವೆನಿಸುವ ವೈವಿಧ್ಯಪೂರ್ಣ ಗ್ರಂಥಗಳನ್ನೆಲ್ಲ ಓದುವ ಅವಕಾಶವನ್ನು ನನಗೆ ಒದಗಿಸಿಕೊಟ್ಟದ್ದು ಈ ಗ್ರಂಥಾಲಯ. ಆಂಗ್ಲ ಸಾಹಿತ್ಯದ ಮಹಾನ್ ಲೇಖಕರ ಮಹತ್ವದ ಗ್ರಂಥಗಳನ್ನೆಲ್ಲ ಓದಲು ಸಾಧ್ಯವಾದದ್ದು ಈ ಗ್ರಂಥಾಲಯದಲ್ಲೇ. ಗಾಂಧೀಜಿ ಹಾಗೂ ನೆಹರೂರವರ ಆತ್ಮಕಥೆಗಳನ್ನೂ ಮುಂದೆ ಬಹಿಷ್ಕರಿಸಲ್ಪಟ್ಟ ಹಿಟ್ಲರನ 'ಮೈನ್‌ಕ್ಯಾಂಪ್' ಗ್ರಂಥವನ್ನೂ ನಾನು ಓದಿದ್ದು, ಈ ಗ್ರಂಥಾಲಯದ ಮೂಲಕ. ನಾಡಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟದ ವಿಚಾರ ತುಸು ಭಾವನಾತ್ಮಕವೆನಿಸುವ ಸಂಬಂಧವನ್ನು ಕಟ್ಟಿಕೊಂಡ ನನಗೆ, ಪತ್ರಿಕೋದ್ಯಮದ ಕುರಿತ ಆಸಕ್ತಿ ಅಲ್ಲಿ ಉಂಟಾಯಿತು. ಇದರಿಂದಾಗಿ ನನ್ನ ಪರಿಸರದಿಂದ ಬಿಡುಗಡೆಯೂ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಆಸ್ಪದವೂ ದೊರಕಿದಂತಾಗುವುದಿಲ್ಲವೇ ಎಂಬ ಆಸೆ ಮೂಡಿತು.

ಸಂಸ್ಕೃತದ ಶಿಕ್ಷಣ ಪಡೆದು ಮುಂದೆ ಕನ್ನಡದ ವಿದ್ವಾನ್ ಪರೀಕ್ಷೆಯನ್ನೂ ಮುಗಿಸಿದ್ದ ನನ್ನ ತಂದೆಯವರು, ಕನ್ನಡ ಅಧ್ಯಾಪಕರಾಗಿ ಉಡುಪಿಯ ಕಾನ್ವೆಂಟ್ ಶಾಲೆಯಲ್ಲಿ ಕೆಲ ಕಾಲ ದುಡಿದಿದ್ದರೂ, ಇಂಗ್ಲಿಶಿಗೆ ಅನುವಾದಿಸಬೇಕಾದ ತರಗತಿಗಳನ್ನು ಅವರಿಗೆ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ಕೆಲಸ ಕಳೆದುಕೊಂಡರು. ಅದು ನಾನು ಮೆಟ್ರಿಕ್ ಪರೀಕ್ಷೆ ಮುಗಿಸಿದ ಸಂದರ್ಭ. ಹೀಗಾಗಿ ದೊಡ್ಡ ಕುಟುಂಬದ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾದ ಅಗತ್ಯ ಉಂಟಾದಾಗ, ನಾನು ಏನಾದರೂ ಕೆಲಸ ಹಿಡಿದು ಸಂಸಾರಕ್ಕೆ ಸಹಾಯ ಮಾಡಬೇಕಾಯಿತು. ಎರಡು ವರ್ಷ ಕಾಲ ನಿರುದ್ಯೋಗಿಯಾಗಿದ್ದು ಜಿಲ್ಲಾ ಬೋರ್ಡು ಕಚೇರಿಯಲ್ಲಿ ಅಧಿಕೃತವಾಗಿ ಒಂದು ಕಾರಕೂನಿಕೆಯ ಕೆಲಸ ದೊರಕಿಸಿಕೊಳ್ಳಲು ನನಗೆ ಸಾಧ್ಯವಾದದ್ದು ೧೯೪೧ರಲ್ಲಿ. ಆಮೇಲೆ ಮೂರು ವರ್ಷ ಕಾಲ ದಕ್ಷಿಣ ಕನ್ನಡದಲ್ಲೆ ದುಡಿಯುತ್ತಿದ್ದಾಗಲೂ ನಾನು ನನ್ನ ಕೌಟುಂಬಿಕ ಹಾಗೂ ಸಾಮಾಜಿಕ ಪರಿಸರದ ಕುರಿತ ಅತೃಪ್ತಿಯನ್ನಾಗಲೀ ಸ್ವತಂತ್ರ ಅಭಿವ್ಯಕ್ತಿಯ ಸಾಧ್ಯತೆಗಳ ಕುರಿತ ಚಿಂತನೆಯನ್ನಾಗಲೀ, ದೂರವಿರಿಸಲು ಸಾಧ್ಯವಾಗಿರಲಿಲ್ಲ. ನನ್ನ ಆರಂಭದ ಕೆಲವು ಸಣ್ಣ ಕತೆಗಳು - ಹೆಚ್ಚಿನವು ಹದಿಹರೆಯದ ಆದರ್ಶದ ಕನಸುಗಳಲ್ಲಿ ಮೂಡಿದಂಥವು - ಬೆಂಗಳೂರಿನ 'ಪ್ರಜಾಮತ' ಪತ್ರಿಕೆಯಲ್ಲಿ ಪ್ರಕಟವಾದವು. ನಿರುದ್ಯೋಗ ಕುರಿತ ನನ್ನ ಮೊದಲನೆಯ ಸಣ್ಣಕತೆ ಪ್ರಕಟವಾದುದು ನನ್ನ ಹದಿನೈದನೆಯ ವಯಸ್ಸಿನಲ್ಲಿ - ಬೆಂಗಳೂರಿನ 'ವಿಕಟ ವಿನೋದಿನಿ' ಪತ್ರಿಕೆಯಲ್ಲಿ.

ಉಡುಪಿಯಲ್ಲಿ ಆಗ ಇದ್ದ ಶಿಕ್ಷಣದ ಸಾಧ್ಯತೆ ಮೆಟ್ರಿಕ್‌ವರೆಗೆ ಮಾತ್ರ; (ಮಣಿಪಾಲ ಪ್ರಮುಖ ಶಿಕ್ಷಣ ಕೇಂದ್ರವಾಗಿ ಬೆಳೆದುದು ಹಲವು ವರ್ಷಗಳಾದ ಮೇಲೆ.) ದಕ್ಷಿಣ ಕನ್ನಡದ, ಹೆಚ್ಚಿನ ವಿದ್ಯಾವಂತ ಯುವಕರ ಆಕರ್ಷಣೆಯ ಕೇಂದ್ರ ಆಗ ಮುಂಬಯಿ. ಹೆಚ್ಚಿನ ಆರ್ಥಿಕಾನುಕೂಲತೆಯ ಸಾಧ್ಯತೆ, ಪತ್ರಿಕೋದ್ಯಮದ ಕನಸು ಇವನ್ನೆಲ್ಲ ಹೊತ್ತುಕೊಂಡು ನಾನು ೧೯೪೪ರಲ್ಲಿ ಮುಂಬಯಿ ಸೇರಿದೆ. ನಲವತ್ತರ ದಶಕ ಅವಿಭಜಿತ ಭಾರತದಲ್ಲಿ ಅತ್ಯಂತ

ಮಹತ್ವದ ದಶಕ. ಎರಡನೆಯ ಮಹಾಯುದ್ಧ ಕೊನೆಗೊಳ್ಳುತ್ತಿದ್ದ ದಶಕ. ಸ್ವಾತಂತ್ರ್ಯ ಹೋರಾಟದ 'ಕ್ವಿಟ್ ಇಂಡಿಯಾ' ಚಳವಳದ ದಶಕ. ಬ್ರಿಟಿಶ್ ಸಾಮ್ರಾಜ್ಯಕ್ಕೆ ಕೊನೆಯ ಏಟೆಂದು ನಡೆದ ನಾವಿಕರ ದಂಗೆಯ ದಶಕ. ಭಾರತ ಸ್ವತಂತ್ರವಾದ ದಶಕ. ಗಾಂಧೀಜಿಯ ಹತ್ಯೆಯಾದ ದಶಕ. ದೇಶದ ಸ್ವಾತಂತ್ರ್ಯದ ಹೋರಾಟದ ಮುಂಚೂಣಿಯಲ್ಲಿದ್ದುದು ಮುಂಬಯಿ ಮಹಾನಗರ. ಎಳೆಯ ವಯಸ್ಸಿನಿಂದಲೂ ಗಾಂಧೀಜಿಯನ್ನು ಕಾಣಬೇಕೆಂಬ ಆಸೆಯಿರಿಸಿಕೊಂಡಿದ್ದ ನನಗೆ ಅವರನ್ನು ಮೊದಲು ಕಾಣಲು ಸಾಧ್ಯವಾದದ್ದು ಮುಂಬಯಿ ಯಲ್ಲಿ. ಕ್ವಿಟ್ ಇಂಡಿಯಾ ಚಳವಳದ ಕಾಲ ಸೆರೆಯಲ್ಲಿದ್ದು ಬಿಡುಗಡೆಯಾಗಿ ಬಂದ ನೆಹರೂರವರು ಮೊದಲು ಮುಂಬಯಿಗೆ ಬಂದು ಪತ್ರಿಕಾ ಪ್ರತಿನಿಧಿಗಳನ್ನು ಭೇಟಿ ಮಾಡಿದ ಸಂದರ್ಭದಲ್ಲಿ ನಾನು ಅವರನ್ನು ಕಾಣುವಂತಾದುದು.

ಪತ್ರಿಕೋದ್ಯಮದ ಕನಸನ್ನು ಕಟ್ಟಿಕೊಂಡಿದ್ದರೂ ಮುಂಬಯಿಗೆ ಬಂದಾಗ ವರದಿಗಾರ ನಾಗಿ ಆಂಗ್ಲ ಪತ್ರಿಕೆಯಲ್ಲಿ ಸೇರಿಕೊಳ್ಳಲು ಸಹಾಯ ಮಾಡುವೆನೆಂದು ಹಿರಿಯ ಪತ್ರಕರ್ತ ರೊಬ್ಬರು ಮುಂದೆ ಬಂದಿದ್ದರು. ಆರ್ಥಿಕ ಕಾರಣಗಳಿಗಾಗಿ ನಾನು ಹಿಂಜರಿದು ಒಂದು ಬಹುರಾಷ್ಟ್ರೀಯ ಕಂಪೆನಿಯಲ್ಲಿ ಶೀಘ್ರಲಿಪಿಕಾರನಾಗಿ ಸಣ್ಣ ಉದ್ಯೋಗವನ್ನು ಆಯ್ದು ಕೊಂಡೆ. ಕನ್ನಡದ ನೆಲವಲ್ಲದ ಮುಂಬಯಿಯಲ್ಲಿ ಕನ್ನಡ ಪತ್ರಿಕೆಯೊಂದರಲ್ಲಿ ಕೆಲಸ ಮಾಡಲು ಸಾಧ್ಯವಾಗಬಹುದೆಂದು ಆಗ ಊಹಿಸಲೂ ಸಾಧ್ಯವಿರಲಿಲ್ಲ.

ನನ್ನ ಹದಿಹರೆಯದ ದಿನಗಳಿಂದಲೂ ನನ್ನ ವೈಚಾರಿಕ ಕುತೂಹಲವನ್ನು ಯಾರೊಡನಾ ದರೂ ಹಂಚಿಕೊಳ್ಳಬೇಕೆಂದು ನಾನು ಮೊರೆ ಹೋದ ಒಂದು ವಿಶಿಷ್ಟವೆನಿಸಬಹುದಾದ ಪ್ರಯೋಗ ನನ್ನ ದಿನಚರಿಯೊಡನೆ ಮಾತುಕತೆ. ನನ್ನ ದಿನಚರಿಯಲ್ಲಿ ನಾನು ಬರೆಯು ತ್ತಿದ್ದುದು ದಿನದ ಚಟುವಟಿಕೆಗಳ ವರದಿಯಲ್ಲ. ಒಬ್ಬ ಆತ್ಮೀಯ ಸಂಗಾತಿಯೊಡನೆ ಸಂಭಾಷಣಾ ರೂಪದ ಚರ್ಚೆ. ಚರ್ಚೆ ಕೂಡ ನನಗಷ್ಟೆ ಸಂಬಂಧಿಸಿದ ವಿಚಾರಗಳ ಕುರಿತು ಮಾತ್ರವಲ್ಲ; ಸತ್ಯ ಸೌಂದರ್ಯಗಳ ಕುರಿತ ಪರಿಕಲ್ಪನೆಗಳ ಹರವಿನಲ್ಲಿ ಬರುವ ಹಲವಾರು ವಿಚಾರಗಳು, ಸಾಮಾಜಿಕ ವಾಸ್ತವವೆನಿಸುವ ಸಂಗತಿಗಳ ಕುರಿತ ಜಿಜ್ಞಾಸೆ, ಬದುಕಿನ ಗತಿಗೆ ಹೊಂದಿಕೊಳ್ಳುವ ಆದರ್ಶದ ಪರಿಕಲ್ಪನೆಗಳು, ಸೌಂದರ್ಯ ಪ್ರಜ್ಞೆ. ಹೀಗೆ ಸಂಭಾಷಣಾ ರೂಪದಲ್ಲಿ ಪ್ರಶ್ನೆಗಳನ್ನು ಕಲ್ಪಿಸಿಕೊಂಡು, ಉತ್ತರಗಳನ್ನು ಪ್ರಯೋಗಕ್ಕೊಳಪಡಿಸಿದ್ದೆ. ಈ ರೀತಿಯ ದಿನಚರಿಯ ಸಖ್ಯ ಒಂದೆರಡು ವರ್ಷಗಳದ್ದಲ್ಲ. ನನ್ನ ತಿಳಿವಳಿಕೆ, ಅನುಭವ ಪ್ರಪಂಚ ವಿಸ್ತಾರಗೊಳ್ಳುತ್ತ ಬಂದ ಹಾಗೆ ಈ ಹವ್ಯಾಸವನ್ನು ಕೆಲವು ದಶಕಗಳ ಕಾಲ ಮುಂದುವರಿಸಿದೆ. ಮುಂದೆ ಒಮ್ಮೆ ಅವಸರದಲ್ಲಿ ಒಂದು ಸಣ್ಣ ಕತೆಗಾಗಿ ಬೇಡಿಕೆ ಬಂದಾಗ ನನ್ನ ದಿನಚರಿಯ ಒಂದು ಭಾಗವನ್ನು ಎತ್ತಿಕೊಂಡು ಕೊನೆಗೆ ಒಂದು ಪ್ಯಾರ ಸೇರಿಸಿ ಕತೆಯಾಗಿ ಮಾರ್ಪಡಿಸಿ ಕಳಿಸಿದ್ದೂ ಇದೆ.

ಮುಂಬಯಿಗೆ ಬಂದ ಆರಂಭದ ವರ್ಷಗಳಲ್ಲಿ ನಾನು ಇರಬೇಕಾಗಿ ಬಂದ ಹೋಟೆಲಿನಲ್ಲಿ ಪತ್ರಿಕೋದ್ಯಮಕ್ಕೆ ಸೇರಿಕೊಳ್ಳಬೇಕು ಎಂಬ ನನ್ನ ಆಸೆಗೆ ಪುಷ್ಟಿಕೊಡಲು ಹಲವಾರು

ಪತ್ರಕರ್ತರ ಸಖ್ಯ ದೊರಕಿತು. ಒಬ್ಬರಂತೂ ನನ್ನ ಹುಟ್ಟೂರಿನವರೇ, ನನ್ನ ಶಾಲೆಯಲ್ಲಿ ಕಲಿತವರು. ಮೊದಲು ಒಂದು ಸಣ್ಣ ಪತ್ರಿಕೆಯಲ್ಲಿದ್ದು ಮುಂದೆ ಪಿಟಿಐ ಸುದ್ದಿ ಸಂಸ್ಥೆಗೆ ಸೇರಿಕೊಂಡು ಕರಾಚಿಯಲ್ಲೂ ಇದ್ದು, ಕೆಲವು ವರ್ಷಗಳಾದ ಮೇಲೆ ಚೀನಾ ಯುದ್ಧದ ಸಂದರ್ಭದಲ್ಲಿ ನಿಫಾ ಗಡಿಯಲ್ಲಿ ಒಂದು ಬಸ್ ಅಪಘಾತದಲ್ಲಿ ಮಡಿದವರು. ಶಿವರಾಮ ಕಾರಂತರು ಮುಂಬಯಿಗೆ ಬರುತ್ತಿದ್ದಾಗಲೆಲ್ಲ ನಾವಿರುತ್ತಿದ್ದ ಹೋಟೆಲಿನಲ್ಲಿ ಇವರೇ ಅತಿಥೇಯರಾಗಿರುತ್ತಿದುದರಿಂದ, ಅಂಥ ಅವಕಾಶಗಳಲ್ಲಿ ಮುಂಬಯಿಯ ಕನ್ನಡ ಸಾಹಿತ್ಯಾಸಕ್ತರೂ ಸೇರುತ್ತಿದ್ದುದರಿಂದ, ನನ್ನ ಸೃಜನಶೀಲ ಪ್ರಜ್ಞೆಯನ್ನು ಪೋಷಿಸಲು ಈ ಸಂಭವಗಳೂ ಸಹಕರಿಸುತ್ತಿದ್ದವು. ಮುಂಬಯಿಯ ಕನ್ನಡೇತರ ಪರಿಸರದಲ್ಲಿ ಕನ್ನಡದ ನಂಟನ್ನು ಉಳಿಸಿಕೊಳ್ಳಲು ಇಂಥ ಸಂದರ್ಭಗಳೂ ಕಾರಣವೆಂದು ಹೇಳಲಷ್ಟೆ ಈ ಉದಾಹರಣೆ.

ಮುಂಬಯಿ ಪರಿಸರದಲ್ಲಿ ನನ್ನ ದೀರ್ಘ ಕಾಲದ ಪತ್ರಿಕೋದ್ಯಮದ ಕನಸನ್ನು ನನಸಾಗಿಸಿದ - ಅದೂ ಕನ್ನಡ ಪತ್ರಿಕೋದ್ಯಮ - ಆಶ್ಚರ್ಯಕರ ಸನ್ನಿವೇಶ ಒದಗಿ ಬಂದದ್ದು ೧೯೪೭ರಲ್ಲಿ. ಸ್ವಾತಂತ್ರ್ಯ ಹೋರಾಟಕ್ಕೆ ಕಾವು ಏರಿದ್ದ ಕಾಲವದು. ೧೯೪೭ ಮೇ ತಿಂಗಳಲ್ಲಿ ಮುಂಬಯಿಯಿಂದ 'ನುಡಿ' ಎಂಬ ಕನ್ನಡ ರಾಜಕೀಯ ಸಾಪ್ತಾಹಿಕ ಪ್ರಕಟವಾಗುವುದೆಂಬ ಸುದ್ದಿ ತಿಳಿದಾಗ ನನಗೆ ತುಂಬ ಆಶ್ಚರ್ಯವಾಯಿತು. ಈ ಪತ್ರಿಕೆ ಕೆಲವು ಉತ್ಸಾಹೀ ತರುಣರ ಸಾಹಸವೆಂದು ನನಗೆ ತಿಳಿದದ್ದು ಪತ್ರಿಕೆ ಪ್ರಕಟವಾದ ಮೇಲೆ. ಈ ಪತ್ರಿಕೆಯ ಗುಂಪಿನಲ್ಲಿದ್ದ ವರು ರಾತ್ರಿ ಶಾಲೆಗಳಲ್ಲಿ ಕಲಿತ ಕೆಲವು ವಿದ್ಯಾರ್ಥಿಗಳು, ಅಧ್ಯಾಪಕರು, ಒಬ್ಬಿಬ್ಬರು ವೃತ್ತಿ ನಿರತರು, ಒಬ್ಬರು ಮಾತ್ರ ಇಂದಿನ ಸುಪ್ರಸಿದ್ಧ ಪತ್ರಕರ್ತ ಎಂ.ವಿ. ಕಾಮತ್ ಅವರು. ನನಗೆ ಪತ್ರಿಕೆಯ ಸಂಪರ್ಕವಿರಲಿಲ್ಲ. ಕಾಮತ್ ನನ್ನ ಹುಟ್ಟೂರಿನವರೇ ಆಗಿದ್ದರೂ ಮುಂಬಯಿಗೆ ಬಂದ ಮೇಲೆ ಅವರ ಸಂಪರ್ಕವಿರಲಿಲ್ಲ. ಅದೇ ವರ್ಷದ ಜೂನ್ ತಿಂಗಳಲ್ಲಿ ನಾಡನ್ನು ವಿಭಜಿಸುವ ಮೌಂಟ್ ಬ್ಯಾಟನ್ ಯೋಜನೆ ಪ್ರಕಟವಾದಾಗ, ಅದನ್ನು ವಿರೋಧಿಸಿ ನನ್ನ ಮೊದಲ ರಾಜಕೀಯ ಲೇಖನವನ್ನು ಬರೆದೆ. ಅದನ್ನು ಈ ಹೊಸ ಪತ್ರಿಕೆಗೆ ಪ್ರಕಟಣೆ ಗೆಂದು ಕಳುಹಿಸಿಕೊಟ್ಟೆ. ಅದೇ ತಿಂಗಳಲ್ಲಿ ಈ ಲೇಖನ 'ನುಡಿ'ಯಲ್ಲಿ ಪ್ರಕಟವಾದಾಗ ಆಗ ಆಡಳಿತ ನಡೆಸುತ್ತಿದ್ದ ಕಾಂಗ್ರೆಸ್ ಸರಕಾರ, ಈ ಲೇಖನವನ್ನು ಗಮನಿಸಿ ಒಬ್ಬ ಪೊಲೀಸು ಅಧಿಕಾರಿಯನ್ನು ಪತ್ರಿಕೆಯ ಕಚೇರಿಗೆ ಕಳುಹಿಸಿ, ಹೀಗೆಲ್ಲ ಬರೆಯತೊಡಗಿದರೆ ಪತ್ರಿಕೆ ತೊಂದರೆಯನ್ನು ಅನುಭವಿಸಬೇಕಾಗಬಹುದು ಎಂಬ ಎಚ್ಚರಿಕೆಯನ್ನು ಕೊಟ್ಟಿತು. ಹೊಸ ಪತ್ರಿಕೆಯವರು ತಮ್ಮ ಲೇಖನಗಳು ಸರಕಾರದ ಗಮನಕ್ಕೆ ಬರುತ್ತಿವೆ ಎಂಬ ಸಂತೋಷದಿಂದ ನನ್ನನ್ನು ಸಂಪರ್ಕಿಸಿ ಹೆಚ್ಚು ಹೆಚ್ಚು ರಾಜಕೀಯ ಟೀಕೆ ಟಿಪ್ಪಣಿಗಳನ್ನು ಬರೆಯಲು ಕೇಳಿಕೊಂಡರು. ಎಂ.ವಿ. ಕಾಮತ್ ಅವರು ಮುಂದೆ ಬರೆದ ತಮ್ಮ ಗ್ರಂಥದಲ್ಲಿ (Behind the b-line) ಈ ವಿಚಾರ ಬರೆದಿದ್ದಾರೆ. ಕೆಲವು ತಿಂಗಳ ಕಾಲ ನಾನು ಸಂತೋಷದಿಂದಲೇ ನನ್ನ ರಾಜಕೀಯ ಚಿಂತನೆಗೆ ಆಕಾರ ಕೊಡಲಾರಂಭಿಸಿದ್ದೆ. ಪತ್ರಿಕೆಯ ಸಂಪರ್ಕ ಹೆಚ್ಚು

ಬೆಳೆದಂತೆ ಅದರ ಸಂಪಾದಕರಾಗಿದ್ದವರು ಏನೋ ಕಾರಣದಿಂದ ಹೊಣೆಗಾರಿಕೆಯನ್ನು ಬಿಟ್ಟ ಮೇಲೆ, ನಾನು ಪತ್ರಿಕೆಯ ಸಂಪಾದಕನಾದೆ. ಇದು ಹೆಚ್ಚಿನ ಜವಾಬ್ದಾರಿಯನ್ನು ವಹಿಸುವಂತಾಗಲು, ನನ್ನ ವೈಚಾರಿಕ ಚಿಂತನೆ ಹದಗೊಳ್ಳಲು, ಸೃಜನಶೀಲ ಪ್ರವೃತ್ತಿ ಕಸುವು ಪಡೆಯಲು ತುಂಬ ಸಹಕರಿಸಿದೆಯೆಂದು ಯಾವ ಸಂಕೋಚವನ್ನು ಇರಿಸಿಕೊಳ್ಳದೆ ಹೇಳುತ್ತೇನೆ. ಪ್ರತಿವಾರ ತಪ್ಪದೆ ಪ್ರಕಟವಾಗುತ್ತಿದ್ದ ಸಮಾಜವಾದದ ಆದರ್ಶವಿದ್ದ ಈ ರಾಜಕೀಯ ಸಾಪ್ತಾಹಿಕ, ಮುಂಬಯಿಯಲ್ಲೂ ಕರ್ನಾಟಕದಲ್ಲೂ ಮೂರು ವರ್ಷ ಕಾಲ ಜನಪ್ರಿಯ ಸಾಪ್ತಾಹಿಕವಾಗಿತ್ತು. ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ಪತ್ರಿಕೆ ಇದಾಗಿತ್ತು. ಶಂಬಾ ಜೋಶಿಯಂಥ ಧೀಮಂತ ಹಿರಿಯರು ತುಂಬ ಮೆಚ್ಚಿಕೊಂಡಿದ್ದ ಪತ್ರಿಕೆ, ಕರ್ನಾಟಕದಲ್ಲೂ ವಿಚಾರವಂತರ ಗಮನ ಸೆಳೆದಿತ್ತು. ನಾನು ಹೊಟ್ಟೆಯ ಪಾಡಿಗಾಗಿ ಮಾಡುತ್ತಿದ್ದ ಕೆಲಸದ ಜತೆಗೆ, ಈ ಪತ್ರಿಕೆಗಾಗಿಯೂ ದುಡಿಯುತ್ತಿದ್ದ ಕಾಲದಲ್ಲಿ ಅಧ್ಯಯನ, ಚಿಂತನೆ, ಬರೆವಣಿಗೆ ಜತೆ ಜತೆಗೇ ಸಾಗಬೇಕಾಗಿದ್ದ ಸನ್ನಿವೇಶದಲ್ಲಿ, ಸಂದರ್ಭ ಪ್ರಜ್ಞೆ, ಹದವರಿತ ಸಮಯ ಮಿತಿಯ ಬರೆವಣಿಗೆ, ಇವನ್ನೆಲ್ಲ ಸಾಧಿಸಬೇಕಾದ ತರಬೇತಿ ನನಗೆ ದೊರಕಿದ್ದು ಈ ಪತ್ರಿಕೆಯ ಮೂಲಕ. ಈ ಸಂದರ್ಭದಲ್ಲಿ ದೇಶ ವಿದೇಶಗಳ ಹಲವಾರು ಪ್ರಮುಖ ಪತ್ರಿಕೆಗಳನ್ನು ಓದುವ ಅವಕಾಶವೂ ದೊರಕಿತು. ಪತ್ರಿಕೆಗೆಂದೇ ಹಲವಾರು ಅಂಕಣಗಳನ್ನು ಆರಂಭಿಸಿ ಮುಂದುವರಿಸಿಕೊಂಡು ಬರಬೇಕಾದ ಸಂದರ್ಭವೂ ಸೃಜನಶೀಲ ಚಿಂತನೆಗೂ ಅವಕಾಶ ಮಾಡಿಕೊಟ್ಟಿತು. ಈ ರೀತಿಯ ಬಿಡುವೇ ದೊರಕದ ಸಂದರ್ಭದಲ್ಲೂ ಕತೆಗಳನ್ನು ಬರೆಯುವ ಹವ್ಯಾಸವನ್ನು ನಾನು ಪೂರ್ತಿ ಬಿಟ್ಟಿರಲಿಲ್ಲ. ಒಮ್ಮೆ ಮುಂಬಯಿಯ ಕೋಮುವಾರು ಗಲಭೆಯಲ್ಲಿ ತಿವಿತದಿಂದ ಗಾಯಗೊಂಡ ವ್ಯಕ್ತಿಯ ತೋಳಿನಿಂದ ಇಳಿಯುತ್ತಿದ್ದ ರಕ್ತವನ್ನು ಕಂಡ ನೋವಿನಿಂದ ಬರೆದ ಒಂದು ಸಣ್ಣ ಕತೆ, ಬೆಂಗಳೂರಿನ 'ಛಾಯ' ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಆ ಕಾಲದಲ್ಲಿ ತಿಂಗಳ ಕತೆಗಳನ್ನು ವಿಮರ್ಶಿಸುವ ಸಂಪ್ರದಾಯವಿದ್ದುದರಿಂದ ಈ ಕತೆ ವಿಶೇಷ ಪ್ರಶಂಸೆಗೂ ಒಳಗಾಗಿತ್ತು. ಈ ಅವಧಿಯಲ್ಲಿ ನನಗೆ ಹೆಚ್ಚು ಬರೆಯಲಾಗದಿದ್ದರೂ ನಾನು ಬರೆದ ಕೆಲವು ಕನ್ನಡದ ಸೃಜನಶೀಲ ಪ್ರವೃತ್ತಿಯನ್ನು ಪೋಷಿಸಿಕೊಂಡು ಬರಲು ಕೊಟ್ಟ ಪ್ರೋತ್ಸಾಹವೆಂದೆ ತಿಳಿದಿದ್ದೇನೆ.

ಮುಂಬಯಿ ಮಹಾನಗರದ ಜನಜೀವನ ಒಬ್ಬ ಸೃಜನಶೀಲ ಲೇಖಕನಿಗಾಗಲೀ, ಕಲಾವಿದನಿಗಾಗಲೀ ಸೃಜನಶೀಲತೆಗೆ ಪ್ರೇರಕಶಕ್ತಿಯಷ್ಟೇ ಅಲ್ಲ, ಅದರ ಜೀವಂತಿಕೆಯನ್ನು ಕಾಪಾಡಿಕೊಂಡು ಬರುವ ಜೀವಧಾತುವೆಂದೇ ನಾನು ತಿಳಿದಿದ್ದೇನೆ. ಇದಕ್ಕೆ ಮುಖ್ಯ ಕಾರಣ ಮುಂಬಯಿಯದೇ ಎನಿಸುವ ಅನುಭವ ಪ್ರಪಂಚ. ಇಲ್ಲಿ ಯಾಂತ್ರಿಕತೆ ರೂಢಿ. ಆದರೆ ಮುಂಬಯಿಯ ಬದುಕಿಗೆ ಸ್ಪಂದಿಸುವ ಜೀವನ ಕ್ರಮದಲ್ಲಿ ಅತ್ಯಂತ ಕುತೂಹಲಕರ ವಿಸ್ಮಯಗಳನ್ನು ಗುರುತಿಸಲು ಸಾಧ್ಯ. ಗ್ರಾಮೀಣ ಸಂಸ್ಕಾರಗಳು ಇಲ್ಲಿ ಪರಿವರ್ತನೆಗೊಳ್ಳುತ್ತ ಸಾಂಪ್ರದಾಯಿಕವೆನಿಸುವ ವಿಷಮತೆಗಳು ಅಳೆಯುತ್ತ, ಇಲ್ಲವೆ ಕಾವು ಕಳೆದುಕೊಳ್ಳುತ್ತ, ವರ್ಗ ವೈಷಮ್ಯ ಅಧ್ಯಯನ ಯೋಗ್ಯ ಹೊಸ ತಿರುವುಗಳನ್ನು ಪಡೆಯುತ್ತ, ಎಲ್ಲ

ಸಂಬಂಧಗಳು ಬದಲಾಗುತ್ತಿರುವ ರೀತಿ ಜೀವನದಲ್ಲಿ ಮಾನವೀಯವೆನಿಸುವ ನೆಲೆಗಳನ್ನೂ ಜೀವನ ಪ್ರೀತಿಯನ್ನೂ ಅರಸುವ ಲೇಖಕನಿಗೆ ತುಂಬ ಖುಷಿ ಕೊಡುವಂಥದು. ಯಂತ್ರವತ್ತಾದ ರೂಢಿಯಲ್ಲೂ ವ್ಯಕ್ತಿ, ಕುಟುಂಬ ಹಾಗೂ ಸಮಾಜ ವಿವಿಧ ಪಾತಳಿಗಳಲ್ಲಿ ತಮ್ಮ ಸಂಬಂಧಗಳನ್ನು ರೂಪಿಸಿಕೊಳ್ಳುವ ಬಗೆ, ಹೊಸ ಹೊಸ ಸಂಸ್ಕಾರಗಳಿಗೆ ತಮ್ಮನ್ನು ಒಡ್ಡಿಕೊಳ್ಳಬೇಕಾದ ಅನಿವಾರ್ಯತೆಯಲ್ಲಿ ಪ್ರಕಟವಾಗುವ ಮಾನವೀಯ ದೌರ್ಬಲ್ಯಗಳು, ಸಂಸ್ಕಾರಗಳು ಇವೆಲ್ಲ ನಿತ್ಯ ಚಿಂತನೆಗೆ ಗ್ರಾಸ ಒದಗಿಸುವಂಥವು. ಸತ್ಯ ಹಾಗೂ ಸೌಂದರ್ಯಗಳನ್ನು ಅರಸುತ್ತಲೇ ಇರಬೇಕಾದ ಒಬ್ಬ ಸೃಜನಶೀಲ ಲೇಖಕನಿಗೆ ಇನ್ನೇನು ಬೇಕು?

ಅನುಭವ ಪ್ರತ್ಯಕ್ಷದ್ದಾಗಿರಲಿ, ಕೇಳಿ ತಿಳಿದುದಾಗಿರಲಿ, ಹೇಗೆ ಸೃಜನಶೀಲ ಚಿಂತನೆಯನ್ನು ಪ್ರಚೋದಿಸುತ್ತದೆ ಎನ್ನುವುದಕ್ಕೆ ನಾನು ಮೇಲೆ ಸೂಚಿಸಿದ ಕತೆಯ ಜತೆಗೆ ಇನ್ನೊಂದು ಉದಾಹಣೆಯನ್ನು ತಿಳಿಯಬಯಸುತ್ತೇನೆ. ನನ್ನ ಹತ್ತಿರದ ಬಂಧುವೊಬ್ಬರನ್ನು ನಾನು ಆಸ್ಪತ್ರೆಗೆ ಸೇರಿಸಬೇಕಾಗಿ ಬಂದು, ಕೆಲವು ದಿನ ಅವರನ್ನು ನೋಡಿಕೊಂಡು ಇರಬೇಕಾದಾಗ, ಆ ಪರಿಸರದಲ್ಲಿ ನಾನು ನೋಡುತ್ತಿದ್ದ ಡಾಕ್ಟರ್, ನರ್ಸುಗಳು ಇತರ ರೋಗಿಗಳು ಇವರೆಲ್ಲರ ವರ್ತನೆಯನ್ನು ಗಮನಿಸುತ್ತ ಬರೆದ ಕತೆ 'ಸಂಪಿಗೆಯ ಹೂ'. ಇಲ್ಲಿ ನನ್ನ ಪ್ರತ್ಯಕ್ಷ ಅನುಭವ ಮುಖ್ಯವಾಗಿರಲಿಲ್ಲ. ದುಡಿಯುತ್ತಿದ್ದಾಕೆ ಒಬ್ಬ ವಿಧವೆ ಯುವತಿ, ತಾನು ಪೋಷಿಸಿಕೊಂಡು ವಿದ್ಯಾಭ್ಯಾಸಕ್ಕೆ ಸಹಕರಿಸಿದ್ದ ಗಂಡನ ತಮ್ಮ ಆತ ವಿದ್ಯಾಭ್ಯಾಸವನ್ನು ಮೇಲ್ಮಟ್ಟದಲ್ಲಿ ಮುಗಿಸಿರುವ ಸಂತೋಷದಲ್ಲಿ ತಾನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದೇಶ ಪ್ರಯಾಣ ಬೆಳೆಸುತ್ತೇನೆ ಎಂದುದು ಆಕೆ ಆಸ್ಪತ್ರೆಯಲ್ಲಿ ಮಲಗಿದ್ದಾಗ; ಆಗಲೇ ಆಕೆ ಕಂಡುಕೊಂಡ ತನ್ನ ಸುಪ್ತ ಚೇತನದಲ್ಲಿ ಅಡಗಿದ್ದ ಸತ್ಯ, ತಾನು ತನ್ನ ಮೈದುನನಲ್ಲಿ ಅನುರಕ್ತಳಾಗಿದ್ದೇನೆ ಎಂದು. ಈ ಕತೆ ೧೯೫೨ರಲ್ಲಿ ಬೆಂಗಳೂರಿನಲ್ಲಿ ನಡೆದ ಕತೆಗಾರ ಕಾದಂಬರಿಕಾರರ ಸಮ್ಮೇಳನದ ಅಂಗವಾಗಿ ಜರುಗಿದ ಕಥಾ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆದಿತ್ತು. ಒಂದು ಸೃಜನಶೀಲ ಮನಸ್ಸಿನಲ್ಲಿ ಅನುಭವವು ಪ್ರತ್ಯಕ್ಷದ್ದಾಗಿರಲಿ, ಪರೋಕ್ಷವಾಗಿ ಬಂದಿರಲಿ, ವಿಚಾರದ ಹುಟ್ಟಿಗೆ ಕಾರಣವಾಗುತ್ತದೆ. ವಿವಿಧ ರೀತಿಯ ಭಾವನೆಗಳ ಉದ್ದೀಪನಕ್ಕೆ ಕಾರಣವಾಗುತ್ತದೆ. ಬುದ್ಧಿ ಇಂಥ ಅನುಭವವನ್ನು ವಿಶ್ಲೇಷಿಸುತ್ತ ಅನುಭವದ ವೈಯಕ್ತಿಕ ಹಾಗೂ ಸಾಮಾಜಿಕ ಆಯಾಮಗಳ ಚಿಂತನೆ ನಡೆಸುತ್ತದೆ. ಮುಂದೆ ಸೃಜನಶೀಲ ಪ್ರತಿಭೆ ಈ ಅನುಭವಗಳನ್ನು ಸಾಹಿತ್ಯಕವೆನಿಸುವ ಪ್ರತಿಮೆಗಳ ಸೃಷ್ಟಿಗೆ, ಸೌಂದರ್ಯದ ಪರಿಕಲ್ಪನೆಗಳಿಗೆ ಹೊಂದಿಕೊಳ್ಳುವ ರೀತಿಯಲ್ಲಿ ನಿರೂಪಿಸಲು ಸಹಕರಿಸುತ್ತದೆ.

ಪತ್ರಿಕೋದ್ಯಮದ ನಡುವೆ ಹಾಗೂ ಮುಂದೆ ನಾನು ಸುಮಾರು ನೂರು ಕತೆಗಳನ್ನು ಬರೆದಿರಬಹುದು. ಅವುಗಳಲ್ಲಿ ಕೆಲವು ಮುಂಬಯಿ ಆಕಾಶವಾಣಿಯವರು ತಮ್ಮ ಗ್ರಾಮೀಣ ಕಾರ್ಯಕ್ರಮಗಳಿಗಾಗಿ ಕೇಳಿ ಬರೆಸಿದಂಥವು. ನನ್ನ ಪತ್ರಿಕೋದ್ಯಮ ಕಾಲದಲ್ಲಿ ರಾಜಕೀಯ ಚಿಂತನೆಯ ಫಲವಾಗಿ ಬರೆದ, ಆರಂಭದ ರಾಷ್ಟ್ರ ವಿಭಜನೆಯನ್ನು ವಿರೋಧಿಸಿ ಬರೆದ ಲೇಖನ ಹಾಗೂ ಅಲ್ಪಸಂಖ್ಯಾತರ ಭವಿಷ್ಯದ ಕುರಿತು ಇನ್ನೊಂದು ಲೇಖನ ಮುಂದೆ ಕಾಲ

ಕಾಲಕ್ಕೆ ನನ್ನ ರಾಜಕೀಯ ಚಿಂತನೆಯ ಫಲಸ್ವರೂಪ ಹಲವಾರು ಲೇಖನಗಳು, ಎರಡು ಸಂಗ್ರಹಗಳಲ್ಲಿ ಪ್ರಕಟವಾಗಿವೆ.

'ನುಡಿ' ಪತ್ರಿಕೆಯ ಹೊಣೆಗಾರಿಕೆಯ ಕಾಲದಲ್ಲಿ ನಾನು ಕಾದಂಬರಿ ಲೇಖಕನಾಗಿ ಕಾಣಿಸಿಕೊಂಡದ್ದು ನನ್ನ ಪತ್ರಿಕೋದ್ಯಮದಂತೆಯೇ ಒಂದು ಆಕಸ್ಮಿಕ. ಪತ್ರಿಕೆ ನಡೆಯುತ್ತಿದ್ದ ಮೂರನೆಯ ವರ್ಷದಲ್ಲಿ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಬೇಕೆಂದು ಒಂದು ಕಾದಂಬರಿಯನ್ನು ಧಾರಾವಾಹಿಯಾಗಿ ಪ್ರಕಟಿಸುವ ನಿರ್ಧಾರ ಮಾಡಲಾಯಿತು. ಉತ್ಸಾಹವೇ ಹೆಚ್ಚಿನ ಬಂಡವಾಳವಾಗಿದ್ದ ಪತ್ರಿಕೆ, ಸಂಭಾವನೆ ಕೊಟ್ಟು ಕಾದಂಬರಿ ಬರೆಸುವಂತಿರಲಿಲ್ಲ. ಹೀಗಾಗಿ ಈ ಹೊಣೆಗಾರಿಕೆಯೂ ನನಗೇ ಬಂದಾಗ ನಾನು ಬರೆದ ಮೊದಲನೆಯ ಕಾದಂಬರಿ 'ಅನುರಕ್ತೆ' ಪತ್ರಿಕೆಯಲ್ಲಿ 'ಕನವರಿಸದ ಕುಂಕುಮ' ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿತ್ತು. ಧಾರಾವಾಹಿ ಪ್ರಕಟವಾಗುತ್ತಿದ್ದಂತೆ ತುಂಬ ಜನಪ್ರಿಯವಾಗಿ ಪತ್ರಿಕೆ ಬೇರೆ ಕಾರಣಗಳಿಂದಾಗಿ ನಿಂತಾಗ ಕಾದಂಬರಿ ನಿಲ್ಲುವಂತಾಯಿತಲ್ಲಾ ಎಂದು ನೊಂದವರು ಹಲವಾರು ಓದುಗರು. ನಾನು ಕಾದಂಬರಿಯನ್ನು ಮುಂದುವರಿಸಿ ಮುಗಿಸಿದ್ದು ಪತ್ರಿಕೆ ನಿಂತು ಒಂದು ವರ್ಷವಾದ ಮೇಲೆ ಮುಂದೆ ಕಾದಂಬರಿ ಪ್ರಕಟವಾದಾಗ ಓದುಗರಿಂದಲೂ, ವಿಮರ್ಶಕರಿಂದಲೂ ತುಂಬ ಉತ್ಸಾಹದ ಪ್ರತಿಕ್ರಿಯೆ ದೊರಕಿದ ಕಾರಣ ನಾನು ಕಾದಂಬರಿಯ ಮಾಧ್ಯಮವನ್ನು ನನ್ನ ಸಾಹಿತ್ಯಕ ಅಭಿವ್ಯಕ್ತಿಗೆ ಹೆಚ್ಚು ಹೆಚ್ಚು ನೆಚ್ಚಿಕೊಳ್ಳಲು ಸಾಧ್ಯವಾಯಿತು. ಇದೇ ಕಾದಂಬರಿ ೧೯೫೮ರ ಮುಂಬಯಿ ಸರಕಾರದ ಒಂದು ಬಹುಮಾನ ಯೋಜನೆಯಂತೆ ಮೊದಲ ಬಹುಮಾನಕ್ಕೆ ಆಯ್ಕೆಯಾದುದೂ ನಾನು ಕಾದಂಬರಿ ಮಾಧ್ಯಮಕ್ಕೆ ಹೆಚ್ಚು ಅಂಟಿಕೊಳ್ಳಲು ಕಾರಣ. 'ಅನುರಕ್ತೆ' ಕಾದಂಬರಿಯನ್ನು ಮುಗಿಸಿದ ಬೆನ್ನಲ್ಲೆ ನಾನು ಬರೆದ ಎರಡನೆಯ ಕಾದಂಬರಿ 'ಹೇಮಂತಗಾನ' ಇದನ್ನು ನಾನು ಬರೆದದ್ದು 'ನುಡಿ' ಪತ್ರಿಕೆಯನ್ನು ನಡೆಸುತ್ತಿದ್ದಾಗ ದೊರಕಿದ ಅನುಭವದಿಂದ.

ನಗರ ಕೇಂದ್ರಿತ ಮಧ್ಯಮ ವರ್ಗದ ಬದುಕೇ ನನ್ನ ಹೆಚ್ಚಿನ ಸಣ್ಣ ಕತೆಗಳಿಗೂ ಕಾದಂಬರಿಗಳಿಗೂ ವಸ್ತುವನ್ನು ದೊರಕಿಸಿಕೊಟ್ಟಿದೆ. ಏಕಾಂತ ಪ್ರವೃತ್ತಿಯನ್ನು ಬೆಳೆಸಿಕೊಂಡು, ತೀರ ಸಂಕೋಚ ಸ್ವಭಾವದಿಂದ ಎಳೆಯ ವಯಸ್ಸಿನಲ್ಲಿ ಮುಂಬಯಿ ಸೇರಿದ ನನಗೆ ಮೊದಲು ಮುಂಬಯಿಯಲ್ಲಿ ದೊರಕಿದ ಒಂದು ರೀತಿಯ ಬಿಡುಗಡೆಯ ಸುಖ, ಮುಂದೆ ಈ ಮಹಾನಗರದಲ್ಲಿ ಸಮ್ಮಿಶ್ರ ಜನ ಜೀವನದ ಸಂಸ್ಕಾರಗಳ ಹೊಸತನವನ್ನು ಗುರುತಿಸುತ್ತ ವಿಸ್ತರಿಸಿಕೊಂಡ ಅನುಭವ ಪ್ರಪಂಚ, ಬಾಲ್ಯದಲ್ಲಿ ಕನವರಿಸುತ್ತಿದ್ದರೂ ಇದು ದೂರದ ನಕ್ಷತ್ರವೇನೋ ಎಂದು ಊಹಿಸಿದ್ದ ಪತ್ರಿಕೋದ್ಯಮದ ನಂಟು ಆಕಸ್ಮಿಕವಾಗಿ ದೊರಕಿದ ಬಗೆ, ಇವೆಲ್ಲ ನನ್ನ ಸಾಹಿತ್ಯಕ ಸೃಜನಶೀಲತೆಗೆ ನೀರೆರೆದಂಥವು. ನನ್ನ ಬರವಣಿಗೆ ಬೆಳೆದು ಬಂದ ರೀತಿಗೆ ಮುಂಬಯಿ ಮಹಾನಗರವನ್ನು ನಾನು ಕಾಣುತ್ತ ಬಂದ ಬಗೆ, ಹಾಗೂ ಇಲ್ಲಿ ದೊರಕಿಸಿಕೊಂಡ ಅನುಭವಗಳೇ ಮುಖ್ಯ ಕಾರಣ. ಮುಂಬಯಿಗೆ ಬಂದ ಹೊಸತಿನಲ್ಲಿ ಈ ಮಹಾನಗರದಲ್ಲಿ ನಾನು ಕಂಡ ಬದುಕಿನ ಹಲವು ಮಗ್ಗುಲುಗಳು, ಮೊದಮೊದಲು ಸರಿಯಾಗಿ

ಅರ್ಥವಾಗದಿದ್ದರೂ ಸೆಳೆಯುತ್ತಿದ್ದ ಜೀವಂತಿಕೆ, ಬೇರೆ ಬೇರೆ ರೀತಿಯ ಜೀವನ ಶೈಲಿಗಳು ಹೊಂದಿಕೊಳ್ಳುತ್ತಿದ್ದ, ಹೊಂದಿಕೊಳ್ಳಲು ಚಡಪಡಿಸುತ್ತಿದ್ದ, ಹೊಸ ಹೊಸ ಆವಿಷ್ಕಾರಗಳನ್ನು ತಳೆಯುತ್ತಿದ್ದ ರೀತಿ, ಸಮ್ಮಿಶ್ರ ಜನ ಜೀವನದಲ್ಲಿ ಸಂಬಂಧಗಳು ಬೆಸೆಯುವ, ಬಿರುಕೊಡೆಯುವ ರೀತಿ, ಗ್ರಾಮೀಣ ಪರಿಸರದ ಕಟ್ಟುಪಾಡುಗಳು ಒಡೆಯುವ, ಬದಲಾಗುವ ಕ್ರಮ, ಜಾತೀಯತೆಯ ನಿರ್ಬಂಧಗಳು ಸಡಿಲವಾಗುವ ರೀತಿ, ಇವೆಲ್ಲ ನನ್ನ ಸಾಹಿತ್ಯ ಕೃಷಿಗೆ ಪ್ರಚೋದನೆ ಕೊಟ್ಟಂಥವು.

ನನ್ನ ಸೌಂದರ್ಯ ಪ್ರಜ್ಞೆಯನ್ನು ಪೋಷಿಸುತ್ತಲೇ ಬಂದ ಮುಂಬಯಿ ನನ್ನ ಬದುಕಿಗೂ ಅರ್ಥ ಕೊಟ್ಟ ಮಹಾನಗರ. ಮುಂಬಯಿಗೆ ಬಂದ ಹೊಸತಿನಲ್ಲಿ ಅಲ್ಲಿನ ಮಲಬಾರ್ ಬೆಟ್ಟದಲ್ಲಿ ನಿಂತು ಬಳಿಯೇ ಮಲಗಿದ್ದ ಅರಬೀ ಸಮುದ್ರವನ್ನು ಕೆಳಗೆ ಚೌಪಾಟಿಯಿಂದ ಮುಂದೆ ಚಾಚಿದ ಮೇರಿನ್ ಡ್ರ್ಯಾವ್‌ದ 'ರಾಣಿಯ ಕಂಠಾಭರಣ'ವೆಂದು ಎಲ್ಲ ಕರೆಯುತ್ತಿರುವ ದೀಪಮಾಲೆಯನ್ನು ನೋಡುತ್ತ ನಿಸರ್ಗ ಆಧುನಿಕ ಜೀವನಕ್ರಮ ಬೆರೆಯುವ ವಿಸ್ಮಯ ಕೊಡುವ ಸಂತೋಷ ಇದು ಎಂದುಕೊಂಡಿದ್ದೆ. ನಾನು ಬರೆಹಗಾರನಾಗಿ ಮುಂದೆ ಬೆಳೆಸಿಕೊಳ್ಳುತ್ತಲೇ ಇದ್ದ ಸೌಂದರ್ಯ ಪ್ರಜ್ಞೆಯಿಂದ ಎಷ್ಟೆಲ್ಲ ಸಂತೋಷವನ್ನು ಅನುಭವಿಸಿದ್ದೇನೆ. ಶಾಲೆಗೆಂದು ತಾಯಿಯ ಕೈ ಹಿಡಿದು ನಡೆಯುವ ಎಳೆಯ ಮಗುವಿನ ಮುಖದಲ್ಲಿ ಮಿಂಚುವ ಆತ್ಮವಿಶ್ವಾಸದ ನಗು, ದುಡಿಯುವ ದಂಪತಿಗಳು ಸುತ್ತಲಿನ ನೂಕು ನುಗ್ಗಲನ್ನೂ ಮರೆತು ಮಾತು ನಗುಗಳಲ್ಲಿ ತನ್ಮಯರಾಗಿ ಸಾಗುತ್ತಿರುವ ದೃಶ್ಯ, ಮಹಾನಗರದ ಜನ ಸಾಂದ್ರತೆಯಲ್ಲೂ ಏಕಾಂತತೆಯನ್ನರಸಿ ಮೇರೀನ್ ಡ್ರ್ಯಾವ್‌ದಲ್ಲೋ, ಜುಹೂ ತೀರದಲ್ಲೋ, ಮಲಬಾರ್ ಬೆಟ್ಟದಲ್ಲೊ, ಕುರುಚಲು ಗಿಡಗಳ ಸಮೂಹವೆಂಬಂತೆ ಮುಂಬಯಿಯಲ್ಲಿ ಅಲ್ಲಲ್ಲಿ ಕಾಣುವ ಪಾರ್ಕುಗಳಲ್ಲೋ, ಎಲ್ಲೆಲ್ಲೂ ತಮಗೆ ಪರಸ್ಪರ ಸಾನ್ನಿಧ್ಯದಲ್ಲಿ ಮಾತು ಮೌನ ಎರಡೂ ಒಂದೇ ಎನ್ನುವಂತಿರುವ ಪ್ರಣಯಿಗಳು, ಮುಂಬಯಿಯ ಅವಸರದ ಜೀವನಕ್ಕೆ ಏನು ಅರ್ಥ ಎಂದು ಹುಡುಕುತ್ತಲೇ ಸುತ್ತಾಡುತ್ತಿರುವ ವೃದ್ಧರು, ಗಿರಿಣಿ ಕಾರ್ಖಾನೆಗಳ ಸೈರನ್ ಸದ್ದೇ ತಮ್ಮ ಬದುಕಿಗೆ ಅರ್ಥ ಕೊಡುವ ಗಂಟೆಗಳೆಂದು ಭಾವಿಸುತ್ತ ಇರಬೇಕಾದ ಕಾರ್ಮಿಕ ವರ್ಗ, ನಿತ್ಯ ಬಾಳೆಯ ಹಣ್ಣು ಮಾರುವ ಕೈಗಾಡಿಯೇ ತನ್ನ ಆಪ್ತಸುಖ ಎಂದು ಅದರಲ್ಲೆ ನಿದ್ದೆ ಹೋಗುವ ಹಣ್ಣು ಮಾರುವಾತ, ಕೈಗಾಡಿಯ ಬಿಡಿಗಾಸಿನ ಸಂಪಾದನೆ ಮುಗಿಸಿ ಅದರಲ್ಲೆ ಬಟ್ಟೆ ಹಾಸಿ ಮಲಗುವ ಬಡಪಾಯಿ, ಅರ್ಧ ಬಿಂದಿಗೆಯ ನೀರಲ್ಲೆ ತನ್ನ ಜೋಪಡಿಯ ಇದಿರ ರಸ್ತೆಯ ಬದಿಯಲ್ಲಿ ಯಾರಿಗೂ ಸಂಕೋಚವಾಗದಂತೆ ಸ್ನಾನ ತೀರಿಸುವ ಮಹಿಳೆ, ಆರ್ಥಿಕ ಮಹತ್ವಾಕಾಂಕ್ಷೆಯ ಮೆಟ್ಟಿಲುಗಳನ್ನು ಏರಲು ತಾವು ಬಳಸುವ ವಾಹನಗಳೇ ತಮ್ಮ ಅಸ್ತಿತ್ವದ ಸಂಕೇತವೆಂಬಂತೆ ಕಾರುಗಳಲ್ಲಿ ಸಾಗುವ ಅಧಿಕಾರಿಗಳು, ಗೋಣಿ ಚೀಲ, ಟಾರ್ಪಲಿನ್, ರಟ್ಟು, ದಪ್ಪ ಕಾಗದಗಳಲ್ಲಿ ಮನೆ ಕಟ್ಟಿಕೊಂಡು ಮುಂದೆ ಅಂತಹ ಮನೆಗಳಿಗೂ ಇದಿರು ರಂಗವಲ್ಲಿ, ಮೇಲೆ ಟೀವಿ ಅಂಟೆನಾ ತಗಲಿಸುವ ಕೊಳೆಗೇರಿ ಜನ, ದಾರಿ ದೀಪಗಳ ಬೆಳಕಿನಲ್ಲಿ ವಿದ್ಯೆ ಕಲಿಯುವ ರಾತ್ರಿ ಶಾಲೆಗಳ ವಿದ್ಯಾರ್ಥಿಗಳು, ಕಾಲದ ಅವಸರದೊಂದಿಗೆ

ಸ್ಪರ್ಧಿಸಬೇಕಾದ ಎಚ್ಚರದಿಂದ ಬೆಳಗಿನ ಜಾವದ ನಿದ್ದೆಗಣ್ಣಿನಲ್ಲೂ ಹೊಸ ದಿನದ ಪ್ರಜ್ಞೆ ತಂದುಕೊಂಡು ಅವಸರದ ದೈನಂದಿನ ರೂಢಿ ಹೊಂದಿಕೊಳ್ಳುವ ಮಹಿಳೆಯರು, ಜೋಪಡಿಗಳಲ್ಲಿ ಅಸಹ್ಯವೆನಿಸಬಹುದಾದ ಬೈಗಳನ್ನು ಒದರುವಾಗಲೂ ನಗುವ ಜೋಪಡಿ ನಿವಾಸಿಗಳು, ಪ್ರಾಯಶಃ ಭಾರತದ ಬೇರೆ ಯಾವ ನಗರದಲ್ಲೂ ಕಾಣಸಿಗದಂತಹ ದುಡಿಮೆಯ ಕುರಿತ ಆಸಕ್ತಿಯಿಂದ, ಹಗಲು ರಾತ್ರಿಗಳ ಭೇದವೇ ಇಲ್ಲವೆಂಬಂತೆ ಓಡಾಡುತ್ತಿರುವ ಸಬರ್ಬನ್ ಗಾಡಿಗಳಲ್ಲಿ, ಬೆಸ್ಟ್ ಬಸ್ಸುಗಳಲ್ಲಿ ದಿನ ರಾತ್ರಿ ಪ್ರಯಾಣಿಸುತ್ತಲೇ ಇರುವ ಲಕ್ಷಗಟ್ಟಲೆ ಜನ, ದಿನದ ದುಡಿಮೆ ಮುಗಿಸಿ ತಾವು ಕಟ್ಟಿಕೊಂಡ ಗೂಡು ಮನೆಗಳಿಗೆಂದು ಚರ್ಚ್‌ಗೇಟ್ ವಿಟಿ ನಿಲ್ದಾಣಗಳಲ್ಲಿ ಸಂಜೆ ಸೇರುವ ಜನಸಾಗರ. ಈ ಸನ್ನಿವೇಶಗಳೆಲ್ಲ ನನ್ನ ಸೌಂದರ್ಯ ಪ್ರಜ್ಞೆಯನ್ನು ಕೆಣಕಿದಂಥವು, ಪ್ರಚೋದಿಸಿದಂಥವು, ಪೋಷಿಸಿದಂಥವು.

ನಾನು ಮುಂದೆ ಬರೆದ ಕಾದಂಬರಿಗಳಲ್ಲಿ 'ಬಂಡಾಯ' ಹಾಗೂ ಇತ್ತೀಚೆಗೆ ಪ್ರಕಟವಾಗಿರುವ 'ಹೆಜ್ಜೆ' 'ಹೇಮಂತಗಾನ' ಎಲ್ಲವೂ ರಾಜಕೀಯ ವಸ್ತುವನ್ನು ಆರಿಸಿಕೊಂಡ ಕಾದಂಬರಿಗಳು. ನನ್ನ ಬಾಲ್ಯದ ಪರಿಸರ ಮುಂದೆ ಓದಿನಿಂದ, ಇವು ಸಂಸ್ಕಾರ, ಬಾಲ್ಯದಿಂದಲೂ ತುಸು ಭಾವನಾತ್ಮಕವಾಗಿ ನಾನು ನನಗೆ ಅಂಟಿಸಿಕೊಂಡಿದ್ದ ರಾಜಕೀಯ ಪ್ರಜ್ಞೆ, ಇವು ನನ್ನ ತುಸು ಎಡ ಪಂಥೀಯವೆನಿಸಬಹುದಾದ ಪ್ರಜ್ಞೆಗೂ ಕಾರಣವಾಗಿರಬಹುದು. ನಾನು ಮುಂಬಯಿಯಲ್ಲಿ ಕಂಡುಂಡ ಕಾರ್ಮಿಕ ಸಂಘರ್ಷದ ಅನುಭವ, ದೇಶದಲ್ಲಿ ಹರಡಿದ ನಕ್ಸಲೀಯ ಚಟುವಟಿಕೆಗಳು, 'ಬಂಡಾಯ' ಕಾದಂಬರಿಗೆ ಪ್ರೇರಣೆ ಕೊಟ್ಟವು. 'ಹೆಜ್ಜೆ....' ಯಲ್ಲಿ ನನ್ನಬಾಲ್ಯದ ನೆನಪುಗಳೂ ನಾನು ಗಾಂಧೀ ಯುಗದ ಇತಿಹಾಸವನ್ನು ಗಮನಿಸುತ್ತ ಬಂದಾಗ ದೊರಕಿದ ಅನುಭವಗಳೂ ಸೇರಿಕೊಂಡು ಸಮಾಜ ಮತ್ತು ಇತಿಹಾಸ ಸ್ಪಂದಿಸುವಾಗ ಆಗುವ ವಿನ್ಯಾಸಗಳನ್ನು ಗುರುತಿಸುವ ಕುತೂಹಲದಿಂದ, ಗಾಂಧೀ ಯುಗದ ಇತಿಹಾಸದ ಮರುಸೃಷ್ಟಿಯ ಉದ್ದೇಶಕ್ಕೆ ಸ್ಫೂರ್ತಿ ಕೊಟ್ಟಂಥವು.

ನಾನು ಬರೆಹಗಾರನಾಗಿ ಬೆಳೆದು ಬಂದ ದಾರಿಯಲ್ಲಿ ಬದುಕನ್ನು ಅದರ ಸಮಗ್ರತೆಯಲ್ಲಿ ಗುರುತಿಸುವ ಕುತೂಹಲವನ್ನು ಇರಿಸಿಕೊಂಡೇ ಬಂದಿದ್ದೇನೆ. ಕೌಟುಂಬಿಕವೆನಿಸುವ ವಸ್ತುಗಳನ್ನು ಆಯ್ದುಕೊಂಡಾಗಲೂ ನಾನು ಅವುಗಳ ಸಾಮಾಜಿಕ ಮುಖವನ್ನು ಗಮನಿಸಿಯೇ ಬರೆಯುತ್ತ ಬಂದಿದ್ದೇನೆ. ಬದುಕಿನಲ್ಲಿ ಅಸ್ಮಿತೆ ಅನನ್ಯತೆಗಳ ಅರ್ಥ ತಿಳಿಯುವ ಕುತೂಹಲದಿಂದ ಬರೆದ ನನ್ನ ಪ್ರಯೋಗಾತ್ಮಕ ಕಾದಂಬರಿ 'ಆಕಾಶಕ್ಕೊಂದು ಕಂದೀಲು'. ನಾನು ಉಳಿಸಿಕೊಂಡೇ ಬಂದಿರುವ ನನ್ನ ರಾಜಕೀಯ ಪ್ರಜ್ಞೆಯಿಂದಾಗಿ ನಾವು ಹಿಡಿದಿರುವ ದಾರಿಯ ಕುರಿತು ನನ್ನ ವಿಚಾರಗಳನ್ನು ವ್ಯಕ್ತಪಡಿಸುವ ಉದ್ದೇಶದ ಎರಡು ರಾಜಕೀಯ ಲೇಖನಗಳ ಸಂಗ್ರಹಗಳು ಪ್ರಕಟವಾಗಿವೆ. ನನ್ನ ಯುರೋಪು ಅಮೆರಿಕಗಳ ಪ್ರವಾಸ ಕಥನ ಪೂರ್ವ ಪಶ್ಚಿಮಗಳ ಸಾಂಸ್ಕೃತಿಕ ಸಂಘರ್ಷವನ್ನು ಪರಿಶೀಲಿಸುವ ಉದ್ದೇಶದಿಂದ ಕೂಡಿದೆ. ವಿಶಿಷ್ಟವೆನಿಸುವ ಸ್ತ್ರೀ ಪಾತ್ರಗಳನ್ನು ಚಿತ್ರಿಸಲು ನಿಮಗೆ ಹೇಗೆ ಸಾಧ್ಯವಾಯಿತು ಎಂದು ಓದುಗರು ಹಾಗೂ ಸಾಹಿತ್ಯ ಮಿತ್ರರು ಕೇಳಿದಾಗ, ಇವರಿಗೆಲ್ಲ ನಾನು ಉತ್ತರ ಹೇಳಬಹುದಾದುದು

ನನ್ನ ಬಾಲ್ಯದ ಸ್ತ್ರೀ ಶೋಷಣೆಯ ನೆನಪುಗಳಲ್ಲಿ, ನನ್ನ ಬದುಕಿನಲ್ಲಿ ನಾನು ತಂದುಕೊಂಡ ಸೌಂದರ್ಯ ಪ್ರಜ್ಞೆಯಲ್ಲಿ.

ಮುಂಬಯಿಯ ಅನುಭವ ಪ್ರಪಂಚ ನನ್ನನ್ನು ಒಬ್ಬ ಲೇಖಕನನ್ನಾಗಿ ರೂಪಿಸಲು ಮಹತ್ವದ ಪಾತ್ರ ವಹಿಸಿತು. ಈ ಅನುಭವದ ಕ್ಷೇತ್ರದಲ್ಲಿ ಪಕ್ವವಾದ ನನ್ನ ಸೃಜನಶೀಲತೆಯಿಂದ ರೂಪುಗೊಂಡ ನನ್ನ ಕತೆ ಕಾದಂಬರಿಗಳನ್ನು ಮೆಚ್ಚಿಕೊಂಡ ಸಾವಿರಾರು ಕನ್ನಡಿಗರನ್ನು ನನಗೆ ಮರೆಯಲಾಗುವುದಿಲ್ಲ. ನನ್ನ 'ಅನುರಕ್ತೆ' ಕಾದಂಬರಿಯ ಸುಮಿತ್ರೆ, 'ಹೇಮಂತಗಾನ'ದ ಭಾರತಿ, 'ವಾತ್ಸಲ್ಯ ಪಥ'ದ ಮಾಲತಿ 'ಉತ್ತರಾಯಣ'ದ ಹೇಮಾ, ಜ್ಯೋತ್ಸ್ನೆಯರು 'ಬಂಡಾಯ'ದ ಯಾಮಿನಿ ಎಲ್ಲಿ ಸಿಗುತ್ತಾರೆ ಎಂದು ಕೇಳಿದ ನೂರಾರು ಓದುಗರ ಪ್ರಶ್ನೆಗಳಿಗೆ ನನ್ನ ಬಳಿ ಉತ್ತರ ಇದೆ; ಇಲ್ಲ ಎನ್ನುವುದು ಜಾಣತನದ ಮಾತೆನಿಸಬಹುದು. ಉತ್ತರಕ್ಕೆ ಕಾರಣವಾಗಿರುವುದು ನನಗೆ ಬದುಕಿನ ಅರ್ಥ ತಿಳಿಯುವ ಕುತೂಹಲವನ್ನು ಮೂಡಿಸಿ ಅವಕಾಶಗಳನ್ನು ಒದಗಿಸಿದ ಮಹಾನಗರ ಮುಂಬಯಿ.

●

## ಕೈಕಾಲು ಮೂಡುವುದು, ಜೀವ ಆಡುವುದು, ಯಾಕೆ ತಿಳಿಯದು!

● ಸವಿತಾ ನಾಗಭೂಷಣ

ನನಗಾಗ ಐದರ ಪ್ರಾಯ. ನನ್ನ ಅಜ್ಜಿಯ ಊರಾದ ಕಾರ್ಕಳದ ಮನೆಯ ಹಿತ್ತಲಿನಲ್ಲಿ ನನ್ನ ಗೆಳತಿಯೊಂದಿಗೆ ಸೇರಿಕೊಂಡು ಹಲಸಿನ ಮರದಲ್ಲಿ ಬುಡದಲ್ಲಿ ತೂಗುತ್ತಿದ್ದ ಮಿಡಿಗಳನ್ನೆಲ್ಲಾ ಕಿತ್ತು ರಾಶಿ ಹಾಕಿ ತರಕಾರಿ ಮಾರುವವಳ ಆಟ ಆಡುತ್ತಿದ್ದೆ. ಯಾಕೋ ಅಲ್ಲಿಗೆ ಬಂದ ನನ್ನ ತಾಯಿ ಒಂದು ಚಣ ಹೌಹಾರಿ ಏನೂ ಮಾಡಲಾಗದೆ ಅಪಾರ ಅಸಹಾಯಕತೆಯಿಂದ ಆ ಮಿಡಿಗಳ ರಾಶಿ ನೋಡಿ, ಮಿಡುಕಿ, ಮಿಡಿಗೊಂದರಂತೆ ಏಟನ್ನು ನನಗೆ ನೀಡಿದರು! ನಾನು ಅಳುತ್ತಾ 'ನನಗೇನೂ ಈ ಮಿಡಿಗಳು ಬೇಕಾಗಿಲ್ಲ, ಬೇಕಾದರೆ ವಾಪಸ್ಸು ಮರಕ್ಕೇ ಅಂಟಿಸು' ಎಂದು ಅಮ್ಮನಿಗೆ ಹೇಳಿದೆ. ನನ್ನ ಮಾತಿನಿಂದ ಪಿತ್ತನೆತ್ತಿಗೇರಿ ನನ್ನ ತಾಯಿ ಮುಳ್ಳುಕಂಟಿಯಿಂದ ಮತ್ತೆ ನಾಲ್ಕು ಬಾರಿಸಿದರು. ಯಾವತ್ತೂ ನನ್ನ ನೆರವಿಗೆ ಬರುತ್ತಿದ್ದ ಅಜ್ಜಿಯೂ 'ಸಮಾ ಆಯಿತು, ಹಾಕು ಇನ್ನೂ ನಾಲ್ಕು' ಎಂದು ಗುಟುರು ಹಾಕಿದರು. 'ಒಂದೊಂದು ಮಿಡಿಯೂ ಎಷ್ಟು ದೊಡ್ಡದಾಗಿ, ಎಷ್ಟು ಸಿಹಿಯಾಗಿ, ಎಷ್ಟು ಜನ ಹಣ್ಣು ತಿನ್ನಬಹುದಿತ್ತು... ನಿನಗೇಕೆ ಈ ಕೆಟ್ಟ ಬುದ್ಧಿ ಬಂತು' ಎಂದು ಬಯ್ದರು. ನಾನು ಅದೆಷ್ಟೋ ಹೊತ್ತು ಅನಾಥವಾಗಿ ಬಿದ್ದಿದ್ದ ಹಲಸಿನ ಮಿಡಿಗಳ ಬಳಿ ಕುಳಿತು ಕಣ್ಣೀರು ಸುರಿಸುತ್ತಲೇ ಇದ್ದೆ. ಎತ್ತರದಲ್ಲಿ ತೂಗುತ್ತಿದ್ದ ದೊಡ್ಡ ದೊಡ್ಡ ಕಾಯಿಗಳನ್ನು ನೋಡುತ್ತಲೇ ನಾನು

ಮಾಡಿದ್ದು ತಪ್ಪು ಎಂದೂ ಅನಿಸುತ್ತಿತ್ತು. ಈ ಗಲಾಟೆಯಲ್ಲಿ ನನ್ನ ಗೆಳತಿ ಅದ್ಯಾವಾಗಲೋ ಜಾಗ ಖಾಲಿ ಮಾಡಿದ್ದಳು. ಕತ್ತಲು ಕವಿದು.. ಕೊನೆಗೆ ನನ್ನ ಅಜ್ಜಿ ಬಂದು ಕರೆದುಕೊಂಡು ಹೋಗುವ ತನಕ ಅಲ್ಲಿಯೇ ಕುಳಿತಿದ್ದೆ. ಒಂಟಿತನವನ್ನು ಜೀವನದಲ್ಲಿ ಮೊಟ್ಟಮೊದಲಿಗೆ ಎದುರುಗೊಳ್ಳುವಂತಾಗಿತ್ತು. ಎಲ್ಲರ ಸಿಟ್ಟು ಇಳಿದ ಮೇಲೆ, ಮೆಲ್ಲನೆ ಅಜ್ಜಿಯ ಕಿವಿಯಲ್ಲಿ ಪಿಸುಗುಟ್ಟಿದೆ. 'ಅಲ್ಲಾ.. ಅಷ್ಟು ದೊಡ್ಡ ಮರದಲ್ಲಿ ಅಷ್ಟು ಬುಡದಲ್ಲಿ... ನನ್ನ ಕೈಗೂ ಎಟಕುವಂತೆ ಮಿಡಿಗಳೇಕೆ ಬಿಡಬೇಕು? ನನಗೇನೋ ಬುದ್ಧಿಯಿಲ್ಲ, ನಾನು ಚಿಕ್ಕವಳು, ಮರಕ್ಕೆ ಬುದ್ಧಿ ಬೇಡವೇ? ಅಷ್ಟು ಎತ್ತರ ಬೆಳೆದಿದೆಯಲ್ಲ.. ದಂಡಕ್ಕೆ.. ' ಎಂದೆ.

'ಸಾಕು ಮಾಡು ಕಾನೂನು, ಮಲಗು' ಎಂದರು ಅಮ್ಮ.

ಅಜ್ಜಿ ಏನೂ ಹೇಳದೆ ಸುಮ್ಮನೆ ಬೆನ್ನುತಟ್ಟಿ, ನಾಳೆ ರಾಮಫಲ ತಿನ್ನುವಿಯಂತೆ ಮಲಗಿಕೋ ಎಂದರು.

ಇವತ್ತಿಗೂ ನನಗೆ ಕೀಳುವುದೆಂದರೆ ಹಿಂಸೆ. ಹಣ್ಣು ಮರದಲ್ಲೇ ಇರಲಿ, ಹೂವು ಗಿಡದಲ್ಲೇ ಇರಲಿ ಎಂದು ಅನಿಸುವುದು.

ಆ ಮರ, ಮಿಡಿ, ಕತ್ತಲು, ಒಂಟಿತನ, ಅಳು, ತಪ್ಪಿತಸ್ಥ ಭಾವನೆ ಇನ್ನೂ ನನ್ನಲ್ಲಿದೆ.. ಇದೀಗ ಈಗಷ್ಟೇ ನಡೆದಿದೆ ಹಿಂದೆ ಅನ್ನುವಂತೆ... ಯಾಕೆ??

ನನಗಾಗ ಆರು ವರುಷಗಳಿರಬಹುದು. ಶಿವಮೊಗ್ಗೆಯ, ಜಯನಗರದ ಬಾಡಿಗೆ ಮನೆಗೆ ಹೊಸದಾಗಿ ಬಂದಿದ್ದೆವು. ಪುಟ್ಟ ಹೆಂಚಿನಮನೆ. ಮನೆಯಲ್ಲಿ ಅಟ್ಟವಿತ್ತು. ಅದಕ್ಕೆ ಹೊಂದಿ ಕೊಂಡು ಮರದ ಏಣಿ. ಸುಲಭವಾಗಿ ಹತ್ತಬಹುದಿತ್ತು. ನಾನು ಹಿರಿಯರ ಕಣ್ಣು ತಪ್ಪಿಸಿ ಅಟ್ಟಹತ್ತಿದೆ. ಅಟ್ಟದ ಮೇಲೆ ಪುಟ್ಟ ಕಿಟಕಿ. ಕಿಟಕಿಯಲ್ಲಿ ಕಣ್ಣುಹಾಕಿದೆ. ಘಮ್ಮೆನ್ನುವ ರಾತ್ರಿರಾಣಿ ಗಿಡ. ಅಬ್ಬಾ.. ಎಷ್ಟು ಚಂದ, ಈ ಗಂಧ, ಸುಗಂಧ, ಎಂದು ಪರಿಮಳ ಹೀರುತ್ತಾ ಧಡಧಡ ಇಳಿದು ಬಂದು, 'ಅಜ್ಜಿ.. ಕಿಟಕಿಯ ಬಳಿ ಚಂದದ ಗಿಡವಿದೆ. ಹೂವಿದೆ' ಅಂದೆ. ಅಜ್ಜಿ ಹೂವಿನ ವಾಸನೆ ಹಿಡಿದು 'ರಾತ್ರಿರಾಣಿ' ಸರ್ಪದ ಕಾಟ ಇರಲಿಕ್ಕೂ ಸಾಕು ಅಂದರು. ಸರ್ಪದ ಹೆಸರು ಕೇಳಿ ನಾನು ನಡುಗಿದೆ. ನನ್ನ ಉತ್ಸಾಹ, ಆನಂದ ಜರ್‍ರೆಂದು ಅಟ್ಟದಿಂದ ಇಳಿದು ನೆಲಕ್ಕೆ ಬಿದ್ದಿತು.

ಆ ಅಟ್ಟ, ಆ ಹೂವು, ಆ ಗಂಧ, ಆ ಭಯ, ಆ ನಿರಾಶೆ ಇನ್ನೂ ನನ್ನಲ್ಲಿದೆ ಯಾಕೆ?

ನನಗಾಗ ಎಂಟು ವರುಷಗಳಿರಬಹುದು. ನಾನು, ನನ್ನ ಗೆಳತಿ ಹೊಂಡದ ಮೀನುಗಳನ್ನು ಎಣಿಸುತ್ತಾ, ಕಬ್ಬು ಜಗಿಯುತ್ತಾ, ಶಿವಮೊಗ್ಗೆಯ ರೈಲ್ವೆ ಹಳಿಯ ಪಕ್ಕ ತಾಗಿದಂತೆ ಹರಿದು ಹೋಗುತ್ತಿದ್ದ ಹಳ್ಳವನ್ನೇ ಅನುಸರಿಸುತ್ತಾ ಅದೆಷ್ಟೋ ದೂರ ಸಾಗಿದ್ದೆವು. ಒಂದು ಮೈಲು ಸವೆದಿರಬಹುದು. ತೋಟದ ಗುಂಡಿಯೊಂದರ ಬಳಿ ನಾಲ್ಕಾರು ಜನ ಜಾಲಾಡುತ್ತಿದ್ದರು. ಕೊನೆಗೆ ಜುಟ್ಟು ಹಿಡಿದು ನಾಲ್ಕು ವರುಷದ ಮಗುವಿನ ಹೆಣ ಹೊರತೆಗೆದರು. ತೋಟದ ತುಂಬಾ ಮಗುವಿನ ತಾಯಿಯ ರೋದನ ಅನುರಣಿಸಿತ್ತು.

ರೈಲು, ಹಳ್ಳ, ಮೀನು, ಕಬ್ಬಿನ ಸಿಹಿ ಎಲ್ಲವನ್ನೂ ಆ ಅಳು ನುಂಗಿ ಹಾಕಿತ್ತು. ಅನಿರೀಕ್ಷಿತ ವಾಗಿ ಸಾವಿನ ಪರಿಚಯವಾಗಿತ್ತು.

ಆ ಹಳ್ಳ, ಆ ಮೇಲೆ, ಆ ಮಗುವಿನ ಹೆಣ, ಆ ರೋದನ ಎಲ್ಲವೂ ಈಗಲೂ ನನ್ನಲ್ಲಿದೆ. ಯಾಕೆ?

ನನಗಾಗ ಹತ್ತು ವರುಷವಿರಬಹುದು. ನಾನೂ, ನನ್ನ ಅಕ್ಕ ಶಿವಮೊಗ್ಗೆಯ ಸರ್ಕೀಟ್ ಹೌಸ್ ರಸ್ತೆಯಲ್ಲಿ ಸಾಲುಮರಗಳಿಂದ ಅಂಟು ಕಿತ್ತು ಬಾಟಲು ತುಂಬಿಸುತ್ತಾ ಮುನ್ನಡೆದಿದ್ದೆವು. ಅಂಟು ಸಾಕಷ್ಟು ತೆಗೆದಾಗಿತ್ತು. ಮನೆಯ ದಾರಿ ದೂರವಿತ್ತು. ನನ್ನಕ್ಕ, 'ನಡೀ.. ಹಗಲು ಕನಸು ಕಾಣುತ್ತಾ ಹೋಗುವ.. ಮನೆ ತಲುಪಿದ ಮೇಲೆ ಪರಸ್ಪರ ಕನಸು ಹಂಚಿಕೊಳ್ಳುವ..' ಅಂದಳು. ಅವಳಿಗಾಗ ಹದಿನಾಲ್ಕು. ಕಂಡಾಪಟ್ಟೆ ಕಥೆ ಪುಸ್ತಕ ಓದುತ್ತಿದ್ದ ಅವಳು ಅದೇನು ಕಲ್ಪಿಸಿ ಹೇಳಿದಳೋ... ನಾನು ಬರಿದೇ ಹೂಂಗುಟ್ಟಿದೆ. ಹಗಲುಗನಸು ಎಂಬ ಪದವನ್ನು ಎದುರುಗೊಂಡಿದ್ದೇ.. ಮೊದಲು. ಇಬ್ಬರೂ ಮಾತಿಲ್ಲದೆ ಮರಗಳನ್ನು ದಾಟಿಕೊಂಡು ಮನೆ ತಲುಪಿದೆವು. ಅವಳ ಕನಸಿನಲ್ಲಿ ತೋಟವಿತ್ತು. ಜೋಕಾಲಿಯಲ್ಲಿ ಜೀಕಿಕೊಂಡು ಬೂಂದಿ ತಿನ್ನುತ್ತಿದ್ದಳು. ಆನೆ, ಮೊಲ ಇತ್ಯಾದಿಗಳು ಕಾಣಿಸಿಕೊಂಡವು. ಬಗೆಬಗೆಯ ಹೂವುಗಳು. ಮೊದಲೇ ಹೇಳಿದ ಹಾಗೆ... ಹಗಲುಗನಸು ನಮಗೆ ಹೊಸದು. ಕನಸು ಕಾಣಲಾಗಲಿಲ್ಲ ಎಂದರೆ ಅಭಿಮಾನಕ್ಕೆ ಪೆಟ್ಟು. ಅವಳ ಕನಸನ್ನೇ ಆಧರಿಸಿ ಬಣ್ಣ ಬಣ್ಣ ಕಟ್ಟಿ ನಾನೂ ರೀಲು ಬಿಟ್ಟೆ.

ಆ ಕನಸು, ಕಲ್ಪನೆ.... ನೆನೆದರೆ ನಗು ಬರುವುದಾದರೂ ಈಗಲೂ ನನ್ನಲ್ಲಿದೆ ಯಾಕೆ?

ನನಗಾಗ ಹತ್ತು ಹನ್ನೊಂದರ ಆಸುಪಾಸು. ನಾವು ನಾಲ್ವರು ಮಕ್ಕಳು. ಹೊಟ್ಟೆಗೂ-ಬಟ್ಟೆಗೂ ಪರದಾಟ. ಮನೆವಾರ್ತೆ ತೂಗಿಸಲು ಅಮ್ಮ ಹೆಣಗುತ್ತಿದ್ದುದು ನನಗೆ ಅರ್ಥವಾಗುತ್ತಿತ್ತು. ತಮ್ಮಂದಿರು, ತಂಗಿ ಚಿಕ್ಕವರು ನಿರಾಳವಾಗಿರುತ್ತಿದ್ದರು. ನನಗೆ ಅರ್ಥವಾದರೂ ಏನೂ ಮಾಡಲಾಗದ ಅಸಹಾಯಕತೆ. ಕಳವಳ, ಅಭದ್ರತೆ ನಿವಾರಿಸಿಕೊಳ್ಳಲು ಪುಸ್ತಕಗಳನ್ನು ಅರಸಿಕೊಂಡು ಎರಡು-ಮೂರು ಮೈಲಿ ದೂರವಿದ್ದ ಗೆಳತಿಯ ಮನೆಗೆ ಹೋಗುತ್ತಿದ್ದೆ. ಆ ಗೆಳತಿ ಶ್ರೀಮಂತಳು, ವೈದ್ಯರ ಮಗಳು. ಆ ಬಂಗಲೆ, ಆ ಕಾರು, ನಾಯಿ, ತಟ್ಟೆಯಲ್ಲಿ ಜೋಡಿಸಿಟ್ಟ ಬಿಸ್ಕತ್ತುಗಳು, ಟೀ ಕೆಟಲ್, ಅವಳ ಮನೆಯ ಆಯಾ ಎಲ್ಲವೂ ನನಗೆ ಅಚ್ಚರಿಯ ಸಂಗತಿಗಳು. ಅವಳಿಗೆ ಪ್ರತ್ಯೇಕ ಕೊಠಡಿ ಬೇರೆ ಇತ್ತು. ಅಲ್ಲಿ ಕುಳಿತು ಪುಟ್ಟ ಕೆಂಚಮ್ಮ, ನಿದ್ರಾಸುಂದರಿ, ಸಿಂಡ್ರೆಲ್ಲಾ, ಪಿನೋಕಿಯೋ, ರಾಮು ಮತ್ತು ಅವರೆಗಿಡ ಮುಂತಾದ ಸಚಿತ್ರಮಾಲಿಕೆಗಳನ್ನು ಓದಿ ಮೈಮರೆಯುತ್ತಿದ್ದೆ.

ಕಷ್ಟವನ್ನು ದಾಟಬಹುದು ಎಂದು ಪುಟ್ಟಕೆಂಚಮ್ಮ, ಸಿಂಡ್ರೆಲ್ಲಾ.. ಅಂದು ಭರವಸೆ ಮೂಡಿಸಿದರು.

ಅವರು ಈಗಲೂ ನನ್ನಲ್ಲಿದ್ದಾರೆ... ಯಾಕೆ?

ನನಗಾಗ ಹದಿನಾಲ್ಕರ ವಯಸ್ಸು. ಒಂದು ದಿನ ಶಾಲೆಯಿಂದ ಹಿಂದಿರುಗಿ ಬಂದಾಗ ಅಡಿಗೆ ಮನೆಯಲ್ಲಿ ಮೌನವಾಗಿ ಕೂತು ಉಣ್ಣುತ್ತಿದ್ದ ಹೆಂಗಸೊಬ್ಬಳನ್ನು ನೋಡಿದೆ. ಆಕೆ ದೂರದ ಸಂಬಂಧಿ ಎಂದು ಆಮೇಲೆ ಗೊತ್ತಾಯಿತು. ಒಂದು ಕಾಲದಲ್ಲಿ ೫೦೦ ಮುಡಿ

ಅಕ್ಕಿ ಗೇಣಿ ಪಡೆಯುತ್ತಿದ್ದವಳೆಂದೂ ಈಗ ಒಂದು ಹಿಡಿ ಅನ್ನಕ್ಕೂ ಗತಿಯಿಲ್ಲವೆಂದೂ ಅಜ್ಜಿ ಅವಳ ಕರುಣಕಥೆ ಹೇಳಿದರು. ಒಂದು ವಾರ ಹೇಗೋ ಹೊಂದಿಸಿ ಒಂದು ಹೊತ್ತು ಅವಳಿಗೆ ಊಟ ಹಾಕುವುದಕ್ಕೆ ಅಜ್ಜಿ-ಅಮ್ಮನ ನಡುವೆ ಒಪ್ಪಂದವಾಯಿತು. ಅಜ್ಜಿ, ಅಮ್ಮ ಅವರ ಊಟದ ಪಾಲಿನಲ್ಲಿ ಎರಡು ತುತ್ತು ತ್ಯಾಗ ಮಾಡಿರಲಿಕ್ಕೂ ಸಾಕು!.

ಶ್ರೀಮಂತರಿಗೆ ಕಷ್ಟ ಬರಬಾರದು! ಹೇಗಿದ್ದವಳು ಹೇಗಾದಳು?! ಒಂದು ಹಿಡಿ ಅನ್ನಕ್ಕಾಗಿ ನಮ್ಮ ಮನೆಯ ಬಾಗಿಲಿಗೆ ಬರುವಂತಾಯಿತೆ? ಎಂದು ಅಜ್ಜಿ-ಅಮ್ಮ ಆಕೆಗಾಗಿ ದುಃಖಿಸುತ್ತಿದ್ದರು.

ಆ ಹೆಂಗಸಿನ ಆ ನಿರ್ಭಾವ ಮುಖ ಇವತ್ತಿಗೂ ನನ್ನಲ್ಲಿದೆ ಯಾಕೆ?

ನನಗಾಗ ಹದಿನೆಂಟರ ವಯಸ್ಸು. ಅದೇ ತಾನೆ ಕೆಲಸಕ್ಕೆ ಸೇರಿದ್ದೆ. ಒಂದು ದಿನ ಬೆಳಿಗ್ಗೆ ಕೌಂಟರಿನಲ್ಲಿ ಕುಳಿತು ಕೆಲಸ ನಿರ್ವಹಿಸುತ್ತಿದ್ದಾಗ ಪುಟ್ಟ ಹುಡುಗನೊಬ್ಬ ಬಂದು ಕೆಂಪು ಗುಲಾಬಿ ನೀಡಿದ, ಮಾರನೆಯ ದಿನ ದಾಳಿಂಬೆ ಹಣ್ಣು, ಅದರ ಮೂರನೆಯ ದಿನ 'ಈದ್'ಗೆ ಮನೆಗೆ ಬರಬೇಕೆಂಬ ಆಹ್ವಾನ. ಮರುದಿನ ಅಂಚೆಯಲ್ಲಿ ಪತ್ರ. ಆ ಪುಟ್ಟ ಹುಡುಗನ ಹಿಂದೊಬ್ಬ ದೊಡ್ಡ ಹುಡುಗನಿದ್ದ..... ಆ ಮುಸ್ಲಿಂ ಹುಡುಗ ಅಚ್ಚ ಕನ್ನಡದಲ್ಲಿ ಬರೆದಿದ್ದ ಆ ಪತ್ರದಲ್ಲಿ ಬಂಗಡೆ ಮೀನು, ಗುಳ್ಯ, ಸಮುದ್ರದ ಹಿನ್ನೀರು, ಅವನ ಅಕ್ಕತಂಗಿಯರ ವಿವರ! ನಾನು ಎಚ್ಚೆತ್ತುಕೊಂಡೆ. ಎಲ್ಲಾದರೂ ಈ ಸುದ್ದಿ ಸೋರಿ ಅವನಿಗೆ ದಂಡನೆಯಾದ ರೇನು ಗತಿ ಎಂದು ಆಲೋಚಿಸಿ 'ನನಗೆ ಪತ್ರ ಬರೆಯಬೇಡ, ಒಳ್ಳೆಯ ಕೆಲಸ ಹಿಡಿದು ಸುಖವಾಗಿ ಬಾಳು, ನನಗೆ ಮದುವೆ ಗೊತ್ತಾಗಿದೆ' ಎಂದು ಸುಳ್ಳು ಸುಳ್ಳೇ ಬರೆದೆ. ಎರಡು ವರುಷ ಕಳೆದ ಮೇಲೆ ದುಬಾಯ್‌ನಿಂದ ಪತ್ರ ಬಂತು. ಅವನಿಗಲ್ಲಿ ಕೆಲಸ ಸಿಕ್ಕಿತ್ತು. ಒಮ್ಮೆ ಪಾರ್ಸಲ್ ಕೂಡ ಕಳಿಸಿದ್ದ. ಹೇರುಪಿನ್ನುಗಳು, ಸೆಂಟು, ನೈಲ್ ಕಟರ್, ನೈಲ್ ಪಾಲಿಷ್ ಇದ್ದವು. ಅವನ ಪೆದ್ದು-ಮುಗ್ಧ ಪ್ರೇಮಕ್ಕೆ ನಾನು ವಿವಶಳಾಗಿದ್ದು ನಿಜ. ಅವನಲ್ಲಿ ಪ್ರೇಮಭಾವ ಹುಟ್ಟಿಸಿದ್ದಕ್ಕೆ..... ನನ್ನ ಮೇಲೆ ನನಗೆ ಸಿಟ್ಟು ಬಂದು ಅವನಲ್ಲಿ ಕ್ಷಮೆ ಯಾಚಿಸಬೇಕು ಎಂದೆನಿಸಿದ್ದೂ ಉಂಟು.

ಆ ಹುಡುಗನ ನೆನಪು ಈಗಲೂ ನನ್ನಲ್ಲಿದೆ.... ಯಾಕೆ?

ನನಗಾಗ ಮೂವ್ವತ್ತರ ವಯಸ್ಸು. 'ಬೆಳ್ಳಿ' ತೀರಿಕೊಂಡಳು ಎಂದು ಸುದ್ದಿ ಬಂತು. ಹೆರಿಗೆ ಮಾಡಿಸಿ, ಮೂರು-ನಾಲ್ಕು ತಿಂಗಳು ಅಲ್ಲಿಯೇ ಇದ್ದು ಬಾಣಂತಿ-ಮಗುವನ್ನು ಉಪಚರಿಸಿ ನಂತರ ಮತ್ತೊಂದು ಹೆರಿಗೆ ಮನೆ ಹುಡುಕಿಕೊಂಡು ಹೋಗುವುದನ್ನೇ ಕಾಯಕ ಮಾಡಿಕೊಂಡು ಅದರಲ್ಲೇ ಜೀವ ತೇದ ಆ ಮುದುಕಿ, ಇಳಿಗಾಲದಲ್ಲಿ ಯಾರೂ ಇಲ್ಲದೆ ನೊಂದು ಬೆಂದು ಕೆರೆಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ನೂರು ಮಕ್ಕಳನ್ನು ಜಗತ್ತಿಗೆ ಪರಿಚಯಿಸಿದ ಮಹಾಮಾಯಿಗೆ ಒಂದು ಹಿಡಿ ಕೂಳು, ಒಂದು ಚೂರು ಸೂರು ಸಿಗಲಿಲ್ಲವೆಂದರೆ.... ಬದುಕಿನ ಈ ವೈರುಧ್ಯವನ್ನು ಹೇಗೆ ವಿಶ್ಲೇಷಿಸುವುದು?

ಅವಳು ಈಗಲೂ ನನ್ನಲ್ಲಿದ್ದಾಳೆ. ಯಾಕೆ?

ನನಗೀಗ ನಲವತ್ತು...... ಬಮಿಯಾನಿನ ಬೆಟ್ಟದಲ್ಲಿ ನಿಂತಿದ್ದ ಜಗತ್ತಿನ ಅತಿ ಎತ್ತರದ ಬುದ್ಧ ನೆಲಕ್ಕುರುಳಿದ ದಿನ ಮನಸ್ಸಿಗೆ ಮಂಕು ಕವಿಯಿತು. ಕಾರುಣ್ಯಮೂರ್ತಿಗೂ ಇಂಥಾ ಕೊನೆ...... ಬುದ್ಧ ಉರುಳಿದ ದಿನವೇ ಯುದ್ಧಕ್ಕೆ ನಾಂದಿಯಾಗಿರಬೇಕು!

ಯಾವುದೋ ದೇಶದಲ್ಲಿ ಯಾವುದೋ ಬೆಟ್ಟದಲ್ಲಿ.... ಶಿಥಿಲವಾಗಿದ್ದ ಕಲ್ಲಿನ ಮೂರ್ತಿಯೊಂದು ಉರುಳಿದರೆ ನಾನೇಕೆ ಘಾಸಿಕೊಳ್ಳಬೇಕು?

ಈಗಲೂ ಆ ಬೆಟ್ಟ, ಆ ಬುದ್ಧ ನನ್ನಲ್ಲಿದ್ದಾನೆ ಯಾಕೆ?

ಹೀಗೆ ಸಣ್ಣಸಣ್ಣ ಸಂಗತಿಗಳು ಕಸ, ಕಡ್ಡಿ, ಎಲೆ, ಹೂವು ಕೊಂಬೆ, ರೆಂಬೆಗಳಂತೆ ಜೀವ ಪ್ರವಾಹದಲ್ಲಿ ತೇಲಿ ತೇಲಿ ಹೋಗುವುದು. ಮನಃ ಪಟಲದ ಮೇಲೆ ಮೂಡುವ ನೂರಾರು ಚಿತ್ರ-ವಿಚಿತ್ರಗಳಲ್ಲಿ ಯಾವುದೋ ಒಂದು ಬೇರ್ಪಡಿಸಲಾಗದಂತೆ ಭಿತ್ತಿಗೆ ಅಂಟಿಕೊಳ್ಳುವುದು. ಅದಕ್ಕೆ ಕೈಕಾಲು ಮೂಡುವುದು, ಜೀವ ಆಡುವುದು. ಯಾಕೆ ಆಡುವುದೋ.... ತಿಳಿಯದು.

●

## ನನ್ನೊಳಗೆ ಜೋಗಿ ಪ್ರಜ್ಞೆಯಾಗಿರುವ ಅಪ್ಪ

● ಎಸ್ ಜಿ ಸಿದ್ಧರಾಮಯ್ಯ

ನಾನು ಬಿಎ ಓದುತ್ತಿದ್ದಾಗ ನನಗೆ ಪದ್ಯ ಬರೆವ ಗೀಳು ಹಿಡಿಯಿತು. ಆಗ ನನಗೆ ಪ್ರಭಾವ ಬೀರಿದ್ದ ಕವಿ ಕುವೆಂಪು. ಅವರ ನಾಟಕ ಕವನಗಳನ್ನ ಓದಿ ತುಂಬಾ ಪ್ರಭಾವಿತನಾಗಿದ್ದೆ. ಅದರಲ್ಲೂ ಅವರ 'ನೇಗಿಲಯೋಗಿ' ಕವನ ತುಂಬಾ ಇಷ್ಟವಾಗಿತ್ತು. ಅದಕ್ಕೆ ಕಾರಣ ನಾನು ಬಂದ ಹಿನ್ನೆಲೆ. ನಾನು ಹಳ್ಳಿಯಿಂದ ಬಂದೋನು. ಅದರಲ್ಲೂ ಚೂರುಪಾರು ಭೂಮಿಕಾಣೆ ಇದ್ದ ಬಂಗಬಡತನದ ರೈತಾಪಿ ಕುಟುಂಬ. ನಾನು ಹೈಸ್ಕೂಲಿಗೆ ಬರೋಹೊತ್ತಿಗೆ ಬ್ಯಾಸಾಯ ವೊಡಿಯಾದ ವೈನಾಗೇ ಕಲ್ತಿದ್ದೆ. ಬ್ಯಾಸಾಯದ ಕಾಲದಾಗೆ ಮಟಕ್ಕೋಗಕೆ ಮುಂಚೆ, ಸಗಣಿ ಗುಡಿಸಿ ನಾಕುಬಳುಸಾಲು ಉಕ್ಕೆವೊಡದು, ಆಮ್ಯಾಲೆ ನಮ್ಮಪ್ಪ ಬ್ಯಾಸಾಯತಕೆ ಬಂದಾಗ ನಮ್ಮಪ್ಪನ ಕೈಗೆ ನೇಗಿಲು ಕೊಟ್ಟು, ಇಸ್ಕೂಲಿಗೆ ವೊಡೋಗ್ಬೇಕಾಗಿತ್ತು. ಪ್ರಾರ್ಥನೆ ವೊತ್ತಿಗೆ ಹೋಗಲಿಲ್ಲಾಂದ್ರೆ ಹತ್ತು ನಿಮಿಷ ಬಿಸಲಲ್ಲಿ ನಿಲ್ಲೋದು, ಇಲ್ಲ ಪಾನಬಗ್ಗೋದು ಈ ಶಿಕ್ಷೆ ಅನುಭವಿಸಬೇಕಾಗಿತ್ತು. ಅದೆಷ್ಟು ದಿವಸ ಪಾನಬಗ್ಗಿದ್ದೆನೋ! ನನಗೆ ಓದೋದಕ್ಕಿಂತ ಬ್ಯಾಸಾಯ ಮಾಡೋದೂಂದ್ರೆ ಬಲೇ ಖುಷಿ. ಮೇಣಿ ಹಿಡಿದು ನೇಗಿಲ ಹೋಡೀತಿದ್ರೆ ಅಕ್ಕಪಕ್ಕದೋರೆಲ್ಲ 'ನೋಡೋ, ಗುರುಬತ್ತಣ್ಣನ ಮಗ ಉಕ್ಕೆಗೆರೆ ಎಂಗ್ ವೊಡಿತಾನೆ, ಎಲೆಕವಳಿಗೆ ಜೋಡಿಸಿದಂತೆ ಉಕ್ಕೆಸಾಲು' ಅಂತಿದ್ರು. ನಾನು ಹಿಗ್ಗಿ ಹೀರೆಕಾಯಾಗ್ತಿದ್ದೆ. ಇಷ್ಟಾದರೂ ನನಗೆ ಬಹಳ ಹಿಂಸೆ ಕೊಡ್ತಿದ್ದ ಕೆಲಸಾಂದ್ರೆ, ಬೇಸಾಯ ಬಿಟ್ಟಮೇಲೆ ದನ

ಮೇಯಿಸೋದು. ನೇಗಿಲ ಹಿಂದೆ ಉಕ್ಕೆ ಹೊಲದೊಳಗೆ ಸುತ್ತಿದ ಆಯಾಸ ಅಂತದರಾಗೆ ಮತ್ತೆ ಉರಿಬಿಸಿಲಿನಾಗೆ ಹೊಲದ ಒಬ್ಬೇಲಿ ದನ ಹಿಡಕೊಂಡು ಮೇಯಿಸೋದೂಂದ್ರೆ ಜುಗುರ್ಕೆ ಬರ್ತಿತ್ತು. ಕೆಲವೊಂದು ದಿನಗಳಲ್ಲಿ ಹೊತ್ತಿಗೆ ಮುಂಚೆ ಬೇಸಾಯಬಿಟ್ರೆ, ದನ ಹೊಡ್ಕಂಡು ಗುಡ್ಡಕ್ಕೆ ಮೇಯಿಸೋಕೆ ಹೋಗಬೇಕಾಗಿತ್ತು. ಆಗೆಲ್ಲ ಬಲೇ ಖುಷಿಯಾ ಗೋದು. ಕರಿನ್‌ಕಲ್ಲುಗುಡ್ಡ. ಕರಡಿ ಕಿರುಬಗಳ ಕಾಟ. ಒಂಟಿಯಾಗಿ ದನ ಹೊಡಕಂಡು ಹೋಗ್ತಿರಲಿಲ್ಲ. ಜೊತೆ ದನಿನೋರು ಮೂರುನಾಲ್ಕು ಜನ ಇದ್ದೇ ಇರೋರು. ಅವರ ಜೋತೇಲಿ ಹೋಗಿ ಗುಡ್ಡದ ಬಾದೆ ಹುಲ್ಲು ಮೇಯಿಸಿಕೊಂಡು, ದೊಣೇಲಿ, ನೀರು ಕುಡಿಸಿಕೊಂಡು ಬರೋದೂಂದ್ರೆ ಬಲೇ ಉತ್ಸಾಹ.

ಈ ಎಲ್ಲ ಅನುಭವಗಳ ಮೂಲದಿಂದ ಬಂದ ನನಗೆ ಕುವೆಂಪು ಅವರ 'ನೇಗಿಲ ಯೋಗಿ' ಪದ್ಯ ತುಂಬಾ ಇಷ್ಟವಾಯಿತು. ಕಾರಣ ಬೇಸಾಯದ ಕಸುಬನ್ನು ತಪಸ್ಸಿಗೆ ಹೋಲಿಸಿ ಬೇಸಾಯಗಾರನನ್ನು ಯೋಗಿ ಅಂತ ಕರೆದಿರೋದು ನನಗೆ ಒಂಥರಾ ಅಭಿಮಾನ ಮೂಡಿಸ್ತು. ಎಂಎಗೆ ಬಂದ ಮೇಲೆ 'ನೇಗಿಲಯೋಗಿ' ಪದ್ಯದ ಬಗ್ಗೆ, ನವ್ಯದವರು 'ರೈತನನ್ನು ವೈಭವೀಕರಿಸಿದ ಪದ್ಯ, ಅವನ ಕಷ್ಟಕ್ಕೆ ವಸ್ತುಸ್ಥಿತಿಗೆ ಕುರುಡಾಗಿ ಬರೆದ ಪದ್ಯ, ಇದು' ಅಂತ ವ್ಯಾಖ್ಯಾನಿಸೋದನ್ನ ಕೇಳಿದಾಗ, ಈ ವ್ಯಾಖ್ಯಾನ ಅದೇಕೋ ಅಷ್ಟಾಗಿ ಇಷ್ಟವಾಗಲಿಲ್ಲ. ಈಗಲೂ ನನಗೆ ನನ್ನ ಮೊದಲಿನ ಅನುಭವವೇ ಸರಿ ಅನ್ನಿಸುತ್ತೆ. ಹೀಗಾಗಿ ನನ್ನ ಪ್ರಾರಂಭಿಕ ರಚನೆಗಳಿಗೆ ಆದರ್ಶವಾಗಿದ್ದವರು, ಅನುಕರಣೀಯವಾಗಿದ್ದವರು ಕುವೆಂಪು ಅವರೇ.

ಒಂದಿನ ನಡೆದ ಸಂಗತಿ ಈಗಲೂ, ಕಣ್ಣಿಗೆ ಕಟ್ಟಿದಂಗೆ ನೆನಪೈತೆ. ನಾನು ತುಮಕೂರಿನ ಕಾಳಿದಾಸ ಹಾಸ್ಟೆಲಿನಲ್ಲಿ ಒಬ್ಬನೇ ಇದ್ದೆ. ರಸ್ತೇಲಿ ಒಬ್ಬಳು ಹೆಂಗಸು ತಟ್ಟಿತುಂಬ ಹೂವಿಟ್ಟುಕೊಂಡು "ಹೂಬೇಕೆನಮ್ಮ ಹೂವ"- ಅಂತಾ ಕೂಗಿಕೊಂಡು ಹೋಗ್ತಾ ಇದ್ದಳು. ಅವಳ ದನಿ ಕೇಳಿದ್ದೇ ಒಂದು ಸಾಲು ಬಾಯಿಗೆ ಬಂತು "ಹೂವು ಮಾರುವ ಹುಡುಗಿ ಹೆಸರು ಹೊಂಬಾಳೆ, ಹೂವು ಬೇಕೇ ಹೂವು ದನಿಯಲ್ಲಿ ಕೋಗಿಲೆ" ಪದ್ಯ ಬರದೇ ಬಿಟ್ಟೆ. ಹೀಗೆ ಬರೆದ ಪದ್ಯಾನ ಹತ್ತಾರು ಸಾರಿ ಮತ್ತೆಮತ್ತೆ ದುಂಡಗೆ ಬರೆದದ್ದು ಬರೆದದ್ದೇ. ಎಷ್ಟು ಸಾರಿ ಬರೆದರೂ ಸಾಕು ಅನ್ನಿಸ್ತಿರ್ಲಿಲ್ಲ. ಆ ಪದ್ಯಾನ ಹಲವು ಮಿತ್ರರು ಓದಿ ಕವಿ ಬಿರುದು ಕೊಟ್ಟೇಬಿಟ್ಟರು. ಆ ನಂತರದಲ್ಲಿ ಅದು ಇದು ಯಾವುದಾದರೂ ಸರಿ ವಿಷಯ ತಗೊಳ್ಳೋದು, ಅದರ ಬಗ್ಗೆ ಸಾಲು ಸಾಲುಗಳಲ್ಲಿ ಪ್ರಾಸ ಜೋಡಿಸಿ ಗೀಚೋದು. ಎಲ್ಲರಿಗೂ ತೋರಿಸಿ ಭಲೆಭಲೆ ಅನ್ನಿಸಿಕೊಳ್ಳೋದು. ಇದು ನಿತ್ಯದ ರೂಢಿಯಾಯಿತು.

ಅದೇ ದಿನಗಳಲ್ಲಿ ನಮ್ಮ ಹಾಸ್ಟಲಿಗೆ ಹಿರಿಯ ಕವಿಯೊಬ್ಬರು ಆಗಾಗ ಬರತಾ ಇದ್ರು. ನಾನು ಅತಿ ಉತ್ಸಾಹದಲ್ಲಿ ಒಂದುದಿನ ಅವರನ್ನು ಪ್ರತ್ಯೇಕವಾಗಿ ಭೇಟಿಮಾಡಿ ನನ್ನ ಕವನಗಳನ್ನು ಕೈಗಿಟ್ಟೆ. ಅವರು 'ಇದೇನಪ್ಪ! ಆ ಪುಟ್ಟಪ್ಪನ್ನ ಅನುಕರಣೆ ಮಾಡ್ತಾ ಇದೀಯಾ? ಪುಟ್ಟಪ್ಪ ಯಾವ ಕವೀಂತ ನೀನ್ ಅವರನ್ನ ಅನುಕರಿಸ್ತಿಯಾ? ಬರೀ ಸಂಸ್ಕೃತ ಶಬ್ದಗಳ ದೊಂಬರಾಟ. ಅಡಿಗರನ್ನ ಬೇಂದ್ರೆಯವರನ್ನ ಓದಬೇಕು. ಅವರ ಕಾವ್ಯ ಓದಿದೀಯಾ?

ಮೊದಲು ಹೆಚ್ಚು ಓದಬೇಕು. ನಿನ್ನದೇ ಆದ ಹಳ್ಳಿಭಾಷೇಲಿ ಬರಿಬೇಕು' -ಅಂದ್ರು. ಇವರು ಕುವೆಂಪು ಅವರನ್ನ ಕವೀನೆ ಅಲ್ಲ ಅಂತಾರಲ್ಲ ಅಂತ ನನಗೆ ಬಹಳ ಬೇಜಾರಾತು. ನಮಗೆ ಆಗ ಕುವೆಂಪು ಅವರ 'ರಕ್ತಾಕ್ಷಿ' ನಾಟಕ ಟೆಕ್ಸ್ಟ್ ಆಗಿತ್ತು. ಆ ನಾಟಕದ ಸಾಲು ಸಾಲುಗಳು ಬಾಯಿಗೆ ಬರ್ತಿದ್ದವು. ಅವುಗಳನ್ನ ಚಪ್ಪರಿಸುತ್ತಾ 'ಅಹಾ, ಇಂಥ ಒಂದು ಸಾಲು ಬರೀಲಿ ಇವ್ರು?'- ಅಂತ ಸ್ನೇಹಿತರ ಹತ್ತರ ನನ್ನ ಅಸಮಾಧಾನ ತೋಡಿಕೊಂಡೆ. ಕುವೆಂಪು ಬಗ್ಗೆ ಒಂಥರಾ ಗುಪ್ತಭಕ್ತಿ ನನ್ನದು. ನಾನು ಕುವೆಂಪು ತರ ಕವಿಯಾಗಬೇಕು ಅನ್ನೋದು ಆಸೆ. ರಜದಲ್ಲಿ ಊರಿಗೆ ಹೋದಾಗ ದಿನಾ ಬೆಳಗಿನ ಜಾವಕ್ಕೆ ಎದ್ದು ಎತ್ತೋಟಕ್ಕೆ ಹೋಗೋದು, ಇರೋದು ಒಂದು ಕೆಲಸ. ರಾತ್ರಿ ಬಿದ್ದ ಕಾಯನ ಆರಿಸಿಕೊಂಡು ಬರಬೇಕು. ಈ ಸಾರಿ ಹೋದೋನು ಕಾಯನೆಲ್ಲ ಆರಿಸಿ ದೊಡ್ಡ ಮಾವಿನಮರದ ಬುಡದಲ್ಲಿ ಜಿಟ್ಟಿಹಾಕಿಟ್ಟು, ಮೂಡಗಡೆ ಬಯಲಿಗೆ ಹೋಗ್ತಿದ್ದೆ - ಸೂರ್ಯ ಹುಟ್ಟೋದನ್ನ ನೋಡೋಕೆ. ಸೂರ್ಯೋದಯದ ಅನುಭವ ಪಡೆದು ನಾನೂ ಪದ್ಯ ಬರೀಬೇಕು ಅನ್ನೊ ಹಂಬಲ. ಎಷ್ಟು ತಿಣಿಕಿದರೂ ಪದ್ಯ ಪ್ರಸವವಾಗ್ತಿರಲಿಲ್ಲ. ಪದಗಳನ್ನ ಪೋಣಿಸಿ ಪೋಣಿಸಿ ಕೊನೆಗೆ ಒಂದೆರಡು ಸಾಲು ಬರೆದರೆ, ಅವು ಕುವೆಂಪು ಅವರ ಮಾರ್ಪಾಟು ಹೊಂದಿದ ಸಾಲುಗಳೇ ಆಗಿರುತ್ತಿದ್ದವು. ಆದರೂ ಸೂರ್ಯೋದಯ ನೋಡೋದು ಮಾತ್ರ ಬಿಡಲಿಲ್ಲ. ಅದರಿಂದ ಆದ ಉಪಯೋಗ ಅಂದ್ರೆ, ತೆಂಗಿನತೋಟದ ಕಾಯಗಳನ್ನ ಅಕ್ಕಪಕ್ಕದೋರು ಕದಿಯೋಕು ಮುಂಚೆ, ಕುರಂಬಳೆ ಗರಿ ಸಮೇತ ಗುಡ್ಡೆ ಹಾಕ್ತಿದ್ದದ್ದು. ಹಂಗಾದ್ರು ನನ್ನ ತಿಣುಕಾಟ ಮುಂದುವರಿದೇ ಇತ್ತು. ನಮ್ಮ ದನದ ಮನೇಲಿ ಕೂತು ಓದಕೆ ಬರೆಯಕೇಂತ ಒಂದು ಮಂಚ ಮಾಡಿಕೊಂಡೆ. ಮಂಚ ಅಂದ್ರೆ ನಾಲ್ಕು ಕವುರ ತಂದು ನಾಲ್ಕು ಪರದ ಈಚೆ ಹಾಕಿ ಅಡ್ಡಡ್ಡ ಗಾಡಿ ಹಲಗೆ ಹಾಕಿ ತಯಾರಿಸಿಕೊಂಡ ಮಂಚ. ಅದರ ಮೇಲೆ ಕುಂತು ಪೆನ್ನು ಪುಸ್ತಕ ಹಿಡಿದು ಏನು ಕಲ್ಪಿಸಿಕೊಂಡ್ರೂ ನನ್ನ ಕಲ್ಪನಾ ದಾರಿದ್ರ್ಯದಲ್ಲಿ ಒಂದು ಕವನವೂ ಹುಟ್ಟಲಿಲ್ಲ. ಬರದದ್ದೆಲ್ಲ ಪದ ಪ್ರಾಸಗಳ ಸಾಲುಗಳು.

ಈ ಮಧ್ಯ ನಮ್ಮ ಎಚ್ ಜಿ ಸಣ್ಣಗುಡ್ಡಯ್ಯನೋರು ನಮ್ಮ ಕಾಲೇಜಿನ ಕನ್ನಡ ಮೇಜರ್ ಹುಡುಗರಿಗೆ ಗೌರವದ ಮೇಸ್ಟ್ರು. ನಾನು ಕನ್ನಡ ಮೇಜರ್ ವಿದ್ಯಾರ್ಥಿ ಅಲ್ಲದೆ ಹೋದರೂ ಅವರ ಬಗ್ಗೆ ತುಂಬಾ ಪ್ರೀತಿ ಗೌರವ. ಅವರ ಒಂದು ಪದ್ಯಾನ ನಮ್ಮ ಕ್ಲಾಸಿನ ರಾಮಲಿಂಗಪ್ಪ, ಸಣ್ಣಗುಡ್ಡಯ್ಯನವರ್ದೊಂದು ಕವನ ಕೊಟ್ಟು 'ಓದು' ಅಂದ. ಲಂಗಕ್ಕೆ ಪುಟ್ಟಂಪುರ್ಲೆ ಮೆತ್ತಿಸಿಕೊಂಡ ಹುಡುಗಿಯ ಬಗೆಗಿನ ಆ ಪದ್ಯ ನನ್ನೂರಿನದು ಅನ್ನಿಸ್ತು. ಅದರಂಗೆ ನಾನೂ ಯಾಕೆ ಬರೀಬಾರದು ಅನ್ನಿಸ್ತು. ಅಂಗನ್ನಿದ್ದೆ ತಡ, ನಮ್ಮೂರಿನ ಯಾರ್‍ಯಾರೊ ಹುಡಿಗೀರ್ನ ನೆನಪಿಸಿಕೊಂಡು ಜನಪದ ತ್ರಿಪದಿ ಶೈಲೀಲಿ ಬರೆಯೋಕೆ ತೊಡಗಿದೆ. ಹಂಗೆ ಬರೆದ ಕೆಲವು ತ್ರಿಪದಿಗಳನ್ನು ತೆಗೆದುಕೊಂಡು ಹೋಗಿ ಸಣ್ಣಗುಡ್ಡಯ್ಯನೋರಿಗೆ ತೋರಿಸಿದೆ. ಅವರು ಆ ಪದ್ಯಗಳನ್ನು ಅಲ್ಲಿ ಇಲ್ಲಿ ತಿದ್ದಿ ತೀಡಿ ಒಂದು ರೂಪಕ್ಕೆ ತಂದರು. ಅಷ್ಟೇ ಅಲ್ಲ ಆ ವರ್ಷದ ಕಾಲೇಜಿನ ಮ್ಯಾಗಜೀನ್‌ನಲ್ಲಿ ಅವನ್ನ ಪ್ರಕಟಿಸಿಯೂ ಬಿಟ್ಟರು. ಮೊಟ್ಟಮೊದಲಿಗೆ ಪ್ರಿಂಟ್

ರೂಪದಲ್ಲಿ ಬಂದ ನನ್ನ ಪದ್ಯಗಳ ಬಗ್ಗೆ ನನಗೆ ಅದೇನು ಮೋಹ ಅಂದ್ರೆ ಎಲ್ಲ ಗೆಳೆಯರಿಗೆ ತೋರಿಸಿ ಓದಿಸಿದೆ. ಸ್ಕೂಲ್ ಬಿಟ್ಟು ಮನೇಲಿದ್ದೋರಿಗೆ ಆ ಪದ್ಯಗಳನ್ನ ತೋರಿಸಿ ಖುಷಿಪಟ್ಟೆ.

ನಾನು ಬಿಎನಲ್ಲಿ ಓದಿದ್ದು-ಇತಿಹಾಸ ಅರ್ಥಶಾಸ್ತ್ರ ರಾಜ್ಯಶಾಸ್ತ್ರ. ಇವುಗಳಲ್ಲಿ ಯಾವಕ್ಕೂ ನನಗೆ ಎಂಎ ಓದಲು ಪ್ರವೇಶ ಸಿಕ್ಕಲಿಲ್ಲ. ಗೆಳೆಯನೊಬ್ಬನ ಸೂಚನೆಯಂತೆ ಬೆಂಗಳೂರಿಗೆ ಬಂದೆ. ಸೆಂಟ್ರಲ್ ಕಾಲೇಜಿನ ಕನ್ನಡ ಅಧ್ಯಯನ ಕೇಂದ್ರಕ್ಕೆ ಹೋದೆ. ಆ ದಿನ, ಮುಖ್ಯಸ್ಥ ರಾಗಿದ್ದ ಪ್ರೊ. ರಂ.ಶ್ರೀ. ಮುಗಳಿಯವರು ರಜಾ ಹೋಗಿದ್ದರು. ಪ್ರೊ. ಜಿ.ಎಸ್. ಶಿವರುದ್ರಪ್ಪ ನವರು ಛಾರ್ಜಿನಲ್ಲಿದ್ದರು. ಅವರು 'ಎಂಎಗೆ ಸೀಟಿಲ್ಲ ಆನರ್ಸ್ ಓದು. ಆಮೇಲೆ ಎಂ. ಎ.ಗೆ ಸೇರಿವಂತೆ' ಅಂದ್ರು. ನಾನು ಹಿಂದುಮುಂದು ಯೋಚನೆ ಮಾಡ್ಲಿಲ್ಲ. ಸೇರಿಬಿಟ್ಟೆ.

ಆಗ ಸೆಂಟ್ರಲ್ ಕಾಲೇಜಿನ ವಾತಾವರಣ ಅಂದರೆ ಬಣ್ಣದ ಲೋಕ. ಪ್ಯಾರಡೈಸ್. ನಾನೋ ತಲೆಗೆ ಹರಳೆಣ್ಣೆ ಹಾಕಿಕೊಂಡು ಕ್ರಾಪ್ ತೆಗೆದು ಗುಪ್ಪೆ ಮಾಡಿಕೊಂಡು ಕೂದಲನ್ನ ನೀವಿ ತಿದ್ದಿ ತೀಡಿಕೊಂಡು ಬಾಚೋದನ್ನ ಬಿಟ್ಟಿರಲಿಲ್ಲ. ನಮ್ಮ ತರಗತಿಯ ಹುಡುಗೀರಿಗೆ ಒಳ್ಳೆ ಆಡಿಕೆಯ ವಸ್ತುವಾಗಿದ್ದೆ. ಇದರ ಜೊತೆಗೆ ಸಾಹಿತ್ಯದ ಚರ್ಚೆ ಮಾಡೋ ಗುಂಪುಗಳು, ಅಲ್ಲಿ ನಡೀತಿದ್ದ ವಿಚಾರ ಸಂಕಿರಣಗಳು, ನನ್ನನ್ನ ಕೀಳರಿಮೆಗೆ ನೂಕಿದವು. ಇವ್ರೆಲ್ಲರ ಜತೆ ನಾನು ಮಾತನಾಡಬೇಕು ಅಂದ್ರೆ, ನಾನು ಇವರು ಓದಿರೋವ್ನೆಲ್ಲ ಓದಿಕೊಳ್ಳಲೇ ಬೇಕು ಅನ್ನೋದು ನನ್ನ ಅರಿವಿಗೆ ಬಂತು. ಓದೋದು ಓದೋದು ಇದೇ ಬದುಕು ಮಾಡಿದೆ. ಓದಿದ್ದರ ಬಗ್ಗೆ ದಿನಕಳದಂಗೆ ಅಳುಕಿನಲ್ಲೇ ಅವರಿವರ ಹತ್ತಿರ ಮಾತಾಡೋಕೆ ಸುರುಮಾಡಿದೆ. ಕೀಳರಿಮೆ ಕಳೆದು ಮಾತು ನಡೆ ಸಲೀಸಾದವು.

ಆಗಿನ ಬೆಂಗಳೂರಿನ ಸಾಹಿತ್ಯಿಕ ವಾತಾವರಣ ಹೇಗಿತ್ತೂಂದ್ರೆ- ನವೋದಯದ ಬಗ್ಗೆ ಕಟು ತಿರಸ್ಕಾರ, ಪ್ರಗತಿಶೀಲರ ಬಗ್ಗೆ ಅಸಡ್ಡೆ, ನವ್ಯರ ಬಗ್ಗೆ ವಿಜೃಂಭಣೆ. ನವ್ಯ ಅಂದರೆ ಸಾಕು, ಅದರ ಮಾತಾಡೋನು, ಆ ಪಂಥದಲ್ಲಿ ಬರೆಯೋನು ಅಂದ್ರೆ, ಅವನು ತುಂಬಾ ಇಂಟಲೆಕ್ಚುಯಲ್. ಯಾವುದರ ಬಗ್ಗೆಯೂ ಅವನು ಹೇಳಿದ್ದೇ ಸರಿ ಅನ್ನುವ ಧೋರಣೆ. ಇವರ ನಡುವೆ ನನಗೆ ಏನು ಬರೆಯೋಕು ಭಯವಾಗಿ ಬರೆಯೋದ್ನೆ ಬಿಟ್ಟು ಬಿಟ್ಟೆ. ಆದರೆ ಈ ವಾತಾವರಣ ನನ್ನಲ್ಲಿ ಒಂದು ಎಚ್ಚರ ಮೂಡಿಸಿತು, ಬರವಣಿಗೆ ಎಂದರೆ ಭ್ರಮೆಯ ಬೊಬ್ಬೆಯಲ್ಲ. ಕಲ್ಪನೆಯ ಗಾಳಿಗೀಳಲ್ಲ. ಅದೊಂದು ಅನುಭವ ಶೋಧ. ಸಾಹಿತಿ ಅಂತರ್ಮುಖಿಯಾಗದ ಹೊರತು ಏನನ್ನೂ ಶೋಧಿಸಲಾರ. ನಾನೂ ನವ್ಯದ ಆರಾಧಕನೇ ಆದೆ. ನನ್ನ ಮಾತು ನಡವಳಿಕೆ ಎಲ್ಲ ನವ್ಯದವರ ಶೈಲಿಯೇ ಆಯಿತು. ಎಂಎ ಮುಗಿಸಿ ಕನ್ನಡ ಮೇಸ್ಟ್ರಾಗಿ ಕೆಲಸಕ್ಕೆ ಸೇರಿಕೊಂಡ ಮೇಲೂ ನನ್ನ ಆಲೋಚನೆ ದೃಷ್ಟಿಕೋನ ಎಲ್ಲ ನವ್ಯಮಾರ್ಗದ ಸೈದ್ಧಾಂತಿಕ ನೆಲಗಟ್ಟಿನ ಮೇಲೆ ರೂಪುಗೊಂಡು ಹರಿದದ್ದೇ ಆಯಿತು. ಪ್ರಾರಂಭಿಕ ವರ್ಷಗಳಲ್ಲಿ ನನ್ನ ನವ್ಯದ ಕೊರೆತಕ್ಕೆ ನನ್ನ ವಿದ್ಯಾರ್ಥಿಗಳೂ ತಲೆಕೊಡಬೇಕಾ ಯಿತು.

ಇಷ್ಟೆಲ್ಲ ಆದ ಮೇಲೆ ನನಗೆ ಕವನ ಬರೆಯುವ ಒತ್ತಾಸೆ ಮೂಡಿದ್ದು ನಾನು ಮಡಿಕೇರಿಗೆ

ಮೇಸ್ಟ್ರಾಗಿ ಹೋದಮೇಲೆ. ೧೯೭೦ರ ನಂತರ ನಾನು ಮತ್ತೆ ಪದ್ಯ ಬರೆಯಲು ಪ್ರಾರಂಭಿಸಿದೆ. ಅಷ್ಟು ಹೊತ್ತಿಗೆ ಕನ್ನಡದ ಮಣ್ಣಿನಲ್ಲಿ ಸಾಕಷ್ಟು ನೀರು ಹರಿದು ಹೋಗಿತ್ತು. ಹೊಲದ ಒಬ್ಬೇಲಿ ದನ ಮೇಯಿಸುತ್ತಾ ಉರಿಬಿಸಿಲಲ್ಲಿ ನೆತ್ತಿ ಕಾಯಿಸಿಕೊಂಡು ಭವಿಷ್ಯದ ಬಗ್ಗೆ ಯಾತರ ಯೋಚನೇನು ಮಾಡದೆ ಇದ್ದ ಹುಡುಗ, ಇಡೀ ಜಗತ್ತಿನ ವಿದ್ಯಮಾನಗಳ ಬಗ್ಗೆ ಕಿವಿ ಮನಸ್ಸನ್ನ ತೆರೆದವನಾಗಿ ಬೆಳೀತಿದ್ದ. ವೈಯಕ್ತಿಕ ಆಸೆ ಅತೃಪ್ತಿಗಳ ಜತೆಗೆ ಸಮುದಾಯದ ರೌರವ ಹಿಂಸಾದಳ್ಳುರಿಗಳ ಕ್ಷೋಭೆ ಕೂಡ ಒಳಗನ್ನ ಬೇಯಿಸುತ್ತಿದ್ದ ವಾಸ್ತವವಾಗಿತ್ತು. ನಮ್ಮ ಕನ್ನಡದ ಸಾಂಸ್ಕೃತಿಕ ಪರಿಸರದಲ್ಲಿ ಬರಹಗಾರರ ಒಕ್ಕೂಟ ಹುಟ್ಟಿ ಒಡೆದು ಹೋದದ್ದರ ಹಿನ್ನೆಲೆ ಮುನ್ನೆಲೆಯಲ್ಲಿ ಹಲವು ಸಾಹಿತ್ಯಿಕ ರಾಜಕೀಯ ಬೆಳವಣಿಗೆಗಳಾಗಿದ್ದವು. ಅರಸು ಸರ್ಕಾರದ ರಾಜಕೀಯ ನೀತಿಗಳು, ತುರ್ತುಪರಿಸ್ಥಿತಿಯ ಪರಿಣಾಮ, ಜೆ.ಪಿ. ಚಳವಳಿ, ಈ ಎಲ್ಲವುಗಳ ನಡುವೆ 'ಕಟ್ಟುವೆವು ನಾವು ಹೊಸನಾಡೊಂದನು ರಸದ ಬೀಡೊಂದನು'- ಎಂದ ಕವಿಯ ಜನಸಂಘದ ಉಮೇದುವಾರಿಕೆ ಇತ್ಯಾದಿ ಕಣ್ಣೆದುರಿನ ವಿದ್ಯಮಾನಗಳು ನನ್ನನ್ನ ನಿಶ್ಶಬ್ದದ ಬಯಲಿಗೆ ತಳ್ಳಿದವು. ೧೯೭೦ರ ನಂತರ ಪ್ರಾರಂಭವಾದ ನನ್ನ ಕಾವ್ಯದ ವ್ಯವಸಾಯ ನಿಲ್ಲಲಿಲ್ಲ. ನನ್ನ ಕವನಗಳನ್ನ ಓದಿದವರು ಏನು ಹೇಳಿದರೂ ಯಾರ ಮಾತಿಗೂ ಕಿವಿಗೊಡದ ಸ್ಥಿತಿಯೊಳಗೆ ಕಾವ್ಯ ನನಗೆ ಅನಿವಾರ್ಯವಾದ ಅಭಿವ್ಯಕ್ತಿ ಮಾಧ್ಯಮವಾಯಿತು. ನನ್ನ ಅಂತರಂಗದ ಅಭೀಪ್ಸೆಗಳನ್ನ ಒಳಸಂಕಟಗಳನ್ನ ಹೇಳಿಕೊಳ್ಳಲು ಬೇರೆ ದಾರಿಯೇ ಇಲ್ಲ ಎನ್ನುವಷ್ಟರ ಮಟ್ಟಿನ ಅನಿವಾರ್ಯತೆ ಇದಾಯಿತು. ಮೊದಮೊದಲು ನನ್ನ ಕಾವ್ಯದಲ್ಲಿ ನಿರಾಶೆಯ ದಟ್ಟದನಿ ಕೇಳಿಸದ್ದರಲ್ಲಿ ಆಶ್ಚರ್ಯವೇನಿಲ್ಲ.

ಮಡಿಕೇರಿಯಲ್ಲಿದ್ದಾಗ ಒಂದು ರಾತ್ರಿ ನನಗೆ ಒಂದು ಕನಸು ಬಿತ್ತು. ಆ ಕನಸಿನಲ್ಲಿ ಪ್ರೈಮರಿಶಾಲೆಯ ನನ್ನ ಸಹಪಾಠಿ ರಾಮಲಿಂಗಯ್ಯ ಕಾಣಿಸಿಕೊಂಡಿದ್ದ. ನಾನು ಊರಿಗೆ ಹೋಗೋದೆ ಅಪರೂಪವಾಗಿತ್ತು. ಅದಕ್ಕೆ ಕಾರಣ ವೈಯಕ್ತಿಕ ಬದುಕಿನ ಹಲವು ಒಳತೋಟಿಗಳು. ಹೀಗಿರುವಾಗ ಈ ಕನಸು ಬಿದ್ದಿತ್ತು. ಆ ಕನಸಿನಲ್ಲಿ ನನ್ನ ಸಹಪಾಠಿ ಸತ್ತುಹೋಗಿದ್ದ. ಅವನ ಸಂಬಂಧಿಕರೆಲ್ಲ ಶವಯಾತ್ರೆಯಲ್ಲಿ ಭಾಗವಹಿಸಿದ್ದಾರೆ. ಆಗ ಆ ಗುಂಪಿನ ನಡುವೆ ನಮ್ಮೂರಿನ ಚಿಕ್ಕದೇವಮ್ಮ ನನ್ನೆದುರಿಗೆ ಬಂದಳು. ಅವಳ ಯಥಾಶೈಲಿಯಲ್ಲಿ 'ನೋಡೋ ಸಿದ್ರಾಮಪ್ಪ...' ಅಂತ ಆ ಸಾವಿನ ಪ್ರವರ ಹೇಳಲು ತೊಡಗಿದಳು. ನನಗೆ ಧಿಗ್ಗನೆ ಎಚ್ಚರವಾಯಿತು. ಸತ್ತ ಸಹಪಾಠಿ ಪ್ರವರ ಹೇಳುತ್ತಿದ್ದ ಚಿಕ್ಕದೇವಮ್ಮ ಒಂದೇ ಸಮನೆ ಕಾಡಿಸಿದರು. ಆ ನಡುರಾತ್ರಿಯಲ್ಲಿ ಎದ್ದು ಲೈಟು ಹಾಕಿ ಹಾಗೇ ಧೇನಿಸುತ್ತಾ ಕುಳಿತೆ. ಬಾಲ್ಯದ ಗೆಳೆಯ ರಾಮಲಿಂಗಯ್ಯನನ್ನು ನೋಡಿ ಎಷ್ಟು ವರ್ಷಗಳಾಗಿವೆ? ಮೂರನೇ ತರಗತಿಯಲ್ಲಿದ್ದಾಗ ಒಮ್ಮೆ; ಕ್ಲಾಸ್ ಮಾನಿಟರ್ ಪರಣ್ಣ ಉಕ್ತಲೇಖನ ಬರೆಸುತ್ತಿದ್ದ. ನಡುವೆ ಇವನು ಪರಣ್ಣ ಪರಣ್ಣ ಅಂತ ಎರಡು ಬೆರಳೆತ್ತಿದ್ದ. ಪರಣ್ಣ 'ಕುಕ್ಕರಿಸಿಕೊಂಡು ಬರಿಯೊ' ಅಂತ ಗದರಿಸಿದ್ದ. ಆದರೆ ರಾಮಲಿಂಗಯ್ಯನಿಗೆ ತಡಕಣಕಾಗಲಿಲ್ಲ. ಕುಂತಿತ್ತವಲೆ ಚಡ್ಡಿವೊಳಗೆ ತೊಪ್ಪೆ ಇಕ್ಕಿದ್ದ. ವಾಸ್ನೆ ಇಡೀ ರೂಮ್ನೆಲ್ಲ ತುಂಬಿ ಗುಂಡಪ್ಪ ಮೇಸ್ಟ್ರು ಮೂಗುಮುಚ್ಚಿಕೊಂಡು

ಹೊರಕ್ಕೋಡಿ ನಮ್ಮನ್ನೆಲ್ಲ ಒಂದಕ್ಕೆ ಬಿಟ್ಟಿದ್ದರು. ರಾಮಲಿಂಗನ ಅವ್ವನ್ನ ಕರೆಸಿ ತೊಪ್ಪೆ ಬಾಚಾಕ್ಸಿದ್ರು. ನನ್ನ ಕನಸಿಗೆ ಬಂದ ರಾಮಲಿಂಗ ಧುತ್ತನೆ ಈ ಉಕ್ತಲೇಖನದ ನೆನಪಾಗಿ ಕಾಡಿದ. ಬೇಲಿಯ ಓತಿಕ್ಯಾತ, ಬುಗುರಿಮರದ ಬೇರು, ಬಸ್ಸಾರಿಗೆ ಹಟಮಾಡಿದ ತಮ್ಮ ಒಂದಕ್ಕೊಂದು ಒಳಸಂಬಂಧವುಳ್ಳ ನೆನಪಿನ ಸರಪಳಿಬಿಚ್ಚಿ- ಕನಸಿನ ಅವನ ಸಾವು ಕಾಡಿಸಿದಂತೆ 'ಕೇಡು ಲೇಸಿನಾ ಗಡಿಯಾಚೆ ನಿಂತವನು' ಕವನ ಹುಟ್ಟಿತು. ಮೊಟ್ಟ ಮೊದಲಿಗೆ ನನ್ನ ಹಳ್ಳಿಯ ಭಾಷೆ ಆ ನೆಲದ ಎಲ್ಲ ಅನುಭವ ವಿವರಗಳು ಮೈತುಂಬಿಕೊಂಡು ಜೀವತಳೆದು ಮಾತಾಡ ತೊಡಗಿದುವು. ನಿರಾಯಾಸವಾಗಿ ಬರವಣಿಗೆ ಹರಿದದ್ದೊಂದೆ. ಈ ಮುಂಚೆ ಬರೆಯುತ್ತಿದ್ದಾಗಲೆಲ್ಲ ಸಾಕಷ್ಟು ಸಾರಿ ತಿದ್ದುವುದು ಮಾಡುತ್ತಿದ್ದೆ. ಈ ಕವನ ತಿದ್ದಿಸಿಕೊಳ್ಳುವ ಪ್ರಮೇಯಕ್ಕೇ ಹೋಗಲಿಲ್ಲ. ಸಲೀಸಾಗಿ ಹರಿಯಿತು; ಹೇಗೆಂದರೆ ಅಮಾವಾಸೆಯ ಕತ್ತಲೆಯಲ್ಲೂ ನನ್ನೂರಿನ ಹಾದಿಬೀದಿಗಳಲ್ಲಿ ಗುಂಡಿಗೊಟರು ಕೊಳೆಕಲ್ಲು ಕುರುವುಗಲ್ಲು ಬುಗುರಿ ಬೇರು ಯಾವುದು ಎಲ್ಲಿದೆ ಎಂಬುದು ಗೊತ್ತಿದ್ದು ನಡೆಯುವ ಹಾಗೆ. ಈ ಪದ್ಯ ಓದುಗರ ಮೆಚ್ಚುಗೆ ಪಡೆಯಿತು.

೧೯೮೮ರ ನಂತರದ ನನ್ನ ಕಾವ್ಯದಲ್ಲಿ ನಿರಾಶೆ ಕರಗಿ ಪ್ರೀತಿ ಉತ್ಸಾಹಿತವಾಗಿದೆ ಅಂತ ಕೆಲವು ಓದುಗರ ಅಂಬೋಣ. ಅದು ನಿಜವಿರಲೂಬಹುದು. ಈ ರೀತಿ ಬದುಕಿನ ಪ್ರೀತಿ ಬೆಳೆಯಲು ಕಾರಣ ನನ್ನೊಳಗೆ ಕುಡಿವರಿದ ಜೋಗಿಪ್ರಜ್ಞೆ. ಈ ಜೋಗಿ ನನ್ನ ಅಪ್ಪ. ನನ್ನ ಅಪ್ಪ ಎಷ್ಟು ಸಿಟ್ಟಿನವನೋ ಅಷ್ಟೇ ಅಂತಃಕರಣ ತುಂಬಿದ ಹೆಂಗರುಳಿನ ಜೀವ. ಊರಲ್ಲಿ ನಿಂತು ಏನಾದರೂ ಕೆಲಸ ಮಾಡಿದರೆ ಎಲ್ಲರೂ ಅಸೂಯೆ ಪಡುವಷ್ಟು ಮುತುವರ್ಜಿಯಿಂದ ದುಡಿಯುತ್ತಿದ್ದ ಚೇತನ. ಊರು ಬಿಟ್ಟು ಹೋದರೆ ತಿರುಗಲು ತಿಪ್ಪ. ಎಲ್ಲಿಗೆ ಹೋದ ಎಂಬುದು ಗೊತ್ತಾಗುತ್ತಲೇ ಇರಲಿಲ್ಲ. ಎಷ್ಟೋ ಸಾರಿ ನಮ್ಮವ್ವನ ಹತ್ತಿರ ಜಗಳಾಡಿಕೊಂಡು ತಿಂಗಳುಗಟ್ಟಲೆ ಮನೆಬಿಟ್ಟು ಹೋದದ್ದುಂಟು. ಅವನಿಗೆ ಆತ್ಮಸಂಗಾತಿಯೊಬ್ಬಳಿದ್ದಳು. ಅದು ನಮ್ಮೂರಲ್ಲಲ್ಲ; ಒಮ್ಮೊಮ್ಮೆ ಅಪರೂಪಕ್ಕೆ ಅವಳನ್ನು ಮನೆಗೆ ಕರೆದುಕೊಂಡು ಬಂದುಬಿಡುತ್ತಿದ್ದ. ನನ್ನವ್ವ ಅಷ್ಟೇ ಆದರದಿಂದ ಉಪಚರಿಸಿದ ನೆನಪು ಮಾಸಿಲ್ಲ. ಆದರೆ ಆಗಾಗ ಏಕಾಂತದಲ್ಲಿ ಅವಳಿಗೆ ಶಾಪಹಾಕುತ್ತ ಅತ್ತಿದ್ದೂ ತೀವ್ರವಾಗಿ ಕಾಡುವ ನೆನಪು.

ಇಂಥ ನನ್ನ ಅಪ್ಪ 'ಎಲ್ಲೋ ಜೋಗಪ್ಪ ನಿನ್ನ ತಳಮನೆ' ಎಂಬ ನೆಲೆಯವನು. ಕಟ್ಟಿಕೊಂಡ ಸಂಸಾರವನ್ನು ಕಡೆಗಣಿಸಿದಂತೆ ಹೋದರೂ ಕರುಳಾಳದ ಪ್ರೀತಿಯಲ್ಲಿ ಇಡೀ ಕುಟುಂಬವನ್ನು ಕಾಪಿಟ್ಟಿದ್ದವನು. ಮಹಾ ಹಟಮಾರಿ; ಈ ಹಟ ವಿಶ್ವಾಮಿತ್ರನ ಹಟವೆಂದರೂ ಸರಿಯೇ. ಸಿಟ್ಟು ಬಂದಾಗ ಹಿಂದು ಮುಂದು ನೋಡದೆ ಝಾಡಿಸುತ್ತಿದ್ದ ನನ್ನಪ್ಪ ಸಿಟ್ಟಿಳಿದ ತರುವಾಯದಲ್ಲಿ ಪ್ರೀತಿಯ ಸಾಗರವಾಗುತ್ತಿದ್ದ. ಸಿಟ್ಟಿನಲ್ಲಿ ಹೊಡೆದರೂ ಸಾಂತ್ವನದಲ್ಲಿ ಅಕ್ಕರೆಯ ಮಹಾಪೂರವನ್ನು ಹರಿಸಿದ್ದವನು. ಕಷ್ಟಾಂದ್ರೆ ಕೈಲಿದ್ದದ್ದನ್ನು ಹಿಂದುಮುಂದು ಯೋಚಿಸದೆ ದಾನಮಾಡುತ್ತಿದ್ದವನು. ಊರೊಟ್ಟಿನ ಕೆಲಸಕ್ಕೆ ಮುಂದಾಗಿ ನಿಂತು ಎದೆಗೊಡುತ್ತಿದ್ದವನು. ಕಷ್ಟಧಾರಿ ಹೊಣೆಗೇಡಿ ಕೋಪಿಷ್ಠ ದಾನಶೂರ ಪ್ರೀತಿಯ ಚುಂಬಕ

ಹೀಗೆ ಏನೆಲ್ಲ ವೈರುಧ್ಯಗಳ ಅನುಭವವಾಗಿ ನನ್ನೊಳಗೆ ಬೆಳಗಿರುವ ನನ್ನಪ್ಪ, ನನ್ನ ಜೋಗಿಪ್ರಜ್ಞೆ; ನನ್ನ ಕವನಗಳ ಜೀವಧಾತುವಾಗಿ ಆ ಪ್ರಜ್ಞೆ ಬೆಳೆದು ಬಂದದ್ದೇ ನನ್ನ ಕಾವ್ಯದ ವಿಶಿಷ್ಟತೆಗೆ ಕಾರಣವಾಗಿದೆ. ಇಂಥ ಅಪ್ಪನ ಸಾವು ಕೂಡ ಶ್ರೀಶೈಲದ ಕದಳಿಯ ಕಣ್ಮರೆಯ ನಿಗೂಢ. ಈ ನಿಗೂಢ ನನ್ನನ್ನು ಬಹಳ ತೀವ್ರವಾಗಿ ಬಾಧಿಸಿತು. ಈ ಬಾಧೆ ನನ್ನನ್ನು ಹೆಚ್ಚು ಅಂತರ್ಮುಖಿಯಾಗಿಸಿತು. ಬದುಕಿನ ಬಗ್ಗೆ ಹೆಚ್ಚು ಮೃದುವಾಗಿಸಿತು. ಆ ಸಂದರ್ಭದಲ್ಲಿ ಘಟಿಸಿದ ಕೆಲವು ತರ್ಕಾತೀತವಾದ ಸಂಗತಿಗಳು ನನ್ನನ್ನು ಹೆಚ್ಚು ಚಿಂತನೆಗೆ ಹಚ್ಚಿದವು; ಶೋಧನೆಗೆ ಒಳಗು ಮಾಡಿದವು. ಪರಿಣಾಮ ನನ್ನ ಅರಿವಿನ ಗುರುವಿನ ಹುಡುಕಾಟ. ನನ್ನ ಕಳ್ಳುಬಳ್ಳಿಯ ಬಗೆಗೆ ನನ್ನ ಹಂಬಲ; ಬಾಲ್ಯದಲ್ಲಿ ನನ್ನ ಜೀವಾನುಭವ ಸಂಬಂಧಿಗಳಾಗಿದ್ದ ಎತ್ತು ಎಮ್ಮೆ ನಾಯಿ ಗೊಯ್ಗ ಬುಗುರಿಮರ ದೊಡ್ಡಮಾವಿನ ಮರ ಕರಿಕಲ್ಲು ದೋಣೆಸಾಲು ಎಲ್ಲವೂ ನನ್ನನ್ನು ಕಾಡಿಸಿದವು; ಜೀವ ತಳೆದು ಛೇಡಿಸಿದವು. ಆಗಿನಿಂದ ನನ್ನ ಊರನ್ನು ಹೆಚ್ಚು ಹಚ್ಚಿಕೊಂಡೆ. ನನ್ನಪ್ಪನ ಹೆಜ್ಜೆಗುರುತುಗಳನ್ನು ಹುಡುಕುತ್ತಾ ಊರನ್ನು ಬಾಳತೊಡಗಿದೆ. ಇದರ ಪರಿಣಾಮ ನನ್ನ 'ಅವಳೆದೆಯ ಜಂಗಮ' 'ಸೊಲ್ಲುಫಲವಾಗಿ' ಬಂದ ಕೈತುತ್ತುಗಳು.

ಈಗ ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿದ ಹಿನ್ನೆಲೆಯಲ್ಲಿ ನನ್ನೂರಿನ ರೈತಾಪಿ ಬದುಕು ಬೀದಿಗೆ ಬಿದ್ದಿದೆ. ಜಾಗತೀಕರಣ ಅನಿವಾರ್ಯವೆನ್ನುವ ಮುಠ್ಠಾಳರಿಗೆ ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕಲ್ಪನೆ ಅರಿವಿಗೆ ಬರುವುದಿಲ್ಲ. ದನಕರು ಎಮ್ಮೆ ಕುರಿಕೋಳಿ ಮೇಕೆಗಳಿಂದ ಸಮೃದ್ಧವಾಗಿದ್ದ ನನ್ನೂರಿನ ಸುತ್ತ ಇಪ್ಪೆ ಮಾವು ಹುಣಿಸೆ ಹೊಂಗೆ ತೋಪುಗಳಿದ್ದವು. ಈಗ ನನ್ನೂರಿನಲ್ಲಿ ಎರಡು ಇಟ್ಟಿಗೆ ಫ್ಯಾಕ್ಟರಿಗಳಿವೆ. ಹತ್ತಾರು ಟ್ರ್ಯಾಕ್ಟರ್‌ಗಳಿವೆ. ನನ್ನೂರಿನ ಕೆರೆಯಂಗಳದ ಮೆಕ್ಕಲು ಮಣ್ಣೆಲ್ಲ ಇಟ್ಟಿಗೆ ರೂಪತಾಳಿ ನಗರಕ್ಕೆ ರವಾನೆಯಾಗುತ್ತಿದೆ. ತೋಪಿನಲ್ಲಿದ್ದ ಮರಗಳೆಲ್ಲ ಇಟ್ಟಿಗೆ ಗೂಡುಗಳಲ್ಲಿ ಬೂದಿಯಾಗಿವೆ. ಊರಲ್ಲಿ ಹುಡುಕಿದರೆ ನೊಣ ಕುಂತರೆ ಜಾರುವ ನುಣುಪಿನ ನಾಲ್ಕು ಜೋಡಿ ಹೋರಿಗಳಿಲ್ಲ. ಮರದ ನೇಗಿಲುಗಳು ಮಾಯವಾಗಿವೆ. ಎತ್ತಿನ ಗಾಡಿಗಳು ಮೂರೊ ನಾಲ್ಕೋ ಎನ್ನುವಷ್ಟು ಕಾಣಸಿಗುತ್ತವೆ. ನಮ್ಮೂರ ಹದಿಹರೆಯದ ಹುಡುಗರು ತಿಂಗಳಿಗೆ ಎಂಟುನೂರು ರೂಪಾಯಿಯ ದುಡಿಮೆಗಾಗಿ ಬೆಂಗಳೂರಿನ ಫ್ಯಾಕ್ಟರಿಗಳಿಗೆ ಮುಗಿಬಿದ್ದಿದ್ದಾರೆ. ಊರೊಳಗಿನ ಹಾದಿ ಬೀದಿಗಳಲ್ಲಿ ತಿಪ್ಪೆಮಾಳಗಳಲ್ಲಿ ಗುಟುಕಾ ಹಾಗೂ ಕಳ್ಳಭಟ್ಟಿಯ ಪ್ಲಾಸ್ಟಿಕ್ ಪ್ಯಾಕೆಟ್‌ಗಳು ಚೆಲ್ಲಾಡಿವೆ. ನುಸಿರೋಗಕ್ಕೆ ತತ್ತರಿಸಿ ಹೋಗಿರುವ ತೆಂಗಿನ ಮರಗಳು ರೈತರ ಗೋಣು ಕೆಳಗೆ ಹಾಕಿಸಿವೆ. ಊರ ಹೊಲಮಾಳದ ತುಂಬ ಪಾರ್ಥೇನಿಯಂ, ಜಾಗತೀಕರಣದ ಕಣಿ ಹೇಳುವ ಅಮೆರಿಕಾ ನನ್ನೂರಿಗೆ ಕೊಟ್ಟಿರುವ ಬಹು ದೊಡ್ಡ ಕೊಡುಗೆಗಳೆಂದರೆ ೧೯೬೪ರಲ್ಲಿ ಕೇರ್ ಗೋಧಿಯ ಮೂಲಕ ಕಳಿಸಿದ ಪಾರ್ಥೇನಿಯಂ ಕಳೆ, ಹಾಗೂ ಪೆಪ್ಸಿಕೋಲಾದ ಯಾಪುಲ್ಲಿಗಾಗಿ ನಮ್ಮೂರಿನ ತೆಂಗಿನ ಮರಗಳಿಗೆ ಹತ್ತಿಸಿರುವ ನುಸಿರೋಗ. ಈಗ ಅದೇ ಅಮೆರಿಕಾ ಬೆಳೆಸಿದ ಬಿನ್ ಲ್ಯಾಡೆನ್ ಎಂಬ ಯುದ್ಧವ್ಯಸನಿ ಅಮೆರಿಕಾದ ವಿಶ್ವ ಯಾಪುಲ್ಲಿಯ ವೀರಸೌಧವನ್ನು

ಧ್ವಂಸ ಮಾಡಿದ್ದಾನೆ. ಪೆಂಟಗಾನನ್ನು ನಡುಗಿಸಿದ್ದಾನೆ. ಮೂರನೇ ವಿಶ್ವಸಮರಕ್ಕೆ ಸಿದ್ಧವಾದಂತೆ ಇಡೀ ಜಗತ್ತು ಸುಡುಮದ್ದಿನ ಉಗ್ರಾಣಗಳಿಂದ ತುಂಬಿದ ಅರಗಿನ ಮನೆಯಾಗಿದೆ. ಈ ಯುದ್ಧಮಾರಿ ನನ್ನೂರಿನ ಬದುಕನ್ನು ಇನ್ನೂ ಯಾವರೀತಿಯ ದುರ್ಭರಕ್ಕೆ ಎಸೆದೀತೋ? ಈ ತಲ್ಲಣ ನಿದ್ದೆಗೆಡಿಸಿದೆ.

ಸೋಜಿಗವೆಂದರೆ ಊರಿನ ಮನೆಯಲ್ಲಿ ನಿನ್ನೆ ಬಿದ್ದ ಕನಸು. ಈ ಕನಸಿನಲ್ಲಿ ನನ್ನ ಪ್ರೀತಿಯ ಗುರು ಜಿಎಸ್ಎಸ್ ಅವರು ಒಂದು ಕವಿಗೋಷ್ಠಿ ನಡೆಸಿಕೊಟ್ಟರು. ಆ ಕವಿಗೋಷ್ಠಿಯಲ್ಲಿ ಜಿ.ವಿ. ಆನಂದಮೂರ್ತಿ, ಸವಿತಾ ನಾಗಭೂಷಣ, ಡಿ.ಎಸ್. ನಾಗಭೂಷಣ, ಅಮರೇಶ ನುಗುಡೋಣಿ, ಚೆನ್ನಣ್ಣ ವಾಲೀಕಾರ ಮುಂತಾಗಿ ಹಲವರು ಭಾಗವಹಿಸಿದ್ದರು. ಅವರ ಕವನ ವಾಚನಕ್ಕಿಂತ ಅವರ ಗದ್ದಲ ಅದರ ನಡುವೆ ನನ್ನ ಗುರು ಎದ್ದುನಿಂತು ಹೇಳಿದ ಏನೋ ಮಾತು- ಧುತ್ತನೆ ನನ್ನನ್ನು ಎಚ್ಚರಗೊಳಿಸಿತು. ಎದ್ದು ಕೂತವನು ಇಡೀ ಕನಸನ್ನು ಧೇನಿಸಿದೆ. ಅದು ಹೀಗಿದೆ:

ವ್ಯಕ್ತಮಧ್ಯದ ಗುರುವು
ಅದೊಂದು ನಡುಹಗಲು ಅಡ್ಡದಾರಿಯ ಹಿಡಿದು
ನಡೆದಿದ್ದೆ ಊರಮಧ್ಯದ ತೇರಬೀದಿಯಗುಂಟ
ಸಾಲಿಟ್ಟಜನ ಎಲ್ಲ ಪರಿಚಿತರೆ ಹರ ಕರೆದಂತೆ ಪರ
ತೆರೆದಂತೆ ಪಾಪಪುಣ್ಯದ ಬಯಲು
ಮಳೆಯಲ್ಲಿ ಮಿಂದಂತೆ ಅಚ್ಚರಿಯ ದೀವಟಿಗೆ
ಹತ್ತಿ ಉರಿದಂತೆ ಎಚ್ಚರದ ಹೆಜ್ಜೆಗತಿ
ನೋಡನೋಡುತ ಕೂಡಿದ ಕೊನೆ ಗುರು
ಭಕ್ತನ ಮನೆ ಗುರುವಲ್ಲಿ ಮಧ್ಯಬಿಂದು.
ಆನಂದ ಬದಿಯಲ್ಲಿ ನುಗುಡೋಣಿ ನಡುವಲ್ಲಿ
ನಾಗಭೂಷಣನಿದ್ದ ಸವಿತಾಳ ಬಲದಲ್ಲಿ
ಬಿಂದು ಮಧ್ಯದ ಗುರುಗೆ ಅಂದು ಹರುಷವದೇನೋ
ಹಿಡಿಕೆಯಲಿ ಒಡೆದಿದ್ದ ಕಲ್ಲುಸಕ್ಕರೆ ಚೂರು
ಮಡಿಕೆಯಲಿ ಹಿಡಿದಿದ್ದ ಕವನಗಳ ಸಾಲುಸಾಲು
ಛಂಗನೆದ್ದನು ನುಗುಡೋಣಿ ಸಂಗಬೇಡದ ರೀತಿ
ಭಂಗಬಿತ್ತುತ ಹರಿದ ಅಭಂಗಗಳ ಪಾಡಹಾಡಿ
ವಾಲಿಕಾರನ ಕೂಗು ಕೆಂಪಿನೋಕುಳಿಯಾಗೆ,
ನಾಗಭೂಷಣನೆದ್ದ ನಾಗಬೆತ್ತವ ಹಿಡಿದು
ಪತ್ರೆ ದಾಸೋಹದಲಿ ನಿತ್ಯ ಜಂಗಮವೆಂದು
ಉಳುವ ರೈತನ ಗುಳದ ಗೆರೆಯಲಿ ಪಾರಿವಾಳ
ಹೆಜ್ಜೆಯರಸುತ ವ್ಯಕ್ತಮಧ್ಯದ ಗುರುವು.

ಈ ರೀತಿ ನನ್ನ ಕಾವ್ಯ ಶೋಧದ ಹಾದಿ ನಡೆದಿದೆ. ಶಬ್ದದೊಳಗಣ ನಿಶ್ಶಬ್ದದಲ್ಲಿ ಜೀವನಾನುಭವವನ್ನು ಕಟ್ಟಿಕೊಡುವ ಕಾವ್ಯಪ್ರಪಂಚ ನನಗೊಂದು ವಿಸ್ಮಯ; ಒಂದು ಸವಾಲು; ನನ್ನನ್ನು ನಾನು ಕಂಡುಕೊಳ್ಳುವ ಉಪಾಯ. ಬರೆಯುವಾಗ ತನ್ನೊಳಗಿನಾಳಕ್ಕೆ ನನ್ನನ್ನು ನಿಮಗ್ನವಾಗಿಸಿಕೊಂಡು ಬೀಜದೊಳಗಣ ವೃಕ್ಷವನ್ನು ಕಾಣಿಸುವ ಈ ಧ್ಯಾನ ಪ್ರಪಂಚಕ್ಕೆ ನನ್ನ ಅಪಾರ ನಮನ.

●

## ‘ನಿರುಪಯುಕ್ತ’ ವಾಚಕರವಾಣಿಗಳು

● ಸಿಪಿಕೆ

ಕೆಲವು ವರ್ಷಗಳಿಂದ ನಾನು ‘ಪ್ರಜಾವಾಣಿ’ ಪತ್ರಿಕೆಯ ‘ವಾಚಕರವಾಣಿ’ ವಿಭಾಗಕ್ಕೆ ಪತ್ರಗಳನ್ನು ಬರೆಯುವ ಹವ್ಯಾಸ ಇರಿಸಿಕೊಂಡಿದ್ದೇನೆ. ಇವು ಗದ್ಯ, ಪದ್ಯ (ಚುಟುಕು) ಎರಡು ರೂಪಗಳಲ್ಲೂ ಇರುತ್ತವೆ. ಅಲ್ಲದೆ, ಮೈಸೂರಿನ ಜಿಲ್ಲಾಮಟ್ಟ ಪತ್ರಿಕೆಯಾದ ‘ಆಂದೋಲನ’ದ ‘ಓದುಗರ ಪತ್ರಗಳು’ ವಿಭಾಗದಲ್ಲೂ ನನ್ನ ಇದೇ ಮಾದರಿಯ ಪತ್ರಗಳು ಪ್ರಕಟವಾಗುತ್ತಿರುತ್ತವೆ.

ಮೊದಲೇ ಒಂದು ಸ್ಪಷ್ಟೀಕರಣವನ್ನು ಕೊಡುವುದು ಅಗತ್ಯವೆನಿಸುತ್ತದೆ. ಅನೇಕರು ಭಾವಿಸಿರುವಂತೆ ಕೇವಲ ಹೆಸರಿಗಾಗಿ ಮತ್ತು ಪ್ರಚಾರಕ್ಕಾಗಿ ನಾನು ಈ ಪತ್ರಗಳನ್ನು ಬರೆಯುತ್ತಿಲ್ಲ. ‘ಸಿಪಿಕೆ’ ಎಂಬ ಹೆಸರಿನಲ್ಲಿ ಮಾತ್ರವಲ್ಲದೆ ಬೇರೊಂದು ಗುಪ್ತ ನಾಮದಿಂದಲೂ ನಾನು ಬರೆಯುವುದುಂಟು! ಓದುಗರೊಡನೆ ಹೃದಯ ಸಂವಾದ, ನನ್ನ ಅನಿಸಿಕೆ ಅಥವಾ ಅನುಭವಗಳಿಗೆ ಅವರನ್ನು ಒಳಗು ಮಾಡುವುದು ನನ್ನ ಮುಖ್ಯವಾದ ಉದ್ದೇಶ. (ಯಾವೊಬ್ಬ ಲೇಖಕನ ಉದ್ದೇಶವೂ ಇದೇ ತಾನೆ.)

ಈ ‘ಪತ್ರ ಸಾಹಿತ್ಯ’ ನನ್ನ ವಿಪುಲ ವಾಙ್ಮಯದ ಒಂದು ಅಂಗವಾಗಿದೆ; ಇನ್ನೂ ಸಮರ್ಪಕವಾಗಿ ಹೇಳಬೇಕೆಂದರೆ, ಉಪಾಂಗವಾಗಿದೆ. ಅದು ಭಿನ್ನ ರೀತಿಯದೂ ಹೌದು: ‘ರೀತಿ’ಯೇ ಇಲ್ಲಿ ಹೆಚ್ಚು ಗಣನೀಯವೆನ್ನಬಹುದು!

ನನ್ನ ಗದ್ಯಪತ್ರಗಳಿಗೂ ಪದ್ಯಪತ್ರಗಳಿಗೂ ಗಮನಾರ್ಹ ವ್ಯತ್ಯಾಸವಿದೆ. ಕೆಲವಾದರೂ ಚುಟುಕು - ಅಥವಾ ಹನಿಗವನ-ಗಳು ತುಸುವಾದರೂ ಕಾವ್ಯಸ್ಪರ್ಶನವನ್ನು ಪಡೆದಿರುತ್ತವೆ; ಗದ್ಯಪತ್ರಗಳಲ್ಲಿ ಅದರ ಪ್ರಸಕ್ತಿಯಿರುವುದಿಲ್ಲ.

ಸಾಮಾನ್ಯವಾಗಿ ‘ವಾಚಕರ ವಾಣಿ’ ವಿಭಾಗದಲ್ಲಿ ಪ್ರಕಟವಾಗುವ ಓಲೆಗಳು ಗಂಭೀರ ಸ್ವರೂಪದವು; ಪ್ರಚಲಿತ ಸಮಸ್ಯೆ ಅಥವಾ ವಿದ್ಯಮಾನಗಳಿಗೆ ಪ್ರತಿಕ್ರಿಯಿಸತಕ್ಕವು; ಇಲ್ಲವೆ,

ಸಾರ್ವಜನಿಕ ಜೀವನದ ಕುಂದುಕೊರತೆಗಳನ್ನು ಎತ್ತಿ ಹೇಳಿ ಅಥವಾ ತೋರಿ, ಪರಿಹಾರ ಬಯಸತಕ್ಕವು. ಅವೆಲ್ಲ ಬಹುತೇಕ ವ್ಯಾವಹಾರಿಕ ಹಾಗೂ ಸಾಮಯಿಕ. ಆದರೆ ನನ್ನ ಪತ್ರಗಳ ದೃಷ್ಟಿ ಧೋರಣೆಗಳೇ ಬೇರೆ. ಅವು ‘ನಿರುಪಯುಕ್ತ’! ಓದುಗರನ್ನು ತಲೆಬಿಸಿಯಿಂದ ಪಾರು ಮಾಡಿ, ಒಂದು ಗಳಿಗೆ ಉಲ್ಲಸಿತರನ್ನಾಗಿ ಮಾಡುವುದು, ಅವರ ಮುಖದ ಬಿಗುವನ್ನು ಸಡಿಲಗೊಳಿಸುವುದು ನನ್ನ ಪತ್ರಗಳ ಗುರಿ. ಕೆರಳಿಸುವುದಲ್ಲ, ಅರಳಿಸುವುದು ಅವುಗಳ ಆಶಯ.

ನಾನೂ ಗಂಭೀರ ಪತ್ರಗಳನ್ನು ಒಮ್ಮೊಮ್ಮೆ ಬರೆದಿರುವುದುಂಟು. (ಚುಟುಕಗಳು ಸಾಮಾನ್ಯವಾಗಿ ಅಂಥವೇ.) ಆದರೆ ಲಘು ಪತ್ರಗಳೇ ಅಧಿಕ. ಪತ್ರಿಕೆಗಳಲ್ಲಿ - ವಿಶೇವಾಗಿ ‘ಪ್ರಜಾವಾಣಿ’ ಹಾಗೂ ‘ಆಂದೋಲನ’ದಲ್ಲಿ - ಪ್ರಕಟವಾದ ಯಾವುದೋ ಸುದ್ದಿ, ಮುಖ್ಯ ವಾದುದಿರಬಹುದು, ಅಮುಖ್ಯವಾದುದಿರಬಹುದು, ನನ್ನ ‘ವಕ್ರ’ ದೃಷ್ಟಿಗೆ ಗುರಿಯಾಗಿ, ‘ವಕ್ರೋಕ್ತಿ’ಯಾಗಿ ಪರಿಣಮಿಸುತ್ತದೆ! (ಅಂಥ ಅರ್ಹತೆ ಅದರಲ್ಲಿರಬೇಕಷ್ಟೆ.) ಹೀಗಾಗಿ, ನನ್ನ ಪತ್ರಗಳನ್ನು ಸಹಜ ಸ್ಫುರಣಗಳಾಗಿದ್ದು, ಬಹುಮಟ್ಟಿಗೆ ಹಾಸ್ಯ, ವಿಡಂಬನಗಳ ಸಾಧನವಾಗಿ ಕ್ರಿಯಾತ್ಮಕವಾಗುತ್ತವೆ. ಅವುಗಳಲ್ಲಿ ಕೆಲವಾದರೂ ವರ್ತಮಾನ ಕ್ಷಣದ ಪರಿಮಿತಿಯಿಂದ ಪಾರಾಗುವ ಸಾಧ್ಯತೆಯುಂಟು. (ನನ್ನ ಪತ್ರಗಳಿಗೆ ‘ಪ್ರಜಾವಾಣಿ’ಯ ತೃತೀಯ ಸಂಪಾದಕೀಯ ಸ್ವಲ್ಪಮಟ್ಟಿಗೆ ಪ್ರೇರಕ ಎಂಬುದನ್ನು ನಾನು ಒಪ್ಪಿಕೊಳ್ಳಬೇಕು.)

ಈ ಪತ್ರಗಳ ಮೂಲಕ ಸಮಾಜವನ್ನು ತಿದ್ದುವುದು ಖಂಡಿತ ನನ್ನ ಉದ್ದೇಶವಲ್ಲ; ಮೃದುವಾಗಿ ಗುದ್ದುವುದು - ಕೆಲವೊಮ್ಮೆ ಮುಸುಕಿನೊಳಗೆ, ಕಚಗುಳಿಯಿಡುವುದು ನನ್ನ ಬಯಕೆ. (ತಿದ್ದುವ ಕೆಲಸ ಅನುದ್ದಿಷ್ಟವಾಗಿ, ಪರೋಕ್ಷವಾಗಿ ಅಷ್ಟಿಷ್ಟು ಆಗಬಹುದೇನೊ.)

ಕಾವ್ಯ (ಸಾಹಿತ್ಯ) ರಚನೆಯ ಪ್ರಕ್ರಿಯೆಯಲ್ಲಿ ಸಾಮಾನ್ಯವಾಗಿ ಏನಾಗುತ್ತದೆ? ಕವಿ ಮೊದಲೇ ತನಗುಂಟಾಗಿರುವ ಸಂತೋಷವನ್ನು ಅಥವಾ ದುಃಖವನ್ನು ಅಭಿವ್ಯಕ್ತಿಸಿ, ಸಹೃದಯರೊಡನೆ ಹಂಚಿಕೊಳ್ಳುತ್ತಾನೆ. ಆದರೆ ‘ಪತ್ರ ಲೇಖಕ’ನಿಗೆ ಅಂಥ ಯಾವುದೇ ಪೂರ್ವಭಾವಿ ಅನುಭವವಿರುವುದಿಲ್ಲ. ಅವನ ಮುಂದಿರುವುದು ಒಂದು ನೀರಸವಾದ ಸುದ್ದಿ ಮಾತ್ರ. (ಅಪವಾದಗಳಿರಬಹುದು.) ಅದರ ಬಗೆಗೆ ಬರೆದಾದ ಮೇಲೆ ಅವನಿಗೆ ಸಂತೋಷ ವಾದೀತು; ಅದು ಓದುಗನಿಗೆ ಸಂವಹನಗೊಳ್ಳುತ್ತದೆ. ಅಂತೂ ಸುದ್ದಿ-ಸ್ಪಂದನದಿಂದ ಮನೋರಂಜನ ಎನ್ನಬಹುದು. ಅದು ವಿಚಾರಕ್ಕೆ ಒಪ್ಪಬಾರದೆಂದಿಲ್ಲ.

ನಮ್ಮ ಜನರಿಗೆ ಹಾಸ್ಯ ಪ್ರಜ್ಞೆ ಕಡಿಮೆ ಎನಿಸುತ್ತದೆ, ಒಮ್ಮೊಮ್ಮೆ ನಾನು ಹಗುರ ಧಾಟಿಯಲ್ಲಿ ಬರೆದದ್ದನ್ನು ತುಂಬ ‘ಸೀರಿಯಸ್’ ಆಗಿ ತೆಗೆದುಕೊಂಡು ಪ್ರತಿಕ್ರಿಯಿಸಿದವರೂ ಉಂಟು! ನನ್ನ ಪತ್ರಗಳು ಚರ್ಚಾಸ್ಪದವಾಗಬಾರದೆಂಬುದೇ ನನ್ನ ಅಪೇಕ್ಷೆ. ಆದರೆ ಲಘು ಯಾವುದು, ಗುರು ಯಾವುದು ಎಂಬುದನ್ನು ಗುರುತಿಸುವುದು ಎಲ್ಲರಿಗೂ ಸಾಧ್ಯವಾಗಲಾರ ದೇನೊ!

ನಾನೊಂದು ಪತ್ರವನ್ನು ಬರೆದು ಕಳುಹಿಸಿದ ಮೇಲೆ, ಅದು ಯಾರ ಮನಸ್ಸನ್ನಾದರೂ

ಅಪ್ರಜ್ಞಾಪೂರ್ವಕವಾಗಿ ನೋಯಿಸುವುದೇ ಎಂಬ ಸಂದೇಹ ಒಮ್ಮೊಮ್ಮೆ ನನ್ನನ್ನು ಕಾಡ ತೊಡಗುತ್ತದೆ; ಔಚಿತ್ಯದ ಪ್ರಶ್ನೆ ಕೂಡ. ಆದ್ದರಿಂದ ಈ ಪತ್ರಲೇಖನ ಮನಸ್ಸಿನ ನೆಮ್ಮದಿ ಕೆಡಿಸಿದ ಸಂದರ್ಭಗಳೂ ಉಂಟು. (ಹಾಗೆ ನೋಡಿದರೆ, ಬರವಣಿಗೆ ಎನ್ನುವುದು 'ಸುಖ'ದ ಕೆಲಸವಲ್ಲ!)

ನನ್ನ ಪತ್ರಗಳನ್ನು ಅನೇಕರು ಅನುಕರಿಸುತ್ತಿದ್ದಾರೆ ಎಂಬುದೂ ಗಮನಾರ್ಹ. ಆದರೆ ನನ್ನ ಬರಹಗಳು ತಕ್ಕಮಟ್ಟಿಗೆ ಅನನ್ಯ ಎಂದು ಭಾವಿಸಿದ್ದೇನೆ. ಚುಟುಕ ರೂಪದಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸುವುದನ್ನು ಆರಂಭಿಸಿದವನು ಬಹುಶಃ ನಾನೇ ಎಂದು ತೋರುತ್ತದೆ. ಒಂದು ವೇಳೆ ಆ ಪ್ರವೃತ್ತಿ ಹಿಂದೆಯೆ ಇದ್ದರೂ, ವಿರಳವಾಗಿತ್ತು. ಈಗಂತೂ ಚುಟುಕು ಪತ್ರಗಳು ಸಮೃದ್ಧವಾಗಿ ಪ್ರಕಟವಾಗುತ್ತಿವೆ.

ನನ್ನ ಓಲೆ ಬರಹಗಳನ್ನು ಕುರಿತು ಹಲವರು ಮೆಚ್ಚುಗೆ ವ್ಯಕ್ತಗೊಳಿಸಿದ್ದಾರೆ- ಎದುರಿಗೆ ಸಿಕ್ಕಿದಾಗ ಅಥವಾ ಪತ್ರಮುಖೇನ. ("ಅದೇನು ಮಹಾ?" ಎಂದು ಹಿಂದಾಡಿಕೊಳ್ಳುವವರೂ ಇರಬಹುದು, ಇದ್ದಾರೆ. ಅಂಥವರಿಗೆ 'ಮಹಾ' ಕಾವ್ಯವೂ ಪ್ರಾಯಶಃ ದೊಡ್ಡದಲ್ಲ!) ಆದರೆ ಇದು ಹೊಗಳಬೇಕಾಗಿಯೂ ಇಲ್ಲ, ಟೀಕಿಸಬೇಕಾಗಿಯೂ ಇಲ್ಲ ಎಂದು ನನ್ನ ನಿಲುವು. ಬಹಳಷ್ಟು ಒಂದು ಗಳಿಗೆ ಓದಿ ಮರೆಯುವಂಥ ಬರವಣಿಗೆಯಿದು, ಮೆರವಣಿಗೆ ಮಾಡಬೇಕಾದ್ದಲ್ಲ! ಸಕಾಲ ಸಾಹಿತ್ಯ ಎಂದಿದನ್ನು ಕರೆಯಬಹುದೇನೊ, 'ಸಾಹಿತ್ಯ' ಶಬ್ದವನ್ನು ಬಳಸಬಹುದಾದರೆ. ಇದರಲ್ಲಿ ಗಣಿಸಬಹುದಾದ - ಮತ್ತು ಗುಣಿಸಬಹುದಾದ - ಗುಣ ಉಂಟು ಎನ್ನುವುದಾರೆ, ಅದರಿಂದ ನನಗೆ ಮುದವಾಗದಿರುತ್ತದೆಯೆ? (ಈ ಕಾಯಕವನ್ನು ನಿಲ್ಲಿಸಿಬಿಡುವಂತೆ ಅನೇಕರು ಸೂಚಿಸುವುದುಂಟು. ಒಮ್ಮೆ ನಿಲ್ಲಿಸಿ, ಮತ್ತೆ ಪ್ರಾರಂಭಿಸಿದ್ದಾಯಿತು. ಇರಲಿ. ಯಾವುದಕ್ಕೂ ಒಂದು ಕೊನೆ ಇರುತ್ತದೆ ಅಥವಾ ಬರುತ್ತದೆ!)

ಕಡೆಯ ಮಾತು. ಒಬ್ಬ ಲೇಖಕ ಏಕೆ ಬರೆಯುತ್ತಾನೆ, ಹೇಗೆ ಬರೆಯುತ್ತಾನೆ, ಅವನ ಲೇಖನ ಕರ್ಮದ ಪ್ರಯೋಜನವೇನು ಎಂಬುದನ್ನು ಅವನಿಗಿಂತ ಚೆನ್ನಾಗಿ ವಿಮರ್ಶಕರು ಬಲ್ಲರು! ಲೇಖಕ ಸ್ವತಃ ವಿವರಣೆ ಕೊಡಬಹುದು. ಆದರೆ ಅದು ಬಹುಶಃ ಸೀಮಿತವಾದದ್ದು, ಮತ್ತು ಎಲ್ಲರೂ ಅದನ್ನು ಒಪ್ಪಬೇಕೆಂದಿಲ್ಲ!

●

ಕನ್ನಡ ಭಾಷೆಯಲ್ಲೇ ಬೋಧನೆ, ಬರವಣಿಗೆ, ಸಂಶೋಧನೆ ಮಾಡುವ ಜನರ ಅನುಭವ ವೊಂದಿದೆ. ಬಗೆಯಲ್ಲಿದೆ. ಇಂಗ್ಲಿಶಿನಲ್ಲಿ ಬರೆಯದ ಕಾರಣದಿಂದ ತಾವು ದೇಶವ್ಯಾಪಿ ಪ್ರಸಾರ ಪಡೆಯುವುದಿಲ್ಲವಲ್ಲ ಎಂದು ಹಲುಬುವ ಕೆಲವರನ್ನು ಬಿಟ್ಟರೆ, ಬಹುಶ: ಈ ಮಾದರಿಯಲ್ಲಿ ಹೆಚ್ಚು ಸಮಸ್ಯೆಗಳಿಲ್ಲ. ಆದರೆ ತಾವು ಸ್ವತಃ ಕನ್ನಡ ಭಾಷಿಕರಾಗಿದ್ದು, ಎದುರಿನ ವಿದ್ಯಾರ್ಥಿಗಳು ಅಥವಾ ಓದುಗರು ಕನ್ನಡದವರಾಗಿದ್ದರೂ ಇಂಗ್ಲಿಶಿನಲ್ಲಿ ಬೋಧನೆ ಸಂಶೋಧನೆ ಬರವಣಿಗೆ ಮಾಡಬೇಕಾದ ಇಕ್ಕಟ್ಟಿನಲ್ಲಿ ಸಿಲುಕಿದವರ ಅನುಭವ ಬಹಳ ಸಂಕೀರ್ಣವಾದುದು. ಈ ಮಾದರಿಯಲ್ಲಿ ಕೆಲವರಿಗೆ ಮಾತ್ರ ಕನ್ನಡ ಬಳಸುವ ಹಾದಿಗೆ ಅನೇಕ ಉಪಾಯ ಹಾಗೂ ಹೋರಾಟಗಳ ಮೂಲಕ ಬರಲು ಸಾಧ್ಯವಾಯಿತು. ಆದರೆ ಬಹಳ ಜನರಿಗೆ ಜನಭಾಷೆ ಮೂಲಕ ಕೆಲಸಮಾಡುವ ಹಾದಿಗೆ ಬರುವುದರ ಅಗತ್ಯವೆನಿಸಿದರೂ ಸಾಧ್ಯವಾಗಲಿಲ್ಲ. ಇನ್ನೂ ಅನೇಕರಿಗೆ ಜನಭಾಷೆಗಳ ಮೂಲಕ ಬೌದ್ಧಿಕ ಚಟುವಟಿಕೆ ಮಾಡುವುದು ಅವಶ್ಯಕ ಎಂದು ಕೂಡ ಅನಿಸಿಲ್ಲ. ಇದು ಮೂರನೇ ಮಾದರಿ.

ಇಂತಹದೊಂದು ವಿಚಿತ್ರ ಪರಿಸ್ಥಿತಿಗೆ ವ್ಯಕ್ತಿಗಳ ವೈಯಕ್ತಿಕ ಇಷ್ಟಾನಿಷ್ಟಗಳ ಆಚೆ, ಅನೇಕ ಚಾರಿತ್ರಿಕ ಕಾರಣಗಳಿರುವುದು ಎಲ್ಲರಿಗೂ ಗೊತ್ತಿದೆ. ಈ ಮೂರೂ ಮಾದರಿಗಳಲ್ಲಿ ಇಂಗ್ಲಿಶಿನಂತಹ ಭಾಷೆಯ ಒತ್ತಡದ ಎದುರು ಕೆಲಸ ಮಾಡಬೇಕಾದ ಪರಿಸ್ಥಿತಿಯಿದೆ. ಈ ಹಿನ್ನೆಲೆಯಲ್ಲಿ ಕನ್ನಡದಂತಹ ಜನಭಾಷೆಯಲ್ಲಿ ಬರೆಯಲು, ಪಾಠಮಾಡಲು, ಸಂಶೋಧನೆ ನಡೆಸಲು, ಇರುವ ಅಡ್ಡಿ ಹಾಗೂ ಸೌಲಭ್ಯಗಳನ್ನು ಕುರಿತು ತಿಳಿಯುವುದು, ಸಂಬಂಧಪಟ್ಟವರ ಅನುಭವವನ್ನು ಪಡೆಯುವುದು ಇಲ್ಲಿನ ಉದ್ದೇಶವಾಗಿದೆ. ಇದಕ್ಕಾಗಿ ನ್ಯಾಯಾಂಗ, ಸಮಾಜವಿಜ್ಞಾನ, ವಿಜ್ಞಾನ, ಪತ್ರಿಕೋದ್ಯಮ, ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವರಿಂದ, ತಂತಮ್ಮ ಕ್ಷೇತ್ರದಲ್ಲಾದ ಅನುಭವವನ್ನು ಬರೆಯಲು ವಿನಂತಿಸಲಾಯಿತು. ಜನಭಾಷೆಯ ಮೂಲಕ ಬೌದ್ಧಿಕ ಚಟುವಟಿಕೆ ಮಾಡುವುದು ಕೇವಲ ಶೈಕ್ಷಣಿಕ ಅಗತ್ಯದ ವಿಷಯ ಮಾತ್ರವಲ್ಲ. ಪ್ರಜಾಪ್ರಭುತ್ವದಲ್ಲಿ ಜನರ ನ್ಯಾಯಬದ್ಧ ಹಕ್ಕಿನ ಸಂಗತಿ ಕೂಡ ಆಗಿದೆ. ಇಂಗ್ಲಿಶ್ ಮೂಲಕವೇ ಕಲಿಯಬೇಕಾದ ಈ ಪರಿಸ್ಥಿತಿಯು ನಮ್ಮ ಮೇಲೆ ಚಾರಿತ್ರಿಕವಾಗಿ ಮೇಲೆ ಬಿದ್ದ ಭಾರವಾಗಿದೆ, ನಿಜ. ಆದರೆ ಈ ಚಾರಿತ್ರಿಕ ಭಾರದ ಪರಿಣಾಮ ಏನಾಗಿದೆ. ಇದನ್ನು ಮೀರಲು ಒಂದು ಸಮುದಾಯವು ಯಾವ ಬಗೆಯ ಪ್ರಯತ್ನ ಮಾಡಿದೆ ಎಂಬುದು ಬಹಳ ಮುಖ್ಯ ಪ್ರಶ್ನೆ. ತಲೆಕೆಳಗಾದ ಈ ಅವಸ್ಥೆಯನ್ನು ನಿವಾರಿಸಬೇಕು, ಇದರ ಭಾರವನ್ನು ತೆಗೆದುಹಾಕಬೇಕು ಎನ್ನುವುದರೊಳಗೆ, ಜಾಗತೀಕರಣದ ಬೆಳವಣಿಗೆಗಳು ಇದೇ ಪರಿಸ್ಥಿತಿಯನ್ನು ಮತ್ತೆ ಗಟ್ಟಿಗೊಳಿಸುತ್ತಿವೆ, ಅನಿವಾರ್ಯಗೊಳಿಸುತ್ತಿವೆ. ಇಂಗ್ಲಿಶನ್ನು ಈಗಿನ ಮಾರುಕಟ್ಟೆ ಆರ್ಥಿಕ ವ್ಯವಸ್ಥೆಯ ಹಾಗೂ ತಂತ್ರಜ್ಞಾನದ ಭಾಷೆಯಾಗಿಸುವ ಮೂಲಕ ಮೂಲಕ, ದೇಶಭಾಷೆಗಳು ತಮ್ಮನ್ನು ಹೊಸಹೊಸ ಕ್ಷೇತ್ರಗಳಲ್ಲಿ ತೊಡಗಿಕೊಳ್ಳುವುದಕ್ಕಾಗಿ ಹೊಸಸವಾಲುಗಳನ್ನು ತಂದೊಡ್ಡಿವೆ.

ಹೀಗಾಗಿ ಒಂದು ಸಮುದಾಯವಾಗಿ ಅನೇಕ ಕ್ಷೇತ್ರದ ಕೆಲಸಗಾರರು ತಮ್ಮ ಅನುಭವ ಚಿಂತನೆಗಳನ್ನು ಹಂಚಿಕೊಳ್ಳುವ ಮತ್ತು ಕೂಡಿ ಚಿಂತಿಸುವ ಕೆಲಸಕ್ಕೆ ಬಹಳ ಮಹತ್ವವಿದೆ.

ಇದನ್ನು ಕೇವಲ ಕನ್ನಡಾಭಿಮಾನದ ಪ್ರಶ್ನೆಯನ್ನಾಗಿ ನೋಡಬೇಕಾಗಿಲ್ಲ. ಕನ್ನಡ ಅಥವಾ ಯಾವುದೇ ಜನಭಾಷೆಯ ಪ್ರಶ್ನೆಯು, ಅನ್ಯಭಾಷಾ ವಿರೋಧಕ್ಕೆ ನಿಂತು ಬಿಡುವ ಅಪಾಯವನ್ನು ಯಾವಾಗಲೂ ಹೊಂದಿದೆ. ಆದರೆ ಈ ಕುರಿತು ಕನ್ನಡಚಿಂತನೆ ಮೊದಲಿಂದಲೂ ಸ್ಪಷ್ಟವಾಗಿದೆ. ಮಾಡಬೇಕಾದ್ದು ಇಂಗ್ಲಿಶಿನ ವಿರೋಧವಲ್ಲ ಅಥವಾ ಇಂಗ್ಲಿಶಿನ ಒಳಗಿರುವ ತಿಳಿವನ್ನು ಪಡೆದುಕೊಳ್ಳುವುದರ ವಿರೋಧವಂತೂ ಅಲ್ಲ. ಬದಲಿಗೆ ಇಂಗ್ಲಿಶಿನ ಮೂಲಕವೇ ಎಂಬ ಒತ್ತಾಯದ ವಿರೋಧ. ಇಂಗ್ಲಿಶು ಎಷ್ಟು ಯಾರಿಗೆ ಯಾವರೂಪದಲ್ಲಿ ಬೇಕು ಎಂಬ ಸ್ಥಾನ ವಿವೇಚನೆಯ ಮಾಡಬೇಕು. ಇಂಗ್ಲಿಶಿನ ಹಿಂದಿರುವ ಜಾಗತಿಕ ಬಂಡವಾಳ ಹಾಗೂ ರಾಜಕೀಯ ಶಕ್ತಿಗಳನ್ನು ಅರಿಯಬೇಕು. ಈ ಸಮಸ್ಯೆಯನ್ನು ವೈಜ್ಞಾನಿಕವಾಗಿ ರಾಜಕೀಯವಾಗಿ ಸಮುದಾಯಗಳ ನೆಲೆಯಿಂದ ಬಿಡಿಸಿಕೊಳ್ಳುವುದರಲ್ಲೇ ಕನ್ನಡದಂತಹ ಜನಭಾಷೆಯ ಸ್ಥಾನ ಕೂಡ ನಿರ್ಣಯವಾಗುವುದು -ಎಂದು ಅದು ಭಾವಿಸಿದೆ.

ಇಲ್ಲಿನ ಲೇಖಕರು ಈ ಸಮಸ್ಯೆಯನ್ನು ಗಂಭೀರವಾಗಿ ಪರಿಭಾವಿಸಿದ್ದಾರೆ. ಪ್ರಾಮಾಣಿಕವಾಗಿ ಪ್ರತಿಕ್ರಿಯಿಸಿದ್ದಾರೆ. ತಂತಮ್ಮ ಕ್ಷೇತ್ರಗಳಲ್ಲಿರುವ ಭಾಷೆಯ ತೊಡಕನ್ನು ವಿವರಿಸಲು ಬಿಡಿಸಲು ಯತ್ನಿಸಿದ್ದಾರೆ. ಪರ್ಯಾಯಗಳನ್ನು ಸೂಚಿಸಿದ್ದಾರೆ. ಪ್ರತಿ ಕ್ಷೇತ್ರದಲ್ಲೂ ಕನ್ನಡದ ಬಳಕೆಯ ಸಮಸ್ಯೆಯು ಬೇರೆಬೇರೆ ಬಗೆಯಾಗಿರುವುದಾದರೂ, ಮೂಲಭೂತ ಸಮಸ್ಯೆ ಮಾತ್ರ ಒಂದೆ ಇದ್ದಂತಿದೆ. ಅದೆಂದರೆ, ನಮ್ಮ ಪರಿಸರದ ಜತೆಗೆ ಅತ್ಯಂತ ಅರ್ಥಪೂರ್ಣವಾದ ರೀತಿಯಲ್ಲಿ ಸಂವಾದಗೊಳ್ಳುವ ವಿಧಾನ ಯಾವುದು ಎಂಬುದು. ಕನ್ನಡದ ಬಳಕೆ ಬಗ್ಗೆ ಸಮಾಜವಿಜ್ಞಾನಿಗಳಿಗಿಂತ ಇತರೆ ವಿಜ್ಞಾನಿಗಳು ಹೆಚ್ಚು ಉತ್ಸುಕರಾಗಿರುವುದು ವಿಶೇಷ ಸಂಗತಿಯಾಗಿದೆ. ಕಲಕುವ ಸಂಗತಿಯೆಂದರೆ, ಇಂಗ್ಲಿಶೆಂಬುದು ಹಳ್ಳಿ, ಕೆಳವರ್ಗ ಮತ್ತು ಕನ್ನಡದ ಹಿನ್ನೆಲೆಯಿಂದ ಬಂದವರಿಗೆ ಅಪಮಾನವನ್ನೂ ಮಾನಸಿಕ ಹಿಂಸೆಯನ್ನೂ ನಿರ್ಮಿಸಿರುವುದು. ಕೆಲವರು ಮಾತ್ರ ಈ ಪರಿಸ್ಥಿತಿಯಲ್ಲೇ ಹೇಗೆ ಹೊರದಾರಿ ಕಾಣಬಹುದು ಎಂಬಂತೆ ಯೋಚಿಸಿದ್ದರೆ, ಹೆಚ್ಚಿನವರು ಮೂಲಭೂತ ಬದಲಾವಣೆಯಾಗಬೇಕು ಎಂದು ಆಶಿಸಿದ್ದಾರೆ. ಕೆಲವರಿಗೆ ಕನ್ನಡದಲ್ಲಿ ವೈಯಕ್ತಿಕವಾಗಿ ಸಾಧನೆ ಮಾಡಿದ ಭಾವನೆಯಿದ್ದರೆ, ಕೆಲವರಿಗೆ ಇನ್ನೂ ತೊಡಗಿಕೊಳ್ಳಲಾಗದ ಹಿಂಜರಿಕೆಯಿದೆ.

ಮುಖ್ಯವೆಂದರೆ 'ಕನ್ನಡದ ಮೂಲಕ' ಎಂಬ ಸಂಗತಿಯೊಂದೇ ಪರಿಸ್ಥಿತಿಯಲ್ಲಿ ಮೂಲಭೂತ ಬದಲಾವಣೆಯನ್ನು ತರಬಲ್ಲದೇ ಎಂಬ ತಾತ್ವಿಕ ಪ್ರಶ್ನೆಯದು. ಇದನ್ನು ಇಬ್ಬರು ಲೇಖಕರು ಎತ್ತಿದ್ದಾರೆ. ಯಾವ ಭಾಷೆಯಲ್ಲಿ ಕೆಲಸ ಮಾಡುತ್ತೇವೆ ಎನ್ನುವುದರ ಜತೆಯಲ್ಲೇ, ಯಾವ ಉದ್ದೇಶಕ್ಕಾಗಿ ಮತ್ತು ಹೇಗೆ ಕೆಲಸ ಮಾಡುತ್ತೇವೆ ಎಂಬ ಪ್ರಶ್ನೆಯನ್ನೂ ಪರಿಗಣಿಸಬೇಕು ಎಂದು ಅವರು ಸೂಚಿಸಿದ್ದಾರೆ. ಇದರಿಂದ ಕನ್ನಡದ ಮೂಲಕ ಕೆಲಸ ಮಾಡಬೇಕು ಎಂಬ ಚರ್ಚೆಯು, ಭಾವನಾತ್ಮಕವಾಗಿ ಏಕಮುಖದಲ್ಲಿ ಹರಿದುಹೋಗುವ ಅಪಾಯ ತಪ್ಪಿ, ಮುಖ್ಯವಾದ ಇನ್ನೊಂದು ದಿಕ್ಕಿಗೆ ತಿರುಗಿದಂತಾಗಿದೆ.

**- ಸಂಪಾದಕ**

## ಸದ್ಯಕ್ಕಂತೂ ಸ್ಪಷ್ಟ ಉತ್ತರವಿಲ್ಲ

● ಉದಯಕುಮಾರ ಇರ್ವತ್ತೂರು

ಆಧುನೀಕರಣದ ಪ್ರಸರಣ ತನ್ನ ಸ್ವಪೋಷಣೆಗೆ ಹುಟ್ಟುಹಾಕಿದ ಹಲವು ಸಾಂಸ್ಥಿಕ ವ್ಯವಸ್ಥೆಗಳಲ್ಲಿ ಶಿಕ್ಷಣವೂ ಒಂದಾಗಿದೆ. ಇಂತಹ ಆಧುನೀಕರಣ ವಸಾಹತೀಕರಣದ ಮೂಲಕ ನಮ್ಮ ದೇಶದ ಬಹುರೂಪಿ ಸಂಸ್ಕೃತಿಯ ಮೇಲೆ ಉಂಟು ಮಾಡಿದ ಪ್ರಭಾವ ನಮ್ಮೆಲ್ಲರ ಬಣ್ಣದೊಂದಿಗೆ ಬೆರೆತು ಹೋಗಿದೆ ಎಂದರೂ ತಪ್ಪಾಗಲಿಕ್ಕಿಲ್ಲವೇನೋ? ಮೆಕಾಲೆಯ ಶಿಕ್ಷಣ ಸಂಬಂಧಿ ಚಿಂತನೆಯ ಹಿಂದಿರುವ ವಸಾಹತುವಾದಿ ಶಕ್ತಿಯ ದೂರಗಾಮಿ ಯೋಜನೆಗಳನ್ನು ಅರ್ಥ ಮಾಡಿಕೊಂಡಾಗ ಶಿಕ್ಷಣ ನಮಗೆ ಮುಕ್ತ ಚಿಂತನೆಯ ದಾರಿಯಾಗಿರಲಿಲ್ಲ ಎನ್ನುವ ಅಂಶ ವಿಶದವಾಗುತ್ತದೆ. ಜೇಮ್ಸ್ ಮಿಲ್ ಹಾಗೂ ವಿಲಿಯಂ ಜೇಮ್ಸ್ ನಿಶ್ಚಿತ ಉದ್ದೇಶ ದಿಂದ 'ಭಾರತೀಯತೆ'ಯನ್ನು ವ್ಯಾಖ್ಯಾನಿಸುವ ಮೂಲಕ ಬಹುಪಾಲು ಭಾರತೀಯರನ್ನು ಮತ್ತು ಬಹುರೂಪಿ ಸಂಸ್ಕೃತಿಯನ್ನು ನಿರ್ಲಕ್ಷಿಸಿರುವುದು ಇಂದು ನಾವೆದುರಿಸುವ ಸಮಸ್ಯೆಗಳ ಒಂದು ಮೂಲವಾಗಿದೆ. ಹೀಗಾಗಿ ಭಾರತೀಯ ಉಪಖಂಡದ ಬಹುಪಾಲು ಜನರ ಜೀವನ ಕ್ರಮ, ಭಾಷೆ, ಬದುಕು, ನಮಗೇ ಅಪರಿಚಿತವಾಗುಳಿಯುವಂತಾಗಿದೆ. ಆಧುನೀಕರಣದ ಪ್ರಸರಣ ಏಕಮುಖ ಸಂಸ್ಕೃತಿಯನ್ನು ಬಲಿಷ್ಠವಾಗಿಸುತ್ತಾ ಹೋಗುತ್ತದೆ. ಅದು ದೇಶೀಯ, ಪ್ರಾದೇಶಿಕ, ವಿಭಿನ್ನತೆಗಳನ್ನು ಗುರುತಿಸುವುದೇ ಇಲ್ಲ. ಆದರೆ ತನ್ನ ಮೂಲ ಪ್ರಮುಖ ಉದ್ದೇಶವಾಗಿರುವ ಏಕಮುಖ ಸಂಸ್ಕೃತಿಯ, ಸಬಲೀಕರಣಕ್ಕೆ ಪೂರಕವಾಗಿ ಪ್ರಾದೇಶಿಕ ವಿಭಿನ್ನತೆಗಳನ್ನು ಉಪಯೋಗಿಸುವುದನ್ನು ಮನಗಾಣಬಹುದು.

ಇದನ್ನು ಪ್ರಸ್ತಾಪಿಸಲು ಕಾರಣ, ನಾವು ಅಭ್ಯಸಿಸುವ ಪಠ್ಯಕ್ರಮ, ಶಿಸ್ತು, ಜ್ಞಾನ ಪ್ರಕಾರ ಯಾವುದೂ ಪ್ರಾಂತೀಯ ನೆಲೆಯಲ್ಲಿ, ಪ್ರಾದೇಶಿಕ ನೆಲೆಯಲ್ಲಿ ಸಮಗ್ರವಾಗಿ ನಮ್ಮ ಗ್ರಹಿಕೆಗೆ ದಕ್ಕಲು ಸಾಧ್ಯವಿಲ್ಲ ಎನ್ನುವುದನ್ನು ತಿಳಿಸುವುದಾಗಿದೆ. ಭಾಷೆ ಎನ್ನುವುದು ಬದುಕಿನ, ಸಮಾಜದ ಸಂಬಂಧಗಳ ಸಂವಹನದ ಜೀವ ತಂತು ಭಾಷೆಗೆ ಅರ್ಥಬರುವುದು. ಅದು ಪ್ರತಿನಿಧಿಸುವ ಮತ್ತು ಪ್ರತಿಸ್ಪಂದಿಸುವ ಜೀವನಾನುಭವಗಳಿಂದಲೇ ಹೊರತು ಅಮೂರ್ತ ವಾಗಿ ಅಲ್ಲ. ಇವತ್ತು ಭಾಷೆಯ ಮೂಲವಾಗಿರುವ ಭಾಷೆಗೆ ಜೀವ ನೀಡುವ ನಮ್ಮ ಜೀವಾನುಭವ ಆಧುನೀಕರಣದ ಪ್ರಭಾವದಿಂದಾಗಿ ಬಹಳಷ್ಟು ಬದಲಾವಣೆಗೆ ಒಳಗಾಗಿದೆ. ನಮ್ಮ ಕ್ರಿಡೆ, ಆಹಾರ, ಮನರಂಜನೆ, ಹವ್ಯಾಸ, ಓದು, ಕಲೆ, ಸಂಸ್ಕೃತಿ ಎಲ್ಲವೂ ಒಂದು ರೀತಿಯ ಏಕರೂಪತೆಗೆ ಒಳಗಾಗಿವೆ. ಅಂತಹ ಸಂದರ್ಭದಲ್ಲಿಯೂ ಆಧುನಿಕೋತ್ತರ ಚಿಂತನೆ

ಪ್ರತಿಪಾದಿಸುವ ಪ್ರಾದೇಶಿಕ ನೆಲೆಗಳು ಸ್ವಯಂ ನಿರ್ಧರಿತ, ಸ್ವಾಯತ್ತತೆಯುಳ್ಳ ಘಟಕಗಳಾಗಿಲ್ಲ. ಪ್ರಾದೇಶಿಕತೆ ಚಲಾವಣೆಗೆ ಬಂದಿರುವುದು ಆಧುನೀಕರಣದ ಪ್ರಸರಣವನ್ನು ತೀವ್ರಗೊಳಿಸುವ ಉದ್ದೇಶದಿಂದಾಗಿಯೇ ಹೊರತು, ಪ್ರಾದೇಶಿಕ ಸಂಸ್ಕೃತಿಗೆ ಜಾಗತಿಕ ಮಟ್ಟದಲ್ಲಿ ಮಾನ್ಯತೆಯೊದಗಿಸುವ ದೃಷ್ಟಿಯಿಂದ ಅಲ್ಲ. (ತೋಳ್ಪಾಡಿ ರಾಜಾರಾಂ)

ದೇಶಿಯ ಗಡಿಗಳು ಅಪ್ರಸ್ತುತವಾಗುತ್ತಿರುವ ಈ ಕಾಲದಲ್ಲಿ ನಾವು ಬದುಕುತ್ತಿರುವ ಒಟ್ಟಾರೆ ಪರಿಸ್ಥಿತಿ ಮತ್ತು ಪರಿಸರವು ಆಧುನೀಕರಣದಿಂದ ಸಮಗ್ರವಾಗಿ ಪ್ರೇರಿತ ಮತ್ತು ಪ್ರಭಾವಿತವಾಗಿದೆ. ಇದರಿಂದ ದೂರ ಸರಿದು ಮುಕ್ತವಾಗಿ ಚಿಂತಿಸುವುದು ಸಾಧ್ಯವಾಗದ ಮಾತು ಅಥವಾ ಇದರಿಂದ ಹೊರ ನಡೆದು ಇನ್ನಾವುದೋ ನೆಲೆಯಲ್ಲಿ ಚಿಂತಿಸುವ ಅನಿವಾರ್ಯತೆಯೂ ಇಲ್ಲವೆನಿಸುತ್ತದೆ. ಇವತ್ತು ಕನ್ನಡದಲ್ಲಿ ವಿಷಯ ಕಲಿಯುವ ಬಗ್ಗೆ ನಡೆಯುವ ಚರ್ಚೆಯಲ್ಲಿ ಈ ಮಾತು ಪ್ರಸ್ತುತವೆನಿಸುತ್ತದೆ. ಕನ್ನಡ ಸಮೃದ್ಧವಾಗಬೇಕಾದರೆ ಆ ಭಾಷೆ ಇತರ ಸಂಸ್ಕೃತಿಗಳೊಂದಿಗೆ ಸಂವಾದಿಸುವ ಸವಾಲನ್ನು ಸ್ವೀಕರಿಸಬೇಕಿದೆ. ಹಾಗಾಗಿ ಬರೀ ಕನ್ನಡದಲ್ಲಿ ಪರೀಕ್ಷಾ ದೃಷ್ಟಿಯಿಂದ ಪ್ರಾರಂಭಿಕ ಕ್ರಮ ಸ್ವಾಗತಾರ್ಹವಾದರೂ, ಅದರಿಂದ ಮಹತ್ವದ ಸಾಧನೆ ಸಾಧ್ಯವಾಗಲಾರದು. ವಿಸ್ತೃತ ಓದು ಹಾಗೂ ಇತರ ಸಂಸ್ಕೃತಿಗಳೊಂದಿಗೆ ಮುಕ್ತಮನಸ್ಸಿನಲ್ಲಿ ಸಂವಾದ ನಡೆಸುವ ಮೂಲಕ ಕನ್ನಡದ ವಾಙ್ಮಯ ಶ್ರೀಮಂತವಾಗಿದೆ ಅನ್ಸುತ್ತೆ. ಯಾಕೆ ಹೀಗಾಗುತ್ತೆ ಅಂದ್ರೆ, ಭಾಷೆಯ ಮೂಲಕವೇ ಅರಿವು, ಎಚ್ಚರ ನಮ್ಮಲ್ಲಿ ಉಂಟಾಗೋದ್ರಿಂದ ನಮ್ಮ ಚಿಂತನಾ ವಲಯ ವಿಸ್ತೃತಗೊಳ್ಳುತ್ತದೆ. ಸೃಜನಶೀಲತೆಯ ಸೆಲೆಯಿರುವುದೇ ಇಂತಹ ಇಂಟಲೆಕ್ಚುವಲ್ ಎಕ್ಸರ್‌ಸೈಸ್‌ಗಳಲ್ಲಿ ಎನ್ನುವುದು ನನ್ನ ಅನಿಸಿಕೆ. ಈ ಮೊದಲೇ ಹೇಳಿದಂತೆ ಭಾಷೆಯನ್ನು ಜೀವನ ಕ್ರಮದಿಂದ, ಬದುಕಿನಿಂದ, ಉತ್ಪಾದನಾ ಕ್ರಮದಿಂದ ಬೇರ್ಪಡಿಸಿ ಪ್ರಯೋಗಶಾಲೆಯಲ್ಲಿ ಕಲಿಯುವುದ ರಿಂದ ಭಾಷೆಗಾಗಲೀ ನಮಗಾಗಲೀ ಹೆಚ್ಚಿನ ಪ್ರಯೋಜನವೇನೂ ಆಗಲಾರದು.

ಕನ್ನಡ ಭಾಷೆಯನ್ನೇ ತಗೊಳ್ಳಿ. ಒಂದೈವತ್ತು ವರ್ಷಕ್ಕೆ ಮೊದಲು ಇದ್ದಂತಹ ಕನ್ನಡ ಈಗ ಇಲ್ಲ. ಯಾಕೆಂದರೆ ಆಧುನಿಕತೆಯ ಪ್ರಭಾವದಿಂದ ನಮ್ಮ ಕ್ರಮದಲ್ಲಿ ಬದಲಾವಣೆ ಗಳಾಗಿವೆ. ಕನ್ನಡ ಭಾಷೆ ಆಧುನಿಕತೆಯ ಪ್ರಸರಣಕ್ಕೆ ನೆಲೆಯಾಗಿ ಕಾರ್ಯ ನಿರ್ವಹಿಸುತ್ತಿದೆಯೇ ಹೊರತು, ಹೊರಜಗತ್ತಿನ ಪ್ರಭಾವದಿಂದ ಸ್ವಂತವಾಗಿ ಉಳಿದುಕೊಂಡು, ಈ ಹಿಂದೆ ಇದ್ದಂತೆ ಸ್ಥಳೀಯ ಅಥವಾ ಪ್ರಾಂತೀಯತೆಯ ಕಂಪನ್ನು ಉಳಿಸಿಕೊಂಡಿಲ್ಲ. ಹಾಗೊಂದು ವೇಳೆ ಕನ್ನಡವೇನಾದರೂ ಈ ಎಲ್ಲ ಪ್ರಭಾವಗಳಿಂದ ಹೊರತಾಗಿದ್ದರೆ, ಅದು ಪ್ರಾದೇಶಿಕವಾಗಿ ಲಿಪೀಕರಣಕ್ಕೆ ಒಳಗಾಗದ ಅನಕ್ಷರಸ್ಥ ಜನರು ಉಪಯೋಗಿಸುವ ಭಾಷೆಯಾಗಿದೆ. ಇದಕ್ಕೆ ಪ್ರಮುಖ ಕಾರಣ, ಆಧುನೀಕರಣವು ಸಂಪರ್ಕದ ಕೊರತೆಯಿಂದ ಜನರನ್ನು ಮುಟ್ಟದಿರುವುದು ಅಥವಾ ಅವರ ಬದುಕನ್ನು ಗಾಢವಾಗಿ ತಟ್ಟದಿರುವುದು. ಓದು ಅಧ್ಯಯನಗಳು ವ್ಯವಸ್ಥೆ ಯಲ್ಲಿ ಏಕರೂಪೀ ಸಂಸ್ಕೃತಿಯ ಅಭಿಮಾನದ ಒಂದು ಮುಖ ಎನ್ನುವ ಅರಿವು ಎಚ್ಚರ ನಮ್ಮಲ್ಲಿ ಇದ್ದಾಗ, ನಾವು ನಮ್ಮ ಸಮಸ್ಯೆಯ ಮೂಲ ಎಲ್ಲಿದೆ ಎನ್ನುವುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ದಕ್ಷಿಣ ಕನ್ನಡ ಜಿಲ್ಲೆಯ ಬಹುಜನರ ಭಾಷೆಯಾಗಿರುವ ತುಳು ಶುದ್ಧ ತುಳುವಾಗಿ ಉಳಿದಿಲ್ಲ. ಇದು ಸಂಸ್ಕೃತೀಕರಣಗೊಂಡಿದೆ, ಇಂಗ್ಲೀಶೀಕರಣಗೊಂಡಿದೆ, ಮಲಯಾಳೀ ಕರಣಗೊಂಡಿದೆ, ಹಿಂದೀಕರಣಗೊಂಡಿದೆ, ಯಾಕೆಂದರೆ ನಮ್ಮ ವ್ಯಾವಹಾರಿಕ ಬದುಕು ಮೇಲೆ ಹೇಳಿದ ರೀತಿಯಲ್ಲಿ ಪ್ರಭಾವಿತವಾಗಿದೆ. ನಾವು ಇವತ್ತು ಈ ಪ್ರಾದೇಶಿಕ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕೆಂದು ಕೈಗೊಳ್ಳುತ್ತಿರುವ ಎಲ್ಲ ಕ್ರಮಗಳೂ, ಮುಖ್ಯ ವಾಹಿನಿಯ ಆಧುನಿಕ ವಿಚಾರಧಾರೆಯಿಂದ ಪ್ರಭಾವಿತಗೊಂಡಿರುವುದನ್ನು ಕಾಣಬಹುದು. ಹಾಗಾಗಿ ಇದು ಬಹುಮುಖಿ ಸಂಸ್ಕೃತಿಯೊಳಗಿನ ಯಾವುದೋ ಒಂದು ಎಳೆಯನ್ನು ಪ್ರಾತಿನಿಧೀಕರಿಸಿ ಉಳಿದವುಗಳನ್ನು ಮೌನವಾಗಿ ದಮನಿಸಿಬಿಡುತ್ತದೆ. ಹಾಗಾಗಿ ಆಧುನಿಕ ಮಾರ್ಗದ ಮೂಲಕ ಯಾವುದೇ ರೀತಿಯಲ್ಲಿ ಒಂದು ಸಂಸ್ಕೃತಿಯ ಸತ್ವವನ್ನು ಕಾಪಾಡುವುದು ಕಷ್ಟ ಸಾಧ್ಯ.

ಹಾಗಾಗಿ ನನಗೆ ಇವತ್ತು ತುಳುಭಾಷೆಯ ಮೂಲಕ ಜಗತ್ತನ್ನು ಅರಿಯಲು ಸಾಧ್ಯವಿಲ್ಲ. ಆದರೆ ಆಧುನಿಕ ಜಗತ್ತು ತುಳುವಿನ ಮೂಲಕ ಈ ಪ್ರದೇಶದ ಜನರ ಮನೆ ಮನೆಗಳನ್ನು ಆವರಿಸಿಬಿಟ್ಟಿದೆ (ಡಾ ಶಿವರಾಮಶೆಟ್ಟಿ). ಒಂದು ರೀತಿಯಲ್ಲಿ ಪಾರಂಪರಿಕ ವ್ಯವಸ್ಥೆಯ ಮೂಲಕ ಕೆಳಮುಖವಾಗಿ ಹರಿಯುವ ಆಧುನೀಕರಣದ ಪ್ರಭಾವವೇ ನಮ್ಮ ಇಂದಿನ ಸ್ಥಿತಿಗೆ ಕಾರಣವೆನ್ನಬಹುದು.

ಸಂಶೋಧನಾ ಕಾರ್ಯ ಪ್ರಾರಂಭಿಸುವ ಮೊದಲು ನಾನು ಅಕ್ಷರಸ್ಥನಾಗಿದ್ದೂ ಅಶಿಕ್ಷಿತನಾಗಿದ್ದೆ. ಇದನ್ನು ಹೇಳಿಕೊಳ್ಳಲು ಮುಜುಗರವಾದರೂ ಹೇಳಲೇಬೇಕು. ಯಾಕೆಂದರೆ ಓದಿಗೂ ಅರಿವಿಗೂ ಬಹಳ ವ್ಯತ್ಯಾಸವಿದೆ. ಇವತ್ತು ದೇಶೀಯವಾಗಿ ಅಂತಾರಾಷ್ಟ್ರೀಯವಾಗಿ ಅಥವಾ ಪ್ರಾದೇಶಿಕ ನೆಲೆಯಲ್ಲಿ ಆಗುತ್ತಿರುವ ಬದಲಾವಣೆಗಳು ಒಂದಕ್ಕೊಂದು ಸಂಬಂಧಿಸಿ ರುವಂತಹವು. ಈ ಕಾರಣದಿಂದಾಗಿ ನಾವು ಯಾವುದನ್ನೂ ಒಂದು ವಿಂಗಡಿತ ಚೌಕಟ್ಟಿನೊಳಗೆ ನಿಂತು ಅಭ್ಯಸಿಸುವುದೇ ತಪ್ಪು ಎಂದು ನನ್ನ ಅನಿಸಿಕೆ. ಹಾಗೆಯೇ ನಾವು ತಿಳಿಯುವಾಗಲೇ, ಅದಕ್ಕೆ ಪ್ರತಿಯಾದ, ಅದರ ಕುರಿತ ಟೀಕೆಗಳಿವೆ ಎನ್ನುವುದನ್ನು ಅರಿಯುವುದೂ ಅಗತ್ಯ. ಹಾಗಾಗಿ ಸಮಗ್ರ ಸಮಾಜದ ಪರಿಚಯಮಾಡಿಕೊಳ್ಳುವ ಅನಿವಾರ್ಯತೆಯನ್ನು ಮನಗಾಣ ಬೇಕಿದೆ. ಆಧುನಿಕ ಜ್ಞಾನ ಮಾದರಿಯ ಮೂಲ ವಿಷಯಗಳ ಬಗ್ಗೆ ಸರಿಯಾದ ತಿಳುವಳಿಕೆ ಮಾಡಬೇಕಿದ್ದರೆ, ನಾವು ಅದರ ಸಾಮಾಜಿಕ ಚಾರಿತ್ರಿಕ ನೆಲೆಗಳನ್ನು ಗುರುತಿಸಿಕೊಳ್ಳುವ ಶಕ್ತಿ ಸಂಚಯಿಸಿಕೊಳ್ಳಲೇಬೇಕು. ಹಾಗಾಗಿ ಅರ್ಥಶಾಸ್ತ್ರದ ಅರಿವಾಗಬೇಕಿದ್ದರೆ ಅದರ ಕಾಲ, ಸಂದರ್ಭಗಳ ಬಗ್ಗೆ ಸರಿಯಾದ ಕಲ್ಪನೆಯಿಲ್ಲದೆ, ಪರೀಕ್ಷೆಗೆ ಸಹಾಯ ಮಾಡುವ ಒಂದು ಸಾಮಾನ್ಯ ಗೈಡ್ ಓದಿದರೆ ಸಾಲದು. ಯಾವ ವ್ಯವಸ್ಥೆಯಲ್ಲಿ ಅಂಕಗಳು ಪದವಿಗಳು ಮುಖ್ಯ ವಾಗುತ್ತವೋ ಅಲ್ಲಿ ಅಂಕಗಳಿಸುವ ಕಸರತ್ತುಗಳೇ ಮುಖ್ಯವಾಗಿ ಜ್ಞಾನಾರ್ಜನೆ ನಗಣ್ಯವಾಗು ತ್ತದೆ. ಕುತೂಹಲ, ಆಸಕ್ತಿಗಳನ್ನು ವಿಧವಿಧವಾಗಿ ಹಂತ ಹಂತಗಳಲ್ಲಿ ಕೊಲ್ಲುವ ಶಿಕ್ಷಣ ಪದ್ಧತಿಯಲ್ಲಿ ಇದು ಹೇಗೆ ಸಾಧ್ಯ? ಪದವಿಗಳಾಚೆ ಮತ್ತು ಅಂಕಗಳಿಗೂ ಮೀರಿ ಆಸಕ್ತಿ ಉಳಿಸಿಕೊಂಡಿರುವವರನ್ನು ವ್ಯವಹಾರ ಜ್ಞಾನವಿಲ್ಲದ ಮೂರ್ಖರೆನ್ನಬೇಕೋ ಅಥವಾ

ಜ್ಞಾನದಾಹಿಗಳೆನ್ನಬೇಕೋ ಗೊತ್ತಿಲ್ಲ.

ನಮಗೆ ವಿಷಯ ತಿಳಿದಿದೆ, ಆದರೆ ಭಾಷೆಯ ತೊಂದರೆ ಎನ್ನುವ ಮಾತನ್ನು ಮುಖ ಬೆಲೆಯಲ್ಲಿ ಸ್ವೀಕರಿಸಲಾಗದು. ವಿಷಯದ ಅರಿವಾಗುವುದೇ ಭಾಷೆಯ ಮೂಲಕವಾದ್ದರಿಂದ ಹೀಗಾಗಲು ಸಾಧ್ಯವಿಲ್ಲ. ಆದರೆ ಸಂಪರ್ಕ ಭಾಷೆಯ ಮೂಲಕ ವಿಷಯಗ್ರಹಣ ಮಾಡುವಾಗ ಹೆಚ್ಚಿನ ಪರಿಶ್ರಮ ಅಗತ್ಯ. ಕನ್ನಡ ಭಾಷೆ ಶ್ರೀಮಂತವಾಗಬೇಕಿದ್ದರೆ ಅದು ಪ್ರಪಂಚದ ಇತರ ಎಲ್ಲ ಭಾಷೆಗಳೊಂದಿಗೆ ಸಂವಾದಿಸಬೇಕಾಗುತ್ತದೆ. ಉತ್ಪಾದನಾ ವಿಧಾನ, ತಂತ್ರಜ್ಞಾನ, ಸ್ಥಳೀಯ ಸಂಸ್ಕೃತಿಯಾಧಾರಿತ ಬದುಕಿನ ರೀತಿಗಳನ್ನು ಸಶಕ್ತೀಕರಿಸಬೇಕಾಗುತ್ತದೆ. ಸಾಮಾನ್ಯ ಬದುಕಿನ ವಿವಿಧ ಸ್ತರಗಳಲ್ಲಿ ಕನ್ನಡವನ್ನು ಕ್ರಿಯಾಶೀಲವಾಗಿ ಬಳಸುವುದನ್ನು ಪ್ರೋತ್ಸಾಹಿಸ ಬೇಕಾಗುತ್ತದೆ.

ಸಾಮಾನ್ಯವಾದ ಸರ್ಕಾರಿ ಶಾಲೆಯಲ್ಲಿ ಓದಿದ ನಾನು ಪಿಯುಸಿ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ನಡೆಸಿದರೂ, ಮುಂದೆ ಕನ್ನಡವನ್ನು ಔಪಚಾರಿಕವಾಗಿ ಕಲಿಯ ಲಾಗಲಿಲ್ಲ. ನನ್ನ ಹೈಸ್ಕೂಲು ದಿನಗಳಲ್ಲಿ ಕನ್ನಡ ಭಾಷೆಯ ಮೂಲಕ ಜ್ಞಾನ ಪ್ರಪಂಚದಲ್ಲಿ ಸುತ್ತಾಡಿಸಿದ ನನ್ನ ಗುರುಗಳ ಪ್ರೋತ್ಸಾಹ ಮಾರ್ಗದರ್ಶನ ಮರೆಯುವಂತೆಯೇ ಇಲ್ಲ. ಹೊಟ್ಟೆಗೆ ಪಾಡಿಗೆ ದುಡಿಯುವ ನಮ್ಮಲ್ಲಿ ವೃತ್ತಿಯ ಬಗ್ಗೆ ಪ್ರೀತಿ ಮತ್ತು ಆಯ್ಕೆಯೇ ಇಲ್ಲದ ಸಮಾಜದಲ್ಲಿ ಉದ್ಯೋಗದ ಬಗ್ಗೆ ಆದಮ್ಯ ಉತ್ಸಾಹ ಉಳಿಸಿಕೊಳ್ಳುವುದು ಹರ ಸಾಹಸ.

ಹಲವಾರು ಜನ ಹೋರಾಟದ ಮೂಲಕ ಭಾಷೆಯ ತೊಡಕುಗಳನ್ನು ದಾಟಿ ಆಧುನಿಕ ಸಾಹಿತ್ಯಲೋಕದಲ್ಲಿ, ಸಮಾಜ ವಿಜ್ಞಾನ ಕ್ಷೇತ್ರದಲ್ಲಿ, ಸಂಶೋಧನೆಗಳನ್ನು ಮೂಡುವ ಮೂಲಕ ಸಮಾಜಕ್ಕೆ, ಜ್ಞಾನಮಾದರಿಗೆ, ಅಮೂಲ್ಯವಾದ ಕೊಡುಗೆಗಳನ್ನು ನೀಡಿದ್ದಾರೆ. ಅಂತಹವರಲ್ಲಿ ಬಹಳಷ್ಟು ಜನ ಸರ್ಕಾರದ ಶಾಲೆಗಳಲ್ಲಿ ಓದಿ, ವಾರಾನ್ನವೋ ತಿಂಗಳನ್ನವೋ ಮಾಡಿ, ವಿದ್ಯಾರ್ಥಿ ನಿಲಯಗಳಲ್ಲಿ ಇದ್ದುಕೊಂಡು ಹೋರಾಡಿ ಬಂದವರು ಎನ್ನುವುದನ್ನು ನೆನಪಿಡಬೇಕಾಗುತ್ತದೆ. ಸಾಮುದಾಯಿಕ ಬದ್ಧತೆಯಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಇದು ಸಾಧ್ಯವಾಗಿದೆ. ಈಗೀಗ ಇದು ಕಷ್ಟವಾಗುತ್ತದೆ. ಯಾಕೆಂದರೆ ನಮ್ಮ ಸಮಸ್ಯೆ ಭಾಷೆಯದ್ದಲ್ಲ, ಬದಲಾಗಿ ಬಂಡವಾಳದ್ದು. ಈಗ ಪ್ರತಿಯೊಂದನ್ನೂ ಮಾರುಕಟ್ಟೆಯ ಅಮಾನವೀಯ ಮುಖ ನಿರ್ಧರಿಸುವುದರಿಂದ ವಿದ್ಯಾಭ್ಯಾಸವೂ ಸರಕಾಗಿದೆ. ಮಾರುಕಟ್ಟೆಯ ಕಬಂಧ ಬಾಹುಗಳಲ್ಲಿ ಸಿಕ್ಕಿ ಸೋಲುತ್ತಿರುವ ನಲುಗಿ ಹೋಗುತ್ತಿರುವ ವಿಷಯಗಳಲ್ಲಿ ಭಾಷೆಯೂ ಸೇರಿಕೊಂಡಿದೆ. ಪ್ರಾದೇಶಿಕ ಭಾಷೆಗಳನ್ನು ಜಾಗತಿಕ ಮೌಲ್ಯಗಳು ಆಕ್ರಮಿಸಿಕೊಂಡು ಆ ಮೂಲಕ ವ್ಯಾಪಾರೀ ಕರಣದ ಉದ್ದೇಶವನ್ನು ಈಡೇರಿಸಿಕೊಳ್ಳುತ್ತಿವೆ. ಹಾಗಾಗಿ ನಮಗೆ ಜಾಗತಿಕ ತಂತ್ರಜ್ಞಾನ ಆಧುನಿಕತೆಯ ಸರಕುಗಳು, ಐಶಾರಾಮ ಬೇಕು ಅಂತಾದರೆ, ಹಳೆಯ ಮೌಲ್ಯಗಳು ಮೂಲೆ ಸೇರುವುದು ಅನಿವಾರ್ಯ. ನಾವು ಪಾರಂಪರಿಕ ಸಮಾಜದ ಮತ್ತು ಆಧುನಿಕತೆ ಕೊಡಮಾಡುವ ಧನಾತ್ಮಕ ಅಂಶಗಳನ್ನು ಏಕಕಾಲದಲ್ಲಿ ಅನುಭವಿಸಲು ಬರುವುದಿಲ್ಲ.

ವರ್ತಮಾನದ ಬದುಕು ಅನುಭವಿಸುವ ಚೌಕಾಸಿಯಲ್ಲಿ ಹಳೆಯದನ್ನು ಬಿಟ್ಟುಕೊಡಲೇ ಬೇಕಾಗುತ್ತದೆ. ಇಂತಹ ಸತ್ಯವನ್ನು ಒಪ್ಪಿಕೊಳ್ಳುವುದು ಅನಿವಾರ್ಯ. ಈಗ ಕಂಪ್ಯೂಟರ್ ಮೂಲಕವೂ ಕನ್ನಡದ ಬಳಕೆಯಾಗುತ್ತಿದೆ. ಹಾಗಾಗಿ ಇದು ಕನ್ನಡ ಭಾಷೆಯ ಬೆಳವಣಿಗೆಗೆ ಸಹಕಾರಿ ಎಂದು ಮೇಲ್ನೋಟಕ್ಕೆ ನಮಗನಿಸಬಹುದು. ಕಂಪ್ಯೂಟರ್ ಕನ್ನಡ ನಮ್ಮ ಪ್ರಾದೇಶಿಕ ಸಂಸ್ಕೃತಿಗೆ ಅತೀತವಾದ ರೀತಿಯಲ್ಲಿ ಕಾರ್ಯನಿರ್ವಹಿಸುವುದು ಅನಿವಾರ್ಯ. ಯಾಕೆಂದರೆ ಕಂಪ್ಯೂಟರ್ ಕನ್ನಡ, ಕಂಪ್ಯೂಟರ್ ಎನ್ನುವ ಜಾಗತಿಕ ತಂತ್ರಜ್ಞಾನಕ್ಕೆ ಪ್ರಾದೇಶಿಕ ಮಾರುಕಟ್ಟೆಯನ್ನು ಒದಗಿಸಿ ಕೊಡುತ್ತದೆಯೇ ಹೊರತು, ಕನ್ನಡಕ್ಕೆ ಜಾಗತಿಕ ಮಟ್ಟದಲ್ಲಿ ಪ್ರಚಾರ ಸ್ಥಾನ ದೊರಕಿಸಿಕೊಡುವುದಿಲ್ಲ. ಲಂಗುಲಗಾಮಿಲ್ಲದ ಆಧುನಿಕತೆಯ ಪ್ರಸರಣ ಪ್ರಯೋಜನಕ್ಕಿಂತ ಹಾನಿಯನ್ನು ಮಾಡಬಹುದೆನ್ನುವ ಖಚಿತ ನಿಲುವ ಹೊಂದಿದ್ದ ಗಾಂಧೀಜಿಯವರ ಚಿಂತನೆಗಳು ಇಂದು ಹಿಂದೆಂದಿಗಿಂತಲೂ ಪ್ರಸ್ತುತವೆನಿಸಿವೆ.

ಶಿಕ್ಷಣವೆನ್ನುವುದು ಬ್ರೆಡ್, ಟೂತ್‌ಬ್ರಶ್, ಖಾರದಪುಡಿ, ಕಂಪ್ಯೂಟರ್, ಕ್ರೆಡಿಟ್ ಕಾರ್ಡ್ ರೀತಿಯಲ್ಲಿ ಒಂದು ಉಪಯೋಗದ ಅದಕ್ಕಿಂತಲೂ ಹೆಚ್ಚಾಗಿ ಉಪಭೋಗದ ವಸ್ತುವಾಗಿದೆ. ಜಾಗತೀಕರಣದ ಮೋಡಿಗೊಳಗಾಗಿರುವ ವ್ಯವಸ್ಥೆಯಲ್ಲಿ ಈ ಕಮಾಡಿಟಿಗಳ ವಿನಿಮಯ ದರ ಮುಖ್ಯವಾಗಿ ಉಪಯೋಗ ಅಥವಾ ನಿತ್ಯ ಬದುಕಿನಲ್ಲಿ ಅವುಗಳ ಪ್ರಸ್ತುತತೆ ನೇಪಥ್ಯಕ್ಕೆ ಸರಿಯುತ್ತಿದೆ. 'ಜ್ಞಾನ' 'ಶಿಕ್ಷಣ' ವ್ಯಾಪಾರೀಕರಣದ ಸುಳಿಯೊಳಗೆ ಸಿಕ್ಕಿಬಿಟ್ಟಿದೆ (ತೀ.ನಂ. ಶ್ರೀಧರ). ಆದ್ದರಿಂದ ಬರೀ ಹೋರಾಟ ಮಾತ್ರ ನಮ್ಮನ್ನು ಮೇಲೆತ್ತಲಾರದು. ವ್ಯವಹಾರ ಚತುರತೆ (ಜ್ಞಾನಾರ್ಜನೆಯ ಶತ್ರು) ಕೂಡಾ ಇಂದು ಹೆಚ್ಚು ಹೆಚ್ಚು ಅಗತ್ಯವಾಗಿ ಬೇಕಾಗಿದೆ. ಚರಿತ್ರೆಯೇ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಮುಂದುವರಿಯುತ್ತಿದೆ. ಇದನ್ನು ಬದಲಿಸುವ ಶಕ್ತಿ ಯಾವುದು? ಬದಲಿಸುವುದು ಅವಶ್ಯಕವೇ?....... ಸದ್ಯಕ್ಕಂತೂ ನನ್ನಲ್ಲಿ ಸ್ಪಷ್ಟ ಉತ್ತರವಿಲ್ಲ.

(ಮಂಗಳೂರು ವಿಶ್ವವಿದ್ಯಾಲಯದ ಡಾ. ತೀ.ನಂ. ಶ್ರೀಧರ, ಡಾ. ರಾಜಾರಾಂ ತೋಳ್ಪಾಡಿ ಹಾಗೂ ಡಾ. ಶಿವರಾಮಶೆಟ್ಟಿ ಅವರ ಚರ್ಚೆಯನ್ನು ಇಲ್ಲಿ ಬಳಸಿಕೊಂಡಿದ್ದೇನೆ.)

●

## ಕೀಳರಿಮೆಯಿಂದ ಪಾರಾಗಲು ಹೋರಾಟ ಮಾಡಿದೆ

● ಒಡೆಯರ್ ಡಿ. ಹೆಗ್ಗಡೆ

ನಾನು ಕಳೆದ ೨೬ ವರ್ಷಗಳಿಂದಲೂ ಅರ್ಥಶಾಸ್ತ್ರವನ್ನು ಸ್ನಾತಕೋತ್ತರ ಮಟ್ಟದಲ್ಲಿ ಇಂಗ್ಲಿಶಿನಲ್ಲಿ ಬೋಧಿಸುತ್ತಿದ್ದೇನೆ; ಅದರ ಸಂಶೋಧನೆಯಲ್ಲಿ ತೊಡಗಿದ್ದೇನೆ. ಕನ್ನಡ ಭಾಷಿಕನಾಗಿ, ಕನ್ನಡದ ವಿದ್ಯಾರ್ಥಿಗಳಿಗೆ ಅರ್ಥಶಾಸ್ತ್ರವನ್ನು ಇಂಗ್ಲಿಶಿನಲ್ಲಿ ಕಲಿಸುವ

ಪ್ರಾಧ್ಯಾಪಕನಾಗಿ, ಇಂಗ್ಲಿಶಿನಲ್ಲಿ ನನ್ನ ಸಂಶೋಧನೆಗಳನ್ನು ಅಭಿವ್ಯಕ್ತಿಸುವ ಪರಂಪರೆಯನ್ನು ಅನುಸರಿಸಿದ್ದೇನೆ. ಇದು ಪ್ರಾಯಶಃ ನನ್ನ ವೃತ್ತಿ ಬದುಕಿನ ಅನಿವಾರ್ಯತೆ ಎಂದು ತಿಳಿದಿದ್ದೇನೆ. ಇದನ್ನು ಮೀರಿ ಬೆಳೆಯುವುದು ಕೆಲವು ಸ್ಥಾಪಿತ ಹಿತಾಸಕ್ತಿಗಳಿಂದಾಗಿ ನನಗೆ ಸಾಧ್ಯವಾಗಿಲ್ಲ.

ಇದುವರೆಗೆ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಅರ್ಥಶಾಸ್ತ್ರವನ್ನು ಇಂಗ್ಲಿಶಿನಲ್ಲಿ ಬೋಧಿಸಿದ್ದೆ. ೧೯೯೯ ರಿಂದೀಚೆಗೆ ನಾನು ಮಂಡ್ಯ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡವನ್ನು ಸ್ವಲ್ಪಮಟ್ಟಿಗೆ ಬಳಸಿ ಬೋಧಿಸುತ್ತಿದ್ದೇನೆ. ಏಕೆಂದರೆ ಇಲ್ಲಿ ಶೇಕಡಾ ೯೫-೯೮ರಷ್ಟು ಮಂದಿ ಸ್ನಾತಕೋತ್ತರ ವಿದ್ಯಾರ್ಥಿಗಳು ಕನ್ನಡದಲ್ಲೇ ಪರೀಕ್ಷೆ ಬರೆಯುವರು. ಇವರು ಅರ್ಥಶಾಸ್ತ್ರ ಕುರಿತು ಕನ್ನಡದಲ್ಲಿ ಪ್ರಕಟವಾಗಿರುವ ಗ್ರಂಥ ಮತ್ತು ಲೇಖನಗಳನ್ನಷ್ಟೆ ಓದುವವರು. ಈ ಎರಡೂ ವಿಭಿನ್ನ ಸಂದರ್ಭಗಳಲ್ಲಿ ಉನ್ನತ ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತ ನನ್ನ ಅನುಭವವು ಬೇರೆ ಬೇರೆಯಾಗಿದೆ.

ಬಹುತೇಕ ವಿದ್ಯಾರ್ಥಿಗಳಂತೆ ನಾನೂ ಗ್ರಾಮೀಣ ಪರಿಸರದಿಂದ ರೈತಾಪಿ ಕುಟುಂಬದಿಂದ ಬಂದವನು. ಪಿ.ಯು.ಸಿ.ವರೆಗೆ ಕನ್ನಡ ಮಾಧ್ಯಮದಲ್ಲೇ ಕಲಿತವನು. ಇಂಗ್ಲಿಶಿನೊಂದಿಗೆ ತಿಣುಕುವ ಕೆಲಸ ಬಿ.ಎ.ಯಿಂದ ಪ್ರಾರಂಭವಾಯಿತು. ಎಂ.ಎ. ತರಗತಿಗಳಲ್ಲಿ ಕಷ್ಟಪಟ್ಟು ಇಂಗ್ಲಿಶ್ ಕಲಿತೆ. ಅಧ್ಯಾಪಕನಾದ ನಂತರ ಇಂಗ್ಲಿಶ್ ಕಲಿಕೆಯನ್ನು ಮುಂದುವರಿಸಿದೆ. ವಿದ್ಯಾರ್ಥಿಯಾಗಿದ್ದಾಗಲೂ ಅಧ್ಯಾಪಕನಾದ ಪ್ರಾರಂಭದಲ್ಲಿಯೂ ಇಂಗ್ಲಿಶಿನಲ್ಲಿ ಅರ್ಥಶಾಸ್ತ್ರ ಕಲಿಯುವುದು ಬಹಳ ಕಷ್ಟವೆಂದು ತೋರುತ್ತಿತ್ತು. ವಿದ್ಯಾರ್ಥಿಯಾಗಿದ್ದಾಗ ಇಂಗ್ಲಿಶ್ ಕಲಿಯಲು ನಾನು ಅನುಸರಿಸಿದ ವಿಧಾನಗಳೆಂದರೆ - ಪದಗಳಿಗೆ ಸ್ಪೆಲ್ಲಿಂಗ್ ಕಲಿಯುವುದು, ವ್ಯಾಕರಣ ಕಲಿಯುವುದು, ವಾಕ್ಯರಚನೆ ಶುದ್ಧತೆ ಬಗೆಗೆ ಗಮನ ಕೊಡುವುದು ಇತ್ಯಾದಿ. ಇಂಗ್ಲಿಶ್ ಕಲಿಯುವ ಒತ್ತಡದಲ್ಲಿ ಅರ್ಥಶಾಸ್ತ್ರವನ್ನು ಗ್ರಹಿಸುವುದು ನೇಪಥ್ಯಕ್ಕೆ ಸರಿಯುತ್ತಿತ್ತು. ಇತರರೆಲ್ಲರಂತೆ ಗರಿಷ್ಠ ಅಂಕ ಗಳಿಸುವ ಮಹದಾಸೆಯಿಂದ ಅರ್ಥಶಾಸ್ತ್ರವನ್ನು ಇಂಗ್ಲಿಶಿನಲ್ಲಿ ಕಂಠಪಾಠ ಮಾಡಿಬಿಡುತ್ತಿದ್ದೆ. ಅಧ್ಯಾಪಕನಾದ ಮೊದಲ ಕೆಲವು ವರ್ಷಗಳವರೆಗೂ ಪ್ರಮುಖ ಆರ್ಥಿಕ ವ್ಯಾಖ್ಯೆಗಳು, ಸೂತ್ರಗಳು, ಊಹೆಗಳನ್ನು ಕಂಠಪಾಠ ಮಾಡಿಬಿಡುತ್ತಿದ್ದೆ.ಪ್ರಮುಖ ಅರ್ಥಶಾಸ್ತ್ರಜ್ಞರ ಹೇಳಿಕೆಗಳನ್ನು ಯಥಾವತ್ತಾಗಿ ಪುನರಾವರ್ತಿಸುವುದು (ನೋಡಿಕೊಳ್ಳದೇ) ಉತ್ತಮ ಅಧ್ಯಾಪನದ ಲಕ್ಷಣವೆಂದು ೧೯೭೦ ಮತ್ತು ೮೦ರ ದಶಕಗಳಲ್ಲಿ ಹೆಚ್ಚಿನ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ನಂಬಿದ್ದರು. ಇದೊಂದು ಭ್ರಮೆಯೆಂದು ನಂತರ ತಿಳಿಯಿತು. ಯಥಾವತ್ ನಕಲು ಮಾಡುವುದು ಸೃಷ್ಟಿಕಾರ್ಯವಲ್ಲ; ಕಲಿಕೆಯಲ್ಲ ಎನ್ನುವುದನ್ನು ನಾನು ಅರ್ಥಶಾಸ್ತ್ರ ಕುರಿತ ಅಮೆರಿಕನ್ನರ ಪುಸ್ತಕಗಳನ್ನು ಸಂಪ್ರಬಂಧಗಳನ್ನು ಓದುವ ಮೂಲಕ ಅರಿತೆನು. ಅಂದಿನಿಂದ ನಾನು ಕಂಠಪಾಠ ಮಾಡುವ ಪರಂಪರೆಗೆ ಎಳ್ಳುನೀರು ಬಿಟ್ಟೆ. ಈ ಹಂತದಲ್ಲಿ ಸಾಕಷ್ಟು ಚೆನ್ನಾಗಿ ಇಂಗ್ಲಿಶ್ ಕಲಿತಿದ್ದರಿಂದ, ನಾನೇ ವಾಕ್ಯ ರಚಿಸುವ ಇಂಗ್ಲಿಶಿನಲ್ಲಿ ಬರೆಯುವ ಸಾಮರ್ಥ್ಯ ಪಡೆದಿದ್ದೆ. ಆದರೆ ಈ ಹಂತ

ತಲುಪಲು ನಾನು ಪಟ್ಟಕಷ್ಟ ಅಷ್ಟಿಷ್ಟಲ್ಲ. ಇಂಗ್ಲಿಶ್ ದಿನಪತ್ರಿಕೆ, ನಿಯತಕಾಲಿಕೆ, ಗ್ರಂಥ ಸಾಹಿತ್ಯ ಕೃತಿಗಳು, ಸಾಮಾಜಿಕ ವಿಜ್ಞಾನ ಗ್ರಂಥಗಳು, ರೀಡರ್ಸ್ ಡೈಜೆಸ್ಟ್ ನ 'ನಿಮ್ಮ ಪದ ಶಕ್ತಿ ಹೆಚ್ಚಿಸಿಕೊಳ್ಳಿ' ಪುಟ- ಎಲ್ಲವೂ ನನಗೆ ಇಂಗ್ಲಿಶ್ ಕಲಿಯಲು ನೆರವಾಗಿವೆ. ಹೀಗೆ ವಿಷಯಗಳನ್ನು ಇಂಗ್ಲಿಶಿನಲ್ಲೇ ಗ್ರಹಿಸಲು ಮತ್ತು ಅಭಿವ್ಯಕ್ತಿಸಲು ಕಲಿತೆ. ಇದು ನನ್ನ ವೃತ್ತಿಗಾಗಿ ಅನಿವಾರ್ಯವಾಗಿತ್ತು.

ಈ ಮೇಲ್ಕಾಣಿಸಿ ಇಂಗ್ಲಿಶ್ ಭಾಷಾ ಕಲಿಕೆಯ ಮತ್ತು ಬಳಕೆ ಕ್ರಿಯೆ ಬಹಳ ಸುಲಭದ್ದೇನೂ ಅಲ್ಲ. ಇಂಗ್ಲಿಶ್ ಪರಕೀಯ ಭಾಷೆಯಾಗಿದ್ದರಿಂದ, ಅದನ್ನು ಶಾಲಾಕಾಲೇಜು ಮಟ್ಟದಲ್ಲಿ ವ್ಯವಸ್ಥಿತವಾಗಿ ಕಲಿಯಲಾಗದ್ದರಿಂದಲೂ, ಅದೊಂದು ಕಬ್ಬಿಣದ ಕಡಲೆ ಎಂಬ ಭಾವನೆ ಬಾಲ್ಯದಿಂದಲೂ ಮನದಲ್ಲಿ ಬೇರೂರಿದ್ದರಿಂದಲೂ, ನನ್ನಲ್ಲೂ ಅನೇಕಾನೇಕ ಗ್ರಾಮೀಣ ವಿದ್ಯಾವಂತರಂತೆ ಇಂಗ್ಲಿಶ್ ಕುರಿತು ನನ್ನಲ್ಲಿ ಇನ್‌ಫೀರಿಯಾಲಿಟಿ ಕಾಂಪ್ಲೆಕ್ಸ್ ಮನೆ ಮಾಡಿತ್ತು.

೧೯೮೦-೧೯೮೫ ರ ನನ್ನ ವೃತ್ತಿ ಬದುಕಿನ ಅವಧಿಯಲ್ಲಿ ನಾನು ಸ್ವತಂತ್ರವಾಗಿ ಇಂಗ್ಲಿಶಿನಲ್ಲಿ ಅರ್ಥಶಾಸ್ತ್ರ ಕುರಿತು ಸಂಪ್ರಬಂಧಗಳನ್ನು ರಚಿಸಲು ತೊಡಗಿದೆ. ಇದೇ ಅವಧಿಯಲ್ಲಿ ವೃತ್ತಪತ್ರಿಕೆಗಳಿಗೆ ಅರ್ಥಶಾಸ್ತ್ರ ಕುರಿತ-ಇಂಗ್ಲಿಶ್ ಮತ್ತು ಕನ್ನಡ ಕೆಲವು ಲೇಖನಗಳು ಸಂಪಾದಕರುಗಳಿಂದ ವಾಪಾಸ್ಸು ಬರುತ್ತಿದ್ದವು. ಕೆಲವು ಸಂಪಾದಕರು ಭಾಷಾಶುದ್ಧಿ ಬಗೆಗೆ ಗಮನ ಸೆಳೆಯುತ್ತಿದ್ದರು. ಆಗ ನನಗೆ ನನ್ನ ಇಂಗ್ಲಿಶ್ ಮತ್ತು ಕನ್ನಡ ಭಾಷಾ ಸಾಮರ್ಥ್ಯದ ಬಗೆಗೆ ಗುಮಾನಿ ಏರ್ಪಟ್ಟು ಸೋತಂತೆ ಹತಾಶಭಾವ ಮೂಡುತ್ತಿತ್ತು. ನನ್ನ ಪರಿಸ್ಥಿತಿ ಕಂಡು ನನ್ನ ಪತ್ನಿಯೂ ಗಾಬರಿಯಾಗುತ್ತಿದ್ದರು. ಲೇಖನಗಳು ನಿಯತಕಾಲಿಕಗಳಿಂದ ಮರಳಿ ಬರುತ್ತಿದ್ದುದ್ದನ್ನು ಕಂಡು ಕೆಲವು ಸಹೋದ್ಯೋಗಿಗಳು ಕಟಕಿಯಾಡುತ್ತಿದ್ದರು. ಇವರು ಸ್ವಯಂ ಬರೆಯುವವರಲ್ಲ, ಅದು ಬೇರೆ ಮಾತು. ಹೀಗೆ ಭಾಷೆಯ ವಿಷವರ್ತುಲದಲ್ಲಿ ನಾನು ಸಿಲುಕಿದ್ದೆ.

ಇದಕ್ಕೆ ಎರಡು ಅಂಶಗಳು ಪ್ರಮುಖ ಕಾರಣವಾಗಿವೆ ಎಂದು ನನಗಿನಿಸುತ್ತದೆ ೧. ಶಾಲೆ ಕಾಲೇಜು ಮಟ್ಟದಲ್ಲಿ ನಮಗೆ ನೀಡಲಾಗುವ ಭಾಷಾ ಶಿಕ್ಷಣದ ಗುಣಮಟ್ಟ ಬಹಳ ಕಳಪೆಯಾಗಿರುವುದು; ಮತ್ತು ೨. ನಮ್ಮ ಶಿಕ್ಷಣ ಪದ್ಧತಿಯಲ್ಲೇ ವಿದ್ಯಾರ್ಥಿ ಸ್ವತಂತ್ರವಾಗಿ ಚಿಂತಿಸಿ, ಸ್ವಂತ ಬರವಣಿಗೆಯನ್ನು ರೂಢಿಸಿಕೊಳ್ಳಲು ಒತ್ತು ಇಲ್ಲದಿರುವುದು. ನಮ್ಮ ಶಿಕ್ಷಣ ಪದ್ಧತಿ ಕಂಠಪಾಠದ ಪುನರಾವರ್ತನೆಗೆ ಒತ್ತು ಕೊಟ್ಟಿದೆ. ಅದು ನೆನಪಿನ ಶಕ್ತಿ ಪರೀಕ್ಷಿಸುತ್ತದೆ. ಎಲ್ಲದಕ್ಕೂ ಜೆರಾಕ್ಸ್ ಪ್ರತಿ ಕೇಳುತ್ತದೆ; ಅದು ಸೃಜನಶೀಲತೆಯನ್ನು ಕಲಿಸುತ್ತಿಲ್ಲ.

ನಾನು ಈ ಭಾಷಾ ವಿಷವರ್ತುಲವನ್ನು ಮೀರಲು ಜೀವನಾದ್ಯಂತ ಹೋರಾಟ ನಡೆಸಿದ್ದೇನೆ; ನಡೆಸುತ್ತಿದ್ದೇನೆ. ನಿರಂತರ ಓದುವಿಕೆ, ಬರಹ-ಸಮವಾದ-ಉಪನ್ಯಾಸ-ಚರ್ಚೆಗಳಲ್ಲಿ ಭಾಷೆ ಬಳಕೆ-ಪರಿಣಾಮಕಾರಿ ಬಳಕೆ ಬಗೆಗೆ ಒತ್ತು ಕೊಡುತ್ತ ಬಂದಂತೆ-ಇಂಗ್ಲಿಶ್ ಮತ್ತು

ಕನ್ನಡ ಎರಡೂ ಭಾಷೆಗಳ ಬಗೆಗೆ ಹಿಡಿತ ಸಾಧಿಸುವುದು ನನಗೆ ಸಾಧ್ಯವಾಯಿತು.

ಇಂಗ್ಲಿಶ್ ಬಾರದ ವಿದ್ಯಾರ್ಥಿಗಳಿಗೆ ಕಂಠಪಾಠ ಮಾಡಲು ನಾನೂ ಹೇಳಿದ್ದೇನೆ. ಏಕೆಂದರೆ ವಿದ್ಯಾರ್ಥಿಗಳಿಗೆ ಪರೀಕ್ಷೆಯ ಭಾಷಾ ಅಗತ್ಯ ಪೂರೈಕೆಗೊಳ್ಳುವ ತುರ್ತು ಇರುತ್ತದೆ. ಇದು ತಪ್ಪು ಎಂದು ನನಗೂ ಗೊತ್ತು. ಆದರೆ ಇಂಗ್ಲಿಶ್ ಮಾಧ್ಯಮದಲ್ಲೇ ಕಲಿಯುವ ಕ್ರಿಯೆಗೆ ನಮ್ಮನ್ನು ನಾವೇ ಕಟ್ಟಿ ಹಾಕಿಕೊಂಡಿದ್ದೇವೆ. "ತಪ್ಪಾದರೂ ಪರವಾಯಿಲ್ಲ, ಇಂಗ್ಲಿಶ್‌ನಲ್ಲೇ ಬರೆಯಿರಿ. ಭಾಷೆ ಮುಖ್ಯವಲ್ಲ. ವಿಷಯ ಇದ್ದರೆ ಸಾಕು" ಎಂದು ವಿದ್ಯಾರ್ಥಿಗಳಿಗೆ ಮಾರ್ಗ ದರ್ಶನ ನೀಡುವ ನೂರಾರು ಅಧ್ಯಾಪಕರನ್ನು ನಾನು ನೋಡಿದ್ದೇನೆ. "ನೀವು ಕನ್ನಡದಲ್ಲಿ ಬರೆದರೆ ನಾವು ಅಂಕಗಳನ್ನು ಕೊಡುವುದಿಲ್ಲ" ಎಂದು ಹೇಳುವ ಪ್ರಾಧ್ಯಾಪಕರಿದ್ದಾರೆ. ಇವರು ಭಾಷಾ ಉಗ್ರಗಾಮಿಗಳು. ಮಾನವಿಕ ವಿಜ್ಞಾನಗಳನ್ನು ಇಂಗ್ಲಿಶ್‌ನಲ್ಲಿ ಬೋಧಿಸುತ್ತ, ಅಂದರೆ ನೋಟ್ಸ್ ಬರೆಸುತ್ತ, ಇಡೀ ವೃತ್ತಿಜೀವನ ದೂಡುವವರು. ಅಂತಾರಾಷ್ಟ್ರೀಯ ಮಟ್ಟದ ಬುದ್ಧಿಜೀವಿಗಳು ತಾವು ಎಂಬ ಭ್ರಮೆಗೊಳಗಾದವರು. ಈ ವರ್ಗದ ಭಾಷಾ ಉಗ್ರಗಾಮಿಗಳು ತರಗತಿಗಳಲ್ಲಿ ಇಂಗ್ಲಿಶಿನಲ್ಲಿ ಬೋಧಿಸುತ್ತಿದ್ದಾರೆ. ಇದೊಂದು ಬಹಳ ವಿಚಿತ್ರ ಪರಿಸ್ಥಿತಿ ಹಾಗೂ ಉನ್ನತ ಶಿಕ್ಷಣದ ಬಿಕ್ಕಟ್ಟು ಕೂಡ ಆಗಿದೆ.

ಕಳೆದ ೨೫ ವರ್ಷಗಳಿಂದ ಕನ್ನಡದಲ್ಲಿ ಅರ್ಥಶಾಸ್ತ್ರವನ್ನು ಬರೆಯುತ್ತ ಬಂದವನು ನಾನು. ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದಲ್ಲಿ ಬರೆಯುವವರಿಗೆ ಯಾರೂ ಮರ್ಯಾದೆ ಕೊಡುವುದಿಲ್ಲ. ಸ್ವತಂತ್ರ ಚಿಂತನೆಗಳುಳ್ಳ ಲೇಖನ-ಗ್ರಂಥಗಳು ಕನ್ನಡದಂಥ ಭಾಷೆಯಲ್ಲಿ ರಚಿಸಲಾಗದೆಂದು ನಂಬುವವರೇ ಹೆಚ್ಚು. ಅರ್ಥಶಾಸ್ತ್ರ ಕುರಿತು ಕನ್ನಡದಲ್ಲಿ ಹೆಚ್ಚೆಚ್ಚು ಬರೆದಂತೆಲ್ಲಾ ನಾನು ಸಹೋದ್ಯೋಗಿಗಳಿಂದ ಮೂದಲಿಕೆಗೊಳಗಾಗಿದ್ದೇ ಹೆಚ್ಚು. ನನ್ನ ಬರಹಗಳ ವಿಮರ್ಶೆ ಮಾಡಲು ಅವರು ಯಾರೂ ತಯಾರಿಲ್ಲ! ಜರ್ಮನರು, ಫ್ರೆಂಚರು, ರಶಿಯನರು, ಜಪಾನಿಯರು, ಚೀನೀಯರು ಅವರವರ ಮಾತೃಭಾಷೆಗಳಲ್ಲೇ ಕಲಿತು ಬರೆಯುತ್ತ ಆರ್ಥಿಕಾಭಿವೃದ್ಧಿ ಸಾಧಿಸಬಹುದಾದರೆ, ಕನ್ನಡದಂಥ ಭಾರತೀಯ ಭಾಷೆಯನ್ನು ಬಳಸಿ ನಾವು ಆಧುನೀಕರಣ ಸಾಧಿಸಲಾಗದೇ? ಈ ಪ್ರಶ್ನೆ ನನ್ನನ್ನು ಬಹಳವಾಗಿ ಕಾಡುತ್ತಿದೆ. ಕನ್ನಡವನ್ನು ಆಧುನಿಕ ವಿಜ್ಞಾನಗಳ ಪರಿಭಾಷೆಗೆ, ಚೌಕಟ್ಟಿಗೆ ಅಳವಡಿಸಬೇಕು. ಬಗ್ಗಿಸಬೇಕು. ಇದು ನಿರಂತರ ಸಾಗಬೇಕಾದ ಕ್ರಿಯೆ.

ಅರ್ಥವಿಜ್ಞಾನವು ತನ್ನ ಮೊದಲ ಹಂತದ ಬೆಳವಣಿಗೆಯಲ್ಲಿ ಅಂದರೆ ೧೮ ಮತ್ತು ೧೯ನೇ ಶತಮಾನಗಳಲ್ಲಿ ತರ್ಕಶಾಸ್ತ್ರ ಆಧರಿತ ವಿವರಣಾತ್ಮಕ ವಿಧಾನವನ್ನು ಬಳಸಿತು. ಈ ಬಗೆಯ ಅಧ್ಯಯನದಲ್ಲಿ ಯಾವುದಾದರೊಂದು ಬಗೆಯ ಭಾಷೆ ಚೆನ್ನಾಗಿ ಬಂದರೆ ಸಾಕು. ಅದು ಇಂಗ್ಲಿಶೇ ಆಗಬೇಕೆಂದೇನೂ ಇಲ್ಲ. ಆದರೆ ೨೦ನೇ ಶತಮಾನದ ಕೊನೆಯ ಅರ್ಧಭಾಗ ದಲ್ಲಿ ವ್ಯಾಪಕವಾಗಿ ಅರ್ಥಶಾಸ್ತ್ರವನ್ನು ಗಣಿತಶಾಸ್ತ್ರೀಯ ಮತ್ತು ಸಂಖ್ಯಾಶಾಸ್ತ್ರೀಯ ಆಯಾಮಗಳೊಂದಿಗೆ ಬೆಳೆಸುವ ಪ್ರಯತ್ನ ನಡೆಯಿತು. ಅದೇ ಸಂದರ್ಭದಲ್ಲಿ ಅರ್ಥಶಾಸ್ತ್ರಕ್ಕೆ ನೀತಿ ಶಾಸ್ತ್ರದ ಆಯಾಮವನ್ನೂ ನೀಡಲೆತ್ನಿಸಲಾಯಿತು. ಹೀಗಾಗಿ ಈ ಉದ್ದೇಶ ಸಾಧನೆಗಾಗಿ

ಅರ್ಥಶಾಸ್ತ್ರದ ಕಲಿಕೆಯಲ್ಲಿ ಇಂಗ್ಲಿಶ್ ಕಲಿಕೆ ಅನಿವಾರ್ಯ ಎಂಬ ಮನಸ್ಥಿತಿಯನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ನಿರ್ಮಿಸಲಾಗಿದೆ. ಅರ್ಥಶಾಸ್ತ್ರವನ್ನು ಕಾರ್ಪೋರೇಟ್ ಸಂಸ್ಕೃತಿಗೆ ಅಳವಡಿಸುವ ಪ್ರಯತ್ನಗಳು ಸಾಗಿವೆ. ಇದು ಆರ್ಥಿಕ ಸಾಮ್ರಾಜ್ಯವಾದದ ವಿಸ್ತರಣೆಯಲ್ಲದೇ ಬೇರೇನೂ ಅಲ್ಲ.

ಅರ್ಥಶಾಸ್ತ್ರವು ಒಂದು ಸಾಮ್ರಾಜ್ಯಶಾಹಿ ವಾದದ ವಿಜ್ಞಾನವೇ? ಈ ಪ್ರಶ್ನೆಯನ್ನು ೧೯೮೨ರ ನೋಬೆಲ್ ಅರ್ಥವಿಜ್ಞಾನಿ ಜಾರ್ಜ್ ಸ್ಟೀಗ್ಲರ್ ಎತ್ತಿದ್ದಾನೆ. ಆತನ ಉತ್ತರ 'ಹೌದು' ಎಂದಾಗಿದೆ. ಆರ್ಥಿಕ ಸಾಮ್ರಾಜ್ಯವಾದವು ಹೊಸ ರೂಪದಲ್ಲಿ - ಜಾಗತೀಕರಣವಾಗಿ-ಅಂತಾರಾಷ್ಟ್ರೀಯವಾಗಿ ಸ್ಥಿರಗೊಳ್ಳುತ್ತಿದೆ. ಉತ್ಪಾದನೆ ಮತ್ತು ಬಂಡವಾಳಗಳ ಅಂತಾರಾಷ್ಟ್ರೀಕರಣವೇ ಆರ್ಥಿಕ ಸಾಮ್ರಾಜ್ಯವಾದವಾಗಿದೆ. ಇದಕ್ಕೆ ಪ್ರಸ್ತುತದ ಮಾಹಿತಿ ತಂತ್ರಜ್ಞಾನ ಕ್ರಾಂತಿಯು ಹೊಸ ಏಜೆಂಟನಾಗಿದೆ. ಈ ಎಲ್ಲಾ ಕ್ರಿಯೆಗಳಲ್ಲೂ ಸಂವಹನ ಭಾಷೆಯಾಗಿ ಇಂಗ್ಲಿಶ್ ವಿರಾಜಮಾನವಾಗಿದೆ. ಹೀಗಾಗಿ ಖಾಸಗಿ ಕಾರ್ಪೋರೇಟ್ ಉದ್ದಿಮೆಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಉದ್ಯೋಗ ಪಡೆಯಲು ಇಂಗ್ಲಿಶ್ ಮತ್ತು ಒಂದೆರಡು ಯುರೋಪಿಯನ್ ಭಾಷೆಗಳನ್ನು ಮತ್ತು ಮಾಹಿತಿ ತಂತ್ರಜ್ಞಾನವನ್ನು ನಮ್ಮ ಯುವ ಜನತೆ ಕಲಿಯಲೇಬೇಕಾಗಿದೆ. ಹೀಗೆ ನಮ್ಮ ಬುದ್ಧಿವಂತರೆಲ್ಲ ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತಿ ಸಾಧಿಸುವ ಉದ್ದೇಶದ ಜಾಗತೀಕರಣ ಕ್ರಿಯೆ ನಮ್ಮ ಮೇಲೆ ಪದೇ ಪದೇ ಇಂಗ್ಲಿಶನ್ನು ಹೇರುತ್ತಿದೆ.

ಇಲ್ಲಿ ಯಾವ ಬಗೆಯ ಅರ್ಥಶಾಸ್ತ್ರ ನಮಗೆ ಬೇಕು? ಅದು ಜಾಗತೀಕರಣಕ್ಕೆಳೆಸುವ ಆರ್ಥಿಕ ಸಾಮ್ರಾಜ್ಯವಾದದ್ದೋ ಅಥವಾ ಜನಪರವಾದ ಕಲ್ಯಾಣ ಅರ್ಥಶಾಸ್ತ್ರವೋ? ಈ ಪ್ರಶ್ನೆಗೆ ನಾವು ಉತ್ತರ ಕಂಡುಕೊಳ್ಳಬೇಕು. ಈ ಉತ್ತರ ಭಾಗಶಃವಾಗಿ ಯಾವ ಭಾಷೆಯಲ್ಲಿ ಅರ್ಥಶಾಸ್ತ್ರವನ್ನು ನಾವು ಕಲಿಯಬೇಕು ಎಂಬುದನ್ನು ಸ್ಪಷ್ಟಪಡಿಸುವುದು.

ಇಂದು ನಾವು ಉನ್ನತ ಶಿಕ್ಷಣದಲ್ಲಿ ಮತ್ತೊಂದು ಮುಖ್ಯ ಸಮಸ್ಯೆ ಎದುರಿಸುತ್ತಿದ್ದೇವೆ. ಎಂಫಿಲ್ ಮತ್ತು ಪಿಹೆಚ್‌ಡಿ ಪದವಿಗಳ ಆಕಾಂಕ್ಷಿಗಳಾಗಿ, ಬರುವ ಅಭ್ಯರ್ಥಿಗಳು ಬಹುತೇಕ ಮಂದಿ ಕನ್ನಡ ಮಾಧ್ಯಮದಲ್ಲಿ ಎಂ. ಎ. ವರೆಗೆ ಕಲಿತವರೇ! ಇವರಿಗೆ ಸ್ವಲ್ಪವೂ ಇಂಗ್ಲಿಶ್ ಬರುವುದಿಲ್ಲ! ಹೆಸರಿಗೆ ಮಾತ್ರ ಅವರು ೧೦-೧೨ ವರ್ಷ ಇಂಗ್ಲಿಶ್ ಕಲಿತ ಅಂಕಪಟ್ಟಿ ದಾಖಲೆ ಹೊಂದಿರುತ್ತಾರೆ. ನಮ್ಮ ಸಂಶೋಧನಾ ಮಾರ್ಗದರ್ಶಕರಿಗೆ ಪಾಶ್ಚಿಮಾತ್ಯ ವಿದ್ವಾಂಸರನ್ನು ಮೆಚ್ಚಿಸುವ ಹುಚ್ಚು. ಇದು ಅವರನ್ನು ಬಿಟ್ಟು ಹೋಗುವ ಯಾವ ಸೂಚನೆಗಳೂ ಇಲ್ಲ. ಸಂಶೋಧನಾ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಬರದು; ಮಾರ್ಗದರ್ಶಕರು ಇಂಗ್ಲಿಶ್ ತೊರೆಯಲೊಪ್ಪರು. ಆಗ ಥೀಸೀಸ್‌ಗಳನ್ನು ಮಾರ್ಗದರ್ಶಕರೇ ಬರೆಸುತ್ತಾರೆ. ಇದು ಅನೇಕ ಬಗೆಯ ಶೋಷಣೆ-ಅವಾಂತರಗಳಿಗೆ ಕಾರಣವಾಗುತ್ತಿರುವುದನ್ನು ನಾವೆಲ್ಲಾ ನೋಡುತ್ತಿದ್ದೇವೆ.

ನನ್ನನ್ನು ಬಹಳ ಹಿಂದಿನಿಂದಲೂ ಕಾಡುತ್ತಿರುವ ಒಂದು ಪ್ರಶ್ನೆ ಎಂದರೆ- ನಮ್ಮ ವಿಶ್ವವಿದ್ಯಾನಿಲಯಗಳು ಪದವೀಧರರನ್ನು ಅಂತಾರಾಷ್ಟ್ರೀಯ ಬಂಡವಾಳಷಾಹಿ ವ್ಯವಸ್ಥೆಗಾಗಿ

ಉತ್ಪಾದಿಸುತ್ತಿವೆಯೇ? ನಮ್ಮ ದೇಶೀಯ (ವಿಕಾಸಶೀಲ ದೇಶಗಳ) ಆರ್ಥಿಕತೆಗೆ, ಆಡಳಿತಕ್ಕೆ, ರಾಜಕಾರಣಕ್ಕೆ, ನ್ಯಾಯಾಂಗಕ್ಕೆ ಪದವೀಧರರನ್ನು ಸಿದ್ಧಪಡಿಸುತ್ತಿಲ್ಲವೇ? ಮೊದಲನೆ ಪ್ರಶ್ನೆ ಹುಟ್ಟುಹಾಕುವ ತೆವಲನ್ನು (ಆಕರ್ಷಣೆಯನ್ನು) ತೊರೆಯುವುದು ನಮಗೆ ಸಾಧ್ಯವಾಗಬೇಕು. ಅದು ನಿಜವಾಗಬೇಕಿದ್ದರೆ, ನಾವು ಎರಡನೆಯ ಪ್ರಶ್ನೆಗೆ ಪಾಸಿಟಿವ್ ಆದ ಉತ್ತರ ಕಂಡುಕೊಳ್ಳ ಬೇಕು. ಅಂದರೆ ನಮ್ಮ ನಮ್ಮ ದೇಶೀಯ ಆರ್ಥಿಕ ಬೆಳವಣಿಗೆಗೆ, ಸಾಮಾಜಿಕ ಬದಲಾವಣೆಗೆ, ಪ್ರಜಾಸತ್ತೆಗೆ, ಆಡಳಿತಕ್ಕೆ ಬೇಕಾದ ಕಾರ್ಮಿಕರನ್ನು, ಜನರನ್ನು, ನಾಗರಿಕರನ್ನು ನೌಕರಶಾಹಿ ಯನ್ನು ಸಜ್ಜುಗೊಳಿಸಬೇಕಿದ್ದರೆ- ಪಶ್ಚಿಮದ ಪೂರ್ವಾಗ್ರಹಗಳಿಂದ ಮುಕ್ತರಾದ, ದೇಶೀಯ ರಾಷ್ಟ್ರೀಯತೆ, ಸಂಸ್ಕೃತಿ, ಅಭಿವೃದ್ಧಿ ದೃಷ್ಟಿಕೋನಗಳಿಂದ ತರಬೇತಾದ- ವಿದ್ಯಾವಂತ ಜನರನ್ನು ಉನ್ನತ ಶಿಕ್ಷಣ ವ್ಯವಸ್ಥೆ ಹುಟ್ಟುಹಾಕಬೇಕು. ಈ ಗುರುತರ ಕಾರ್ಯದಲ್ಲಿ ಉನ್ನತ ಶಿಕ್ಷಣ ಮಾಧ್ಯಮವಾಗಿ ಕನ್ನಡ ಅಥವಾ ಆಯಾಯ ದೇಶೀಯ- ಭಾಷೆಗಳನ್ನೇ ಕಡ್ಡಾಯವಾಗಿ ಬಳಸಬೇಕು. ಇದರಿಂದ ಆಧುನಿಕ ಸಾಮಾಜಿಕ ಕ್ರಿಯೆಗಳು, ಸರ್ಕಾರಿ ವ್ಯವಸ್ಥೆಗಳು ಜನಪರವಾಗುವ ಪರಿಸರ ಏರ್ಪಡುವುದು.

●

## ಜಾಗತೀಕರಣದ ಸವಾಲನ್ನು ಎದುರಿಸಬೇಕಾಗಿದೆ

● ಬಿ ಕೃಷ್ಣಮೂರ್ತಿ

ವಿಶ್ವದಾದ್ಯಂತ ವಿಶ್ವವಿದ್ಯಾಲಯಗಳಲ್ಲಿ ಬೋಧಿಸಲ್ಪಡುವ ಮನಶ್ಶಾಸ್ತ್ರ ಮೂಲದಲ್ಲಿ ನೂರಕ್ಕೆ ತೊಂಬತ್ತರಷ್ಟು ಇಂಗ್ಲಿಶಿನಲ್ಲಿಯೇ ಇದೆ. ನಾನು ಕನ್ನಡಿಗನಾಗಿ ಕರ್ನಾಟಕದಲ್ಲೇ ಎಲ್ಲಾ ವಿದ್ಯಾಭ್ಯಾಸ ಮಾಡಿ ಮನಶ್ಶಾಸ್ತ್ರದಲ್ಲಿ ಸಂಶೋಧನೆ ಮಾಡಿ ಬರೆದಿರುವ ಲೇಖನಗಳೆಲ್ಲಾ ಇಂಗ್ಲಿಶಿನಲ್ಲಿಯೇ ಲಭ್ಯ.

ಭಾರತದ ನೂರಾರು ವರ್ಷದ ವಸಾಹತುಶಾಹಿ ವ್ಯವಸ್ಥೆಗೆ ಒಗ್ಗಿಕೊಳ್ಳುವ ವ್ಯಕ್ತಿತ್ವವನ್ನು ರೂಪಿಸುವ ಸಂಸ್ಕೃತಿಯನ್ನು ಬಳುವಳಿಯಾಗಿ ಪಡೆದು, ಅಂತಹ ಸಂಸ್ಕೃತಿಯ ಚೌಕಟ್ಟಿಯಲ್ಲಿ ಅಪ್ರಜ್ಞಾಪೂರ್ವಕವಾಗಿ ನನ್ನ ಬಾಲ್ಯದಲ್ಲಿ ಹಾಗೂ ಕಾಲೇಜಿನಲ್ಲಿ ವ್ಯಕ್ತಿತ್ವನ್ನು ರೂಪಿಸಿಕೊಂಡ ನನಗೆ, ವಿದ್ಯಾರ್ಥಿ ದೆಸೆಯಲ್ಲಿ ಇಂಗ್ಲಿಶಿನಲ್ಲಿ ಕಲಿಯುವುದು ಖುಷಿ ಎನಿಸುತ್ತಿತ್ತು. ಇಂಗ್ಲಿಶಿ ನಲ್ಲಿ ಕಲಿಯುವುದು, ಮಾತನಾಡುವುದೆಂದರೆ ಹೆಮ್ಮೆ. ದೇಶದ ಬಗ್ಗೆ ನಮ್ಮ ಭಾರತದ ಸಂಸ್ಕೃತಿಯ ಬಗ್ಗೆ ಎಚ್ಚೆತ್ತ ಪ್ರಜ್ಞೆ ಮೊದಲು ನನಗೆ ಬಂದದ್ದು ಸ್ವಾಮಿ ವಿವೇಕಾನಂದರನ್ನು ಓದಿದಾಗ. ಅವರು ನಮಗೆ ಇಂಗ್ಲಿಶಿನಲ್ಲಿಯೇ ದೊರೆತದ್ದು.

ಆದರೆ ನಾನು ಬೋಧಕನಾಗಿ ಕೆಲಸ ಮಾಡಲು ಆರಂಭಿಸಿದಾಗ ಕೆಲವು ವಿದ್ಯಾರ್ಥಿಗಳು

ನಾನು ಹೇಳಿದ್ದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದಿದ್ದಾಗ ಅಪ್ರಜ್ಞಾಪೂರ್ವಕವಾಗಿಯೇ ಕನ್ನಡದಲ್ಲಿ ಹೇಳಲು ಪ್ರಯತ್ನಿಸುತ್ತಿದ್ದೆ. ಈ ನನ್ನ ಕನ್ನಡದಲ್ಲಿ ಅರ್ಧದಷ್ಟು ಇಂಗ್ಲಿಶ್ ಪದಗಳೇ ಇರುತ್ತಿದ್ದವು.

ವಿದ್ಯಾರ್ಥಿಗೆ ಬೋಧನೆ ಅರ್ಥವಾಗದಿರುವಿಕೆಯ ಇಂತಹ ಸಂದರ್ಭ ನನ್ನಲ್ಲಿ ಪರಕೀಯ ಭಾವನೆಯನ್ನು ಮೂಡಿಸುತ್ತಿತ್ತು. ಆದರೆ ನನಗೆ ನನ್ನ ಮಾನಸಿಕ ಸ್ಥಿತಿ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಆದರೆ ಮುಂದಕ್ಕೆ ಪದವಿಯಲ್ಲಿ ಮನಶ್ಶಾಸ್ತ್ರವನ್ನು ಕನ್ನಡದಲ್ಲಿ ಕಲಿತ ವಿದ್ಯಾರ್ಥಿಗಳು ಸ್ನಾತಕೋತ್ತರ ಪದವಿಗೆ ಬಂದಾಗ ಹಾಗೂ ಸ್ನಾತಕೋತ್ತರ ಪರೀಕ್ಷೆಯನ್ನು ಕನ್ನಡದಲ್ಲಿ ಬರೆಯುವ ಸೌಲಭ್ಯ ಒದಗಿಸಿದಾಗ ಈ ಸಮಸ್ಯೆ ಇನ್ನೂ ಉಲ್ಬಣವಾಯಿತು- ವಿದ್ಯಾರ್ಥಿಗೂ ನನಗೂ ಕಂದಕವೇ ಏರ್ಪಟ್ಟು, ಪರಕೀಯತೆಯ ಅನುಭವ ಇನ್ನೂ ತೀಕ್ಷ್ಣವಾಯಿತು.

ನನ್ನ ಮತ್ತು ನನ್ನ ಬೋಧನೆಯ ಸಂದರ್ಭದಲ್ಲಿ ಉದ್ಭವಿಸಿದ ಸಮಸ್ಯೆಗಳ ಹಿನ್ನೆಲೆಯಲ್ಲಿ ನಾನು ಅನುಭವಿಸಿದ ಪರಕೀಯತೆ ನನಗೆ ಅರ್ಥವಾಗಲಿಲ್ಲ. ಆದರೆ ಈ ಸಮಸ್ಯೆಯನ್ನು ನಮ್ಮ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ ವಿಶ್ಲೇಷಿಸಿದಾಗ ಈ ಪರಕೀಯತೆಯ ಅನುಭವದ ಮೂಲ ಅರ್ಥವಾಗತೊಡಗಿತು: ಅನ್ಯ ಭಾಷೆಯಲ್ಲಿರುವ ವಿಜ್ಞಾನ ನಮ್ಮ ಸಾಮಾನ್ಯ ಜನರಿಂದ, ಒಂದರ್ಥದಲ್ಲಿ ನಮ್ಮ ಸಮಾಜದಿಂದಲೇ ದೂರ ಉಳಿಯುವುದರಿಂದ ನನ್ನಿಂದಲೂ, ನನ್ನ ವಿದ್ಯಾರ್ಥಿಗಳಿಂದಲೂ ಇಂತಹ ವಿಜ್ಞಾನದಿಂದ ಸಾಮಾಜಿಕ, ವೈಯಕ್ತಿಕ, ಕ್ರಿಯಾತ್ಮಕ ಉಪಯೋಗ ಬಹಳ ಕಡಿಮೆ. ಕೇವಲ ಯಾವುದೋ ವರ್ಗದ ಅಥವಾ ಸಮುದಾಯದ ಉಪಯೋಗಕ್ಕಾಗಿ ಒಂದು ಮಿತಿಯಾದ ಚೌಕಟ್ಟಿನಲ್ಲಿ ಬಳಸಲ್ಪಡುವ ಸಾಧ್ಯತೆ ಹೆಚ್ಚು.

ಈ ಸಂದರ್ಭ ನನ್ನನ್ನು ಆಲೋಚನೆಗೆ ಹಚ್ಚಿತು. ಕರ್ನಾಟಕದಲ್ಲಿ ನನ್ನ ಜನ ಕನ್ನಡದಲ್ಲಿ ಪ್ರಬುದ್ಧತೆ ಪಡೆಯುವುದರಿಂದ ಈ ವಿಜ್ಞಾನವನ್ನು ಅವರ ಏಳಿಗೆಗಾಗಿ ಉಪಯೋಗಿಸಲು ಸಾಧ್ಯವೆನ್ನುವ ಭಾವನೆ ಬೆಳೆದು, ಈ ದಿಸೆಯಲ್ಲಿ ಸ್ವಲ್ಪ ಶ್ರಮಿಸಿದ್ದರಿಂದ ಪರಕೀಯ ಭಾವನೆಯಿಂದ ಸ್ವಲ್ಪ ಜಾರಿಕೊಂಡೆ. ಆದರೆ ಎಲ್ಲಾ ವಿಜ್ಞಾನಗಳೂ ಇದೇ ಪರಿಸ್ಥಿತಿಯಲ್ಲಿರುವುದರಿಂದ ಈ ದಿಸೆಯಲ್ಲಿ ಸಾರ್ವತ್ರಿಕ ಶ್ರಮ ಬೇಕೆನ್ನುವ ಪ್ರಜ್ಞೆಯನ್ನು ಪಡೆದೆ. ನಾನು ಪಡೆದ ಈ ಪ್ರಜ್ಞೆಯ ಚೌಕಟ್ಟಿನಲ್ಲಿ ನನ್ನ ವಿಜ್ಞಾನವನ್ನು ಸಮಾಜದ ಪುನಃ ರೂಪಿಸುವಿಕೆಗೆ ಉಪಯೋಗಿಸುವ ದಿಕ್ಕಿನಲ್ಲಿ ಹೇಗೆ ಮುಂದುವರೆಯಬೇಕೆಂಬ ಪ್ರಶ್ನೆಗೆ ಉತ್ತರ ಹುಡುಕಲು ಹೊರಟೆ. ಈ ಪ್ರಶ್ನೆಯ ವಿಶ್ಲೇಷಣೆ ಆಳಕ್ಕೆ ಇಳಿದ ಹಾಗೆ ಮತ್ತೊಮ್ಮೆ ಇಂಗ್ಲಿಶಿನಲ್ಲಿ ಬೋಧಿಸುವುದರ ತಳಹದಿಯಲ್ಲಿರುವ ವಸಾಹತುಕರಿಸಲ್ಪಟ್ಟ ಆತ್ಮಪ್ರಜ್ಞೆಯಲ್ಲಿರುವ ವಿರೋಧಾಭಾಸಗಳತ್ತ ಗಮನ ಹರಿಯಿತು. ಇಂಗ್ಲಿಶ್ ನಮ್ಮನ್ನು ಆಳಿದವರ ಭಾಷೆ ಹಾಗೂ ಇಂಗ್ಲಿಶರು ನಮಗಿಂತ ಕೆಲವು ಮುಖ್ಯ ವಿಷಯಗಳಲ್ಲಿ, ವಿಜ್ಞಾನ, ತಂತ್ರಜ್ಞಾನ ಇತ್ಯಾದಿಗಳಲ್ಲಿ ಅಪಾರ ಸಾಧನೆ

ಮಾಡಿದ್ದಾರೆ. ಇದು ನಮ್ಮಲ್ಲಿ ಕೀಳರಿಮೆಯನ್ನು ಹುಟ್ಟುಹಾಕುತ್ತದೆ. ನಾವು ಇಂಗ್ಲಿಶಿನಲ್ಲಿ ಬೋಧಿಸಿ ಕೀಳರಿಮೆಯಿಂದ ಹೊರಬರಲು ಪ್ರಯತ್ನಪಟ್ಟರೂ ಈ ಕೀಳರಿಮೆ ನಮ್ಮನ್ನು ಬಿಡುವುದಿಲ್ಲ. ಏಕೆಂದರೆ ಇದು ನಮ್ಮನ್ನು ದಾಸರಾಗಿಸಿ ಆಳಿದವರ ಭಾಷೆ ಹಾಗೂ ಅವರ ಸಾಧನೆ ನಮ್ಮ ಸಮಾಜದಲ್ಲಿ ಇನ್ನೂ ಆಗಬೇಕಾಗಿದೆ. ಆದುದರಿಂದ ವಸಾಹತೀಕರಣಕ್ಕೆ ಬಲಿಯಾಗಿರುವ ನಮ್ಮ ಆತ್ಮಪ್ರಜ್ಞೆಯನ್ನು ಅದರಿಂದ ಮುಕ್ತಗೊಳಿಸಿ ನಮ್ಮದಾಗಿಸಿಕೊಂಡು ಹಾಗೂ ವಸಾಹತೀಕರಣದ ಹಿನ್ನೆಲೆಯಲ್ಲಿ ಅಂತರೀಕರಿಸಿಕೊಂಡಿರುವ ಹಲವಾರು ಆತ್ಮವಿಧ್ವಂಸಕ ಮೌಲ್ಯಗಳನ್ನು ತೊರೆದು ವಿಜ್ಞಾನವನ್ನು ಕನ್ನಡೀಕರಿಸುವ ದಿಕ್ಕಿನಲ್ಲಿ ಹೆಜ್ಜೆ ಇಡಬೇಕು ಹಾಗೂ ಈ ಸಂದರ್ಭದಲ್ಲಿ ನಾವು ಕೆಲವು ವಿಷಯಗಳನ್ನು ಗಮನದಲ್ಲಿಟ್ಟುಕೊಳ್ಳ ಬಹುದು: ಇಂಗ್ಲಿಶಿನಲ್ಲಿ ಮನಃಶಾಸ್ತ್ರವನ್ನು ಕಲಿತವರಿಗೆ ಬೋಧನೆಯ ಸಂದರ್ಭದಲ್ಲಿ ಆ ಶಾಸ್ತ್ರದ ಕಲ್ಪನೆಗಳು ಮೊದಲು ಇಂಗ್ಲಿಶಿನಲ್ಲಿ ಮಾಡಿ, ತದನಂತರ ಕನ್ನಡಕ್ಕೆ ಭಾಷಾಂತರಿಸ ಲ್ಪಡುತ್ತವೆ; ಅಂದರೆ, ಮೂಲಭೂತವಾಗಿ ಇಂಗ್ಲಿಶಿನಲ್ಲಿಯೇ ಉಳಿಯುತ್ತವೆ. ಮೊದಲಿ ನಿಂದಲೂ ಕನ್ನಡದಲ್ಲೇ ಕಲಿಯುವುದರಿಂದ ಇಂಗ್ಲಿಶಿನಿಂದ ಕನ್ನಡಕ್ಕೆ ಭಾಷಾಂತರಿಸುವ ಪ್ರಕ್ರಿಯೆಗೆ ಬೇಕಾಗುವ ಮಾನಸಿಕ ಸಮಯ ಮತ್ತು ಶಕ್ತಿವ್ಯಯವನ್ನು ತಡೆಗಟ್ಟಿ ವ್ಯಕ್ತಿ ಇನ್ನೂ ಸೃಜನಾತ್ಮಕವಾಗಬಹುದು.

ಪದವಿಯಲ್ಲಿ ಕನ್ನಡದಲ್ಲಿ ಕಲಿತು ಸ್ನಾತಕೋತ್ತರ ಅಭ್ಯಾಸದಲ್ಲಿ ಇಂಗ್ಲಿಶಿನಲ್ಲಿ ಕಲಿಯುವವನ ಪ್ರಕ್ರಿಯೆ ತೀರಾ ಭಿನ್ನವಾಗಿರುತ್ತದೆ: ಕನ್ನಡವನ್ನು ಇಂಗ್ಲಿಶಿಗೆ ಭಾಷಾಂತರಿಸುವ ಪ್ರಕ್ರಿಯೆಯ ಬದಲಾಗಿ ಕನ್ನಡದಲ್ಲಿರುವ ಪರಿಕಲ್ಪನೆಗಳನ್ನು ಹೊಸತಾಗಿ ಕಲಿಯುತ್ತಿರುವ ಇಂಗ್ಲಿಶಿನ ಪದಗಳಲ್ಲಿ ತುಂಬಬೇಕಾಗುತ್ತದೆ.ಮನಶ್ಶಾಸ್ತ್ರದ ಸಂಶೋಧನೆ ಹಾಗೂ ಅದರ ಬೋಧನೆ ಕನ್ನಡೀಕರಿಸುವ ದಿಕ್ಕಿನಲ್ಲಿ ನಾವು ಹೆಜ್ಜೆ ಇಟ್ಟಾಗ, ನಾವು ಹಾಗೂ ನಮ್ಮ ಕನ್ನಡ ಜಾಗತೀಕರಣಕ್ಕೆ ಗುರಿಯಾಗಿರುವುದನ್ನು ಪ್ರಜ್ಞಾಪೂರ್ವಕವಾಗಿ ಎದುರಿಸಬೇಕು: ಜಾಗತೀ ಕರಣದ ಹಿನ್ನೆಲೆಯಲ್ಲಿ ಒಂದು ಕಡೆ ಹೊಸ ಅನುಭವಗಳ ಸೆಲೆಯೇ ಒಡೆದು ಹಿಂದೆಂದೂ ಅರಿಯದ, ಅನುಭವಿಸದ ಮಾನಸಿಕ ಸ್ಥಿತಿಗಳು ಸಂಶೋಧನೆಗೆ ಸಿಗುತ್ತಿವೆ; ಇದಕ್ಕಾಗಿ ಕನ್ನಡದ ಪದಪುಂಜ ಬೆಳೆದು ಕನ್ನಡಿಗನ ಅನುಭವ ಲೋಕದ ವೈಶಾಲ್ಯತೆಯನ್ನು ಹೆಚ್ಚಿಸಬೇಕಾಗಿದೆ; ಇನ್ನೊಂದು ಕಡೆ ಹಲವಾರು ಹಿಂದಿನಿಂದ ಬಳುವಳಿಯಾಗಿ ಪಡೆದ ಪರಿಕಲ್ಪನೆಗಳು, ಅನುಭವಗಳು ಮಾಯವಾಗುತ್ತಿವೆ. ಹಾಗೂ ಈ ಜಾಗತೀಕರಣವು ಕೆಲವು ವಿಷಯಗಳಲ್ಲಿ ನಾವು ಅಂತರೀಕರಿಸಿಕೊಂಡಿರುವ ಆತ್ಮವಿಧ್ವಂಸಕ ಮೌಲ್ಯಗಳನ್ನು ಪುಷ್ಟೀಕರಿಸಿ ನಮ್ಮನ್ನು ಚಾರಿತ್ರಿಕವಾಗಿ ಹಿಂದಕ್ಕೊಗೆಯುವ ಶಕ್ತಿಯನ್ನು ಪಡೆದಿರುವುದರಿಂದ, ಕನ್ನಡ ಬೆಳೆದು ಈ ಎಲ್ಲ ಅನುಭವಗಳನ್ನು ಬಹಳ ಸ್ಪಷ್ಟವಾಗಿ ವ್ಯಕ್ತಿಯ ಪ್ರಜ್ಞೆಗೆ ಸಿಗುವ ಹಾಗೆ ಮಾಡಬೇಕು. ಇಂಗ್ಲಿಶಿನಲ್ಲಿ ಈ ಕೆಲಸ ಈಗಾಗಲೇ ನಡೆದಿದೆ.

●

# ಕನ್ನಡವನ್ನು ಕಟ್ಟುವ ಭಾಷೆಯಾಗಿಸುವುದು ಹೇಗೆ?

● ಟಿ ಆರ್ ಚಂದ್ರಶೇಖರ

ಈ ಇಂಗ್ಲಿಶ್ ಪದಕ್ಕೆ ಕನ್ನಡದಲ್ಲಿ ಏನು? ಅದನ್ನು ಕನ್ನಡದಲ್ಲಿ ಏನನ್ನುತ್ತಾರೆ? ಇದನ್ನು ಕನ್ನಡದಲ್ಲಿ ಅಭಿವ್ಯಕ್ತಿಪಡಿಸುವುದು ಹೇಗೆ? - ಇವೆ ಮುಂತಾದ ಪ್ರಶ್ನೆಗಳನ್ನು, ಅರ್ಥಶಾಸ್ತ್ರದ ಅಧ್ಯಾಪಕನಾಗಿ ನಾನೇ ಕೇಳುತ್ತಿದ್ದ ಕಾಲವೊಂದಿತ್ತು. ಅನೇಕರು ಈಗಲೂ ಹೀಗೆ ಕೇಳುತ್ತಿರುತ್ತಾರೆ. ಕನ್ನಡದ ಅನೇಕ ವಿದ್ವಾಂಸರ ಜೊತೆ ಕೆಲಸ ಮಾಡುವ ಅವಕಾಶ ನನಗೆ ಬಂದಿದೆ. ಅಂತಹ ಸಂದರ್ಭಗಳಲ್ಲಿ ಮೇಲೆ ಹೇಳಿರುವ ಪ್ರಶ್ನೆಗಳನ್ನು ಅವರಿಗೆ ಹಾಕಿರುವುದುಂಟು. ಅವರು ತಮ್ಮ ಭುಜಕುಣಿಸಿಯೋ ಅಥವಾ 'ಅಯ್ಯೋ ಪಾಪ' ಎನ್ನುವಂತಹ ಮುಗುಳು ನಗೆ ಬೀರಿಯೋ ತಮ್ಮ ಪ್ರತಿಕ್ರಿಯೆ ನೀಡಿರುವುದುಂಟು. ಯಾವುದೋ ವಿಷಯ, ಯಾವುದೋ ಸಂದರ್ಭ, ಅಲ್ಲಿ ಬಳಸಬೇಕಾದ ಕನ್ನಡ ಪದದ ಬಗ್ಗೆ ಕೇಳಿದರೆ ಅವರು ಭುಜ ಕುಣಿಸದೆ - 'ಅಯ್ಯೋ ಪಾಪ!' ಎನ್ನುವಂತಹ ಮುಗುಳುನಗೆ ಬೀರದೆ ಮತ್ತೇನು ತಾನೆ ಮಾಡಿಯಾರು! ಈಗ ನಾನು ಅಂತಹ ಪ್ರಶ್ನೆಗಳನ್ನು ಕೇಳುವುದಿಲ್ಲ. ಅದೆಲ್ಲ ಅರ್ಥರಹಿತ ಎಂಬುದು ಗೊತ್ತಾಗಿದೆ.

ಒಂದು ವಿಷಯ - ಒಂದು ಜ್ಞಾನ ಕೋಶ ಕುರಿತಂತೆ ಒಂದು ನಾಡಿನ ಒಬ್ಬ ವ್ಯಕ್ತಿ ತಾನು ಯಾವುದೇ ಭಾಷೆಯಲ್ಲಿ ಅದನ್ನು ಅಭ್ಯಾಸ ಮಾಡಿರಲಿ ಅದರ ಬಗ್ಗೆ ಅಧ್ಯಯನ ನಡೆಸಿರಲಿ - ಆ ವ್ಯಕ್ತಿಗೆ ಅದನ್ನು ತನ್ನ ನಾಡಿನ ಭಾಷೆಯಲ್ಲಿ ಹೇಳಲು-ಬರೆಯಲು-ವಿವರಿಸಲು ಸಾಧ್ಯವಾಗದಿದ್ದರೆ, ಅದು ಆ ಭಾಷೆಗೆ ಸಂಬಂಧಿಸಿದ ಮಿತಿಯನ್ನು ಸೂಚಿಸುವುದಕ್ಕೆ ಪ್ರತಿಯಾಗಿ, ಅವರ ವಿಷಯದ ಮೇಲಿನ ಪ್ರಭುತ್ವದ ಮಿತಿಯನ್ನು ತೋರಿಸುತ್ತದೆ ಎಂಬುದು ನನಗೀಗ ಮನದಟ್ಟಾಗಿದೆ. ಎಂ ಎನ್ ಶ್ರೀನಿವಾಸ್ ಕಟ್ಟಿದ ಎಲ್ಲ ಸಿದ್ಧಾಂತ-ವೈಚಾರಿಕ ಆಕೃತಿಗಳಿಗೆ ಆಕರವಾಗಿದ್ದುದು ಕರ್ನಾಟಕದ ಬದುಕು. ಕರ್ನಾಟಕದ ಬದುಕನ್ನು ಆಧಾರವಾಗಿಟ್ಟುಕೊಂಡು ಅವರು ತಮ್ಮ ಅನೇಕ ಅಭಿಜಾತ ಸದೃಶ ಸಿದ್ಧಾಂತಗಳನ್ನು ಕಟ್ಟಿದ್ದಾರೆ. ಈ ನೆಲದ ಬದುಕನ್ನು ಹಿಡಿದಿಡಲು ಅವರು ಪ್ರಯತ್ನಿಸಿದ್ದಾರೆ ಎಂಬುದು ಅವರ ಅಧ್ಯಯನ ಪ್ರಬಂಧಗಳ ಪರಿಶೀಲನೆಯಿಂದ ತಿಳಿಯುತ್ತದೆ. ತಮ್ಮ ಕೃತಿ / ಪ್ರಬಂಧಗಳಲ್ಲಿ ಅವರು ನೂರಾರು ಕನ್ನಡ ನುಡಿಗಳನ್ನು ಬಳಸಿದ್ದಾರೆ. ಅವುಗಳಿಗೆ ಇಂಗ್ಲಿಶ್‌ನಲ್ಲಿ ವಿವರಣೆ ನೀಡಿದ್ದಾರೆ. ಆದರೆ ಅವರೆಂದೂ ಕನ್ನಡದಲ್ಲಿ ಬರೆಯಲಿಲ್ಲ. ಬರೆಯಬೇಕು ಎಂದು ಅವರಿಗೆ ಅನ್ನಿಸಲಿಲ್ಲ. ಅವರಿಗೆ ಕನ್ನಡದಲ್ಲಿ ಬರೆಯುವುದು ಕಷ್ಟವಾಗಿರಲಿಲ್ಲ. ಮುಖ್ಯ ಮಾತೆಂದರೆ ಅವರಿಗೆ ಕನ್ನಡದಲ್ಲಿ ಬರೆಯುವ ಪ್ರಮೇಯ ಬರಲಿಲ್ಲ. ಅಂತಹ ಒತ್ತಡವೂ ಇರಲಿಲ್ಲ.

ಆದರೆ ಪಾರ್ಥ ಚಟರ್ಜಿ, ಅಮರ್ತ್ಯಸೆನ್, ಅಶೋಕರುದ್ರ ಮುಂತಾದ ಚಿಂತಕರು ಎಂ ಎನ್ ಶ್ರೀನಿವಾಸರಂತೆ ಇಂಗ್ಲಿಶ್‌ನಲ್ಲಿ ಬರೆದಿದ್ದಾರೆ. ಜತೆಗೆ ಕಡ್ಡಾಯವೆನ್ನುವಂತೆ

ಬಂಗಾಳಿಯಲ್ಲೂ ಬರೆದಿದ್ದಾರೆ. ಬಂಗಾಳಿಯಲ್ಲಿ ಬರೆದರೆ ಮಾತ್ರ ತಮಗೆ ತಮ್ಮ ವಿಚಾರಗಳಿಗೆ ಅಧಿಕೃತತೆ ಸಾಧ್ಯ ಎಂಬ ನಂಬಿಕೆಯಲ್ಲಿ ಅವರು ಕೆಲಸ ಮಾಡಿದ್ದಾರೆ. ಸಮಾಜ ವಿಜ್ಞಾನಗಳ ವಿದ್ಯಾರ್ಥಿಯಾದ ನನಗೆ, ಕನ್ನಡದಲ್ಲಿ ಅವುಗಳ ಅಧ್ಯಯನ ನಡೆಸುತ್ತಿರುವ ನನಗೆ ಇದು ಬಹಳ ಮುಖ್ಯ. ತಮ್ಮ ಭಾಷೆಯಲ್ಲಿ ಬರೆಯುವುದು ಪಾರ್ಥ ಚಟರ್ಜಿಗಾಗಲಿ ಅಥವಾ ಲೂಯಿಸ್ ಡುಮೋಗಾಗಲಿ ಕೀಳರಿಮೆಯಾಗಿರಲಿಲ್ಲ. ಎಂ ಎನ್ ಶ್ರೀನಿವಾಸ್‌ರ ಸಿದ್ಧಾಂತಗಳನ್ನು ಕುರಿತು ತಮ್ಮ ವಿಮರ್ಶೆಯನ್ನು ಲೂಯಿಸ್ ಡುಮೋ ಅವರಿಗೆ ಫ್ರೆಂಚ್‌ನಲ್ಲಿ ಮಂಡಿಸಿದರೆ ವಿನಾ ಇಂಗ್ಲಿಶ್‌ನಲ್ಲಿ ಅಲ್ಲ.

ಇಂತಹ ಸ್ಥಿತಿ ಕನ್ನಡದಲ್ಲಿ ಇಲ್ಲ. ಇದ್ದಿದ್ದರೆ ಶ್ರೀನಿವಾಸ್ ಅವರು ಕನ್ನಡದಲ್ಲಿ ಬರೆಯುತ್ತಿದ್ದರು ಎಂದು ಕಾಣುತ್ತದೆ. ಬಂಗಾಳದಲ್ಲಿ ಅಂತಹ ಸನ್ನಿವೇಶ ೨೦ನೆಯ ಶತಮಾನದ ೩೦-೪೦ ದಶಕಗಳಲ್ಲೇ ನಿರ್ಮಾಣಗೊಂಡಿತ್ತು.

## ಕನ್ನಡಿಗರಿಗೆ ಕನ್ನಡದಲ್ಲಿ ವಿಚಾರಗಳು ಬೇಕು

ಬಂಗಾಳಿಗಳಿಗೆ ಬಂಗಾಳಿಯಲ್ಲೇ ವಿಚಾರಗಳು ಎನ್ನುವ ಸನ್ನಿವೇಶವಿದೆಯಲ್ಲ, ಅಂತಹ ಸನ್ನಿವೇಶ ಕನ್ನಡಕ್ಕೆ ಸಂಬಂಧಿಸಿದಂತೆ ಇಂದು ನಿಧಾನವಾಗಿ ನಿರ್ಮಾಣವಾಗುತ್ತಿದೆ(?). ಬಂಗಾಳಿಯಲ್ಲಿರುವಂತೆ, ಕನ್ನಡದಲ್ಲಿ ಬಂದರೆ ಮಾತ್ರ ಓದಬಲ್ಲ ಓದುಗವರ್ಗ ಕನ್ನಡದಲ್ಲಿ ಇಂದು ರೂಪುಗೊಳ್ಳುತ್ತಿದೆ. ನಾಡಿನ ಚಿಂತಕರು ತಮ್ಮ ನಾಡಿನ ಭಾಷೆಯಲ್ಲಿ ಬರೆಯಬೇಕು ಎಂಬ ಒತ್ತಡ ನಿಧಾನವಾಗಿಯಾದರೂ ನಿರ್ಮಾಣವಾಗುತ್ತಿದೆ. ಒಂದು ಕಾಲದಲ್ಲಿ ಇಂಗ್ಲಿಶ್ ಮೂಲಕವೇ ಜ್ಞಾನವನ್ನು ಪಡೆಯುತ್ತಿದ್ದ ಜನ ವರ್ಗವೊಂದಿತ್ತು. ಅದೊಂದು ಪ್ರತಿಷ್ಠಿತ ವರ್ಗ. ಅವರು ಕನ್ನಡವನ್ನೂ ಓದುತ್ತಿದ್ದರು. ಆದರೆ ಇಂದು ಕನ್ನಡವನ್ನು ಮಾತ್ರವೇ ನೆಮ್ಮಿಕೊಂಡಿರುವ ಜನ ಸಮೂಹವಿದೆ. ಈ ಸಮೂಹಕ್ಕೆ ಇಂಗ್ಲಿಶ್ ಅಗತ್ಯವಾಗಿಲ್ಲ. ಆದರೆ ಓದಬೇಕು ತಿಳಿದುಕೊಳ್ಳಬೇಕು ಎಂಬ ಹಂಬಲ ಅವರಿಗಿದೆ. ಈ ಜನ ಸಮೂಹಕ್ಕೆ ಕನ್ನಡದಲ್ಲಿ ವಿಚಾರ ದೊರೆಯಬೇಕು. ಕನ್ನಡವು ತನ್ನ ಅನುವಾದ ಭಾಷೆಯ ಜವಾಬುದಾರಿಯನ್ನು ಈಗಾಗಲೆ ಪೂರೈಸಿದೆ. ಇಂದು ಅದು ವಿಚಾರವನ್ನು, ಸಿದ್ಧಾಂತವನ್ನು, ಚಿಂತನೆಯನ್ನು-ಮೀಮಾಂಸೆಯನ್ನು ಕಟ್ಟುವ ಕೆಲಸವನ್ನು ಮಾಡಬೇಕಾಗಿದೆ. ಕನ್ನಡದಲ್ಲಿ ಕೆಲಸ ಮಾಡುತ್ತಿರುವವರ ಜವಾಬುದಾರಿ ಈಗ ದೊಡ್ಡದಾಗಿದೆ. 'ಕೆಲವರು ಕನ್ನಡವನ್ನು ಬಳಸುವ ಹಾದಿಗೆ ಅನೇಕ ಉಪಾಯಗಳ ಮೂಲಕ, ಹೋರಾಟ ಮಾಡಿ ಬಂದವರು'.

## ಕನ್ನಡ 'ಅನುವಾದ' ಭಾಷೆಯೋ ಅಥವಾ 'ಕಟ್ಟುವ' ಭಾಷೆಯೋ?

ಕನ್ನಡವು ಇಂದು ಅನುವಾದದ ಭಾಷೆಯಾಗಿ ಉಳಿದಿಲ್ಲ ಎಂಬ ಮಾತನ್ನು ಹಿಂದೆ ಹೇಳಿದ್ದೇನೆ. ವಿಷಾದದ ಸಂಗತಿಯೆಂದರೆ, ಅದು ಇನ್ನೂ ಅನುವಾದದ ಮೂಲಕ ಪಡೆಯುವ ಭಾಷೆಯಾಗಿ ಮುಂದುವರಿದಿರುವುದು. ಇಂದಿಗೂ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ 'ಸಮಾಜ ಪಾಠಗಳು' ಪಠ್ಯಗಳು ಮೊದಲು ಇಂಗ್ಲಿಶ್‌ನಲ್ಲಿ ಸಿದ್ಧಗೊಂಡು ನಂತರ ಕನ್ನಡಕ್ಕೆ ಅನುವಾದವಾಗುತ್ತಿವೆ. ಇತ್ತೀಚೆಗೆ (೧೯೯೯) ಕರ್ನಾಟಕ ಸರ್ಕಾರದ ಯೋಜನಾ ಇಲಾಖೆಯು

'ಕರ್ನಾಟಕ ದತ್ತು ಮಾನವ ಅಭಿವೃದ್ಧಿ' ಎಂಬ ಅಧ್ಯಯನ ವರದಿಯನ್ನು ಇಂಗ್ಲಿಶ್‌ನಲ್ಲಿ ಸಿದ್ಧಪಡಿಸಿತು. ಅದನ್ನು ಕನ್ನಡದಲ್ಲಿ ನೀಡದಿದ್ದರೆ ಸರ್ಕಾರದ 'ಕನ್ನಡತನ'ಕ್ಕೆ ಕುಂದುಂಟಾಗುತ್ತದೆ ಎಂದು ತಿಳಿದು ಕನ್ನಡಕ್ಕೆ ಅನುವಾದ ಮಾಡಿ ಪ್ರಕಟಿಸಲಾಯಿತು. ಈ ವಿಷಯಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲೇ ಚಿಂತಿಸಿ-ಕನ್ನಡದಲ್ಲೇ ಬರೆಯುವುದು ಸಾಧ್ಯವಿದೆ. ಆದರೆ ಇದಕ್ಕೆ ಅಧಿಕಾರಶಾಹಿ ಬಹುದೊಡ್ಡ ಅಡ್ಡಿಯಾಗಿದೆ. ಈ 'ಐಎಎಸ್ ಲಾಬಿ'ಯ ಕನ್ನಡವು ಕಟ್ಟುವ ಭಾಷೆಯಾಗಿ ಬೆಳೆಯುವುದಕ್ಕೆ ಕಾಲ್ತೊಡಕಾಗಿದೆ. ಅವರಿಗೆ ಕನ್ನಡವು 'ಅನುವಾದ ಭಾಷೆ'ಯಾಗಿ ಮುಂದುವರಿಯಬೇಕಾಗಿದೆ. ಸಮಾಜ ವಿಜ್ಞಾನ ಕುರಿತಂತೆ ಕನ್ನಡದಲ್ಲಿ ಕೆಲಸ ಮಾಡುತ್ತಿರುವವರು ಇಂದು ಈ ಲಾಬಿಯ ವಿರುದ್ಧ ಕೂಡ ಹೋರಾಟ ನಡೆಸಬೇಕಾಗಿದೆ. ಈ ಅಧಿಕಾರಿಶಾಹಿಯನ್ನು ಮೊದಲು ಕರ್ನಾಟಕದ ಉಪಚಾರಕ್ಕೆ ಒಳಪಡಿಸಬೇಕಾಗಿದೆ.

**ಕನ್ನಡವೆಂದರೆ ಕೇವಲ 'ಸಾಹಿತ್ಯ'ವಲ್ಲ!**

ಕನ್ನಡವೆಂದರೆ ಅದು ಕೇವಲ ಸಾಹಿತ್ಯಕ್ಕೆ ಸಾಹಿತಿಗಳಿಗೆ ಸಂಬಂಧಿಸಿದ ಸಂಗತಿ ಎಂದು ತಪ್ಪಾಗಿ ತಿಳಿಯಲಾಗಿದೆ. ಇಂತಹ ಪರಿಸ್ಥಿತಿ ನಿರ್ಮಾಣವಾಗಲು ಸಮಾಜ ವಿಜ್ಞಾನಿಗಳು ಬಹಳಷ್ಟು ಕಾರಣರಾಗಿದ್ದಾರೆ ಎನ್ನುವುದು ನಿಜ. ಆದರೆ ಇದಕ್ಕೆ ಸಾಹಿತಿಗಳ ಕಾಣಿಕೆ ಕಡಿಮೆಯೇನಿಲ್ಲ. ಸಮಾಜ ವಿಜ್ಞಾನಗಳನ್ನು ಕುರಿತಂತೆ ಕನ್ನಡದಲ್ಲಿ ಕೆಲಸ ಮಾಡುತ್ತಿರುವವರ ಮತ್ತೊಂದು ಹೋರಾಟ, ಇಂತಹ ಭ್ರಮೆಯ ವಿರುದ್ಧವಾಗಿದೆ. ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಕೆಲಸ ಮಾಡುತ್ತಿರುವರಿಗೂ ಕನ್ನಡಕ್ಕೂ ಏನು ಸಂಬಂಧ ಎನ್ನುವ ರೀತಿಯಲ್ಲಿ ಚರ್ಚೆ ನಡೆಯುತ್ತಿದೆ. ಈ ವಿಜ್ಞಾನಗಳನ್ನು ಕುರಿತಂತೆ ಕನ್ನಡದಲ್ಲಿ ಕೆಲಸ ಮಾಡುವುದೆಂದರೆ, ಅವುಗಳಿಗೆ ಪಠ್ಯಗಳನ್ನು ಕನ್ನಡದಲ್ಲಿ ಸಿದ್ಧಪಡಿಸುವುದು ಎಂಬ ಸರಳ ಭಾವನೆ ವ್ಯಾಪಕವಾಗಿದೆ. ನಮ್ಮ ಅರ್ಥಶಾಸ್ತ್ರದ ಪ್ರಭೃತಿಗಳು ಅನಾದಿ ಕಾಲದಿಂದಲೂ 'ಬೇಡಿಕೆ-ಪೂರೈಕೆ'ಗಳ ಬಗ್ಗೆ ಪಾಠ ಮಾಡಿಕೊಂಡು, ಬರೆದುಕೊಂಡು, ಬಂದಿದ್ದಾರೆ. ಆದರೆ ಅವರಿಗೆ ತಮ್ಮ ಊರಿನ ತರಕಾರಿ ಮಾರುಕಟ್ಟೆಯಲ್ಲಿ ಬೆಲೆ ಹೇಗೆ ನಿರ್ಧಾರವಾಗುತ್ತದೆ ಎಂಬುದನ್ನು ನಿದರ್ಶನವಾಗಿಟ್ಟುಕೊಂಡು, ಬೇಡಿಕೆ-ಪೂರೈಕೆ ಕುರಿತಂತೆ ಪಾಠ ಮಾಡಬೇಕು - ಬರೆಯಬೇಕು ಎಂದು ಅನ್ನಿಸಿಯೇ ಇಲ್ಲ. ಭಾರತದ ಜನಸಂಖ್ಯೆಯ ಬಗ್ಗೆ ಸಮರ್ಥವಾಗಿ ಮಾತನಾಡಬಲ್ಲ ನಮ್ಮ ಅರ್ಥಶಾಸ್ತ್ರದ ಮೇಷ್ಟ್ರುಗಳಿಗೆ, ಕರ್ನಾಟಕದ - ಜಿಲ್ಲೆಗಳ ಜನಸಂಖ್ಯೆಯ ಗತಿಶೀಲ ಬೆಳವಣಿಗೆಯ ಬಗ್ಗೆ ಮಾತನಾಡುವುದು ಸಾಧ್ಯವಿಲ್ಲ. ನಮ್ಮ ಶಾಲಾ-ಕಾಲೇಜುಗಳಲ್ಲಿ ಸಮಾಜ ವಿಜ್ಞಾನ ಕುರಿತಂತೆ ಸ್ನಾತಕೋತ್ತರ ತರಗತಿಗಳವರೆಗೆ ಕನ್ನಡದಲ್ಲಿ ಪಾಠ-ಪ್ರವಚನಗಳು ನಡೆದರೂ, ಅವು ಕರ್ನಾಟಕದ್ದು ಎಂದು ಅನ್ನಿಸುವುದಿಲ್ಲ. ಇಂದು ನಮ್ಮ ಹೋರಾಟ ಇಂತಹ ಸಂಗತಿಗಳ ವಿರುದ್ಧ ನಡೆಯಬೇಕಾಗಿದೆ.

**ಕನ್ನಡವು ಕರ್ನಾಟಕದ್ದಾಗಬೇಕು**

ಕನ್ನಡವು ಕರ್ನಾಟಕವಾಗುವ ಬಗೆಯ ಬಗ್ಗೆ ನಾವು ಇಂದು ಯೋಚಿಸಬೇಕಾಗಿದೆ. ಕನ್ನಡದಲ್ಲಿ ಉನ್ನತ ಅಧ್ಯಯನ ನಡೆಯಬೇಕು ಎಂಬುದು ಸಮಸ್ಯೆಯ ಒಂದು ಮುಖ

ಮಾತ್ರವಾಗಿದೆ. ಎರಡನೆಯ ಮುಖವೆಂದರೆ ಕನ್ನಡದಲ್ಲಿನ ಅಧ್ಯಯನಗಳನ್ನು ಕರ್ನಾಟಕದ್ದ ನ್ನಾಗಿ ಮಾಡುವುದು. ಕರ್ನಾಟಕದ ಮೂಲೆಮೂಲೆಯಲ್ಲಿರುವ ಜನರನ್ನು ಕುರಿತಂತೆ ಅಧ್ಯಯನಗಳಾಗಬೇಕು. ಇದನ್ನು ಹೀಗೆ ಹೇಳಬಹುದು. ವಿಶ್ವಬ್ಯಾಂಕ್ ಕುರಿತ ಚರ್ಚೆಯನ್ನು ನಮ್ಮ ಹಳ್ಳಿಯೆಂದರೆ ಸಹಕಾರಿ ಬ್ಯಾಂಕನ್ನು ಕುರಿತ ಚರ್ಚೆಯನ್ನಾಗಿ ಪರಿವರ್ತಿಸುವಂತಾಗ ಬೇಕು. ಇದು ಕನ್ನಡವು ಕರ್ನಾಟಕವಾಗುವ ಬಗೆ.

ಕನ್ನಡದಲ್ಲಿ ಕೆಲಸ ಮಾಡುತ್ತಿದ್ದೇವೆ ಎಂಬುದು ಪ್ರತಿಷ್ಠೆಯ ಸಂಗತಿಯಾಗಬೇಕಾಗಿಲ್ಲ. ಅದು ಕೀಳರಿಮೆಯ ಕೆಲಸವಲ್ಲ ಎಂಬುದನ್ನು ಮೊದಲೇ ಹೇಳಿಯಾಗಿದೆ. ಕನ್ನಡದಲ್ಲಿನ ಕೆಲಸವೆಂದರೆ ಜನರನ್ನು ಕುರಿತಂತಹ ಕೆಲಸವಾಗಿದೆ. ಈ ನಂಬಿಕೆಯೇ ಸಮಾಜ ವಿಜ್ಞಾನಗಳನ್ನು ಕುರಿತಂತೆ ಅಧ್ಯಯನ ನಡೆಸಲು ನನ್ನಂಥವನಿಗೆ ಪ್ರೇರಣೆಯಾಗಿದೆ.

●

## ಸಾಮಾನ್ಯರಿಗೆ ತಲುಪಿಸಿದ ತೃಪ್ತಿಯಿದೆ

● ಸಿ ಆರ್ ಚಂದ್ರಶೇಖರ್

ನನ್ನ ನೂರನೆಯ ಕನ್ನಡ ಪುಸ್ತಕ 'ಮನೋವೈದ್ಯಕೀಯದಲ್ಲಿ ೨೫ ವರ್ಷಗಳು-ಹಿತ-ಅಹಿತ' ಈ ವರ್ಷದ ಕೊನೆಯಲ್ಲಿ ಬಿಡುಗಡೆಯಾಗಲಿದೆ. ನನ್ನ ಮೊದಲ ಪುಸ್ತಕ 'ಮಗು ಮನಸ್ಸು ಮತ್ತು ಆರೋಗ್ಯ'ವು ೧೯೮೦ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ ಬಿಡುಗಡೆಯಾಯಿತು. ಅದಕ್ಕೆ ೧೯೮೦ರ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರವೂ ದೊರಕಿತು. ಅಂದರೆ ಇಪ್ಪತ್ತೊಂದು ವರ್ಷಗಳ ಅವಧಿಯಲ್ಲಿ ಒಂದು ನೂರು ಪುಸ್ತಕಗಳನ್ನು ಬರೆದು ಪ್ರಕಟಿಸಲು ನನಗೆ ಸಾಧ್ಯವಾಯಿತು. ಇದು ಸಾಧ್ಯವಾಗಿದ್ದು ಮನೋ ವಿಜ್ಞಾನದ ವಿಷಯಗಳ ಆಕರ್ಷಣೆ ಮತ್ತು ವ್ಯಾಪ್ತಿ, ಈ ವಿಷಯಗಳ ಬಗ್ಗೆ ಜನ ಸಾಮಾನ್ಯರಲ್ಲಿ ರುವ ಕುತೂಹಲ, ಹಾಗೂ ಉತ್ಸಾಹದಿಂದ ಪುಸ್ತಕಗಳನ್ನು ಪ್ರಕಟಿಸಲು ಮುಂದಾದ ಬೆಂಗಳೂರಿನ ಐ.ಬಿ.ಎಚ್. ಪ್ರಕಾಶನ, ನವಕರ್ನಾಟಕ ಪ್ರಕಾಶನ ಮತ್ತಿತರ ಪ್ರಕಾಶನ ಸಂಸ್ಥೆಗಳು. ನನ್ನ ಬರವಣಿಗೆಗೆ ಸ್ಫೂರ್ತಿ, ಮಾರ್ಗದರ್ಶನ ಮಾಡಿದವರು ಶ್ರೀಮತಿ ತ್ರಿವೇಣಿ, ಡಾ. ಎಂ. ಶಿವರಾಮ್ ಹಾಗೂ ಡಾ. ಡಿ.ಎಸ್. ಶಿವಪ್ಪನವರು. ನಲವತ್ತಕ್ಕೂ ಹೆಚ್ಚಿನ ಲೇಖನಗಳನ್ನು, ಬೆಂಗಳೂರು ವಿಶ್ವವಿದ್ಯಾಲಯದವರು ಹೊರತರುತ್ತಿದ್ದ ಮಾಸಿಕ 'ಜನ ಪ್ರಿಯ ವಿಜ್ಞಾನ' ಪತ್ರಿಕೆಯಲ್ಲಿ ಪ್ರಕಟಿಸಿ ಬೆನ್ನು ತಟ್ಟಿದ, ನನ್ನ ಸಹಪಾಠಿ ದಿವಂಗತ ಶ್ರೀ ಕೆ.ಎಚ್. ರಾಮಯ್ಯನನ್ನೂ ನಾನು ನೆನೆಸಿಕೊಳ್ಳಲೇಬೇಕು. ಮಗು ಮನಸ್ಸು ಮತ್ತು ಆರೋಗ್ಯ ಹಾಗೂ ಮಿದುಳು ಪುಸ್ತಕಗಳು ಪ್ರಕಟವಾಗಲೂ ಆತನೇ ಕಾರಣ. ನನ್ನನ್ನು ಐ.ಬಿ.ಎಚ್.

ಸಂಸ್ಥೆಗೆ ಪರಿಚಯಿಸಿ, 'ಚಿತ್ತ ವೈಚಿತ್ರ್ಯ' ಎಂಬ ಮನೋರೋಗಿಗಳ ನೈಜ ಕಥೆಗಳ ಸಂಕಲನ ಹೊರಬರಲು ದಿವಂಗತ 'ರಸಿಕಪುತ್ತಿಗೆ' (ಖ್ಯಾತ ಮಕ್ಕಳ ಸಾಹಿತಿ-ನಿಜ ನಾಮಧೇಯ ಶ್ರೀ ಸುಬ್ರಮಣ್ಯ ಆಚಾರ್ಯ) ಪ್ರೇರಣೆ ನೀಡಿದರು. ಸುಮಾರು ೫೦ ಕ್ಕೂ ಹೆಚ್ಚಿನ ಬಿಡಿ ಲೇಖನಗಳನ್ನು ಒಟ್ಟುಗೂಡಿಸಿ, ಡೆಮಿ ಅಷ್ಟದಳಾಕಾರದ ೪೦೦ ಪುಟಗಳ ದೊಡ್ಡ ಪುಸ್ತಕ- 'ಮನಸ್ಸು ಮತ್ತು ಮಾನಸಿಕ ಅಸ್ವಸ್ಥತೆ' ಯನ್ನೂ ದೊಡ್ಡ ಸಮಾರಂಭದಲ್ಲಿ ಬಿಡುಗಡೆ ಮಾಡಿಸಿ ಬೆನ್ನು ತಟ್ಟಿದ ನಿಮ್ಹಾನ್ಸ್ ನ ನಿರ್ದೇಶಕರಾಗಿದ್ದ ಡಾ. ಜಿ.ಎನ್. ನಾರಾಯಣ ರೆಡ್ಡಿಯವರನ್ನು ನಾನು ಮರೆಯಲಾರೆ. ನಾನು ಬರೆದ ಪುಸ್ತಕಗಳನ್ನು ಅಂದವಾಗಿ ಮುದ್ರಿಸಿ, ಕಡಿಮೆ ಬೆಲೆ ಇಟ್ಟು, ಪುಸ್ತಕ ಪ್ರದರ್ಶನಗಳ ಕ್ಯಾಂಪ್‌ಗಳಲ್ಲಿ ಮಾರಿ, ಪ್ರತಿಗಳು ಮುಗಿಯುತ್ತಿದ್ದಂತೆಯೇ ಮರುಮುದ್ರಣ ಮಾಡುತ್ತಾ, ನನ್ನ ಸಹಸ್ರಾರು ಪುಸ್ತಕಗಳು ಓದುಗರ ಕೈ ಸೇರುವಂತೆ ಮಾಡುತ್ತಿರುವ ನವಕರ್ನಾಟಕ ಪ್ರಕಾಶನದ ಶ್ರೀ ಆರ್.ಎಸ್. ರಾಜಾರಾಮ್ ಮತ್ತು ಅವರ ಬಳಗದವರಿಗೆ ನಾನು ಆಭಾರಿಯಾಗಿರಲೇ ಬೇಕು. ಇವರ ದುಡಿಮೆಯಿಂದಲೇ 'ಜ್ಞಾಪಕಶಕ್ತಿಯ ವೃದ್ಧಿ ಹೇಗೆ?' ಎನ್ನುವ ಕಿರುಪುಸ್ತಕ ಎಂಟೇ ವರ್ಷಗಳಲ್ಲಿ ಹನ್ನೊಂದು ಮುದ್ರಣ ಕಂಡಿದೆ. 'ನಿಮ್ಮ ಮಗುವಿನ ಮನಸ್ಸು' ಪುಸ್ತಕ ೧೪ ವರ್ಷಗಳಲ್ಲಿ ಏಳು ಮುದ್ರಣಗಳನ್ನು, 'ಮನೋರೋಗ; ನಿಮ್ಮ ನಂಬಿಕೆ, ಎಷ್ಟು ಸರಿ, ಎಷ್ಟು ತಪ್ಪು', 'ಲೈಂಗಿಕ ಅರಿವು', 'ಶಾಲಾಮಕ್ಕಳ ಮಾನಸಿಕ ಸಮಸ್ಯೆಗಳು', 'ನಿಮ್ಮ ಮಾನಸಿಕ ಆರೋಗ್ಯವನ್ನು ಹೆಚ್ಚಿಸಿಕೊಳ್ಳಿ' ಪುಸ್ತಕಗಳು ತಲಾ ಆರು ಮುದ್ರಣಗಳನ್ನು ಕಾಣುವಂತಾಗಿದೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ನಾನು ಬರೆದ 'ಭಾನಾಮತಿ' ಮತ್ತು 'ದೇವರು ದೆವ್ವ ಮೈಮೇಲೆ ಬರುವವೇ' ಪುಸ್ತಕಗಳನ್ನು ಆರಾರು ಬಾರಿ ಮುದ್ರಿಸಿ, ಹತ್ತಿರ ಹತ್ತಿರ ಒಂದುಲಕ್ಷ ಪ್ರತಿಗಳನ್ನು ಮಾರಾಟ ಮಾಡಿದೆ.

ನಮ್ಮ ನಾಡಿನ ಬಹುತೇಕ ದೈನಿಕ, ವಾರ ಮತ್ತು ಮಾಸಿಕ ಪತ್ರಿಕೆಗಳು ನನ್ನ ಸುಮಾರು ೮೦೦ಕ್ಕೂ ಹೆಚ್ಚಿನ ಲೇಖನಗಳನ್ನು ಪ್ರಕಟಿಸಿ, ಸುಲಭವಾಗಿ, ಶೀಘ್ರವಾಗಿ ಎಲ್ಲ ಅಕ್ಷರಸ್ಥ ಜನರನ್ನೂ ಮುಟ್ಟಿಸಿವೆ. ಪ್ರಜಾವಾಣಿ, ಸುದ್ದಿ ಸಂಗಾತಿ, ಇಂಚರ, ಕರ್ಮವೀರ, ಮಂಗಳ ದಂತಹ ಪತ್ರಿಕೆಗಳು ಮನೋವೈದ್ಯಕೀಯ ಅಂಕಣಗಳನ್ನು ಪ್ರಕಟಿಸಿ ನನ್ನ ಮತ್ತು ಜನರ ನಡುವೆ ಸಂವಾದ ಸೇತುವೆಯನ್ನು ನಿರ್ಮಿಸಿವೆ. ತತ್ಪರಿಣಾಮವಾಗಿ ಪ್ರತಿತಿಂಗಳು ಸುಮಾರು ಇನ್ನೂರು ಜನ ನನಗೆ ಪತ್ರ ಬರೆದು ತಮ್ಮ, ಮನೆಯವರ, ಸ್ನೇಹಿತರ ಮಾನಸಿಕ ಸಮಸ್ಯೆಗಳಿಗೆ ಸಲಹೆ-ಸಮಾಧಾನವನ್ನು ಕೇಳುತ್ತಿದ್ದಾರೆ. ಪ್ರಕಟಿತ ಲೇಖನ ಅಥವಾ ಪುಸ್ತಕದೊಂದಿಗೆ, ಜಿಲ್ಲಾ ಕೇಂದ್ರದಲ್ಲಿ ಕೆಲಸಮಾಡುವ ಮನೋವೈದ್ಯರನ್ನು ಕಂಡು ಸಲಹೆ ಚಿಕಿತ್ಸೆಗಾಗಿ ಬೇಡಿಕೆ ಸಲ್ಲಿಸುತ್ತಿದ್ದಾರೆ. ಮಾನಸಿಕ ಆರೋಗ್ಯ ಅನಾರೋಗ್ಯದ ಬಗ್ಗೆ ಜನಸಾಮಾನ್ಯರ ಅರಿವನ್ನು ಸ್ವಲ್ಪವಾದರೂ ಹೆಚ್ಚಿಸಿದ ತೃಪ್ತಿ ನನಗಿದೆ. ನಾನು ಎಲ್ಲಿ ಹೋದರೂ, ನನ್ನ ಉಪನ್ಯಾಸ ಕೇಳಲು ಜನ ಉತ್ಸುಕತೆಯಿಂದ ನೆರೆಯುವುದನ್ನು ನೋಡಿ ಸಂತೋಷವಾಗುತ್ತದೆ. ಮಾನಸಿಕ ಆಸ್ಪತ್ರೆಗೆ ಹೋಗಲು, ಮನೋವೈದ್ಯರನ್ನು ಕಾಣಲು ಜನರಲ್ಲಿ ಹಿಂದಿದ್ದ ಸಂಕೋಚ,

ಹಿಂಜರಿಕೆ ಈಗ ಕಡಿಮೆಯಾಗಿರುವುದು ಸಮಾಧಾನ ಕೊಡುತ್ತದೆ. ಸಾಕಷ್ಟು ಜನ ಸರಳವಾದ ಮಾನಸಿಕ ಆರೋಗ್ಯವರ್ಧನೆಯ ಸೂತ್ರಗಳನ್ನು ಬಳಸಿ ತಮ್ಮ ಮಾನಸಿಕ ಒತ್ತಡವನ್ನೂ ತಗ್ಗಿಸಿಕೊಂಡು, ಜೀವನದ ಸಮಸ್ಯೆಗಳನ್ನು ಮೊದಲಿಗಿಂತ ಹೆಚ್ಚು ಚೆನ್ನಾಗಿ ನಿಭಾಯಿಸುತ್ತಿರುವ ದನ್ನು ಗಮನಿಸಿದರೆ ನನ್ನಲ್ಲಿ ಸಾರ್ಥಕತೆಯ ಭಾವ ಮೂಡುತ್ತದೆ.

**ಮನೋವಿಜ್ಞಾನ**

ಮನಸ್ಸು ನಮ್ಮೆಲ್ಲರಿಗೂ ನಿಗೂಢವೇ. ನಮ್ಮ ಎಲ್ಲ ಆಲೋಚನೆ, ಭಾವನೆ, ಬುದ್ಧಿ ವಂತಿಕೆ, ಸ್ಮಂತಿಕೆ, ನಡೆವಳಿಕೆಗಳಿಗೆ ಮೂಲವಾದ ಮನಸ್ಸಿನ ಬಗ್ಗೆ ನಮಗೆ ತಿಳಿದಿರುವುದು ಅತ್ಯಲ್ಪ. ನಮ್ಮಲ್ಲಿ ಹಿಂದೆ, ಚಿತ್ತ, ಬುದ್ಧಿ, ಭಾವ ಎಂದು ಗುರುತಿಸಿ, ಬುದ್ಧಿ, ಮಿದುಳಿಗೆ, ಭಾವ ಹೃದಯಕ್ಕೆ ಸಂಬಂಧಿಸಿದ್ದು ಎಂದು ಹೇಳಿ ಚಿತ್ತ-ಮನಸ್ಸನ್ನು ಎಲ್ಲಿದೆ ಎಂದು ಹೇಳದೆಯೇ ಬಿಟ್ಟರು. ಮತ್ತೊಬ್ಬರ ಮನಸ್ಸನ್ನೂ ಅರ್ಥಮಾಡಿಕೊಳ್ಳುವುದು ಎಷ್ಟು ಕಷ್ಟವೋ, ತನ್ನ ಮನಸ್ಸನ್ನೂ ಅರ್ಥ ಮಾಡಿಕೊಳ್ಳುವುದು ವ್ಯಕ್ತಿಗೆ ಇನ್ನೂ ಕಷ್ಟವೆನ್ನಲಾಯಿತು. ಸ್ವಾವಲೋಕನ, ಚಿಂತನ, ತಪಸ್ಸುಗಳು ಮನಸ್ಸನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತವೆ ಎಂದು ಹೇಳಲಾಯಿತು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಮನಸ್ಸಿನ ನೆಮ್ಮದಿಯನ್ನು ಹಾಳುಮಾಡಿ ವ್ಯಕ್ತಿಗೆ ಅಪಾಯ ತರುವ ಶತೃಗಳು ಎಂದು ಹೇಳಿ, ಈ ಅರಿಷಡ್ವರ್ಗಗಳನ್ನು ಹತೋಟಿಯಲ್ಲಿಡುವುದೇ ಕ್ಷೇಮ ಎನ್ನಲಾಯಿತು. ಪ್ರೀತಿ, ದಯೆ, ಅನುಕಂಪ, ಸೇವಾ ಭಾವನೆಗಳು, ಪಾಲಿಗೆ ಬಂದದ್ದನ್ನು, ದೇವರು ಕರುಣಿಸಿದ್ದನ್ನು ಸ್ವೀಕರಿಸಿ ತೃಪ್ತಿಪಡುವುದು, ಮಾನಸಿಕ ನೆಮ್ಮದಿಗೆ ಅವಶ್ಯಕ ಎನ್ನಲಾಯಿತು. ಸಂಗೀತ, ನೃತ್ಯ, ಚಿತ್ರಕಲೆ, ಕ್ರೀಡೆಗಳು, ಯೋಗ, ಧ್ಯಾನಗಳು, ದೇವರಲ್ಲಿ ಭಕ್ತಿ, ಎಲ್ಲರೊಡನೆ ಸ್ನೇಹದ ನಡೆವಳಿಕೆ, ಪುಣ್ಯಕ್ಷೇತ್ರಗಳ ಪ್ರವಾಸ ಮಾನಸಿಕ ನೆಮ್ಮದಿಯನ್ನು ಹೆಚ್ಚಿಸಲು ಅವಶ್ಯಕ ಎಂದು ತಿಳಿಸಲಾಯಿತು. ಮನಸ್ಸಿನ ಜೊತೆಗೆ 'ಆತ್ಮ' ಎಂಬ ವಿಚಾರವನ್ನೂ ಸೇರಿಸಿ ನಮ್ಮಲ್ಲಿ ಗೊಂದಲ ಉಂಟಾಗಿದೆ. ವ್ಯಕ್ತಿ ಸತ್ತಾಗ ದೇಹ ಮತ್ತು ಮನಸ್ಸುಗಳ ಇರುವಿಕೆಗೆ ಭಂಗ ಬರುತ್ತದೆ. ದೇಹ ನಾಶವಾಗಿ ಪಂಚಭೂತಗಳಲ್ಲಿ ಲೀನವಾದರೆ, ಮನಸ್ಸು ಆತ್ಮದರೂಪದಲ್ಲಿ ಮುಂದುವರೆಯುತ್ತದೆ. ದೇಹಕ್ಕೆ ಅಂತ್ಯವೇ ಹೊರತು ಆತ್ಮಕ್ಕಿಲ್ಲ, ಆತ್ಮ ಅಮರ. ಅದು ಭಗವಂತನೊಂದಿಗೆ ಸೇರಬಹುದು ಇಲ್ಲವೇ ಪುನರ್ಜನ್ಮ-ಹುಟ್ಟು ಸಾವುಗಳ ಚಕ್ರದೊಳಕ್ಕೆ ಸಿಲುಕಿಕೊಳ್ಳತ್ತದೆ ಎಂಬ ನಂಬಿಕೆ ನಮ್ಮಲ್ಲಿದೆ. ಮನಸ್ಸೇ-ಆತ್ಮವೇ, ಆತ್ಮದ ಸ್ವರೂಪವೇನು, ದೇಹವಿಲ್ಲದಿದ್ದಾಗ ಆತ್ಮ ಎಲ್ಲಿರುತ್ತದೆ, ಹೇಗಿರುತ್ತದೆ, ಹೊಸದೇಹದೊಳಕ್ಕೆ ಅದು ಯಾವಾಗ ಹೇಗೆ ಸೇರುತ್ತದೆ. ಇದರ ಬಗ್ಗೆ ಸ್ಪಷ್ಟ ಚಿತ್ರಣವಿಲ್ಲ. ಆತ್ಮದ ವಿಕೃತ ರೂಪ ದೆವ್ವ ಭೂತ, ಪಿಶಾಚಿ. ಅವುಗಳನ್ನು ವಿಕಾರವಾಗಿ ಚಿತ್ರಿಸಿ, ಜನರ ಮನಸ್ಸಿನಲ್ಲಿ ಹೆದರಿಕೆಯನ್ನು ಹುಟ್ಟಿಸಲಾಗುತ್ತದೆ. ವ್ಯಕ್ತಿಯ ಅನೇಕ ದೈಹಿಕ ಮತ್ತು ಮಾನಸಿಕ ಕಾಯಿಲೆಗಳಿಗೆ, ವಿಚಿತ್ರ ಮಾತು-ವರ್ತನೆಗಳಿಗೆ, ಕಷ್ಟ ನಷ್ಟಗಳಿಗೆ ಈ ದೆವ್ವ, ಭೂತಗಳೇ ಕಾರಣ ಎಂದು ಬಹಳ ಜನ ಇಂದಿಗೂ ನಂಬುತ್ತಾರೆ. ಈ ದೆವ್ವ ಭೂತಗಳನ್ನು ಮಂತ್ರ, ತಂತ್ರ, ಪೂಜೆ, ಹರಕೆ,

ಬಲಿಗಳ ಮೂಲಕ ಉಚ್ಚಾಟಿಸುವ ಮಂತ್ರವಾದಿ, ಪೂಜಾರಿಗಳು, ದೈವ ಪುರುಷರು ಎಲ್ಲ ಕಡೆ ಇದ್ದಾರೆ. ಜನರನ್ನು ನಿರಂತರವಾಗಿ ಶೋಷಣೆ ಮಾಡುತ್ತಲೇ ಇದ್ದಾರೆ.

ಮನೋರೋಗ-ಹುಚ್ಚು ಕಾಯಿಲೆ ಬಗ್ಗೆ ನಮ್ಮಲ್ಲಿರುವುದು ಅಸಂಖ್ಯಾತ ಅವೈಜ್ಞಾನಿಕ ನಂಬಿಕೆಗಳೇ.

ಹುಚ್ಚು ವಂಶ ಪಾರಂಪರ್ಯ; ಪಾಪ ಕರ್ಮ ಫಲದಿಂದ, ಮನೋರೋಗಗಳು ಬರುತ್ತವೆ; ಅತಿ ಕಾಮ, ವಿಕೃತ ಕಾಮ, ಸ್ವೇಚ್ಛಾ ಕಾಮದಿಂದ ಮನೋರೋಗ ಉಂಟಾಗುತ್ತದೆ. ಮನೋರೋಗಿಗಳು ವಿಕೃತ ಕಾಮಿಗಳು; ದೇವರ ಶಾಪ, ದೆವ್ವಗಳ ಕಾಟ, ಮದ್ದು ಮಾಟಗಳು ಕೆಟ್ಟ ಗ್ರಹಗತಿಗಳು, ಹೀನ ಅದೃಷ್ಟ ಹುಚ್ಚಿಗೆ ಕಾರಣ; ಅಮಾವಾಸ್ಯೆ-ಪೌರ್ಣಿಮೆಗಳಲ್ಲಿ ಹುಚ್ಚು ಕೆರಳುತ್ತದೆ. ಹುಚ್ಚು ವಾಸಿಯಾಗುವುದಿಲ್ಲ; ಹುಚ್ಚು ಸಾಯುವವರೆಗೆ ಇರುತ್ತದೆ. ಹುಚ್ಚು ಅಂಟುರೋಗವೂ ಆಗಬಹುದು. ಹುಚ್ಚರೊಂದಿಗೆ ವಾಸಿಸಿದರೆ, ಅವರೊಂದಿಗೆ ಕೆಲಸ ಮಾಡಿದರೆ, ಹುಚ್ಚು ಅಂಟಿಕೊಳ್ಳುತ್ತದೆ; ಹುಚ್ಚರು ಅಪಾಯಕಾರಿ, ಯಾವಾಗ ಯಾರ ಮೇಲೆ ಹೇಗೆ ದಾಳಿ ಮಾಡುತ್ತಾರೋ ಹೇಳಲು ಬರುವುದಿಲ್ಲ; ಪೂಜೆ ಪುನಸ್ಕಾರ, ಪ್ರತಿಮಾಟ ಮಂತ್ರ, ಭೂತೋಚ್ಚಾಟನೆ, ಮಹಾಮಹಿಮರ ಆಶೀರ್ವಾದ, ಸ್ಪರ್ಶ, ದೇವರಿಗೆ ಹರಕೆ, ಕಾಣಿಕೆ ಬಲಗಳಿಂದ ಹುಚ್ಚು ಕಾಯಿಲೆ ವಾಸಿಯಾಗುತ್ತದೆ ಇತ್ಯಾದಿ.

ಈ ನಂಬಿಕೆಗಳಿಂದಾಗಿ ಮನೋರೋಗಿಗಳ ನೋವು ನರಳಿಕೆ, ಅಸಹಾಯಕಗಳು ಹೆಚ್ಚುತ್ತವೆ. ಅಮೂಲ್ಯವಾದ ವೇಳೆ, ಹಣ, ಸಂಪನ್ಮೂಲಗಳು ನಷ್ಟವಾಗುವುದಲ್ಲದೆ ಕಾಯಿಲೆ ಹಳತಾಗಿ ಆಳವಾಗಿ ಬೇರೂರುತ್ತದೆ. ರೋಗಿ ಅಕಾಲಿಕ ಸಾವಿಗೆ ಅಥವಾ ಆತ್ಮಹತ್ಯೆಗೆ ಬಲಿಯಾಗಬಹುದು.

೨೦ ನೇ ಶತಮಾನದ ಮೊದಲರ್ಧದಲ್ಲಿ, ಯೂರೋಪ್, ಅಮೆರಿಕಾಗಳಲ್ಲಿ ಮನಸ್ಸು ಮತ್ತು ಮಾನಸಿಕ ಅಸ್ವಸ್ಥತೆಗಳ ಬಗ್ಗೆ ಚಿಂತನ-ಮಂಥನಗಳು ನಡೆದವು. ಸಿಗ್ಮಂಡ್ ಫ್ರಾಯ್ಡ್ ಮನಸ್ಸಿನ ರಚನೆಯನ್ನು ವಿವರಿಸಿದ. ಜಾಗೃತ-ಸುಪ್ತಮನಸ್ಸು, ಇದ್, ಈಗೋ ಸೂಪರ್ ಈಗೋ. ಮನೋವಿಶ್ಲೇಷಣಾ ವಿಧಾನದಿಂದ (Psycho analysis) ಅಲ್ಪಮಟ್ಟದ ಮಾನಸಿಕ ಅಸ್ವಸ್ಥತೆಗಳನ್ನು ನಿವಾರಿಸಬಹುದೆಂದ. ಆನಂತರ ಬಂದಂತಹ ನಡೆವಳಿಕೆ ತಜ್ಞರುಗಳು (ವ್ಯಾಟ್ಸನ್, ಬುಡೂರ) ಕಲಿಕಾ ಸಿದ್ಧಾಂತವನ್ನು ನಿರೂಪಿಸಿ, ಬಹುತೇಕ ಅಸಹಜ ನಡೆವಳಿಕೆಗಳಿಗೆ ನಡೆವಳಿಕೆ ಚಿಕಿತ್ಸೆಯೇ ರಾಮಬಾಣ ಎಂದರು. ಅಸ್ತಿತ್ವವಾದಿಗಳು, ಮಾನವೀಯ ಸಿದ್ಧಾಂತಿಗಳು, ಗೆಸ್ಟಾಲ್ಟ್ ವಾದಿಗಳು, ಸಮಾಜವಾದಿಗಳು ತಮ್ಮ ತಮ್ಮ ವಾದಗಳನ್ನು ಮಂಡಿಸಿದರು. ಆ ಬಳಿಕ ಕಳೆದ ನಲವತ್ತು ವರ್ಷಗಳಲ್ಲಿ ನಡೆಯುವ ಸೂಕ್ಷ್ಮ ರಾಸಾಯನಿಕ ಚಟುವಟಿಕೆಗಳ ವಿವರವಾದ ಅಧ್ಯಯನಗಳು ಮನಸ್ಸಿನ ಬಗ್ಗೆ ನಮ್ಮ ಅರಿವನ್ನು ಹೆಚ್ಚಿಸುತ್ತಾ ನಡೆದಿವೆ. ಯಾವುದನ್ನು ನಿಗೂಢ ಎಂದುಕೊಂಡಿದ್ದೇವೋ ಅದು ಅರ್ಥವಾಗುವ ತರ್ಕಕ್ಕೆ ಸಿಗುವ ವಸ್ತು-ವಿಷಯವಾಗುತ್ತಿದೆ. ಮನಸ್ಸಿನ ಚಟುವಟಿಕೆಗಳು ಹಾಗೂ ಅಸಹಜ ಕ್ರಿಯೆ ಪ್ರತಿಕ್ರಿಯೆಗಳು ಏಕೆ ಜರುಗುತ್ತವೆ ಎಂಬುದು ಈಗ ಅರ್ಥವಾಗುತ್ತಿದೆ. ಮಿದುಳಿನ

ನಾಲ್ಕು ರಾಸಾಯನಿಕ ವ್ಯವಸ್ಥೆಗಳಾದ ಆಡ್ರಿನರ್ಜಿಕ್ ವ್ಯವಸ್ಥೆ, ಡೋಪಮಿನರ್ಜಿಕ್ ವ್ಯವಸ್ಥೆ, ಸೆರೋಟೋನರ್ಜಿಕ್ ವ್ಯವಸ್ಥೆ, ಕೋಲಿನರ್ಜಿಕ್ ವ್ಯವಸ್ಥೆ.

ಇವು ನಮ್ಮ ಆರೋಗ್ಯ ಮತ್ತು ಅನಾರೋಗ್ಯದಲ್ಲಿ ಗಮನಾರ್ಹ ಬದಲಾವಣೆ ಹೊಂದುತ್ತವೆ. ಉದಾಹರಣೆಗೆ ಸರಿಪ್ರಮಾಣದ ಸೆರೋಟೋನಿನ್ ಮತ್ತು ಡೋಪಮಿನ್ ನಮ್ಮ ಹಸಿವು, ನೀರಡಿಕೆ, ನಿದ್ರೆ, ಲೈಂಗಿಕ ಚಟುವಟಿಕೆ, ಉತ್ಸಾಹ, ಕಾರ್ಯಶೀಲತೆ, ಸಹನೆಗಳು ಸರಿ ಇರುವಂತೆ ನೋಡಿಕೊಳ್ಳುತ್ತವೆ. ಸೆರೋಟೋನಿನ್, ಡೊಪಮಿನ್ ಪ್ರಮಾಣ ತಗ್ಗಿದರೆ, ಹಸಿವಾಗದಿರುವುದು, ನಿದ್ರಾಭಂಗ, ಲೈಂಗಿಕ ನಿರಾಸಕ್ತಿ/ದುರ್ಬಲತೆ, ಬೇಸರ, ದುಃಖ, ಎಲ್ಲದರಲ್ಲಿ ಅನಾಸಕ್ತಿ, ಅಸಹಾಯಕತೆ, ನಿರಾಶೆ, ಬೇಕಾದ ವಿಚಾರಗಳು ಮನಸ್ಸಿನೊಳಕ್ಕೆ ಪದೇಪದೇ ಬರುವುದು, ಸಿಟ್ಟು ಕೋಪ, ಅಸಹನೆ ಹೆಚ್ಚುವುದು ಆಗಬಹುದು. ಜಗತ್ತಿನಾದ್ಯಂತ ಶೇಕಡಾ ೧೦ರಷ್ಟು ಜನರನ್ನು ಕಾಡುವ ಖಿನ್ನತೆ ಕಾಯಿಲೆಗೆ ಡೋಪಮಿನ್ ಕೊರತೆಯೇ ಕಾರಣ ಎಂಬುದು ಈಗ ಸಾಬೀತಾಗಿದೆ. ವಿಶೇಷ ಸನ್ನಿವೇಶಗಳಲ್ಲಿ, ಜವಾಬ್ದಾರಿಯುತ ಸಂದರ್ಭಗಳಲ್ಲಿ ವ್ಯಕ್ತಿಯನ್ನು ಕಾಡುವ ಭಯ, ಆತಂಕಗಳಿಗೆ ಸೆರೋಟೋನಿನ್, ಗಾಬಾ ನರವಾಹಕ ವ್ಯವಸ್ಥೆಯ ಏರುಪೇರು ಕಾರಣವಾಗುತ್ತದೆ. ಬುದ್ಧಿಭ್ರಮಣೆ, ಹುಚ್ಚು ಕಾಯಿಲೆಗಳು ಈಗ, ಮಿದುಳಿನ ಕಾಯಿಲೆಗಳೆಂದು ಸಾಬೀತಾಗಿವೆ. ಮಿದುಳಿನ ನರಕೋಶಗಳಲ್ಲಿ, ನರವಾಹಕ ವ್ಯವಸ್ಥೆಗಳಲ್ಲಿ ಉಂಟಾಗುವ ಹೆಚ್ಚಳ ಅಥವಾ ಕೊರತೆ, ಆನುವಂಶಿಕತೆ, ಒತ್ತಡ ಹೆಚ್ಚಿಸುವ ಪರಿಸರ ಹಾಗೂ ಮೇಲಿಂದ ಮೇಲೆ ಉಂಟಾಗುವ ಕಷ್ಟನಷ್ಟಗಳು, ಬುದ್ಧಿಭ್ರಮಣೆ ಲಕ್ಷಣಗಳು ಕಾಣಿಸಿಕೊಳ್ಳಲು ಪ್ರೇರಣೆ ನೀಡುತ್ತವೆ. ಔಷಧಿಗಳು, ವಿದ್ಯುತ್ ಕಂಪನಚಿಕಿತ್ಸೆ, ಮನೋಚಿಕಿತ್ಸೆ, ನಡೆವಳಿಕೆ ಚಿಕಿತ್ಸೆ, ಪುನರ್ವಸತಿ ಚಟುವಟಿಕೆಗಳು, ಆರೋಗ್ಯಕರ ಮನರಂಜನೆ- ಬುದ್ಧಿ ಭ್ರಮಣೆಯನ್ನು ಗುಣ ಮಾಡುತ್ತವೆ. ಚಿಕಿತ್ಸೆ ಪಡೆದ ರೋಗಿ ಉಪಯುಕ್ತವಾಗಿ ಅರ್ಥಪೂರ್ಣ ಬದುಕನ್ನು ನಡೆಸಬಲ್ಲ. ರೋಗಚಿಕಿತ್ಸೆಗೆ ಅಸ್ಪತ್ರೆಗೆ ದಾಖಲಾಗಬೇಕಿಲ್ಲ. ರೋಗಿ ತನ್ನ ಮನೆಯಲ್ಲೇ ಇದ್ದುಕೊಂಡು, ಮನೆಯವರ ಆರೈಕೆಯಲ್ಲಿ, ರೋಗನಿಂದ ಬೇಗ ಮುಕ್ತನಾಗಬಲ್ಲ ಎಂಬುದನ್ನು ಸಮುದಾಯ ಆಧಾರಿತ ಚಿಕಿತ್ಸಾ ಕಾರ್ಯಕ್ರಮಗಳು ನಿಚ್ಚಳವಾಗಿ ತೋರಿಸಿಕೊಟ್ಟಿವೆ.

ಯಾವುದೇ ಆಸ್ಪತ್ರೆಗೆ ನೋವು ಸುಸ್ತು ದಣಿವು, ಆಹಾರ ಸೇವನೆ ನಿದ್ರೆ ಲೈಂಗಿಕ ತೊಂದರೆಗಳಿಂದ ಬರುವ ರೋಗಿಗಳಲ್ಲಿ ಶೇಕಡಾ ೪೦ರಷ್ಟು ರೋಗಿಗಳು ಶಾರೀರಕವಾಗಿ ಚೆನ್ನಾಗಿಯೇ ಇರುತ್ತಾರೆ. ಯಾವುದೇ ನ್ಯೂನತೇ/ಕೊರತೆ (ಕಾಯಿಲೆ ಇರುವುದಿಲ್ಲ) ಅವರ ದೈಹಿಕ ರೋಗ ಲಕ್ಷಣಗಳಿಗೆ, ಅವರ ಮನಸ್ಸನ್ನು ಕಾಡುವ ಭಯ,ಕೋಪ, ದುಃಖ, ಮತ್ಸರ, ಕೀಳರಿಮೆ, ಚಿಂತೆ ವ್ಯಥೆ ನಿರಾಶೆಗಳೇ ಕಾರಣ ಎಂದೂ ಸಾಬೀತಾಗಿದೆ. ಹೀಗಾಗಿ, ಈ ರೋಗಿಗಳಿಗೆ ಮಾನಸಿಕ ಸಾಂತ್ವನ, ಸಮಾಧಾನ ಚಿಕಿತ್ಸೆಯ ಅಗತ್ಯವಿದೆ. ಮಕ್ಕಳಲ್ಲಿ ಕಂಡು ಬರುವ ಅನೇಕ ನಡೆವಳಿಕೆ ಸಮಸ್ಯೆಗಳಾದ, ಕಲಿಯುವುದರಲ್ಲಿ ನಿರಾಸಕ್ತಿ, ಪರೀಕ್ಷೆಯಲ್ಲಿ ಚೆನ್ನಾಗಿ ಮಾಡದಿರುವುದು, ಹಠ, ಹಿಂಸಾಪ್ರವೃತ್ತಿ, ಸುಳ್ಳು ಹೇಳುವುದು, ಕಳ್ಳತನ ಮಾಡುವುದು, ಮನೆಬಿಟ್ಟು

ಓಡಿಹೋಗುವುದು, ಅವಿಧೇಯತನ ತೋರಿಸುವುದು- ಇವೆಲ್ಲವೂ ಮಾನಸಿಕ ಜನ್ಯ. ಹೀಗಾಗಿ ಜನ ಸಂಖ್ಯೆಗಳಲ್ಲಿ ಸಾಕಷ್ಟು ಜನರಿಗೆ ಮನೋವೈದ್ಯಕೀಯ ನೆರವಿನ ಅಗತ್ಯವಿದೆ. ಇದರ ಅರಿವು ಜನರಿಗಾಗಬೇಕು. ಮನೋವೈದ್ಯರನ್ನು ಕಾಣಲು, ಮಾನಸಿಕ ಆಸ್ಪತ್ರೆ ವಿಭಾಗಗಳಿಗೆ ಹೋಗಲು ಅವರು ನಾಚಿಕೆ ಪಡಬಾರದು.

**ಕನ್ನಡದಲ್ಲಿ ಮನೋವೈದ್ಯಕೀಯ ವಿಚಾರಗಳು**

ಮಾನಸಿಕ ಆರೋಗ್ಯ ಅನಾರೋಗ್ಯದ ವೈಜ್ಞಾನಿಕ ವಿಚಾರಗಳನ್ನು ಕನ್ನಡಕ್ಕೆ ತರುವಲ್ಲಿ ನನಗೆ ಯಾವ ಹೆಚ್ಚಿನ ತೊಂದರೆ ಅಡ್ಡಿ ಆತಂಕಗಳು ಉಂಟಾಗಲಿಲ್ಲ. ನನ್ನ ಬರವಣಿಗೆಯ ಶೈಲಿಯ ಮೇಲೆ ಡಾ. ಎಂ. ಶಿವರಾಮ್ (ರಾಶಿ) ಅವರ ಪ್ರಭಾವ ಗಾಢವಾಗಿದೆ. ಹೇಳುವುದನ್ನು ಸರಳವಾಗಿ, ಸರಸವಾಗಿ, ಓದುಗರಿಗೆ ಇಷ್ಟವಾಗುವ ರೀತಿಯಲ್ಲಿ ಬರೆಯಲು ಅವರೇ ಮಾರ್ಗದರ್ಶಕರು. ಶ್ರೀಮತಿ ತ್ರಿವೇಣಿ, ಡಾ. ಅನುಪಮಾ ನಿರಂಜನ, ಡಾ. ಡಿ.ಎಸ್. ಶಿವಪ್ಪನವರಿಗೂ ನಾನು ಋಣಿಯಾಗಿದ್ದೇನೆ. ಕೇಸ್ ಸ್ಟೋರಿ, ಅನುಭವಗಳು, ವೃತ್ತಾಂತಗಳ ಮೂಲಕ, ಓದುಗರ ಆಸಕ್ತಿಯನ್ನು ಹಿಡಿದಿಡಬಹುದೆಂಬುದನ್ನು ನಾನು ಅರ್ಥಮಾಡಿಕೊಂಡೆ. ಪತ್ರಿಕೆಗಳಿಗೆ ಬರೆಯುವಾಗ, ಆಕಾಶವಾಣಿಯಲ್ಲಿ ಮಾತನಾಡುವಾಗ, ಪುಟಮಿತಿ ಕಾಲಮಿತಿ ಯನ್ನೂ ಗಣನೆಗೆ ತೆಗೆದುಕೊಂಡು, ಚಿಕ್ಕದಾಗಿ ಬರೆಯುವುದನ್ನು, ಹೇಳುವುದನ್ನು ಕಲಿತೆ. ಜೊತೆಗೆ ವಿವಿಧ ಜನ ಗುಂಪುಗಳಿಗೆ ಉಪನ್ಯಾಸ ನೀಡುವಾಗ, ಹೇಗೆ ಹೇಳಿದರೆ ಅವರಿಗೆ ಅರ್ಥವಾಗುತ್ತದೆ ಎಂಬುದರ ಪ್ರಯೋಗ ಮಾಡಿದೆ. ಅವರ ಪ್ರಶ್ನೆಗಳು, ಅದಕ್ಕೆ ನಾನು ಕೊಟ್ಟ ಉತ್ತರಗಳು, ನನ್ನ ಬರವಣಿಗೆಗೆ ಬಹಳ ಸಹಾಯಕಾರಿ ಯಾದುವು. 'ಮನೋರೋಗ: ನಿಮ್ಮ ನಂಬಿಕೆ ಎಷ್ಟು ಸರಿ ಎಷ್ಟು ತಪ್ಪು', 'ಮನಸ್ಸು ೧೦೮ ಪ್ರಶ್ನೆಗಳು', 'ಲೈಂಗಿಕ ಅರಿವು ೧೦೬ ಪ್ರಶ್ನೆಗಳು' -ಈ ಪುಸ್ತಕಗಳು ಈ ಶೈಲಿಯಿಂದಲೇ ಜನಪ್ರಿಯ ವಾಗಿವೆ.

ಮನೋವಿಜ್ಞಾನದಲ್ಲಿ ಅನೇಕ ತಾಂತ್ರಿಕ ಪದಗಳಿವೆ. ಪ್ರಾರಂಭದಲ್ಲಿ ಅವನ್ನು ಡಾ. ಟಿ.ಎಸ್. ಶಿವಪ್ಪನವರ ಪದಕೋಶದ ನೆರವಿನಿಂದ ಈ ಪದಗಳನ್ನು ಕನ್ನಡಕ್ಕೆ ಭಾಷಾಂತರಿಸಿದೆ. Phychosis = ಚಿತ್ತವಿಕಲತೆ, Schizophrenia = ಇಚ್ಛಿತ್ತ ವಿಕಲತೆ, Mamic Depressure = Psychosis = ಹುಚ್ಚು-ಮಂಕು ವಿಕಲತೆ, dementia= ಮತಿಹೀನ ಸ್ಥಿತಿ, Id=ಹುಟ್ಟಾಸೆ, Ego= ಅಹಂ, Super ego = ಮೇಲಹಂ, Neurosis = ಚಿತ್ತಚಂಚಲತೆ, Withdrawal Symptoms=ಹಿಂದೆಗೆತದ ಚಿನ್ಹೆಗಳು ಇತ್ಯಾದಿ Illusion, Hallucunation, Delusion ಗಳಿಗೆ ಸಮಾನ ಪದಗಳು ಸಿಗದೆ ಪರದಾಡಿದೆ. Ilusion ಗೆ ಬದಲಿಸಲಾಗದ ತಪ್ಪು ನಂಬಿಕೆ ಎಂದರೆ ಬರೆದು ಕ್ರಮೇಣ ಕಾಯಲೆಯ ಹೆಸರುಗಳನ್ನು ಕನ್ನಡಕ್ಕೆ ತರುವ ಅಗತ್ಯವಿಲ್ಲ ಎಂದು ಅರ್ಥಮಾಡಿಕೊಂಡೆ. ಹೀಗಾಗಿ ಆನಂತರದ ನನ್ನ ಬರವಣಿಗೆಯಲ್ಲಿ ಕಾಯಿಲೆಯ ಹೆಸರುಗಳನ್ನು ಹಾಗೆಯೇ ಬಳಸ ತೊಡಗಿದ್ದೇನೆ. ತಾಂತ್ರಿಕ ಪದಗಳು ತುಂಬಾ ಕ್ಲಿಷ್ಟ ಎನಿಸಿದಾಗ, ಅರ್ಥವಿವರಣೆಯನ್ನು ಬರೆಯುವ ಪರಿಪಾಠವನ್ನು ಬಳಸಿಕೊಂಡೆ.

ಪ್ರತಿಸಲ ಬರೆಯುವಾಗ, ಪ್ರತಿಸಲ ಮಾತನಾಡುವಾಗ ಪ್ರತಿಸಲ ಉಪನ್ಯಾಸ ಕೊಡುವಾಗ, ನನ್ನ ಬರವಣಿಗೆ, ಭಾಷೆಯ ಸರಳತೆ, ಶೈಲಿ, ಸಂವಹನವನ್ನು ಉತ್ತಮಪಡಿಸಿಕೊಳ್ಳುತ್ತಾ ಬಂದಿದ್ದೇನೆ. ಈಗ ಕನ್ನಡದಲ್ಲಿ ಮನೋವಿಜ್ಞಾನವನ್ನು ಬರೆಯುವುದು ತುಂಬಾ ಆಹ್ಲಾದಕರ ಅನುಭವವಾಗುತ್ತಿದೆ. ಕನ್ನಡ ಭಾಷೆಯೂ ಈ ದಿಸೆಯಲ್ಲಿ ನನಗೆ ಎಂದೂ ತೊಡಕಾಗಿಲ್ಲ. ನನ್ನ ಅನೇಕ ಪುಸ್ತಕಗಳು ಏಳು, ಎಂಟು, ಹನ್ನೆರಡು ಮುದ್ರಣಗಳನ್ನು ಕಂಡಿರುವುದೇ ಇದಕ್ಕೆ ಸಾಕ್ಷಿ. ಕನ್ನಡ ಭಾಷೆಯ ಮೂಲಕ ಮನೋವೈದ್ಯ ವಿಚಾರಗಳನ್ನು ಜನ ಸಾಮಾನ್ಯರಿಗೆ ತಲುಪಿಸಿರುವ ತೃಪ್ತಿ ನನಗಿದೆ.

●

## ಆಲೋಚನೆಗಳು ಕನ್ನಡೀಕರಣಗೊಳ್ಳಬೇಕು

● ಟಿ ಎಸ್ ಚನ್ನೇಶ್

ನಾನು ನನ್ನ ಆಲೋಚನೆಯ ವಿಸ್ತಾರವನ್ನು ಸ್ವಲ್ಪ ಅವಲೋಕಿಸಿದರೆ, ನನ್ನ ನೆನಪುಗಳು ಅನಿಸಿಕೆಗಳು ಕನ್ನಡ ಮತ್ತು ವಿಜ್ಞಾನದ ಮಧ್ಯೆ ವಿಹರಿಸುವಂತೆ ಭಾಸವಾಗುತ್ತಿರುತ್ತದೆ. ಇವು ಬಹುಶಃ ಕೇವಲ ಉತ್ಪ್ರೇಕ್ಷೆಯ ಮಾತುಗಳಲ್ಲ. ಅಥವಾ ಕೇವಲ ಸಾಂದರ್ಭಿಕವೂ ಅಲ್ಲ. ನನ್ನ ವೈಯಕ್ತಿಕ ಆಸಕ್ತಿಯ ಮತ್ತು ವೃತ್ತಿಯ ಆಶಯವೂ ಆಗಿವೆ. ಏಕೆಂದರೆ ಕನ್ನಡವನ್ನು ಕೇವಲ ಭಾಷೆಯಾಗಿಯಷ್ಟೇ ನೋಡದೆ ಭೌಗೋಳಿಕ ಚೌಕಟ್ಟಿನಲ್ಲಿ ನೋಡಿದಾಗ, ಅದು ಕರ್ನಾಟಕವನ್ನು ಪ್ರತಿನಿಧಿಸುವುದರಿಂದ, ನನ್ನ ವೈಜ್ಞಾನಿಕ ಕಾರ್ಯಕ್ಷೇತ್ರವೂ ಕರ್ನಾಟಕವೇ ಆಗಿರುವುದರಿಂದ ಅದು ನನ್ನ ವೃತ್ತಿಯ ಆಶಯವಾಗಿದೆ. ಕನ್ನಡ ನನ್ನ ಮಾತೃಭಾಷೆಯಷ್ಟೇ ಅಲ್ಲ, ಅದು ನನ್ನ ಕಲಿಕೆಯಲ್ಲಿ ಮತ್ತು ಚಿಂತನಾ ಕ್ರಮದಲ್ಲಿ ಮೂಲಭೂತ ಅಡಿಪಾಯವನ್ನು ಹಾಕಿದೆ. ಈ ಬಗೆಯ ವಿವಿಧ ಆಯಮಗಳನ್ನು ನೋಡುವುದಕ್ಕೂ ಮೊದಲು ನನ್ನ ಅತ್ಯಂತ ಪ್ರಿಯವಾದ ಈ ಎರಡರ ನಡುವಿನ ಸಂಬಂಧ ಹಾಗೂ ನನ್ನ ಬದುಕಿನ ಅನುಭವದ ಸನ್ನಿವೇಶದ ನಡುವೆಯಲ್ಲಿ ಅವು ಬೆಳೆದು ಬಂದ ರೀತಿಯ ಸೂಕ್ಷ್ಮ ಪರಿಚಯವನ್ನು, ಅಲ್ಲದೆ ಈಗಿನ ಪ್ರಸಕ್ತ ಪರಿಸ್ಥಿತಿಯಲ್ಲಿ ಎರಡನ್ನೂ ಬಳಸುವ ಅನಿವಾರ್ಯತೆಯನ್ನು ನೋಡೋಣ.

ಒಮ್ಮೆ ನನ್ನನ್ನು ನೋಡಲು ಓರ್ವ ವಿದ್ಯಾರ್ಥಿ ಬಂದಿದ್ದ. ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದ ಆತ ಇಂಗ್ಲಿಶಿನಲ್ಲಿ ಪರಿಚಯಿಸಿಕೊಂಡ. ನಂತರ ತಿಳಿದದ್ದು ಅವನು ನನ್ನ ಮಿತ್ರರೊಬ್ಬರ ಮಗ. ಅವರು ಕನ್ನಡ ಉಪನ್ಯಾಸಕರು. ಅವರ ಮಾತೃಭಾಷೆಯೂ ಕನ್ನಡವೇ ಆಗಿದ್ದರೂ ವಿಜ್ಞಾನದ ವಿದ್ಯಾರ್ಥಿಯೊಬ್ಬ ವಿಜ್ಞಾನಿಯನ್ನು ನೋಡಬಂದುದರಿಂದ ಇಂಗ್ಲಿಶ್ ಸಂಭಾಷಣೆ ನಡೆದಿತ್ತು. ಆತನೇನು ಕನ್ನಡ ಪ್ರಾರಂಭಿಸುವಂತೆ ಕಾಣಲಿಲ್ಲ.

ಮುಂದಿನದು ಬೇರೆ ವಿಚಾರ. ವಿಜ್ಞಾನದ ವಿಚಾರವೆಂದರೆ ಹೀಗೆ. ಏನೇ ಸಂಹವನವೆಂದರೂ ನಾವು ಇಂಗ್ಲಿಶಿಗೆ ಮಾರುಹೋಗಿಬಿಟ್ಟಿದ್ದೇವೆ.

ಆದರೆ ವಾಸ್ತವವಾಗಿ ಆಲೋಚಿಸಿದಾಗ ಇಂತಹ ಪರಿಸ್ಥಿತಿಯ ಹುಟ್ಟಿನ ಬಗೆಗೆ ಬೇಸರ ಬರುವುದು ಸಹಜ. ಇದು ಇಂದಿನ ಪರಿಸ್ಥಿತಿ. ವೈಜ್ಞಾನಿಕ ಜಗತ್ತಿನಲ್ಲಿ ಇಂದು ನಮ್ಮ ಗುರುತಿಸುವಿಕೆಯೇ ಬಳಸುವ ಇಂಗ್ಲಿಶ್ ಮೇಲೆ ನಿಂತಿದೆ. ನಾವೀಗ ನಮ್ಮ ನೆಲದ, ವಿಚಾರಗಳ, ಬಳಕೆಯ ಸಂದರ್ಭದಲ್ಲಿ ಕನ್ನಡದ ಬಳಕೆಯನ್ನೇ ಅವಲಂಬಿಸಿರುವ ಸಾಧ್ಯತೆಯಿದ್ದರೂ ಸಹ ಇಂತಹ ಪರಿಸ್ಥಿತಿಯ ನಿರ್ಮಾಣವಾಗಿದೆ.

ನಾನು ವಿಜ್ಞಾನದ ವಿದ್ಯಾರ್ಥಿ. ಹೈಸ್ಕೂಲು ಮುಗಿಸುವವರೆಗೂ ಕನ್ನಡ ಮಾಧ್ಯಮದಲ್ಲೇ ಅಭ್ಯಾಸ. ಮುಂದೆ ವಿಜ್ಞಾನದ ವಿದ್ಯಾರ್ಥಿಯಾಗಿ ಪಿ.ಯು.ಸಿ. ಪ್ರವೇಶಿಸಿ, ನಂತರ ಕೃಷಿ ವಿಜ್ಞಾನದ ವಿದ್ಯಾರ್ಥಿಯಾಗಿ, ವಿಶ್ವವಿದ್ಯಾನಿಲಯ ಪ್ರವೇಶ, ಡಾಕ್ಟೊರೇಟ್ ಮಾಡುವವರಿಗೂ ವಿಜ್ಞಾನದ ವಿದ್ಯಾರ್ಥಿ ಜೀವನ ಇಂಗ್ಲಿಶ್ ಮಾಧ್ಯಮದ್ದಾಯಿತು. ವಿಜ್ಞಾನದ ವಿದ್ಯಾರ್ಥಿಯೆಂದ ಮೇಲೆ ಕುತೂಹಲ, ಪ್ರಶ್ನಿಸುವ ವಿಚಾರ ಸಹಜ. ಈ ಪ್ರಶ್ನಿಸುವ ಕುತೂಹಲ ವ್ಯಕ್ತಪಡಿಸುವ ಪ್ರಕ್ರಿಯೆ ಕನ್ನಡದ್ದೇ ಎಂಬುದಕ್ಕೆ ಎರಡು ಮಾತಿಲ್ಲ. ಮೊದಮೊದಲು, ಕಾಲೇಜು ದಿನಗಳಲ್ಲಿ ಪ್ರಶ್ನಿಸುವಾಗ, ಉಪಯೋಗಿಸಬೇಕಾದ ಇಂಗ್ಲೀಶನ್ನು ಯೋಚಿಸಿ ಕೇಳುತ್ತಿದ್ದೆ. ಇದೇ ತೊಂದರೆ ಎಲ್ಲಾ ಕನ್ನಡ ವಿದ್ಯಾರ್ಥಿಗಳಲ್ಲೂ ಇರುವ ಸಾಧ್ಯತೆಯನ್ನು ಊಹಿಸಿ, ಮುಂದೆ ನಾನು ಪಾಠ ಮಾಡುವಾಗ ಈ ಪ್ರಶ್ನಿಸುವ, ಏನಾದರೂ ಕೇಳುವ ಪ್ರಕ್ರಿಯೆಯನ್ನು ಕನ್ನಡದಲ್ಲೇ ಮಾಡಬಹುದು ಎಂದೂ ಹೇಳುತ್ತಿದ್ದೆ. ಏಕೆಂದರೆ ಮೂಲಭೂತವಾಗಿ ಸಂವಹನ ಪ್ರಕ್ರಿಯೆಯು ಮಾತೃಭಾಷೆಯಲ್ಲಿ ಪರಿಪೂರ್ಣವಾಗುವಷ್ಟು ಬೇರೆ ಭಾಷೆಯಲ್ಲಿ ಸಾಧ್ಯವಾಗುವುದಿಲ್ಲ.

### ಕನ್ನಡ ಮತ್ತು ವಿಜ್ಞಾನದ ಸಮೀಕರಣ

ಒಂದು ಭಾಷೆಯು ಸಂವಹನಕ್ಕೆ ಸಂಬಂಧಿಸಿದ್ದು. ಕನ್ನಡವು ಒಂದು ಗೊತ್ತಾದ ಭೌಗೋಳಿಕ ಚೌಕಟ್ಟಿನಲ್ಲಿ ಒಂದು ಪುಟ್ಟ ದೇಶದಷ್ಟು ವಿಸ್ತಾರವುಳ್ಳ ಪ್ರದೇಶದ ಭಾಷೆ. ವಿಜ್ಞಾನ ಎಂದಾಕ್ಷಣ ಅದೊಂದು ಸತ್ಯವಾದ ಎಲ್ಲರಿಗೂ ಒಂದೇ ಬಗೆಯ ಅನುಭವವನ್ನು ಕೊಡುವ ಜ್ಞಾನ. ಕಲೆಯಂತೆ ವ್ಯಕ್ತಿಗತ ಅನುಭವವಲ್ಲ. ಹಾಗಾಗಿ ಇಲ್ಲಿನ ಭಾಷೆಯೂ ಒಂದೇ ರೀತಿಯ ಅನುಭವವನ್ನು ಕೊಡಬೇಕಾಗುವುದು.

ವಿಜ್ಞಾನ ಎಂದಾಕ್ಷಣ - ಇಂಗ್ಲಿಶ್ ಎಂಬುದು ಸರ್ವೆ ಸಾಮಾನ್ಯವಾದ ವಿಚಾರ. ಆದರೆ ಇಂಗ್ಲಿಶ್ ಖಂಡಿತ ವಿಜ್ಞಾನದ ಭಾಷೆ ಅಲ್ಲ. ವಿಜ್ಞಾನದ ಸಂವಹನದಲ್ಲಿ ಜಾಗತಿಕ ಮಟ್ಟದಲ್ಲಿ ಹೆಚ್ಚಾಗಿ ಬಳಸುತ್ತಿರುವ ಭಾಷೆ ಅಷ್ಟೆ. ಆದರೆ ಅನೇಕ ರಾಷ್ಟ್ರಗಳೂ ತಮ್ಮದೇ ಭಾಷೆಯಲ್ಲಿಯೆ ವಿಜ್ಞಾನವನ್ನು ನಿರ್ಮಿಸುತ್ತವೆ, ಮತ್ತು ನಿರ್ವಹಿಸುತ್ತಿವೆ. ಕೆಲವು ದೇಶಗಳಲ್ಲಿ ಮಾತ್ರ ಇದು ವಸಾಹತುಶಾಹಿ ಧೋರಣೆಯಿಂದಾಗಿ ಅದರ ಪ್ರಭಾವಕ್ಕೆ ಒಳಪಟ್ಟ ಜನರಿಂದಾಗಿ ಆಯಾ ದೇಶಗಳಲ್ಲಿ ಪ್ರಭುತ್ವ ಪಡೆದಿದೆ. ಇದು ವಿಜ್ಞಾನಕ್ಕೆ ಮಾತ್ರ ಮೀಸಲಲ್ಲ. ಎಲ್ಲಾ ಆಧುನಿಕ

ಜ್ಞಾನ ಶಾಖೆಗಳಿಗೂ ಹಬ್ಬಿದೆ. ಹಾಗೂ ಒಂದು ರೀತಿಯಲ್ಲಿ ಜೀವನ ಕ್ರಮ ಮತ್ತು ಆಡಳಿತ ಪದ್ಧತಿಗೂ ಅನ್ವಯವಾಗುತ್ತದೆ.

ಅದರಲ್ಲೂ ವೈಜ್ಞಾನಿಕ ತಿರುವುಗಳು ಹೆಚ್ಚುಬಾರಿ ಪಾಶ್ಚಾತ್ಯ ನೆಲೆಯಿಂದ, ಅದರಲ್ಲೂ ಬ್ರಿಟನ್ನಿನ ೧೭ನೇ ಶತಮಾನದ ಕೈಗಾರಿಕಾ ಕ್ರಾಂತಿಯಿಂದಾಗಿ ಬಂದ ಪ್ರಭಾವಕ್ಕೆ ಒಗ್ಗಿದವು. ದೇಸಿಯ ಜ್ಞಾನದ ಹುಟ್ಟುಗಳು ವೈಜ್ಞಾನಿಕ ನೆಲೆಯನ್ನು ಭದ್ರಪಡಿಸಲು ಸಾಧ್ಯವಾಗದೆ ಹೋದವು. ಮುಂದೆಯೂ ಸಹ ಅಂದರೆ ನಂತರ ಕಳೆದ ಕೆಲವು ದಶಕಗಳ ವಿಜ್ಞಾನ ಸಾಹಿತ್ಯವೂ ಸಹ - ಪ್ರಚಾರಕ್ಕೆಂದು ಸ್ಥಳೀಯ ಭಾಷೆಯನ್ನು ಕೈಗೆತ್ತಿಕೊಂಡು ಸೃಷ್ಟಿಯಾದರೂ - ಅದು ಕೇವಲ ಭಾಷಾಂತರ ಎಂಬಂತಾಯಿತಷ್ಟೆ. ಸಾಲದಕ್ಕೆ ಜನಸಾಮಾನ್ಯರಿಗೆ ವಿಜ್ಞಾನವೆನ್ನುವಂತಹ ಬರವಣಿಗೆಗಳೂ ನಮ್ಮ ಜನರ ಜ್ಞಾನವನ್ನು ಕೆಳಮಟ್ಟಕ್ಕಿಳಿಸಿ ಸೃಷ್ಟಿಯಾದವು. ಆದರೂ ವಿಜ್ಞಾನಿಗಳೇ ತಮ್ಮ ವಿಜ್ಞಾನ ರೂಪಿಸುವ ಪ್ರಕ್ರಿಯೆ (Science Making)ಯನ್ನು ತಮ್ಮ ಭಾಷೆಯಲ್ಲಿಯೆ ನಿರ್ಮಿಸುವ ಹಾಗೂ ಸಂವಹನಗೊಳಿಸುವ ಸಾಧ್ಯತೆಗಳೇ ಇಲ್ಲ ಅಥವಾ ಅತೀ ಕಡಿಮೆ. ನನ್ನ ವಿಜ್ಞಾನದ ಆಶಯಗಳೂ ಕರ್ನಾಟಕದ ಭೌಗೋಳಿಕ ಚೌಕಟ್ಟಿಗೆ ಸಂಬಂಧಿಸಿದಂತಹ ಕೃಷಿ, ಅರಣ್ಯ - ಪರಿಸರದ ಆಯಾಮಗಳಾಗಿದ್ದರೂ, ಇವುಗಳ ಅಭ್ಯಾಸ ಪ್ರಕ್ರಿಯೆಯಲ್ಲಿ ಹಾಗೂ ಸಂವಹನದಲ್ಲಿ ಇಂಗ್ಲಿಶ್ ಮೂಗು ತೂರಿಸಿಬಿಡುತ್ತದೆ. ನಾವು ವಿಜ್ಞಾನ ಸೃಷ್ಟಿಯ ಕ್ರಿಯೆಯನ್ನು ನಮ್ಮ ಭಾಷೆಯಲ್ಲಿಯೇ ನಿರ್ಮಿಸಲು ಇನ್ನೂ ಸಾಧ್ಯವಾಗಿಲ್ಲ! ಅಥವಾ ಮಾಡುತ್ತಿಲ್ಲ. ಮಾಡುತ್ತಿಲ್ಲ ಎನ್ನುವುದೇ ಹೆಚ್ಚು ಸೂಕ್ತವಾದರೂ, ಮಾಡಿದರೆ ಏನು ಬೆಲೆ ಸಿಗುವುದಿಲ್ಲ ಎನ್ನುವುದು ಅತೀ ಸೂಕ್ತವಾಗಬಹುದು. ಅಷ್ಟೇಕೆ, ಮಾಹಿತಿ ಯುಗ ಎಂದುಕೊಳ್ಳುವ ನಾವು ನಮ್ಮ ಜನಪದ ಮಾಹಿತಿಯನ್ನೂ ಅದರ ಬಲವನ್ನೂ ಅರಿಯಬೇಕಾದಾಗ, ನಮ್ಮ ನಿರ್ಮಾಣದ ದೃಷ್ಟಿ ಕನ್ನಡ ಬಿಟ್ಟು ಬೇರೆ ಹೇಗಿರಲು ಸಾಧ್ಯ? ಇಲ್ಲಿ ಮನಸ್ಸುಗಳು ಕನ್ನಡೀಕರಣಗೊಳ್ಳದೆ ಅನ್ಯವಾಗಿ ಹೇಗೆ ಸಾಧಿಸಲಾದೀತು?

ಹಾಗೆಂದರೆ ಖಂಡಿತ ಸಾಧ್ಯವಿಲ್ಲ ಎಂದು ಅರ್ಥ ಖಂಡಿತಾ ಅಲ್ಲ. ವಿಜ್ಞಾನದ ಹುಟ್ಟು ಬೆಳವಣಿಗೆಯೂ ಸಹ ದೇಸಿಯ ನೆಲೆಯಿಂದ ಗಟ್ಟಿಗೊಳ್ಳಬೇಕಿದೆ. ಅದೂ ಆಯಾ ದೇಸೀಯ ಭಾಷೆಯಲ್ಲಿಯೇ - ಸಾಹಿತ್ಯ ಪ್ರಕ್ರಿಯೆಯಂತೆ - ಹುಟ್ಟಿಕೊಳ್ಳಲು ಎಲ್ಲಾ ಸಾಧ್ಯತೆಗಳು ಇವೆ. ಅದು ಕನ್ನಡಕ್ಕೂ ಸಾಧ್ಯ. ಒಂದೆರಡು ಉದಾಹರಣೆಯನ್ನು ಕೊಡುವುದಾದರೆ ಹೀಗೆ ನೋಡಬಹುದು. ನಾನು ಕಳೆದ ಕೆಲವು ವರ್ಷಗಳಿಂದ ಕರ್ನಾಟಕದ ಸಣ್ಣ ರೈತರ ಪರಿಸರದ ಅಧ್ಯಯನದಲ್ಲಿ ತೊಡಗಿಸಿಕೊಂಡ, ಸುಮಾರು ಇನ್ನೂರೈವತ್ತಕ್ಕೂ ಹೆಚ್ಚು ರೈತರ ಜಮೀನುಗಳಲ್ಲಿ ವಿವಿಧ ಕೃಷಿ ಪರಿಸರ ವ್ಯವಸ್ಥೆಯಲ್ಲಿ ಸಂಶೋಧನಾ ನಿರತನಾಗಿದ್ದೇನೆ. ನಮ್ಮ ದೇಸೀಯ ತಳಿ, ದೇಸೀಯ ರೈತ ಪದ್ಧತಿಗಳು, ಇಲ್ಲಿನ ನೆಲ-ಜಲದ ಸತ್ವ, ಇವೆಲ್ಲಕ್ಕೂ ಇಲ್ಲಿನ ಭಾವವೇ ತುಂಬಿರುವ ವೈಜ್ಞಾನಿಕ ಸಂತೃಪ್ತಿ ಇದೆ. ನನಗಂತೂ ಅದನ್ನು ಸಂಪೂರ್ಣ ಕನ್ನಡದಲ್ಲೇ ಪೂರ್ಣ ಸತ್ವದಿಂದ ವಿವರಿಸಲು ಸಾಧ್ಯವಾಗಿದೆ.

ಒಮ್ಮೆ ಕುವೆಂಪು ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸ ಕೊಡಬೇಕಿತ್ತು. ನಮ್ಮ ರಾಜ್ಯದ

ಒಂದು ವಿಶ್ವವಿದ್ಯಾನಿಲಯದಲ್ಲಿ ವೈಜ್ಞಾನಿಕ ಉಪನ್ಯಾಸವೆಂದರೆ, ಅದು ಇಂಗ್ಲೀಶಿನಲ್ಲಿ ಎಂದು ಬೇರೆ ಹೇಳಬೇಕಿಲ್ಲ. ಅಂದಿನ ವಿಷಯ, 'ನಮ್ಮ ಜೈವಿಕ ವೈವಿಧ್ಯ ಮತ್ತು ಜನಪರ ತಿಳುವಳಿಕೆ' (Our Biodiversity and Peole's Perception) ಎಂಬುದಾಗಿತ್ತು. ಕುವೆಂಪು ಹೆಸರುಳ್ಳ ವಿಶ್ವವಿದ್ಯಾನಿಲಯದಲ್ಲಿ ಏಕೋ ಇಂಗ್ಲಿಶಲ್ಲಿ ಮಾತನಾಡಲು ಮನಸ್ಸಿಲ್ಲದೆ, ಪೀಠಿಕೆಯನ್ನಷ್ಟೇ ಇಂಗ್ಲಿಶಿನಲ್ಲಿ ಮಾಡಿ - ನಂತರ ಇಡೀ ವೈಜ್ಞಾನಿಕ ಉಪನ್ಯಾಸವನ್ನು ಕನ್ನಡದಲ್ಲೇ ಮಾಡುವುದಾಗಿ ಕೇಳಿಕೊಂಡೆ. ಕುಲಪತಿಗಳೂ ಖುಷಿಗೊಂಡರಲ್ಲದೆ ಎಲ್ಲರಿಗೂ ಉಪನ್ಯಾಸ ಮೆಚ್ಚುಗೆಯಾಯಿತು. ನನ್ನ ಪ್ರಕಾರ ನಮ್ಮ ಭಾಷೆಯಲ್ಲೇ - ವಿಜ್ಞಾನವಾಗಲಿ ಅಥವಾ ಮತ್ತೊಂದು ಜ್ಞಾನ ಶಾಖೆಯಾಗಲಿ ಹಂಚಲು ಹೇಳಲು ಬಾರದಿದ್ದರೆ, ಅವರಿಗೆ ಇಂಗ್ಲಿಶಿನಲ್ಲೂ ಬರುವುದಿಲ್ಲ. ಆದರೆ ಈ ಪರಿಪೂರ್ಣ ಸಂವಹನಗೊಳಿಸಲಾಗದ ಗುಣವನ್ನು ಇಂಗ್ಲಿಶಿನಲ್ಲಿ ಹೇಳುವಾಗ ನಾವು ಗುರುತಿಸಲಾರದೆ ಹೋಗಬಹುದೇನೋ ಅಷ್ಟೆ.

ಇದು ಎಂಥ ವಿಪರ್ಯಾಸವೆಂದರೆ ನಮಗೆ, ನಮ್ಮ ಸಾಮಾನ್ಯ ಜನರಿಗೆ ಅರ್ಥವಾಗುವ ಹಾಗೆ ನಾವು ಜ್ಞಾನದ ನಿರೂಪಕರಾಗಿಲ್ಲವೆಂಬ ಸತ್ಯ. ಉದಾಹರಣೆಗೆ ಆರೋಗ್ಯ ಮಾಹಿತಿಯ ಹೊತ್ತಿಗೆಗಳು ಕೇವಲ ಆರೋಗ್ಯ ವಿಜ್ಞಾನದ ವಿದ್ಯಾರ್ಥಿಗೆ ಮಾತ್ರ ಅರ್ಥವಾಗಬೇಕೆಂಬಂತೆ ಇರುವುದುಂಟು. ಅದೇ ರೀತಿಯಲ್ಲಿ ಇತರೆ ಅನ್ವಯ ವಿಜ್ಞಾನಗಳಲ್ಲಿ, ಜನರ ಜೀವನಕ್ಕೆ ನೇರವಾದ ಉಪಯೋಗವುಳ್ಳ ಕೃಷಿಯಲ್ಲಿ ಸಹ, ಸಂಶೋಧನೆಗಳು ಸ್ಥಳೀಯ ಭಾಷೆಯಲ್ಲಿ ಹುಟ್ಟುತ್ತಿಲ್ಲ. ಇದು ಒಂದು ರೀತಿಯಲ್ಲಿ ಜ್ಞಾನವನ್ನು ಗುತ್ತಿಗೆ ಹಿಡಿದವರಂತೆ ಪರಿಭಾವಿಸಿರುವ ರೀತಿಯೆನ್ನಬಹುದೇ? ಎಲ್ಲವೂ ಸರಳವಾಗಿ ಜನಸಾಮಾನ್ಯರಿಗಾಗಿ ಇರಬೇಕೆಂದೇನೂ ಇಲ್ಲ. ಆದರೆ ಕೆಲವು ಮೂಲಭೂತ ವಿಚಾರಗಳಾದರೂ - ನಮ್ಮ ನೆಲಕ್ಕೆ ಸೇರಿದ ಜ್ಞಾನ, ಬೇಕಾದ ಜ್ಞಾನವಾದರೂ - ನಮ್ಮ ಭಾಷೆಯಲ್ಲೇ ವಿಕಾಸವಾಗಬಹುದಿತ್ತು. ಸಾಮಾಜಿಕ, ಸಾಂಸ್ಕೃತಿಕ, ಪರಂಪರೆಯ ವಿಚಾರಗಳು ಸಾಹಿತ್ಯದಲ್ಲಿ ನಮ್ಮ ಭಾಷೆಯಲ್ಲೇ ಒಡಮೂಡಿವೆ. ಆದರೆ ನಮ್ಮ ಭೌಗೋಳಿಕ ಸನ್ನಿವೇಶದ ವೈಜ್ಞಾನಿಕ ಜ್ಞಾನದ ವಿಕಾಸವೂ ಸಹ ಇಂಗ್ಲಿಶಿನಲ್ಲೇ ಆಗುತ್ತದೆ. ಇಂಗ್ಲಿಶಿನಲ್ಲೇ ವಿಮರ್ಶಿಸಲ್ಪಡುತ್ತದೆ, ವ್ಯವಹರಿಸಲ್ಪಡುತ್ತದೆ. ಇದನ್ನೇ ನಾನು ನಿರ್ಮಾಣದ ಮನಸ್ಸುಗಳ ಕೊರತೆ ಎಂದು ಕರೆಯಬಯಸುತ್ತೇನೆ; ಅಂತಹ ಮನಸ್ಸುಗಳನ್ನು ಒಪ್ಪಿಕೊಳ್ಳುವ ಮನಸ್ಸುಗಳ ಕೊರತೆಯೆಂದೂ ಕರೆಯಬಯಸುತ್ತೇನೆ. ಹಾಗಾದರೆ ಇವುಗಳ ಸಾಧ್ಯತೆಯ ಬಗ್ಗೆಯೂ ಸ್ವಲ್ಪ ಚರ್ಚಿಸಬಹುದೇನೋ.

**ಕನ್ನಡದಲ್ಲೇ ವಿಜ್ಞಾನದ ನಿರ್ಮಾಣ**

> ಸೀಗೆ ಬಾಗೆಯ ಬೇರು, ಕಾಗೆ ಮೋರೆಯ ಗಡ್ಡ
> ನಾಗರವು ಸತುವಿನೊಡಗೂಡೆ
> ಹೇಮ ತಾನಾಗಲೇ ಬೇಕು ಸರ್ವಜ್ಞ

ರಸವಿದ್ಯೆಯನ್ನು ಕುರಿತ ಸರ್ವಜ್ಞನ ಈ ವಚನವನ್ನು ನೋಡಿ. ಲೋಹವಿದ್ಯೆ ಕ್ರಿ.ಪೂ. ೧೫೦೦

ವೇಳೆಗೇ ಆರಂಭವಾಗಿದ್ದರೂ ಅದರ ಮಧ್ಯೆ - ಅಂದರೆ ೧೨ ರಿಂದ ೧೬ನೇ ಶತಮಾನದ ವರೆವಿಗೂ - ರಸವಿದ್ಯೆ ಅಥವಾ ಚಿನ್ನ ಮಾಡುವ ಪ್ರಯತ್ನದ ಒಂದು ಹುಸಿ ವಿದ್ಯೆ ಜನರನ್ನು ಹುಚ್ಚು ಹಿಡಿಸಿತ್ತು. ವಿಡಂಬನಾತ್ಮಕ ಕವಿಯಾದ ಸರ್ವಜ್ಞ ಈ ಹುಸಿ ಪ್ರಯತ್ನ ಕಂಡು ತಮಾಶೆ ಮಾಡಿರಲು ಸಾಕು. ಜ್ಞಾನ ಶಾಖೆಗಳ ಬೆಳವಣಿಗೆಯ ಸ್ಥಳೀಯ ಸ್ಪಂದನಕ್ಕೊಂದು ಉದಾಹರಣೆಯಷ್ಟೆ.

ಕನ್ನಡದಲ್ಲಿ ವಿಜ್ಞಾನದ ನಿರ್ಮಾಣವೆಂದರೆ ಸದ್ಯದ ಪರಿಸ್ಥಿತಿಯಲ್ಲಿ ಸುಲಭದ ಮಾತೇನೂ ಅಲ್ಲ. ಏಕೆಂದರೆ ಈಗಿನ ಪರಿಸ್ಥಿತಿ ಅಂತಹದು, ಎಲ್ಲವು ಇಂಗ್ಲಿಶಿನಿಂದಲೇ ನಿರ್ವಹಿಸುತ್ತಿರುವಾಗ, ವಿಜ್ಞಾನದ ಶಿಕ್ಷಣವೇ ಇಂಗ್ಲಿಶ್ ಮಾಧ್ಯಮದಲ್ಲಿರುವುದಿರಲಿ, ಇಡೀ ಶಿಕ್ಷಣವೇ ಕಾನ್ವೆಂಟ್ ಮಾದರಿಗೆ ವಾಲಿರುವಾಗ ಇದನ್ನು ನಿಭಾಯಿಸುವುದು ಹೇಗೆ? ನನಗೆ ನನ್ನ ಪರಿಮಿತಿಯಲ್ಲಿ ಸ್ವಲ್ಪವಾದರೂ ಈ ಬಗೆಯ ಪ್ರಯತ್ನ ಮಾಡುವ ಸಾಧ್ಯತೆಯನ್ನು ಕಂಡುಕೊಂಡಿರುವೆ. ಈಗಾಗಲೇ ಹೇಳಿರುವಂತೆ, ನನ್ನ ವೈಜ್ಞಾನಿಕ ಆಸಕ್ತಿಯೂ ಕನ್ನಡ ನೆಲವನ್ನೇ ನಂಬಿರುವುದರಿಂದ, ಇದರ ಕೆಲಸ ಸ್ವಲ್ಪ ಸುಲಭ ಎಂದುಕೊಂಡಿರುವೆ. ಆದಾಗ್ಯೂ ಅವಕಾಶಗಳೂ ಕಡಿಮೆಯೆ. ವಿಜ್ಞಾನದ ವಿಚಾರಗಳನ್ನು ಇಂಗ್ಲಿಶಿನಲ್ಲಿ ಹೇಳದಿದ್ದರೆ ಹೆಚ್ಚುಗಾರಿಕೆಯೆ ಇರುವುದಿಲ್ಲ. ಕನ್ನಡದಲ್ಲೇ ಹೇಳಿದರೆ ಅದರ ನಂಬಿಕೆಗೂ ಕೊಡಲಿಯೆ.

ಈಗ ನಮ್ಮ ನೆಲ-ಜಲ-ಜನಕ್ಕೆ ಬೇಕಾದ ವಿಜ್ಞಾನವನ್ನು ನಾವೇ ಹುಟ್ಟಿಹಾಕಬೇಕಾದ್ದರಿಂದ, ಅದು ನಮಗೇ ಆದ್ದರಿಂದ, ಅದು ನಮ್ಮ ಭಾಷೆಯದೆ ಆದರೇನೂ ನಷ್ಟವಿಲ್ಲ. ಕನ್ನಡಕ್ಕೂ ವಿಜ್ಞಾನಕ್ಕೂ ನಂಟು ಹಾಕುವಾಗ ಅದನ್ನು ಒಂದು 'ಸೃಜನೇತರ' ಬರಹ ಎನ್ನುವಂತಹ ವರ್ಗೀಕರಣವಿದೆ. ಅದೇನೇ ಆದರೂ ವಿಜ್ಞಾನದ್ದೇ ಒಂದು ಪ್ರಕಾರ ಎಂದುಕೊಳ್ಳುವುದೇ ಸರಿ. ವಿಜ್ಞಾನವೂ ಅತ್ಯಂತ ಸೃಜನಶೀಲ ಅಲ್ಲದೆ ಇದರ ಆಶಯಗಳೇ ಬೇರೆ. ವಿಜ್ಞಾನ ಸಾಹಿತ್ಯವನ್ನು ವಿಜ್ಞಾನ ಸಾಹಿತ್ಯ ಎನ್ನಬಹುದಷ್ಟೆ. ಗದ್ಯ, ಪದ್ಯ, ಈ ಎಲ್ಲವನ್ನೂ ಬಿಟ್ಟು ತನ್ನದೇ ಬಗೆಯನ್ನು ಅದು ಆರಿಸಿಕೊಂಡಿದೆ. ಅದು- ವಿವರಗಳು ಜ್ಞಾನದ ಹುಟ್ಟು, ಅದರ ಹಿಂದಿನ ದಾರಿ, ಮುಂದಿನ ಪರಿಣಾಮ, ಎಲ್ಲವನ್ನೂ ಚಿತ್ರಿಸುವ (Illustrative) ಪ್ರಕಾರ. ಅದರಲ್ಲಿ ಗದ್ಯವಿದೆ, ಗೇಯತೆ ಇದೆ, ಕಲೆಯ ಕಲ್ಪನೆಯೂ ಇದೆ. ಅತ್ಯಂತ ಪ್ರಮುಖವಾದ ಉದಾಹರಣೆಗಳೂ ಸಾಕಷ್ಟಿವೆ. ಸಮಯ ಮತ್ತು ಸ್ಥಳದ ಮಿತಿಯಿರುವುದರಿಂದ ಇಲ್ಲಿ ಅವನ್ನು ಚರ್ಚೆಗೆ ತೆಗೆದುಕೊಳ್ಳಲಾಗುತ್ತಿಲ್ಲ.

ಈಗಿರುವ ಪರಿಸ್ಥಿತಿಯಲ್ಲಿ ಇಂತಹ ವಿಜ್ಞಾನವನ್ನು ನಮ್ಮ ಭಾಷೆಯಲ್ಲಿ ಹುಟ್ಟುಹಾಕುವ ಅವಕಾಶಗಳನ್ನು ಒದಗಿಸಿಕೊಡಬೇಕಷ್ಟೇ. ಸದ್ಯಕ್ಕೆ ಕನ್ನಡ ವಿಶ್ವವಿದ್ಯಾಲಯದ ಆಶಯವಾದ ಜ್ಞಾನವನ್ನು ಹುಟ್ಟುಹಾಕುವ ಪ್ರಕ್ರಿಯೆ, ಕರ್ನಾಟಕ ವೈಜ್ಞಾನಿಕ ವರ್ಗಕ್ಕೆ ಸಂಪೂರ್ಣ ಉಪಯೋಗಿಸುವಂತಾಗಬೇಕು. ಕರ್ನಾಟಕ ರಾಜ್ಯದ ಪ್ರತಿಷ್ಠಿತ ವಿಜ್ಞಾನ ಸಂಸ್ಥೆಯಲ್ಲಿ ಒಂದು ದಶಕಕ್ಕೂ ಹೆಚ್ಚುಕಾಲ ಕೆಲಸ ಮಾಡುತ್ತಾ ಸಂಶೋಧನೆಯಲ್ಲಿ ನಿರತನಾಗಿರುವ ನನಗೆ ಅನ್ನಿಸುವುದೆಂದರೆ, ನಮ್ಮ ಬಲವನ್ನು ನಾವು ಸಂಪೂರ್ಣವಾಗಿ ಉಪಯೋಗಿಸುತ್ತಿಲ್ಲ.

ಯಾವುದೊ ಒಂದನ್ನು ಹಿಡಿದು ಅದನ್ನೇ ಜೋತುಕೊಳ್ಳುವ ಮನೋಭಾವ ನಮ್ಮದಾಗಿದೆ, ಆಗುತ್ತಿದೆ. ಪರ್ಯಾಯಗಳನ್ನೆ ಹುಡುಕುತ್ತಿಲ್ಲ. ಅಂತಹ ಪ್ರಯತ್ನಗಳಿಗೂ ಅಷ್ಟಾಗಿ ಬೆಲೆಸಿಗುತ್ತಿಲ್ಲ. ಪರ್ಯಾಯಗಳಿಲ್ಲದ ಆಲೋಚನೆಗಳು ಖಂಡಿತ ಬಲಯುತವಾಗಿರಲಾರವು.

'ಕನ್ನಡದಲ್ಲೇ ವಿಜ್ಞಾನದ ನಿರ್ಮಾಣ' ಎಂಬುದು ಕನಸಿನಂತೆ ಎನ್ನಿಸಬಹುದು. ಆದರೆ ನಮ್ಮ ಆಲೋಚನೆಗಳು ಕನ್ನಡೀಕರಣಗೊಳ್ಳದ ಹೊರತು, ನಾವು ಪ್ರತೀ ಬಾರಿಗೂ ಆಮದು ಜ್ಞಾನದಿಂದಲೇ ನಮ್ಮ ಚಿಂತನೆಯನ್ನೂ, ಬೆಳವಣಿಗೆಯನ್ನೂ ರೂಢಿಸಿಕೊಳ್ಳುತ್ತಿರುತ್ತೇವೆ. ಅದು ಖಂಡಿತ ನಮಗೆ ಏಳಿಗೆಯನ್ನು ತರುವುದಿಲ್ಲ. ನಮ್ಮ ವೈಜ್ಞಾನಿಕ ದೃಷ್ಟಿಯೂ ಸಹ ಈ ನೆಲದ ಆಶಯಗಳನ್ನು ಹೊತ್ತುಕೊಳ್ಳುವುದು ಅನಿವಾರ್ಯ.



## ಇಂಗ್ಲಿಶ್ ಒತ್ತಡ: ಗೋಗರೆತ ಸಾಕು

● ಪಿ ಎಸ್ ಪಾಟೀಲ

ವಿಜಾಪುರದಲ್ಲಿ ಕಳೆದ ನಲವತ್ತೊಂಬತ್ತು ವರ್ಷದಿಂದ ನಾನು ವಕೀಲಿ ವೃತ್ತಿಯಲ್ಲಿ ತೊಡಗಿದ್ದೇನೆ. ಎರಡು ಸಾವಿರದ ಎರಡನೆಯ ಇಸವಿಯ ಕೊನೆಗೆ ನನ್ನ ವಕೀಲಿಗೆ ಅರ್ಧ ಶತಮಾನದ ಅವಧಿ ಪೂರೈಸುತ್ತದೆ. ಈ ಅವಧಿಯಲ್ಲಿ ೧೯೫೩ರಿಂದ ೧೯೫೭ರವರೆಗೆ ಮುಂಬಯಿ ಪ್ರಾಂತದ ಭಾಗವಾಗಿ ಹಾಗೂ ಆನಂತರದ ಈವರೆಗಿನ ಅವಧಿಯಲ್ಲಿ ಮೈಸೂರು-ಕರ್ನಾಟಕ ಪ್ರಾಂತದ ಭಾಗವಾಗಿ ಬಿಜಾಪುರದ ಜಿಲ್ಲಾ ಸ್ಥಳದಲ್ಲಿ ನನ್ನ ವಕೀಲಿ ವೃತ್ತಿ ನಡೆದುಬಂದಿದೆ. ಈ ಅವಧಿಯಲ್ಲಿ ಇಂಗ್ಲಿಶ್ ಭಾಷೆಯ ಒತ್ತಡ ನಮ್ಮ ಮೇಲಾದದ್ದು ವಿವಿಧ ರೀತಿ.

ಮುಂಬಯಿ ಪ್ರಾಂತದ ನ್ಯಾಯಾಡಳಿತ ಶಾಖೆಯಲ್ಲಿ ಇಂಗ್ಲಿಶ್ ಪ್ರಭಾವ ಇತ್ತೇನೋ ನಿಜ. ಆದರೆ, ಮುಂಬಯಿ ಆಡಳಿತ ಆಗಲೇ ನ್ಯಾಯಾಡಳಿತವನ್ನು ಇಂಗ್ಲಿಶ್ ಪ್ರಭಾವದಿಂದ ಮುಕ್ತಗೊಳಿಸುವ ಪ್ರಯತ್ನದಲ್ಲಿ ತೊಡಗಿರುವುದು ಕಂಡು ಬರುತ್ತಿತ್ತು. ಜಿಲ್ಲಾ ಮಟ್ಟದಿಂದ ತೀರ ಕೆಳಗಿನ ಆಡಳಿತ ಸ್ಥಳಗಳಾಗಿದ್ದ ಮುನಸೀಫ ಕೋರ್ಟು, ಮ್ಯಾಜಿಸ್ಟ್ರೇಟ ಕೋರ್ಟುಗಳ ವರೆಗೆ ಪುರಾವೆ ದಾಖಲಿಸುವುದು, ಸಾಕ್ಷೀ ಸವಾಲು ಹಾಗೂ ಉಲಟಸವಾಲು-ಅನೇಕ ವೇಳೆ ವಾದವಿವಾದ ಸಹ-ಬಹುತರವಾಗಿ ಕನ್ನಡದಲ್ಲೇ ನಡೆಯುತ್ತಿತ್ತು. ತೀರ್ಪುಗಳು ಮಾತ್ರ ನ್ಯಾಯಶಾಖೆಯಲ್ಲಿ ತಪ್ಪದೆ ಇಂಗ್ಲಿಶಿನಲ್ಲಿ ಇರುತ್ತಿದ್ದು ರೆವೆನ್ಯೂ ಶಾಖೆಯ ಕೆಳಮಟ್ಟದಲ್ಲಿ ಕನ್ನಡದಲ್ಲಿರುತ್ತಿದ್ದವು. ಆ ಕಾಲಕ್ಕೆ ನನಗೆ ಆಶ್ಚರ್ಯ ತಂದ ಒಂದು ವಿಷಯವೆಂದರೆ, ಈ

ರೆವಿನ್ಯೂ ಕೋರ್ಟಗಳ ಹಳೆಯ ತೀರ್ಮಾನಗಳೆಲ್ಲ ಕನ್ನಡದಲ್ಲಿದ್ದುದು. ವಿಜಾಪುರ ಜಿಲ್ಲೆ ರಚಿತವಾಗುವುದಕ್ಕೆ ಮುಂಚಿನ ಕಲಾದಗಿ ಹಾಗೂ ಸೊಲ್ಲಾಪುರ ಜಿಲ್ಲೆಗಳ ರೆವಿನ್ಯೂ ಆಡಳಿತದ ಮಾಮಲೆದಾರ ಕಚೇರಿಯ ದಾಖಲೆಗಳನ್ನು ನೋಡುವ ಅಗತ್ಯ ನಮಗೆ ಬರುತ್ತಿತ್ತು. ಅಂತಹ ಸಂದರ್ಭದಲ್ಲಿ ಸೊಲ್ಲಾಪುರ, ಸತಾರಾ, ಕಲಾದಗಿ ಜಿಲ್ಲಾ ಆಡಳಿತಗಳ ಅನೇಕ ತೀರ್ಮಾನಗಳು ಶುದ್ಧ ಹಾಗೂ ಸಮರ್ಥ ಕನ್ನಡದಲ್ಲಿ ಬರೆಯಲ್ಪಟ್ಟದ್ದು ಆಶ್ಚರ್ಯಜನಕವೆನಿಸುತ್ತಿತ್ತು. ಬ್ರಿಟಿಶ್ ಆಡಳಿತಕ್ಕೆ ನ್ಯಾಯಾಡಳಿತ ಕನ್ನಡ ಭಾಷೆಯಲ್ಲಿ ನಡೆಯಬೇಕೆಂದಿದ್ದ ಕಾಳಜಿ, ನಮ್ಮದೇ ದೇಶೀಯ ಆಡಳಿತ ಬಂದ ಮೇಲೆ ಮಂದವಾಗುತ್ತಿದೆಯಲ್ಲ! ಅದೇಕೆ ಎಂದು ಆಶ್ಚರ್ಯವುಂಟಾಗುತ್ತಿತ್ತು. ಆದರೂ, ಮುಂಬಯಿ ಪ್ರಾಂತದ ಆಡಳಿತ ಕನ್ನಡಕ್ಕೆ ಕೊಡುತ್ತಿದ್ದ ಮಹತ್ವ ಗಮನಕ್ಕೆ ಬರುವಂತಿತ್ತು. ಕೋರ್ಟುಗಳಲ್ಲಿ, ಸೆಶನ್ಸ್ ಕೋರ್ಟುಗಳಲ್ಲಿ ಸಹ, ಸಾಕ್ಷಿಗಳ ಪುರಾವೆಯನ್ನು ಕನ್ನಡದಲ್ಲಿ ಹಾಗೂ ಇಂಗ್ಲಿಶ್‌ನಲ್ಲಿ ದಾಖಲೆ ಮಾಡುತ್ತಿದ್ದರೂ, ಯಾವುದು ಅಧಿಕೃತ ಎಂಬ ಪ್ರಶ್ನೆ ಎದ್ದಾಗ, ಕನ್ನಡ ದಾಖಲೆಯೇ ಅಸಲು ಹಾಗೂ ಅಧಿಕೃತ ವೆಂದು ಪರಿಗಣಿಸಲಾಗುತ್ತಿತ್ತು. ವಾದ-ವಿವಾದಗಳು ಆದಷ್ಟು ಮಟ್ಟಿಗೆ ಕನ್ನಡದಲ್ಲಿಯೇ ನಡೆಸುವಂತೆ ಉತ್ತೇಜನವೀಯಲಾಗುತ್ತಿತ್ತು.

ಸೆಶನ್ಸಕೋರ್ಟುಗಳಲ್ಲಿ ಜೂರಿ ಪದ್ಧತಿಯ ಹಾಗೆಯೇ ಇದ್ದ ಅಸೆಸರ್ ಪದ್ಧತಿಯೊಂದು ಜಾರಿಯಲ್ಲಿತ್ತು. ಸೆಶನ್ಸ್ ನ್ಯಾಯಾಧೀಶರು ತಮ್ಮ ತೀರ್ಮಾನಗಳನ್ನು ಜೂರರ್‌ಗಳಂತೆಯೇ ಇದ್ದ ಅಸೆಸರುಗಳ ಅಭಿಪ್ರಾಯ ಪಡೆದು ಬರೆಯಬೇಕಾಗುತ್ತಿತ್ತು. ಅಸೆಸರುಗಳ ಅಭಿಪ್ರಾಯಕ್ಕೆ ಮಹತ್ವವಿದ್ದದರಿಂದ ಸೆಶನ್ಸ್ ಕೋರ್ಟನಲ್ಲಿ ವಕೀಲರು ಅಸೆಸರುಗಳ ಮನವೊಲಿಸುವುದಕ್ಕೋಸ್ಕರ ವಾದ-ವಿವಾದ ಮಾಡಬೇಕಾಗಿತ್ತು. ಆ ಕಾಲದಲ್ಲಿ ಬಿಜಾಪುರದ ಸುಪ್ರಸಿದ್ಧರಾದ ವಕೀಲರು ಶುದ್ಧ ಕನ್ನಡದಲ್ಲಿ ಅಸೆಸರುಗಳನ್ನು ಗಮನದಲ್ಲಿಟ್ಟು ವಾದ ಮಾಡುವುದನ್ನು ನಾನು ಕೇಳಿದ್ದೇನೆ. ಸಾಬೀತ ಬೋಜಾ, ಸಂಶಯದ ಫಾಯಿದೆಗಳಂತಹ ಸೂಕ್ಷ್ಮ ಕಾನೂನು ಪ್ರಶ್ನೆಗಳ ಕುರಿತು ಅಪ್ಪಟ ಕನ್ನಡದಲ್ಲಿ ನಡೆಯುತ್ತಿದ್ದವು. ಆ ವಿವಾದ ಗಳನ್ನು ಕೇಳಿದ ನನಗೆ, ನ್ಯಾಯಾಡಳಿತವನ್ನು ನೂರಕ್ಕೆ ನೂರು ಕನ್ನಡದಲ್ಲಿ ನೆಡೆಸುವುದು ತೀರಸುಲಭ ಎಂಬ ಬಗ್ಗೆ ಸಂದೇಹವೇ ಉಳಿದಿಲ್ಲ. ಅಷ್ಟು ಮಾತ್ರವಲ್ಲ, ಅದು ಹಾಗಾದಾಗ ಮಾತ್ರ ನ್ಯಾಯ ವಿತರಣೆ ಸಫಲವಾಗುವುದೆಂದು ನನ್ನ ಮನವರಿಕೆ.

ಮೈಸೂರು ಆಡಳಿತ ಪ್ರಾರಂಭವಾಗುವವರೆಗೆ ಬಿಜಾಪುರ ಸಿವಿಲ್ ಕ್ರಿಮಿನಲ್ ಕೋರ್ಟುಗಳ ಅಸಲರ್ಜಿ-ಕೈಫಿಯತ್, ಫಿರ್ಯಾದಿ-ತಕರಾರುಗಳೆಲ್ಲ ಕನ್ನಡದಲ್ಲಿಯೇ ಇರುತ್ತಿದ್ದವು. ಅತ್ಯಂತ ಕ್ಲಿಷ್ಟವಾದ ಸಿವಿಲ್ ಕೇಸುಗಳಲ್ಲೂ ಅಸಲರ್ಜಿ-ಕೈಫಿಯತ್ತುಗಳು ಕನ್ನಡದಲ್ಲಿಯೇ ಇರುತ್ತಿದ್ದವು. ನಾನು ಪ್ಲೀಡಿಂಗ ತಯಾರಿಸಲು ಕಂಡದ್ದೆ ಈ ಕನ್ನಡ ಪ್ಲೀಡಿಂಗುಗಳ ಮೂಲಕ. ಮೈಸೂರು ಆಡಳಿತ ಬಂದ ಮೇಲೆ ಒಮ್ಮೆಲೆ ಇಂಗ್ಲಿಶ್ ಪ್ಲೀಡಿಂಗು ಗಳಿಗೆ ಮಹತ್ವ ಬಂತು. ಪುರಾವೆ ದಾಖಲಿಸುವುದು ಇಂಗ್ಲಿಶ್‌ನಲ್ಲಿ ಪ್ರಾರಂಭವಾಯಿತು. ಅಧಿಕೃತ ದಾಖಲೆ ಇಂಗ್ಲಿಶಿನದೇ ಎಂದಾಯಿತು. ಹೀಗಾಗಿ ನ್ಯಾಯಾಧಿಕಾರಿ ಸಾಕ್ಷಿಯ

ಜವಾಬನ್ನು ಇಂಗ್ಲಿಶ್ ಭಾಷೆಯಲ್ಲಿ ತರ್ಜುಮೆ ಮಾಡಿ ಬರೆದುಕೊಂಡದ್ದೇ ಅಧಿಕೃತ ದಾಖಲೆಯೆನಿಸತೊಡಗಿತು. ಇದರಿಂದ ಆಗುತ್ತಿರುವ ಅನ್ಯಾಯಕ್ಕೆ ಇತಿಮಿತಿಗಳೇ ಇಲ್ಲ. ತರ್ಜುಮೆ ಸರಿಯಾಗಿರುವ ಖಾತ್ರಿಯಿಲ್ಲ. ಮಾತ್ರವಲ್ಲ ಅದು ಪ್ರಾಮಾಣಿಕವಾಗಿರದ ಸಂದರ್ಭಗಳಿಗೂ ಕಡಿಮೆ ಇಲ್ಲ. ಕಕ್ಷಿಯೊಬ್ಬ ಕೊಡದಿದ್ದ ಒಪ್ಪಿಗೆಯನ್ನೇ ಅವಲಂಬಿಸಿ, ತೀರ್ಮಾನಗಳಾಗುವುದಕ್ಕೆ ಅವಕಾಶವುಂಟಾದರೆ, ಅನ್ಯಾಯಗಳಾಗುವುದನ್ನು ತಡೆಯುವುದಾದರೂ ಹೇಗೆ? ಇದಾಗುತ್ತಿರುವುದು ಕನ್ನಡದ ಉದ್ಧಾರಕ್ಕೋಸ್ಕರವೇ ಅಸ್ತಿತ್ವಕ್ಕೆ ಬಂದ ಭಾಷಾವಾರು ಪ್ರಾಂತಗಳ ರಚನೆಯ ನಂತರವೆಂದರೆ, ಅದು ಎಂತಹ ವಿಪರ್ಯಾಸವೆನ್ನಬೇಕು?

ಮೇಲೆ ನಮೂದಿಸಿದ ಕೆಲವು ಸಂಗತಿಗಳಿಂದ ಕನ್ನಡದಲ್ಲಿ ಕಾನೂನಿನ ಆಡಳಿತ ನಡೆಯುವುದಕ್ಕೆ ಯಾವುದೇ ಭಾಷಿಕ ಅಪರ್ಯಾಪ್ತತೆಗೋಸ್ಕರ ಎಂದು ಹೇಳಲಾಗದು. ಅದೂ ಹೆಚ್ಚಿನ ತೀರ್ಮಾನಗಳಿನ್ನೂ ಇಂಗ್ಲಿಶಿನಲ್ಲಿ ಬರುತ್ತಿವೆಯಲ್ಲ; ಏಕೆ? ತೀರ್ಮಾನಗಳನ್ನು ಪೂರ್ಣ ಕನ್ನಡದಲ್ಲಿ ಬರೆಯುವುದು ಅಸಾಧ್ಯವೆ? ಪುರಾವೆ-ವಾದವಿವಾದಗಳು ಕನ್ನಡದಲ್ಲಿ ನಡೆಯುತ್ತಿರುವಾಗ ತೀರ್ಮಾನ ಕನ್ನಡದಲ್ಲಿ ಬರಲು ಯಾವ ಆತಂಕವಿದ್ದೀತು. ಅಧಿಕಾರಿಗಳು ಮನಸ್ಸು ಮಾಡುವುದು ಅಥವಾ ಅವರು ಮನಸ್ಸು ಮಾಡುವಂತೆ ಮಾಡುವುದಷ್ಟೇ ಬಾಕಿ. ನನ್ನದೇ ಅನುಭವ ಹೇಳುವುದಾದರೆ, ನಾನು ಅಪೀಲ ಪ್ರಕರಣಗಳನ್ನು ನಡೆಸುತ್ತಿರುವಾಗ ಅನೇಕ ಕೆಳ ಕೋರ್ಟಿನ ತೀರ್ಮಾನಗಳನ್ನು ಕೂಲಂಕಷವಾಗಿ ಓದಿ ಪರೀಕ್ಷಿಸಬೇಕಾಗುತ್ತದೆ. ನನ್ನ ಅನುಭವವೆಂದರೆ, ಕನ್ನಡದಲ್ಲಿ ತೀರ್ಮಾನಗಳಿರುವಾಗ ಅವು ಹೆಚ್ಚು ತರ್ಕಬದ್ಧವೂ ನೇರವೂ ಸ್ಪಷ್ಟವೂ ಆಗಿರುತ್ತವೆ. ಇಂಗ್ಲಿಶಿನಲ್ಲಿದ್ದಾಗ ಇವೆಲ್ಲ ಲಕ್ಷಣಗಳು ಒಡಮೂಡಿ ಬರುವುದು ಇತ್ತೀಚೆಗೆ ದುರ್ಲಭ ಪ್ರಸಂಗವೆನಿಸತೊಡಗಿದೆ. ಇಂಗ್ಲಿಶಿನಲ್ಲೇ ತೀರ್ಮಾನ ಬರೆಯುವ ಹಟ ಬಿಟ್ಟರೆ ಎಲ್ಲ ಪಕ್ಷಗಳಿಗೂ ಕ್ಷೇಮವಾದೀತು. ನಾವು-ವಕೀಲರಂತೂ ಇದನ್ನು ತೆರೆದ ಹೃದಯದಿಂದ ಸ್ವಾಗತಿಸುತ್ತೇವೆ. ಅಷ್ಟರ ಮಟ್ಟಿಗೆ ಜಡ್ಜಿಗಳ ತೀರ್ಮಾನಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ನಮಗಾಗುತ್ತಿರುವ ನರಕಯಾತನೆ ತಪ್ಪುತ್ತದೆ. ಜಡ್ಜ್ ನೋಟು ಬರೆಯುವ ಜಡ್ಜಿಗಳಿಗೂ ಇದು ಅನುಕೂಲಕರವೇ ಎಂದು ನನ್ನ ಭಾವನೆ. ಹಾಗಿರುವಾಗ ಯಾವ ಒತ್ತಡದಿಂದ ಇಂಗ್ಲಿಶ್ ಭಾಷೆಯ ತೀರ್ಮಾನಗಳಿಗೆ ಪ್ರಾಶಸ್ತ್ಯ ಕೊಡಲಾಗುತ್ತಿದೆ?

ಇಷ್ಟು ಮಾತ್ರ ನಿಜ; ಬರಿ ಕನ್ನಡ ಬಾರದೆ, ಕಾನೂನಿನ ಕ್ಷೇತ್ರದಲ್ಲಿ ನಡೆಯುತ್ತಿರುವ ಕೆಲಸ ಅಷ್ಟು ಸಮರ್ಥವಾಗಿ ನಡೆಯಬಾರದು. ಕಾನೂನಿನ ಅಧಿಕೃತ ಪಾಠಗಳು ಇಂದಿಗೂ ಇಂಗ್ಲಿಶ್‌ನಲ್ಲಿಯೇ ಇರಬೇಕಾಗಿದೆ. ಯಾವುದೊಂದು ಕಾನೂನಿನ ಕನ್ನಡ ರೂಪವೂ ಬಹಳ ಸಲ ಲಭ್ಯವಿರುತ್ತದೆ. ಆದರೆ ಅದನ್ನು ಓದುವುದು, ಅರ್ಥಮಾಡಿಕೊಳ್ಳುವುದು, ಅದನ್ನೇ ವಾದ-ವಿವಾದಗಳಲ್ಲಿ ಬಳಸುವುದು ಮತ್ತು ಅಧಿಕೃತ ದಾಖಲೆಗಳಲ್ಲಿ ಉದ್ಧರಿಸುವುದು ಹುಲುಮಾನವರಿಗೆ ಅಸಾಧ್ಯವೆನಿಸುವ ಕೆಲಸ. ಕಾನೂನು ಪಾಠ ತಯಾರಿಕೆ ಸರಳ ಕನ್ನಡದಲ್ಲೇಕೆ ಸಾಧ್ಯವಾಗಬಾರದು. ಹಾಗಾಗುವ ತನಕ ಕಾನೂನಿನ ಇಂಗ್ಲಿಶ್ ಪಾಠವನ್ನೇ ವಕೀಲರು

ಬಳಸುವುದು ಅನಿವಾರ್ಯವಾಗುತ್ತದೆ. ಅಲ್ಲದೆ, ಕಾನೂನಿನ ನಿರಂತರ ವ್ಯಾಖ್ಯಾನಗಳ ಉಚ್ಚನ್ಯಾಯಾಲಯಗಳ ಮೂಲಕ ನಡೆಯುತ್ತಿದ್ದು ಅವೆಲ್ಲ ಲಾರಿಪೋರ್ಟಗಳಲ್ಲಿ ವರದಿಯಾಗಬೇಕಾಗುತ್ತದೆ. ಇದೆಲ್ಲ ಕೆಲಸ ಈತನಕ ಅನಿವಾರ್ಯವಾದ ಕನ್ನಡದಲ್ಲಿ ನಡೆಯುತ್ತಿಲ್ಲ. ಕನ್ನಡದಲ್ಲಿ ಲಾರಿಪೋರ್ಟಿಂಗ್ ಮಾಡುವ ಕೆಲವು ಪ್ರಯತ್ನಗಳಾಗಿವೆಯಾದರೂ, ಅವು ಅಷ್ಟು ಸಮರ್ಥವಾಗಿ ನಡೆಯಲಿಲ್ಲವಾಗಿ ಜನಪ್ರಿಯತೆ ಗಳಿಸಲಿಲ್ಲ. ಈ ವಿಷಯದಲ್ಲಿ ಹಿಂದೀ ಭಾಷೆಯಲ್ಲಿ ಹೆಚ್ಚು ಯಶಸ್ವಿಯಾದ ಕೆಲಸ ನಡೆಯುತ್ತಿದೆ. ಕನ್ನಡದಲ್ಲೂ ಅದೇ ಮಟ್ಟದ ಪ್ರವೀಣತೆ, ದಕ್ಷತೆಗಳು ತಲೆದೋರಿದರೆ ಒಂದು ದೊಡ್ಡ ತೊಡಕು ಬಿಟ್ಟಂತಾಗುತ್ತದೆ. ಆವರೆಗೆ ಇಂಗ್ಲಿಶ್ ಭಾಷೆಯ ಪ್ರಯೋಗ ಒತ್ತಡ ಇದ್ದೇ ಇರುತ್ತದೆ.

ಕಾನೂನಿನ ಕೆಲಸಗಾರರು-ವಕೀಲರು, ನ್ಯಾಯಾಧಿಕಾರಿಗಳು, ಶಾಸನರೂಪಕರು ಇತ್ಯಾದಿ - ಸಮರ್ಥವಾಗಿ ಕನ್ನಡದ ಮೂಲಕವೇ ಕಾರ್ಯನಿರ್ವಹಿಸುವುದಕ್ಕೆ ಕಾನೂನು ಗ್ರಂಥಗಳು-ಕಾನೂನು ಪಾಠಗಳು, ವ್ಯಾಖ್ಯಾನ ಗ್ರಂಥಗಳು, ಶಾಸ್ತ್ರಗ್ರಂಥಗಳು ಇತ್ಯಾದಿ - ಕನ್ನಡದಲ್ಲಿಯೇ ಇದ್ದರೆ ಬಹಳ ಅನುಕೂಲವಾಗುತ್ತದೆ. ಅವೆಲ್ಲ ಇಂಗ್ಲಿಶಿನಲ್ಲೇ ಇರುವಾಗ ಕಾನೂನು ಕಾರ್ಯಕರ್ತರು ಅವನ್ನು ಇಂಗ್ಲಿಶಿನಲ್ಲಿ ಓದಿ. ಅರಗಿಸಿಕೊಂಡು, ತರ್ಜುಮೆಯ ಮುಖಾಂತರ ಕನ್ನಡದಲ್ಲಿ ಕೆಲಸಮಾಡಬೇಕಾಗುತ್ತದೆ. ಈ ದಿಶೆಯಲ್ಲಿ ಕೆಲಮಟ್ಟಿನ ಕೆಲಸ ನಡೆಯುತ್ತಿದೆ. ಆದರೆ, ಅದು ಕೆಲಸಕ್ಕೆ ನೆರವಾಗುವ ಮಟ್ಟವನ್ನಿನ್ನೂ ಮುಟ್ಟಲೇ ಇಲ್ಲ. ಕನ್ನಡದಲ್ಲೇ ಓದಿ ಅರ್ಥಮಾಡಿಕೊಂಡು ವಾದವಿವಾದಲ್ಲಿ ಪ್ಲೀಡಿಂಗ್ ತಯಾರಿಕೆಯಲ್ಲಿ, ತೀರ್ಮಾನ ಬರೆಯುವುದರಲ್ಲಿ ನಿರರ್ಗಳವಾಗಿ ಬಳಸಬಹುದಾದ ಒಂದು ಅಪರಾಧ ಕಾನೂನು ಕುರಿತಾದ ಗ್ರಂಥ ಕನ್ನಡದಲ್ಲಿಯೆ? ಸಿವಿಲ್ ಕಾನೂನು ಕುರಿತಂತೂ ಈ ಕೊರತೆ ಇನ್ನೂ ಭಯಾನಕವಾದದ್ದು. ಈ ಪ್ರಕಾರದ ಪರ್ಯಾಪ್ತ ಗುಣಮಟ್ಟದ ಕಾನೂನು ಸಾಹಿತ್ಯ ಕನ್ನಡದಲ್ಲಿ ಅವತರಿಸಬೇಕಾದರೆ, ಅದು ಕಾನೂನು ಶಾಸ್ತ್ರ ಸಾಹಿತ್ಯದಿಂದಲೇ ಪ್ರಾರಂಭವಾಗಬೇಕು. ಶಾಸ್ತ್ರ ಸಾಹಿತ್ಯದಲ್ಲಿ ಕಾನೂನಿನ ಪರಿಕಲ್ಪನೆಗಳ ಪರಿಷ್ಕಾರ, ನಿರೂಪಣೆ, ವ್ಯಾಖ್ಯಾನ ಹಾಗೂ ವಿಮರ್ಶೆಗಳು ಕನ್ನಡದಲ್ಲಿ ನಡೆದವಾದರೆ, ಅವನ್ನು ಬಳಸಿಕೊಂಡು ಒಳ್ಳೆಯ ಕಾನೂನುಗಳು, ಕಾನೂನು ವ್ಯಾಖ್ಯಾನಗಳು, ಕಾನೂನು ತೀರ್ಮಾನಗಳು, ತೀರ್ಮಾನಗಳ ವರದಿಗಳು ಬರುವುದಕ್ಕೆ ಬಹಳ ತಡವಾಗುವುದಿಲ್ಲ. ಆ ದಿಶೆಯಲ್ಲಿನ್ನೂ ಕೆಲಸ ಪ್ರಾರಂಭ ಕೂಡ ಆಗಿಲ್ಲ. ವಿಶ್ವವಿದ್ಯಾಲಯಗಳ ಕಾನೂನು ಕಾಳಜಿಗಳ ಪ್ರಾಧ್ಯಾಪಕರು ಅರ್ಧಮರ್ಧ ಇಂಗ್ಲಿಶಿನಲ್ಲೇ ಉಪನ್ಯಾಸ ಮಾಡುವುದು, ಪ್ರಬಂಧಗಳನ್ನು ತಯಾರಿಸುವುದು, ಗ್ರಂಥಗಳನ್ನು ಕೂಡ ಪ್ರಕಟಿಸುವದು ಇಂದಿಗೂ ತಪ್ಪಿಲ್ಲ. ಈ ತನಕ ಕರ್ನಾಟಕದ ಒಂದು ವಿಶ್ವವಿದ್ಯಾನಿಲಯವೂ ಒಂದು ಒಳ್ಳೆಯ ಕಾನೂನು ಶಾಸ್ತ್ರ ಕುರಿತಾದ ಪ್ರಮಾಣ ಗ್ರಂಥವೊಂದನ್ನು ಕನ್ನಡದಲ್ಲಿ ಪ್ರಕಟಿಸಿರುವುದಿಲ್ಲ.

ಯಾವ ಶಾಸ್ತ್ರ ಕ್ಷೇತ್ರದಲ್ಲೂ ಬಹುತರ ಭಾಷಾವಿಜ್ಞಾನ ಕ್ಷೇತ್ರ ಬಿಟ್ಟು ನಮ್ಮ ವಿಶ್ವವಿದ್ಯಾನಿಲಯಗಳು ಕನ್ನಡದಲ್ಲಿ ಪ್ರಮಾಣಗ್ರಂಥಗಳನ್ನು ನಿರ್ಮಿಸಲಿಲ್ಲವೆಂಬುದು

ನಿಜವಾದರೂ, ಕಾನೂನಿನ ಕ್ಷೇತ್ರದಲ್ಲಿ ಇದಾಗದಿದ್ದುದರಿಂದ ನ್ಯಾಯಾಡಳಿತದ ಕಾರ್ಯ ಕನ್ನಡ ಭಾಷೆಯಲ್ಲಿ ನಡೆಯುವುದು ಇಂದಿಗೂ ಕಷ್ಟಕರವೆನಿಸುತ್ತಲಿದೆ. ಹಿಂದಿ, ಮರಾಠಿಗಳಲ್ಲಿ ಈ ವಿಷಯದಲ್ಲಿ ತಕ್ಕಮಟ್ಟಿನ ಕೆಲಸ ನಡೆಯುತ್ತಿದೆಯೆಂದು ನಾವು ಕೇಳುತ್ತೇವೆ. ಅದನ್ನೇ ಅವಲಂಬಿಸಿ ನಮ್ಮ ವಿಶ್ವವಿದ್ಯಾನಿಲಯಗಳು ಒಂದು ಸಾಮಂಡ್ಸ್ ಜೂರಿಸ್ ಪ್ರುಡೆನ್ಸ್‌ನಂತಹ ಕೃತಿಯನ್ನು ಕನ್ನಡದಲ್ಲಿ ಪ್ರಕಟಿಸಿದರೆ, ಕಾನೂನು ಆಡಳಿತದ ಕ್ಷೇತ್ರವನ್ನೆಲ್ಲ ಇಂಗ್ಲಿಶ್ ಭಾಷೆಯ ಒತ್ತಡದಿಂದ ಬಿಡುಗಡೆ ಮಾಡುವ ದಿಶೆಯಲ್ಲಿ ಒಂದು ದೊಡ್ಡ ಹೆಜ್ಜೆಯನ್ನಿಟ್ಟಂತಾಗುತ್ತದೆ. ಒಂದೇ ವಿಶ್ವವಿದ್ಯಾಲಯದಿಂದ ಈ ಕೆಲಸ ಅಸಾಧ್ಯವೆನಿಸಿದರೆ, ಎಲ್ಲ ವಿಶ್ವವಿದ್ಯಾಲಯಗಳೂ ಒಟ್ಟುಗೂಡಿ ಒಂದು ಕಾನೂನು ಶಾಸ್ತ್ರದ ಪ್ರಮಾಣ ಗ್ರಂಥ ರಚನೆ ಕೈಕೊಳ್ಳುವ ಸಾಮಾನ್ಯ ಅಧಿಕರಣವೊಂದನ್ನು ರಚಿಸಿ ಕೆಲಸಕ್ಕೆ ಮುಂದಾಗಲಿ. ಬರಿ ಪರಭಾಷೆಯಾದ ಇಂಗ್ಲಿಶ್ ಒತ್ತಡ ಕುರಿತು ಗೋಗರೆಯುತ್ತಲೇ ಇದ್ದರೆ ಇಂಥ ಕೆಲಸ ಯಾವಾಗ ಆಗಬೇಕು? ಇದೆಲ್ಲ ಆಗದಿದ್ದರೆ, ಕರ್ನಾಟಕ ರಾಜ್ಯ ಆದದ್ದು, ಕನ್ನಡ ವಿಶ್ವ ವಿದ್ಯಾಲಯಗಳಿರುವುದು ಯಾವ ಪುರುಷಾರ್ಥಕ್ಕೆ?



## ಕನ್ನಡದ ಮೂಲಕ ಕಲಿಕೆಯೊಂದೇ ಸಾಲದು

● **ಕೆ ಫಣಿರಾಜ**

**ಈ** ವಿಷಯದ ಕುರಿತಾಗಿ ಅನುಭವ ಹಾಗು ಚಿಂತನೆಗಳನ್ನು ಹಂಚಿಕೊಳ್ಳಬೇಕು ಎಂದು ಕೇಳಿದ್ದೀರಿ. ಅನುಭವವನ್ನು ಮುಚ್ಚುಮರೆ ಇಲ್ಲದೆ ಹೇಳಿಬಿಡಬಹುದು; ಆದರೆ ಈ ವಿಷಯದ ಬಗ್ಗೆ ನಾನು 'ಚಿಂತನೆ' ನಡೆಸಿದವನಲ್ಲ. ಸ್ವಂತದ ಅನುಭವಕ್ಕೂ ಚಿಂತನೆಗೂ ನಂಟಿದೆ ಎಂದು ಹೇಳಬಹುದಾದರೂ, ನಾನು ತಿಳಿದುಕೊಂಡಿರುವ ಮಟ್ಟಿಗೆ 'ಚಿಂತನೆ' ಸ್ವಂತದ ಅನುಭವವನ್ನೂ ಮೀರಿ, ಬೇರೆಯವರ ಅನುಭವಗಳನ್ನು ಜೀವಂತವಾಗಿ ಪರಿಭಾವಿಸಬೇಕು. ಹೀಗಾಗಿ ಮುಂದೆ ನಾನು ಹೇಳುವುದೆಲ್ಲದರ ಬಗ್ಗೆ ನಾನೇ ಸಾಕಷ್ಟು ಅನುಮಾನಗಳನ್ನಿಟ್ಟುಕೊಂಡಿದ್ದೇನೆ ಎನ್ನುವ ಸಂಗತಿಯನ್ನು ನಮೂದಿಸಿ ಮುಂದುವರೆಯುತ್ತೇನೆ. ಮೊದಲಿಗೆ ಈ ವಿಷಯದ ಕುರಿತಾಗಿ ನಾನು ಕೇಳಿರುವ ಕೆಲವು ಜೋಕುಗಳನ್ನು ಹೇಳುತ್ತೇನೆ; ನಾನು ಇಂಜಿನಿಯರಿಂಗ್ ಓದುತ್ತಿದ್ದ ಹೊತ್ತಿಗೆ-೯೮೦ರ ಪೂರ್ವಾರ್ಧ-ಚಾಲ್ತಿಯಲ್ಲಿದ್ದ ಜೋಕುಗಳಿವು:

೧. ಬಿ.ಇ. ಎಂದರೆ ಬ್ಯಾಡ್ ಇಂಗ್ಲಿಶ್; ಎಂ.ಇ. ಎಂದರೆ ಮ್ಯಾಡ್ ಇಂಗ್ಲಿಶ್

೨. ಎನ್ವಿರಾನ್ಮೆಂಟಲ್ ಇಂಜಿನಿಯರಿಂಗ್ ಲ್ಯಾಬ್‌ನಲ್ಲಿ ಒಬ್ಬ ಲ್ಯಾಬ್ ಅಸಿಸ್ಟೆಂಟ್

ಇದ್ದ. ರಾಮಣ್ಣ ಅಂತ. ಪ್ರಯೋಗಗಳ ವಿಷಯದಲ್ಲಿ ತುಂಬ ಹುಶಾರು; ಎಲ್ಲ ಪ್ರಯೋಗಗಳ ಸೂಕ್ಷ್ಮ ಗೊತ್ತಿತ್ತು ಅವನಿಗೆ. ಆದರೆ ಅವನಿಗೆ ಇಂಗ್ಲಿಶ್ ಮಾತಾಡುವ ಹುಚ್ಚು. ಬ್ಯುರೆಟ್‌ನಲ್ಲಿ ಇರುವ ದ್ರಾವಣವನ್ನು ಒಮ್ಮೆಲೆ ಜೋರಾಗಿ ಹರಿಯಬಿಡದೆ, ಹನಿ ಹನಿಯಾಗಿ ನಿಧಾನ ಗತಿಯಲ್ಲಿ ಹರಿಸಬೇಕು ತಲೆ ಇಲ್ಲದ ಹುಡುಗರೆ, ಎನ್ನುವುದನ್ನು ಆತ ಇಂಗ್ಲಿಶ್‌ನಲ್ಲಿ ಹೇಳುತ್ತಿದ್ದುದ್ದು ಹೀಗೆ: ಡೋಂಟ್ ಪೋರ್ ಡ್ರಾಪ್ ಡ್ರಾಪ್ ಡ್ರಾಪ್, ಪೋರ್ ಡ್ರಾಪ್...... ಡ್ರಾಪ್........ ಡ್ರಾಪ್, ಅಮಡರ್ ಸ್ಟ್ಯಾಂಡ್, ಯು ಹೆಡ್ಲೆಸ್ ಜಂಟ್ಸ್.

೩. ಕಾಂಕ್ರೀಟ್ ಸ್ಟ್ರಕ್ಚರ್ಸ್ ಹೇಳಿಕೊಡುವ ಗುಂಡಾಚಾರರು, ಭಾರ ಜಾಸ್ತಿಯಾದಾಗ ಕಾಂಕ್ರಿಟ್ ತೊಲೆಗಳು ಯಾವ ಮುನ್ಸೂಚನೆಯನ್ನು ಕೊಡದೆ ಏಕಾಏಕಿ ಮುರಿದು ಬೀಳುತ್ತವೆ ಎನ್ನುವುದನ್ನು ಇಂಗ್ಲಿಶಿನಲ್ಲಿ ಹೇಳುತ್ತಿದ್ದುದ್ದು ಹೀಗೆ: ಕಾಂಕ್ರಿಟ್ ಬೀಮ್ಸ್ ಪೇಲ್ಸ್ - ಢಢ್ ಬಢ್; ಬಟ್ ಸ್ಟೀಲ್ ಬೀಮ್ಸ್ ಫೇಲ್ಸ್ ಲೈಕ್ ದಿಸ್ -ಕೈಯನ್ನು ತಲೆಯ ಮಟ್ಟಕ್ಕೆ ಹಿಡಿದು ನಿಧಾನಕ್ಕೆ ನೆಲದ ಹತ್ತಿರ ತರುವ ಅಂಗಿಕ ಅಭಿನಯ.

ಇದನ್ನೆಲ್ಲ ಯಥಾವತ್ತಾಗಿ ಕಂಡವರು ಯಾರೂ ಇಲ್ಲ; ಆದರೆ, ಆ ವಾತಾವರಣದಲ್ಲಿ ರೂಢಿಯಲ್ಲಿ ಇದ್ದ ಇಂಗ್ಲಿಶ್ ಭಾಷಾಪ್ರಯೋಗದ ಜ್ಞಾನವನ್ನು ಗಮನಿಸಿದರೆ, ಇದೆಲ್ಲ ನಿಜ ಅನಿಸುತ್ತಿತ್ತು. ಆದರೆ ಬ್ಯಾಡ್, ಮ್ಯಾಡ್ ಇಂಗ್ಲಿಶುಗಳ ಬಗ್ಗೆ ನಾಚಿಕೆಪಟ್ಟುಕೊಳ್ಳುವವ ರನ್ನಾಗಲಿ, ರಾಮಣ್ಣ, ಗುಂಡಾಚಾರರ ವಿಷಯ ಜ್ಞಾನವನ್ನು ಮೆಚ್ಚಿಕೊಳ್ಳದವರನ್ನಾಗಲಿ ನಾನು ಕಂಡದ್ದಿಲ್ಲ, ನನ್ನ ಸಹಪಾಠಿಗಳಾಗಿದ್ದವರೆಲ್ಲ ಪಿಯುಸಿಯಲ್ಲಿ ಉತ್ತಮ ಅಂಕಗಳನ್ನು ಗಳಿಸಿದ್ದವರು; ಮುಕ್ಕಾಲುವಾಸಿ ಜನ ಅತ್ತ ಪಟ್ಟಣವೂ ಅಲ್ಲದ, ಇತ್ತ ಹಳ್ಳಿಯೂ ಅಲ್ಲದ ಊರುಗಳಿಂದ -ಮೊಫಾಸಿಲ್ ಟೌನ್ಸ್ -ಬಂದವರು; ಹಳ್ಳಿಯವರಾಗಿದ್ದರೂ, ಕಾಲೇಜನ್ನು ಮೊಫಾಸಿಲ್ ಟೌನ್ ಗಳಲ್ಲಿ ಕಲಿತವರು. ಕುತೂಹಲದ ವಿಷಯವೆಂದರೆ,ನಮ್ಮಲ್ಲಿ ಸಾಕಷ್ಟು ಜನ ಸೈನ್ಸ್ ಅಥವ ಇಂಜಿನಿಯರಿಂಗ್ ಕಲಿಯಲು ಇಂಗ್ಲಿಶ್ ಭಾಷೆಯ ಪರಿಣತಿ ಅಷ್ಟಾಗಿ ಬೇಕಾಗಿಲ್ಲ ಎಂದೇ ಗಟ್ಟಿಯಾಗಿ ನಂಬಿದ್ದವರು; ಜರ್ಮನಿ, ಜಪಾನ್ ಫ್ರಾನ್ಸ್ ಮುಂತಾದ ದೇಶಗಳ ಇಂಜಿನಿಯರುಗಳಿಗೆ ನಮ್ಮಷ್ಟು ಸಹ ಇಂಗ್ಲಿಶ್ ಬರುವುದಿಲ್ಲ ಎನ್ನುವ ಸಮಾಜಾ ಯಿಷಿಗಳನ್ನೂ ಕೊಟ್ಟುಕೊಳ್ಳುತ್ತಿದ್ದದ್ದು ಉಂಟು. ಆದರೆ ವಿವರಣೆಗೆ ಮಹತ್ವ ಇರುವ ವಿಷಯಗಳು ಮಾತ್ರ ನಮಗೆ ಕಿರಿಕಿರಿ ಉಂಟುಮಾಡುತ್ತಿದ್ದವು; ವಿಷಯ ಅರ್ಥವಾಗಿದೆ,ಆದರೆ ಇಂಗ್ಲಿಶಿನಲ್ಲಿ ಬರೆಯಬೇಕಲ್ಲ ಮಾರಾಯ, ಅದೇ ಕಷ್ಟ ಎನ್ನುತ್ತಿದ್ದವು. ಆದರೆ ಮೊದಲ ರ್‍ಯಾಂಕ್ ಪಡೆಯುವವನದೂ ಅದೇ ಸ್ಥಿತಿ ಇರುತ್ತಿದ್ದರಿಂದ, ಸಮಾಧಾನವಿರುತ್ತಿತ್ತು! ಇದು ಒಂದು ಮುಖ ಮಾತ್ರ.

ಇದೇ ಹೊತ್ತಿಗೆ ರೈತಾಪಿ ಕುಟುಂಬಗಳಿಂದ (ಇವರಲ್ಲಿ ಸಣ್ಣ ರೈತರ ಮಕ್ಕಳಿಂದ ಹಿಡಿದು, ದಲಿತ ಭೂಹೀನ ಕೃಷಿ ಕಾರ್ಮಿಕ ಕುಟುಂಬಗಳವರೆಗಿನವರು ಇದ್ದರು) ಬಂದ ಹುಡುಗರ ಸ್ಥಿತಿಯನ್ನು ನಾನು ಕಂಡಿದ್ದೇನೆ. ಮೊಫಾಸಿಲ್ ನಗರಗಳ ಹುಡುಗರ ಹಾಗೆ ಅಷ್ಟೋ ಇಷ್ಟೋ ಇಂಗ್ಲಿಶ್ ಕೂಡ ಇವರಿಗೆ ಪರಿಚಯವಿರುತ್ತಿರಲಿಲ್ಲ. ಅವರು ಪದವಿ ಗಳಿಸಲು ತುಂಬಾ

ಪ್ರಯಾಸಪಡುತ್ತಿದ್ದರು. ಅಂಥ ಹುಡುಗರ ಜೊತೆ ನನಗೆ ಒಳ್ಳೆಯ ಒಡನಾಟವಿತ್ತು; ನಾನು ಅವರಿಗೆ ಪರಿಚಯವಿರುವ ಕನ್ನಡದಲ್ಲಿಯೇ ವಿಷಯವನ್ನು ಅರ್ಥೈಸಲು ಹೆಣಗುತ್ತಿದ್ದೆ; ಆದರೆ ವಿಷಯಗಳು ಅವರ ಗ್ರಹಿಕೆಗೆ ನಿಲುಕುತ್ತಿರಲಿಲ್ಲ. ಇದಕ್ಕೆ ಇಂಗ್ಲಿಶ್ ಭಾಷೆಯೇ ಕಾರಣ ಎಂದು ನಾವು ಭಾವಿಸಿದ್ದೆವು. ಆದರೆ ನಮ್ಮ ಒಟ್ಟು ಹೆಣಗಾಟದಲ್ಲಿ ಇದು ಭಾಷೆಯ ಸಮಸ್ಯೆಯಲ್ಲ, ಬೇರೆ ಏನೋ ಇದೆ ಅಂತ ನಮಗೆ ಅನ್ನಿಸುತ್ತಿತ್ತು; ಯಾಕೆಂದರೆ, ಒಂದು ವಿಷಯವನ್ನು ಕನ್ನಡದಲ್ಲಿ ತರ್ಜುಮೆ ಮಾಡಲು ನಾನು ಹೆಣಗಾಡುತ್ತಿರುವಾಗ ಅವರು ಅದರ ಅರ್ಥವನ್ನು ಇಂಗ್ಲಿಶಿನಲ್ಲಿಯೇ ಹೇಳಿ, 'ಅಷ್ಟು ಅರ್ಥವಾಯಿತು; ಅದಲ್ಲ, ನಿಜವಾದ ಅರ್ಥವಾಗುತ್ತಿಲ್ಲ' ಎನ್ನುತ್ತಿದ್ದರು. ಈ 'ನಿಜವಾದ ಅರ್ಥದ' ಅರ್ಥವೇನು ಎಂದು ನಮಗಂತೂ ಹೊಳೆದಿರಲಿಲ್ಲ. ಇಂಗ್ಲಿಶ್ ಬಲ್ಲವರಿಗಿಂತ ಚೆನ್ನಾಗಿ, ರಾಮಣ್ಣ ಮತ್ತು ಗುಂಡಾಚಾರ್ ವಿಷಯದ 'ನಿಜವಾದ ಅರ್ಥ'ವನ್ನು ನಮಗೆ ತಲುಪಿಸುತ್ತಿದ್ದರು ಎಂದೇ ನಾವು ಜೋಕುಗಳ ಮೂಲಕ ಹೇಳಲು ಪ್ರಯತ್ನಿಸುತ್ತಿದ್ದೆವೋ ಹೇಗೆ?

ನಾನು ಕಳೆದ ಹದಿನೈದು ವರ್ಷಗಳಿಂದ ಇಂಜಿನಿಯರಿಂಗ್ ಪಾಠ ಮಾಡುತ್ತಿದ್ದೇನೆ. ಇಷ್ಟು ಕಾಲದಲ್ಲಿ, ನನ್ನ ಅರ್ಧವಾಸಿ ವಿದ್ಯಾರ್ಥಿಗಳು ಹಳ್ಳಿ ಮತ್ತು ಮೊಫಾಸಿಲ್ ನಗರಗಳ ವರು; ಇನ್ನರ್ಧ ಪಕ್ಕ ಮಹಾನ್ ನಗರಗಳ ಜನ-ಬೆಂಗಳೂರ್, ಬಾಂಬೆ, ಮದ್ರಾಸ್,ಕಲ್ಕತ, ಹೈದರಾಬಾದ್ ಮುಂತಾದುವು. ನನ್ನ ಇಂಗ್ಲಿಶ್ ಭಾಷೆಯ ಪರಿಣತಿ ಒಳ್ಳೆಯ ಮಟ್ಟದ್ದೇನು ಅಲ್ಲ; ನನ್ನ ಜೊತೆ ಕೆಲಸ ಮಾಡುವ ಮುಕ್ಕಾಲುವಾಸಿ ಮೇಷ್ಟ್ರುಗಳ ಇಂಗ್ಲಿಶ್ 'ಚಲ್ತ ಹೈ' ರೀತಿಯದು. ಒಂದು ವಿಷಯವನ್ನು ಸಾಕಷ್ಟು ವರ್ಷಗಳಿಂದ ಬೋಧಿಸುತ್ತಿದ್ದರೆ, ಸರಾಗವಾಗಿ ಪಾಠ ಮಾಡಿಕೊಂಡು ಹೋಗಬಹುದು; ಹೇಳಬೇಕಾದ್ದನ್ನು ಹೇಳಲಿಕ್ಕೆ ಬೇಕಾದ ಭಾಷೆ ಸುಲಲಿತವಾಗಿ, ಅದು ಹೇಗೊ ರೂಢಿಯಾಗಿಬಿಟ್ಟಿರುತ್ತದೆ. ನಮಗೆ ಒದ್ದಾಟ ಶುರುವಾಗು ವುದು ನಾವು ಅದುವರೆವಿಗೂ ಬೋಧಿಸದ ಹೊಸ ವಿಷಯವನ್ನು ಪಾಠ ಮಾಡಬೇಕಾದಾಗ, ಅಂಥ ಸಂದರ್ಭಗಳಲ್ಲಿ ಒಂದು ಗಂಟೆ ಪಾಠ ಮಾಡಲು ಸುಮಾರು ಐದಾರು ಗಂಟೆ ತಯಾರಿ ನಡೆಸಬೇಕಾಗುತ್ತದೆ; ಆದರೂ ಒಂದೆರಡು ಸಾರಿ ಸದರಿ ವಿಷಯವನ್ನು ಬೋಧಿಸುವವರೆಗೂ ಎಲ್ಲೋ ಮೆದುಳು ಮತ್ತು ಗಂಟಲು ಕಟ್ಟಿಕೊಂಡ ಅನುಭವವಾಗುತ್ತದೆ. ನಮ್ಮ ಅನುಭವದ ಪ್ರಕಾರ ಇದು ವಿಷಯವನ್ನು ಗ್ರಹಿಸುವ ಸಮಸ್ಯೆ; ಗ್ರಹಿಸಿದ ನಂತರ ಸಂವಹನೆಯ ಭಾಷೆ ತಾನೆ ತಾನಾಗಿ ಒಲಿದು ಬರುತ್ತದೆ ಎನ್ನುವುದು ನಾನು ಒಡನಾಡಿರುವ ಅನೇಕ ಮೇಷ್ಟ್ರುಗಳ ನಂಬಿಕೆ. ನಮ್ಮ ಸೆಮಿನಾರುಗಳಲ್ಲಿ ಯಾರಾದರು ತಜ್ಞರು ಹಳೇ ಸಂಗತಿಗಳನ್ನೇ ನಯವಾದ ಇಂಗ್ಲಿಶ್ ಭಾಷೆಯಲ್ಲಿ ಹೇಳಿದರೆ ನಮ್ಮ ಮೇಷ್ಟ್ರುಗಳು 'ಒಳ್ಳೆ ಇಂಗ್ಲಿಶ್‌ನಲ್ಲಿ ರೈಲು ಬಿಟ್ಟ' ಎನ್ನುತ್ತಾರೆ. ವಿದ್ಯಾರ್ಥಿಗಳು ಸೆಮಿನಾರ್ ಮಾಡುವಾಗಲು ಅಷ್ಟೆ; ಒಳ್ಳೆಯ ಇಂಗ್ಲಿಶ್ ಮಾತಾಡಬಲ್ಲವ ಸರಿಯಾದ ರೀತಿಯಲ್ಲಿ ವಿಷಯ ಮಂಡಿಸುತ್ತಾನೆ ಎಂದೇನು ಇಲ್ಲ. ನಾವು ಸಾಕಷ್ಟು ಗೌರವ ಇಟ್ಟುಕೊಂಡಿರುವ ಹಿರಿಯ ತಲೆಗಳು ಮೌಖಿಕ ಪರೀಕ್ಷೆಗಳಿಗೆ ಬಂದಾಗ 'ವಿಷಯ ಸರಿಯಾಗಿ ಗೊತ್ತಿದ್ದರೆ ಎಕ್ಸ್‌ಪ್ರೆಷನ್ ತಾನಾಗೆ ಬರುತ್ತೆ' ಎಂದು ಹೇಳುವುದನ್ನು

ಕೇಳಿದ್ದೇನೆ. ನಾವು ತರಗತಿಯ ಹೊರಗೆ ಕನ್ನಡದಲ್ಲಿಯೇ ಮಾತಾಡುತ್ತೇವೆ; ಆದರೆ ಇಂಜಿನಿಯರಿಂಗ್ ವಿಷಯಗಳ ಬಗ್ಗೆ ಚರ್ಚೆ ಮಾಡುವಾಗ ನಾವು ಬಳಸುವ ಭಾಷೆ ಮತ್ತು ಕನ್ನಡಗಳ ವಿಚಿತ್ರ ಮಿಶ್ರಣವಾಗಿರುತ್ತದೆ. ಇದಕ್ಕೆ ಒಂದು ಉದಾಹರಣೆ ಕೊಡುತ್ತೇನೆ. ಕಾಂಕ್ರೀಟ್ ಕಂಬದಲ್ಲಿ ಒಂದು ಬದಿಗೆ ಇನ್ನೊಂದು ಬದಿಗಿಂತ ಯಾಕೆ ಹೆಚ್ಚು ಉಕ್ಕಿನ ಸರಳುಗಳನ್ನು ಕೊಟ್ಟಿದ್ದಾರೆ ಎನ್ನುವುದನ್ನು ಒಬ್ಬ ವಿವರಿಸುವ ಬಗೆ ಹೀಗಿರುತ್ತದೆ:

'ನೋಡಿ ಕಾಲಂ ಮೇಲೆ ಬೀಂ ಹೀಗೆ ಕೂತಿರುತ್ತದೆ. ಬೀಮ್‌ನಿಂದ ಲೋಡ್ ಕಾಲಂ ಮೇಲೆ ಬೀಳುವಾಗ ಸರಿಯಾಗಿ ಕಾಲಂ ಸೆಂಟ್ರಿಗೆ ಬೀಳೋದಿಲ್ಲ; ಸ್ವಲ್ಪ ಆಚೆಗೆ ಬೀಳೋದರಿಂದ ಕಾಲಂ ಕಾಲಂ ಎಸೆಂಟ್ರಿಕ್ ಆಗಿ ಬೆಂಡಿಂಗ್ ಮೊಮೆಂಟ್ ಬರ್ತದೆ; ಹಾಗಾಗಿ ಯಾವ ಬದಿ ಟೆನ್ಷನ್ ಬರ್ತದೋ, ಆ ಬದಿ ಸ್ಟೀಲ್ ಒಂದಿಷ್ಟು ಜಾಸ್ತಿ ಇದ್ರೆ ಒಳ್ಳೇದು ಅಂತ ಒಂದೆರಡು ಬಾರ್ ಜಾಸ್ತಿ ಹಾಕ್ತಾರೆ'.

ನನಗೆ ಅನಿಸುವ ಮಟ್ಟಿಗೆ ಮೇಲಿನ ವಿವರಣೆಯಲ್ಲಿರುವ ಇಂಗ್ಲಿಶ್ ಪದಗಳಿಗೆ ಕನ್ನಡ ಸಮಾನಾರ್ಥ ಪದಗಳನ್ನು ಬಳಸಿದರೂ, ಈ ವಿಷಯದ ಹಿನ್ನೆಲೆ ಗೊತ್ತಿಲ್ಲದವನಿಗೆ ಅದು ಅರ್ಥವಾಗುವುದಿಲ್ಲ. ಇಲ್ಲಿ ಬೀಂ ಬದಲಿಗೆ ತೊಲೆ, ಕಾಲಂ ಬದಲಿಗೆ ಕಂಬ ಎಂದು ಕನ್ನಡ ರೂಢನಾಮಗಳನ್ನು ಬಳಸಿದರೂ, ವಿವರಿಸುತ್ತಿರುವವನ ಬುದ್ಧಿಗೆ ಅರ್ಥವಾಗಿರುವ ಕಂಬಕ್ಕು, ಕಂಬ ಎಂಬ ರೂಢನಾಮಕ್ಕೂ ವ್ಯತ್ಯಾಸವಿರುತ್ತದೆ: ಸಾಮಾನ್ಯ ಅರ್ಥದಲ್ಲಿ ಕಂಬ ಉದ್ದಕ್ಕೆ ನೆಲದಿಂದ ಮೇಲೆ ಎದ್ದು ನಿಂತಿರುವಂತಹುದು; ತೊಲೆ ಎಂದರೆ ಅಡ್ಡಕ್ಕೆ ತಲೆ ಮೇಲೆ ಇರುವಂತಹುದು; ಆದರೆ ಇಂಜಿನಿಯರನೊಬ್ಬ ಇವೆರಡಕ್ಕು ಇರುವ ವ್ಯತ್ಯಾಸವನ್ನು ಗುರುತಿಸುವುದು ಭಾರವನ್ನು ಹೋರುವಾಗ ಅವು ವರ್ತಿಸುವ ಭಿನ್ನ ರೀತಿಗಳಲ್ಲಿ- ಅದು ಅಡ್ಡ, ಉದ್ದ ಹೇಗಾದರೂ ಇರಲಿ, ಈ ಲಕ್ಷಣ ಮುಖ್ಯ. ನಾನು ಒತ್ತಿ ಹೇಳಬೇಕು ಎಂದಿರು ವುದು ಇಷ್ಟನ್ನು ಮಾತ್ರ: ವಿವರಣೆಯಲ್ಲಿರುವ ಭಾಷೆ ಇಂಗ್ಲಿಶ್ ಎಂದು ಕಂಡರೂ ವಾಸ್ತವ ದಲ್ಲಿ ಅದು ಸ್ಟ್ರಕ್ಚರಲ್ ಇಂಜಿನಿಯರಿಂಗಿನ ಭಾಷೆ; ಈ ಭಾಷೆ ಕಂಪ್ಯೂಟರ್ ಇಂಜಿನಿಯರಿಗೂ ಅರ್ಥವಾಗುವುದಿಲ್ಲ,ಇಷ್ಟು ನನ್ನ ಅನುಭವಜನ್ಯ- ಎಂಪಿರಿಕಲ್ -ಜ್ಞಾನ. ಈ ಜ್ಞಾನವೇ ಪ್ರಾಮಾಣಿಕವಾದದ್ದು ಎನ್ನುವುದು ನನ್ನ ವಾದವಲ್ಲ. ಆದರೆ ನಾನು ಮುಂದೆ ಸಂಕ್ಷಿಪ್ತವಾಗಿ ಮಂಡಿಸುವ 'ಚಿಂತನೆ'ಯ ಮೇಲೆ ಈ ಅನುಭವಜನ್ಯ ಜ್ಞಾನದ ಪ್ರಭಾವವನ್ನು ಬುದ್ಧಿ ಪೂರ್ವಕವಾಗಿಯೇ ಉಪಯೋಗಿಸಿಕೊಳುತ್ತೇನೆಂದು ಮಾತ್ರ ಸೂಚಿಸಲು ಇಚ್ಛಿಸುತ್ತೇನೆ.

ಯಾವುದೇ ವಿಷಯವನ್ನು 'ಮಾತೃಭಾಷೆ'ಯಲ್ಲಿ ಕಲಿಸುವುದರಿಂದ ವಿಷಯಗಳನ್ನು ಗ್ರಹಿಸುವುದು ಸುಲಭವಾಗುತ್ತದೆ; ಇದರ ಫಲವಾಗಿ ವಿಶೇಷ ಜ್ಞಾನದ ಕ್ಷೇತ್ರಗಳು ಸುಶಿಕ್ಷಿತರ ಸೀಮಿತವಲಯವನ್ನು ಮೀರಿ ಸಾಮಾನ್ಯ ಜನರಿಗೂ ತೆರೆದುಕೊಂಡು, ಜ್ಞಾನದ ಪ್ರಸಾರ ವ್ಯಾಪಕವಾಗಿ ನಡೆಯುತ್ತದೆ ಎನ್ನವ ವಾದಕ್ಕೆ ಈಗ ಸಾಕಷ್ಟು ಮಾನ್ಯತೆ ಇದೆ. ಈ ವಾದದ ಸಮರ್ಥನೆಗೆ ತಕ್ಷಣಕ್ಕೆ ಹೊಳೆಯುವ ಉದಾಹರಣೆಗಳು: ಬೈಬಲ್ ಸುಶಿಕ್ಷರ ಲ್ಯಾಟಿನ್ ಭಾಷೆಯಿಂದ ಯುರೋಪಿನ ಆಡುಭಾಷೆಗಳಿಗೆ ತರ್ಜುಮೆಯಾದ ನಂತರ ಉಂಟಾದ

ಜನಜಾಗೃತಿ, ಕನ್ನಡದಲ್ಲಿ ರಚಿತವಾದ ವಚನಗಳು. ಮರಾಠಿಯಲ್ಲಿ ರಚನೆಯಾದ ಅಭಂಗಗಳು ಪ್ರೇರೇಪಿಸಿದ ಸಾಮಾಜಿಕ ಚಳುವಳಿಗಳು, ಫ್ರೆಂಚ್ ಭಾಷೆಯಲ್ಲಿ ರಚಿತವಾದ ಎನ್‌ಸೈಕ್ಲೋಪಿಡಿಯಗಳು ಫ್ರೆಂಚ್ ಕ್ರಾಂತಿಗೆ ರಂಗವನ್ನು ಸಜ್ಜುಗೊಳಿಸಿದ್ದು, ದೇಶಭಾಷೆಗಳಲ್ಲಿ ಬರೆಯಲ್ಪಟ್ಟ ಕಾದಂಬರಿಗಳು ದಕ್ಷಿಣ ಏಷಿಯಾದ ವಸಾಹತುಶಾಹಿ ವಿರೋಧಿ ಹೋರಾಟದಲ್ಲಿ ವಹಿಸಿದ ಪಾತ್ರ ಮುಂತಾದುವು. ದಕ್ಷಿಣ ಏಶಿಯಾದ ಸ್ವಾತಂತ್ರ್ಯ ಹೋರಾಟವನ್ನು ತೆಗೆದುಕೊಂಡರೆ, ಇಲ್ಲಿ ದೇಶಭಾಷೆಗಳಲ್ಲಿ ನಡೆದ ಕ್ರಿಯೆಗಳಿಗೆಲ್ಲಾ ಒಂದೇ ಅರ್ಥ ಇಲ್ಲ ಎನ್ನುವುದನ್ನು ಗಮನಿಸಬಹುದು. ಈ ಕಾಲದಲ್ಲಿ ರಾಮಾಯಣ ಮತ್ತು ಮಹಾಭಾರತಗಳು ದೇಶ ಭಾಷೆಯಲ್ಲಿ ತರ್ಜುಮೆಗೊಂಡು ರಾಷ್ಟ್ರವ್ಯಾಪಿ ಜನಪ್ರಿಯತೆ ಗಳಿಸಿದವು ಎನ್ನುವುದನ್ನು ಒಪ್ಪಿಕೊಳ್ಳೋಣ; ಆದರೆ ದಕ್ಷಿಣ ಏಶಿಯಾದಲ್ಲಿ ಒಂದು ಸಾವಿರ, ರಾಮಾಯಣ, ಮಹಾಭಾರತಗಳು ಇವೆ; ಇವುಗಳಲ್ಲಿ ದೇಶಭಾಷೆಗಳಲ್ಲಿ ಜನಪ್ರಿಯಗೊಳಿಸಲ್ಪಟ್ಟದ್ದು ಯಾವ ಅವೃತ್ತಿಗಳು? ಕನ್ನಡದಲ್ಲಿಯೇ ನೋಡಿದರೆ ಕಂಪನಿ ನಾಟಕಗಳು ಜನಪ್ರಿಯಗೊಳಿಸಿದ ರಾಮಾಯಣ, ಮಹಾಭಾರತಗಳು ಅಳಸಿಂಗಾಚಾರ್ಯ ಹಾಗು ಕೃಷ್ಣಶಾಸ್ತ್ರಿಗಳ ನಿರೂಪಣೆಯಿಂದ ಸ್ಫೂರ್ತಿ ಪಡೆದಿರುವಂತಹವು, ಕುವೆಂಪು ಅವರ 'ರಾಮಾಯಣ ದರ್ಶನಂ' ಮತ್ತು 'ಸ್ಮಶಾನ ಕುರುಕ್ಷೇತ್ರಂ'ಗಳಿಂದ ಅಲ್ಲ. ಬಂಗಾಳಿಯಲ್ಲಿ ಬಂಕಿಮ್ ಚಂದ್ರರ 'ಆನಂದ ಮಠ'ದಷ್ಟು ರವೀಂದ್ರನಾಥ ಟ್ಯಾಗೋರರ 'ಘರೆ ಬೈರೆ' ಯಾಕೆ ಪ್ರಖ್ಯಾತವಾಗಲಿಲ್ಲ? 'ರಾಷ್ಟ್ರನಿರ್ಮಾಣ ಕಾರ್ಯ'ದಲ್ಲಿ 'ದೇಶಭಾಷೆ'ಗಳು ನಿರ್ವಹಿಸಿದ ಪಾತ್ರವನ್ನು ಗಮನಿಸಿದರೆ ಈ ವಿಪರ್ಯಾಸಗಳು ಅರ್ಥವಾದಾವು. ರಾಷ್ಟ್ರದ ಪರಿಕಲ್ಪನೆ, ಸಾಮಾಜಿಕ-ಸಾಂಸ್ಕೃತಿಕ ಆಚರಣೆಗಳು ಮತ್ತು ಜೀವನಕ್ರಮಗಳಲ್ಲಿ ಸಾಮಾನ್ಯೀಕೃತ ಏಕರೂಪವನ್ನು ಬೇಡುತ್ತದೆ; ವೈವಿಧ್ಯತೆಗಳು ಇರಕೂಡದು ಎಂದೇನು ಅಲ್ಲ. ಆದರೆ ಈ ವೈವಿಧ್ಯತೆಗಳು ಸ್ಪಷ್ಟರೂಪದಲ್ಲಿ, ಸಂಖ್ಯೆಯಲ್ಲಿ ಲೆಕ್ಕಾಚಾರಕ್ಕೆ ಸಿಕ್ಕುವ ಹಾಗೆ ಇರಬೇಕು. ಆ ಹೊತ್ತಿಗೆ 'ಕನ್ನಡದ ಸಂಸ್ಕೃತಿಗಳು' ಇದ್ದವು, ಆದರೆ 'ಅವಿಚ್ಛಿನ್ನ ಕನ್ನಡ ಸಂಸ್ಕೃತಿ' ಇತ್ತೋ? ಲೆಕ್ಕಕ್ಕೆ ಸಿಗದಷ್ಟು ಇದ್ದ ಸಂಸ್ಕೃತಿ, ಜೀವನಕ್ರಮಗಳನ್ನು ಒಟ್ಟಿಗೇ ಗೌರವದಿಂದ ನಿರ್ವಹಿಸುವುದು ರಾಷ್ಟ್ರಕ್ಕೆ ಹೇಳಿ ಮಾಡಿಸಿದ್ದಲ್ಲ; ಹಲವಾರು ಸಂಸ್ಕೃತಿ, ಆಚರಣೆ, ಜೀವನಕ್ರಮಗಳ ಸಾಮಾನ್ಯ ಲಕ್ಷಣಗಳನ್ನು ಹೆಕ್ಕಿ, 'ಸಾಮಾನ್ಯೀಕೃತ ಪ್ರತಿನಿಧಿ'ಯ ಪರಿಕಲ್ಪನೆಯನ್ನು ರೂಪಿಸುವ ತುರ್ತಿನಲ್ಲಿ ಕನ್ನಡವೂ ಸೇರಿದಂತೆ 'ಆಧುನಿಕ ದೇಶಭಾಷೆ'ಗಳ ಪರಿಕಲ್ಪನೆ ರೂಪಪಡೆಯಿತು; ಇಲ್ಲಿ ಭಾಷೆ ಬರಿ ವ್ಯಾಕರಣಬದ್ಧ ಭಾಷೆಯಾಗಿರದೆ ಹಲವು ಸಂಸ್ಕೃತಿ, ಆಚರಣೆ, ಜೀವನಕ್ರಮಗಳ 'ಅಧಿಕೃತ ಪ್ರತಿನಿಧಿ' ಎನ್ನುವ ಅರ್ಥ ಪಡೆದುಕೊಂಡು ಬಿಡುತ್ತದೆ. ಇಂಥ ಸಾಮಾನ್ಯೀಕರಣ ಒಂದುಕಡೆ ಹಲವು ಸಂಸ್ಕೃತಿಗಳನ್ನು ಜೀವನಕ್ರಮದಿಂದ ಬೇರೆ ಮಾಡಿ, ನಿರ್ಜೀವ ರೂಪದಲ್ಲಿ ಒಟ್ಟುಗೂಡಿಸಿ, ಪ್ರದರ್ಶನಕ್ಕೆ ಮಾತ್ರ ಯೋಗ್ಯವಾದ ಸ್ವರೂಪ ಪಡೆದುಕೊಳ್ಳುತ್ತದೆ; ಮತ್ತೊಂದು ಕಡೆ, ವಾಸ್ತವಿಕವಾಗಿ ಅಸ್ತಿತ್ವದಲ್ಲಿ ಇರುವ ಸಂಸ್ಕೃತಿ-ಜೀವನಕ್ರಮಗಳಲ್ಲಿ ಅಧಿಕಾರಸ್ಥವಾಗಿರುವ ಯಜಮಾನ ಸಂಸ್ಕೃತಿಯನ್ನೇ ಉಳಿದೆಲ್ಲಕ್ಕೂ ಆರೋಪಿಸಿ, ಇದೇ

ಅವಿಚ್ಛಿನವಾದ ಸಾಮಾನ್ಯ ಸಂಸ್ಕೃತಿ ಎಂಬ ಸಹಮತವನ್ನು ಸೃಷ್ಟಿಸಲಾಗುತ್ತದೆ, 'ರಾಷ್ಟ್ರ' ಎನ್ನುವುದೇ ಅಧಿಕಾರದ ಹೊಸ ಪರಿಕಲ್ಪನೆ; ಸಾಮಾನ್ಯೀಕರಣಗೊಂಡ 'ದೇಶ ಭಾಷೆ'ಯ ಪರಿಕಲ್ಪನೆಯೂ ಈ ಅಧಿಕಾರ ರಚನೆಯ ಭಾಗವೇ ಆಗಿದೆ. ಈ ಬೆಳವಣಿಗೆ ಎಷ್ಟರಮಟ್ಟಿಗೆ ಒಳ್ಳೆಯದು ಅಥವ ಕೆಟ್ಟದ್ದು ಎಂದು ಇಲ್ಲಿ ವಾದಿಸುವ ಇರಾದೆ ನನಗಿಲ್ಲ; ದಕ್ಷಿಣ ಏಶಿಯಾದ ಸಂದರ್ಭದಲ್ಲಿ ಈ ಇಡೀ ವ್ಯಾಪಾರವೇ ಹಲವು ಬಗೆಯ ವಾದ, ವಿಚಾರ, ಪರಿಕಲ್ಪನೆಗಳು ಒಂದರೊಳಗೊಂದು ಹೆಣೆದುಕೊಂಡಿರುವಂಥ ಜಟಿಲ ವಿದ್ಯಮಾನವಾಗಿದೆ. ನಾನು ಹೇಳ ಬೇಕು ಎಂದದ್ದು ಇಷ್ಟೆ; 'ದೇಶ ಭಾಷೆ'ಯಲ್ಲಿ ವ್ಯಕ್ತವಾದದ್ದೆಲ್ಲ ಜನಸಾಮಾನ್ಯರ ನಿತ್ಯ ಜೀವನದ ಗ್ರಹಿಕೆಯ ಭಾಗವಾಗಿ- ವಚನ, ಅಭಂಗಗಳ ಹಾಗೆ, ಹೊಸ ಸಾಮಾಜಿಕ ಜಾಗೃತಿ ನಿರ್ಮಾಣವಾಗುತ್ತದೆ ಎನ್ನುವುದು ಒಂದೋ ಭೋಳೇತನ, ಇಲ್ಲವೆ ದೇಶ ಭಾಷೆಯ ಒಳಗೆ ಅಡಗಿಕೊಂಡಿರುವ ಅಧಿಕಾರ ರಚನೆಗೆ ಬಹುಮತದ ಒಪ್ಪಿಗೆ ಉತ್ಪಾದಿಸುವ ತಂತ್ರ.

ಇವತ್ತು ನಾವು ಕಲಿಯುತ್ತಿರುವ/ಕಲಿಸುತ್ತಿರುವ ಶಾಸ್ತ್ರೀಯ ವಿಜ್ಞಾನ ಮತ್ತು ತಂತ್ರಜ್ಞಾನಗಳ ವೈಚಾರಿಕ ಬೇರುಗಳು ಇರುವುದು ಹದಿನೆಂಟನೇ ಶತಮಾನದ ಯೂರೋಪಿನ ಎನ್‌ಲೈಟನ್‌ಮೆಂಟ್ ಯುಗದ ವಿಚಾರಗಳಲ್ಲಿ, ಎನ್‌ಲೈಟನ್‌ಮೆಂಟ್ ವಿಚಾರಗಳು ಸ್ವಯಂತಂತ್ರವಾದಿ ಪ್ರಜಾಪ್ರಭುತ್ವ, ಸೆಕ್ಯುಲರ್‌ವಾದ, ಸಮಾಜವಾದಗಳಿಗೆ ಮಾತ್ರವಲ್ಲದೆ ಬಂಡವಾಳವಾದಕ್ಕೂ ಪ್ರೇರಣೆ ನೀಡಿವೆ. ಒಂದೇ ಮಣ್ಣಿನಲ್ಲಿ ಬೆಳೆದ ಈ ಚಿಂತನೆಗಳಲ್ಲಿ ಕೆಲವು ಸಾಮ್ಯತೆಗಳಿರುವುದು ಹಾಗೂ ಒಂದು ಮತ್ತೊಂದರ ಮೇಲೆ ಪ್ರಭಾವ ಬೀರುವುದು ಸಹಜ. ವಿಜ್ಞಾನದ ವಿಚಾರಗಳು ಸ್ವಯಂತಂತ್ರವಾದ, ಸಮಾಜವಾದಗಳಿಗೆ ಪ್ರೇರಣೆ ನೀಡಿದ ಸೂಕ್ಷ್ಮಗಳನ್ನು ಬರ್ಟೋಲ್ಟ್ ಬ್ರೆಕ್ಟ್, ತನ್ನ ಕತೆಗಳು ಹಾಗೂ 'ಲೈಫ್ ಅಫ್ ಗೆಲಿಲಿಯೊ' ನಾಟಕಗಳಲ್ಲಿ ತುಂಬ ಚೆನ್ನಾಗಿ ನಿರೂಪಿಸಿದ್ದಾನೆ; ದೇವಿ ಪ್ರಸಾದ್ ಚಟ್ಟೋಪಾಧ್ಯಾಯರ 'ಲೋಕಾಯತ', ಆಲ್ಬರ್ಟ್ ಐನ್‌ಸ್ಟೈನ್‌ನ 'ವೈ ಐ ಆಮ್ ಎ ಸೋಷಿಯಲಿಸ್ಟ್' ಎನ್ನುವ ಪ್ರಬಂಧಗಳು ಕೂಡ ಇದೇ ರೀತಿಯ ಆಶಯಗಳನ್ನು ನಿರ್ವಚಿಸುತ್ತವೆ. ಇದೆಲ್ಲ ಸರಿ; ಆದರೆ ಇಷ್ಟನ್ನೇ ನಂಬಿಕೊಂಡು ಕೂಡಲು ಆಗುವುದಿಲ್ಲ; ಈ ಬರಹಗಳನ್ನು ಮೆಚ್ಚಿ ಕೊಂಡರೂ, ಎರಡು ಸಂಗತಿಗಳನ್ನು ಗಮನಿಸದೆ ಇರಲು ಸಾಧ್ಯವಿಲ್ಲ; ವಿಜ್ಞಾನದ ವಿಚಾರಗಳು 'ಮೌಲ್ಯ ನಿರ್ಲಿಪ್ತ(ವ್ಯಾಲು ನ್ಯುಟ್ರಲ್)ವಾದವುಗಳಲ್ಲ ಎನ್ನುವುದು ಒಂದು; ಸ್ವತಃ ಈ ಬರಹಗಳೇ ವಿಜ್ಞಾನದ ಮೇಲೆ ಬಂಡವಾಳವಾದ ಸ್ಥಾಪಿಸಿರುವ ಗಟ್ಟಿಯಾದ ಯಜಮಾನಿಕೆಗೆ ಪ್ರತಿಕ್ರಿಯೆಯಾಗಿ ಬಂದಿರುವಂತಹವು ಎನ್ನುವುದು ಎರಡನೆಯದು. ಇವತ್ತು, ವಿಜ್ಞಾನ-ತಂತ್ರಜ್ಞಾನಗಳ ಮೇಲೆ ಬಂಡವಾಳವಾದದ ಹಿಡಿತ, ಸಡಿಲವಾಗುವುದಂತೂ ದೂರದ ಮಾತಾಯಿತು, ನೂರುಪಟ್ಟು ಜಾಸ್ತಿಯಾಗಿದೆ. ನಾವು ಇವತ್ತು ಬೋಧಿಸುತ್ತಿರುವುದು ಮೌಲ್ಯ ನಿರ್ಲಿಪ್ತ ಇಂಜಿನಿಯರಿಂಗನ್ನಲ್ಲ, ಬಂಡವಾಳವಾದದ ಯಜಮಾನಿಕೆಯನ್ನು ಸರ್ವಾನುಮತ ದಿಂದ ಒಪ್ಪಿಕೊಂಡಿರುವ ಇಂಜಿನಿಯರಿಂಗನ್ನು. ಇದರ ಅರ್ಥ, ನಾವು ದಿನ ಬೆಳಗಾದರೆ ತರಗತಿಗಳಲ್ಲಿ ಬಂಡವಾಳವಾದದ ಗುಣಗಾನ ಮಾಡಿ, ಆ ವಾದದ ಮೂಲತತ್ವಗಳನ್ನು

ಬೋಧಿಸುತ್ತಿದ್ದೇವೆ ಎಂದೋ ಖಂಡಿತ ಇಲ್ಲ; ನಾವು ಬೋಧಿಸುತ್ತಿರುವ ಮುಕ್ಕಾಲುಪಾಲು ವಿಷಯಗಳಿಗೂ, ಬಂಡವಾಳವಾದಕ್ಕೂ ಸೂತ್ರಬದ್ಧವಾಗಿ ಸಮೀಕರಿಸಬಹುದಾದ ಸಂಬಂಧ ಗಳಿವೆ ಎಂದು ವಾದಿಸುವುದು ಕೂಡ ಮೊತ್ತೊಂದು ಹೊಂಡಕ್ಕೆ ಹೋಗಿ ಬೀಳುವ ವ್ಯಾಪಾರ. ನಾನು ಹೇಳುತ್ತಿರುವುದು, ನಾವು ಇಂಜಿನಿಯರಿಂಗ್ ವಿಷಯಗಳಲ್ಲಿ ಏನನ್ನು, ಎಷ್ಟು, ಯಾವ ಕ್ರಮದಲ್ಲಿ, ಕಲಿಸಬೇಕು/ಕಲಿಯಬೇಕು ಎನ್ನುವ ಜಟಿಲವಾದ ಒಟ್ಟು ಹಂದರದ ಮೇಲೆ ಇರುವ ಬಂಡವಾಳವಾದದ ಯಜಮಾನಿಕೆಯ ಬಗ್ಗೆ.

ಈ ಹಿನ್ನೆಲೆಯಲ್ಲಿ, 'ಕನ್ನಡದವನಾಗಿ' 'ಇಂಗ್ಲಿಶಿನಲ್ಲಿ ಇಂಜಿನಿಯರಿಂಗ್ ಬೋಧಿಸು ವುದು' ಹೇಗನಿಸುತ್ತದೆ ಎನ್ನುವ ಪ್ರಶ್ನೆಯನ್ನು ಇಟ್ಟಾಗ, ನನಗೆ ಉತ್ತರ ಹೊಳೆಯುವುದಿಕ್ಕಿಂತ ಮತ್ತಷ್ಟೂ ಪ್ರಶ್ನೆಗಳು ತಲೆಯಲ್ಲಿ ಕಿಕ್ಕಿರಿದು ಬರುತ್ತಿವೆ. ಅಂಥ ಪ್ರಶ್ನೆಗಳನ್ನು ಒಟ್ಟುಗೂಡಿಸಿ ಕೊಂಡು ಹೀಗೆ ಕೇಳಿಕೊಂಡುಬಿಡುತ್ತೇನೆ.

'ಕನ್ನಡದವನು' ಎಂದರೆ ಯಾವ 'ಕನ್ನಡದವನು'? ರಾಷ್ಟ್ರದ ಅಧಿಕಾರ ರಚನೆಯ ಭಾಗವಾಗಿ ರೂಪ ತಾಳಿರುವ 'ದೇಶಭಾಷೆಯ'ಯ ಅರ್ಥದ 'ಕನ್ನಡಿಗ'ನೋ? ಹೌದು ಎಂದಾದರೆ, 'ಕರ್ನಾಟಕ'ದಲ್ಲಿ ವಾಸಿಸುವ ದಲಿತರು, ಆದಿವಾಸಿಗಳು,ಹೆಂಗಸರು, ಮುದುಕರು, ಅಂಗವಿಕಲರು, ಬುದ್ಧಿಮಾಂದ್ಯರು, ನಿರುದ್ಯೋಗಿಗಳು ಹಾಗೂ 'ನಾಳಿನ ಹಸಿವೆಗೆ ಏನು ಪರಿಹಾರ' ಎನ್ನುವ ನಿರಂತರ ಅಭದ್ರತೆಯಲ್ಲಿ ಜೀವಿಸುವ ಹಂಗಾಮಿ ಉದ್ಯೋಗ ಮಾಡಿಕೊಂಡಿರುವ ಬಡವರು, ಇವರುಗಳ್ಯಾರು 'ಕನ್ನಡಿಗ'ರಲ್ಲ. ಇವತ್ತು ಇಂಜಿನಿಯರಿಂಗ್ ಬೋಧಿಸುತ್ತಿರುವವರಲ್ಲಿ, ನನ್ನನ್ನು ಸೇರಿಸಿಕೊಂಡೇ, ಮುಕ್ಕಾಲುವಾಸಿ ಜನ-ಇದು ನನ್ನ ಅಂದಾಜು- 'ಕನ್ನಡಿಗರು'. ನನ್ನ ಪ್ರಕಾರ, ನಮಗೆ ಏನನಿಸುತ್ತದೆ ಎನ್ನುವುದಕ್ಕಿಂತ ಈ 'ಕನ್ನಡಿಗರಲ್ಲದ' ಕನ್ನಡಿಗರಿಗೆ ಏನನಿಸುತ್ತದೆ ಎನ್ನುವುದು ಮುಖ್ಯ. ಅವರನ್ನು ಕೇಳುವವರು ಯಾರು? ಅವರೇ, ಕಣ್ಣಿಗೆ ರಾಚುವಂತೆ ಇರುವ ಇಂದಿನ ಬದುಕಿನ ಕ್ರೂರತೆಯ ಮೂಲಕ, ಚೀರಿಕೊಳ್ಳುತ್ತಿದ್ದರೂ ಕೇಳಿಸಿಕೊಳ್ಳುವ 'ಕನ್ನಡಿಗರು' ಇದ್ದಾರೆಯೊ?

'ಇಂಜಿನಿಯರಿಂಗ್' ಬೋಧನೆ ಹಾಗು ಕಲಿಕೆಯ ಒಟ್ಟು ಹಂದರ ಹೇಗಿದೆ ಎಂದು ಮೇಲೆ ತಿಳಿಸಲು ಪ್ರಯತ್ನಿಸಿದ್ದೇನೆ; ಇಂಥ ಸಂದರ್ಭದಲ್ಲಿ, 'ದೇಶಭಾಷೆ'ಯ ಮೂಲಕ ಬೋಧನೆ ಮತ್ತು ಕಲಿಕೆ ನಡೆದರೆ, ಅದರ ಸ್ವರೂಪ ಬದಲಾಗುತ್ತದೆ ಎನ್ನುವ ನಂಬಿಕೆ ನನಗಂತೂ ಇಲ್ಲ. ಇಂಗ್ಲಿಶ್ ಭಾಷೆ ಕೂಡ ಒಂದು ಅಧಿಕಾರ ಸಮುಚ್ಚಯದ ಅಂಗ ಎಂದು ನಾನು ಒಪ್ಪಿಕೊಳ್ಳುತ್ತೇನೆ; 'ದೇಶಭಾಷೆಯಾದ ಕನ್ನಡ', 'ಇಂಜಿನಿಯರಿಂಗ್'ಗಳು ಕೂಡ ಅಧಿಕಾರ ಸಂರಚನೆಯ ಅಂಗಗಳು ಎಂದು ನಾನು ವಾದಿಸಿದ್ದೇನೆ; ಇವತ್ತು ಈ ಮೂರು ಒಂದೇ ಅಧಿಕಾರ ಸಮುಚ್ಚಯದ - ವಿಭಿನ್ನ ಹಂತಗಳಲ್ಲಿ ಇದ್ದರೂ -ಭಾಗಗಳಾಗಿವೆ ಎಂದು ಹೇಳಬಹುದು. ಈ ಅಧಿಕಾರ ಸಮುಚ್ಚಯಕ್ಕೆ ಒಳಗಿನವರಾಗಿರುವಷ್ಟು ಹೊತ್ತೂ-ಇವತ್ತು ಇಂಜಿನಿಯರಿಂಗ್ ಬೋಧಿಸುತ್ತಿರುವ ನಾವುಗಳು ಒಳಗಿನವರು ಎಂದು ಒಪ್ಪಿಕೊಂಡರೆ- ಒಂದರಿಂದ ಮತ್ತೊಂದಕ್ಕೆ ಒಗ್ಗಿಕೊಳ್ಳುವುದು ಕಷ್ಟವೇನಲ್ಲ. ಇಲ್ಲಿ, ಸಾಂದರ್ಭಿಕವಾಗಿ

ಒಂದು ಉದಾಹರಣೆ ಕೊಡುತ್ತೇನೆ. ಎಂ. ವಿಶ್ವೇಶ್ವರಯ್ಯ ಇಂಗ್ಲಿಶಿನಲ್ಲೆ ಇಂಜಿನಿಯರಿಂಗ್ ಕಲಿತವರು; ಅವರ ಜೊತೆ ಅಂಥ ನೂರು ಇಂಜಿನಿಯರುಗಳು ಸೇರಿ ಕಾವೇರಿ ನದಿಗೆ ಅಡ್ಡಾಗಿ ಕನ್ನಂಬಾಡಿಕಟ್ಟೆ ಕಟ್ಟಿದರು; ಇವತ್ತು, ಕನ್ನಂಬಾಡಿ ಕಟ್ಟೆಯಂತೂ ಸರಿಯೇ, ಅದರ ಹಿಂದೆ ಜಮಾ ಆಗುವ ನೀರಿನ ಸಂಪೂರ್ಣ ಹಕ್ಕು ಕೂಡ 'ಕನ್ನಡಿಗರದ್ದು ಎಂದು ವಾದಿಸುತ್ತಿಲ್ಲವೋ? 'ದೇಶಭಾಷೆಯಾದ ಕನ್ನಡದವನಾಗಿ' ಇಂಗ್ಲಿಶಿನಲ್ಲಿ ಇಂಜಿನಿಯರಿಂಗ್ ಬೋಧಿಸುವುದು ಅಂಥ ಕಷ್ಟವಲ್ಲ; ನಿಜವಾದ ಕಷ್ಟ ಯಾವುದು ಎಂದು ಈಗ ಹೇಳುತ್ತೇನೆ. ಭಾರತದಲ್ಲಿ ದೊಡ್ಡ ಅಣೆಕಟ್ಟುಗಳ ನಿರ್ಮಾಣದಿಂದಾಗಿ ಎರಡೂವರೆ ಕೋಟಿ ಜನ-ಇವರಲ್ಲಿ ಶೇ.೬೦ ಜನ ಆದಿವಾಸಿಗಳು ಮತ್ತು ದಲಿತರು-ಮನೆಮಾರು ಕಳೆದುಕೊಂಡು, ನಿರ್ಗತಿಕರಾಗಿ ಬೀದಿಗೆ ಬಿದ್ದಿದ್ದಾರೆ. ಆ ಜನರಿಗೆ 'ದೊಡ್ಡ ಅಣೆಕಟ್ಟುಗಳನ್ನು ನಿರ್ಮಾಣ ಮಾಡುವುದು ಹೇಗೆ?' ಎಂದು ಬೋಧಿಸುವುದು-'ದೇಶಭಾಷೆ'ಯಲ್ಲಿಯೂ-ಬಹಳ ಕಷ್ಟ! ದೇವರು ದೊಡ್ಡವನು, ಅಂಥವರು ವಿದ್ಯಾರ್ಥಿಗಳಾಗಿ ನಮ್ಮೆದುರು ನಿಲ್ಲುವುದಿಲ್ಲ!

●

## ನನ್ನ ನ್ಯಾಯದ ಹಾದಿಯಲ್ಲಿ ಕಲ್ಲುಗಳಿಲ್ಲ

● ಬಾಲಸುಬ್ರಮಣ್ಯ ಕಂಜರ್ಪಣೆ

ಭದ್ರತೆಯಿಲ್ಲದ, ಆದರೆ ಅವಕಾಶ ಮತ್ತು ಅದೃಷ್ಟ ಖುಲಾಯಿಸಿದರೆ ಅಪರಿಮಿತ ಆದಾಯ ವನ್ನು ತರಬಲ್ಲ, ಗೌರವ-ವರ್ಚಸ್ಸು ಒಂದು ಸೀಮಿತ ಸಾಮಾಜಿಕ ವರ್ತುಲಕ್ಕಷ್ಟೇ ನಿಷ್ಕರ್ಷೆ ಗೊಂಡ ವೃತ್ತಿಗಳ ಪೈಕಿ ವಕೀಲ ವೃತ್ತಿಯೂ ಒಂದು.

ವಕೀಲಿವೃತ್ತಿಗೆ ರಾಜ್ಯ ಪ್ರಶಸ್ತಿಯಾಗಲೀ, ಅಕಾಡೆಮಿ ಪ್ರಶಸ್ತಿಗಳಾಗಲೀ, 'ಜನ ಮೆಚ್ಚಿದ ವಕೀಲರು' ಪ್ರಶಸ್ತಿಯಾಗಲೀ ಇಲ್ಲ.

ಕನ್ನಡದಲ್ಲಿ ತೀರ್ಪು ನೀಡಿದವರಿಗೆ ಬಹುಮಾನ ನೀಡುತ್ತಾರೆ; ಕನ್ನಡದಲ್ಲಿ ವಾದಿಸುವ, ವ್ಯವಹರಿಸುವ ವಕೀಲರಿಗೆ ಶಾಸನಬದ್ಧವಾದ ಅಥವಾ ಸಮಾಜದ ಪರವಾದ ಯಾವ ಪ್ರೋತ್ಸಾಹವಿದೆ? ಪ್ರಾಮಾಣಿಕ ಕಾಳಜಿಗೆ ಇವು ಯಾವುವೂ ಬೇಡವೆಂದೇ ಕನ್ನಡತನವನ್ನು ಸ್ಥಾಪಿಸಲು ಉಜ್ಜುಗಿಸುವ ವಕೀಲರ ನಿದರ್ಶನಗಳು ಇನ್ನೂ ಇವೆ. ಇವರು ಯಾರನ್ನೂ ಬೇಡರು; ಮತ್ತು ಯಾವ ಸ್ಥಿತ್ಯಂತರಗಳೂ ಇವರನ್ನು ನಿರಾಶೆಗೊಳಿಸದು, ಮತ್ತು ವೃತ್ತಿಯ ನಡುವೆ ಬಿಡುವು ಮಾಡಿಕೊಂಡು ಇತರ ಮಾನವಿಕ ಶಾಸ್ತ್ರಗಳ ಜೊತೆಗೆ ಪಯಣಿಸಬಲ್ಲರು.

ಹೈಕೋರ್ಟು ಮತ್ತು ಸುಪ್ರೀಂ ಕೋರ್ಟುಗಳಲ್ಲಿ ಇಂಗ್ಲಿಶ್ ಕಡ್ಡಾಯವಾಗಿ ಬಿಟ್ಟಿದೆ. ಕನ್ನಡ-ಇಂಗ್ಲೀಶ ಈ ಎರಡೂ ದೋಣಿಗಳಲ್ಲಿ ಪಯಣಿಸಬಲ್ಲ ವಾಹಕರಿದ್ದರೆ ಅದು ಕರ್ನಾಟಕ ಅಧೀನ (ಸಬಾರ್ಡಿನೇಟ್ ) ನ್ಯಾಯಾಲಗಳಲ್ಲಿ ಮಾತ್ರ.

ದಿನಹೋದಂತೆ ವಶೀಲಿವೃತ್ತಿಯಾಗುತ್ತಿರುವ ವಕೀಲವೃತ್ತಿಯಲ್ಲಿ ಕನ್ನಡತನವನ್ನು ಉಪಯೋಗಿಸಿಕೊಳ್ಳುವುದು ಮತ್ತು ಉಳಿಸಿಕೊಳ್ಳುವುದು ಕಷ್ಟವಲ್ಲ; ಅದೊಂದು ಸವಾಲು. ಕರ್ನಾಟಕದ ಏಕೀಕರಣದಲ್ಲಿ ಮತ್ತು ರಾಜಕಾರಣದಲ್ಲಿ ಭಾರೀ ಸಂಖ್ಯೆಯ ವಕೀಲರು ಭಾಗವಹಿಸಿದ್ದರೂ ವೃತ್ತಿಸಂಬಂಧವಾಗಿ ಈ ಕನ್ನಡದ ಬಳಕೆ ನೇಪಥ್ಯಕ್ಕೆ ಸರಿಯಿತೇಕೆ ಎಂಬುದು ಒಂದು ಅಧ್ಯಯನಕ್ಕೆ ಒಳ್ಳೆಯ ವಸ್ತು.

ವಕೀಲ ವೃತ್ತಿಯಲ್ಲಿ ಬೆಳ್ಳಿಹಬ್ಬ ಮುಗಿಸಿದ್ದೇನೆ. ಅದನ್ನೊಂದು ಸಾಧನೆಯೆಂಬಂತೆ ಹೇಳುತ್ತಿಲ್ಲ. ಈ ಅವಧಿಯ ಯಾವುದೇ ಸೇವೆಯಲ್ಲಿ ಒಂದು ನಿಲುವು ಹರಳುಗಟ್ಟುತ್ತದೆಯೆಂಬುದಕ್ಕಾಗಿ ಮಾತ್ರ ಈ ಕಾಲಮಾನದ ನೆನಪಿನ ಮೆಲುಕು.

ನಮ್ಮ ನ್ಯಾಯಾಲಯಗಳಲ್ಲಿ ಕನ್ನಡಿಗ ಕಕ್ಷಿದಾರನಿದ್ದರೂ ಕನ್ನಡಿಗ ವಕೀಲರು, ಕನ್ನಡಿಗ ನ್ಯಾಯಾಧೀಶರು ಎಷ್ಟು ಜನರಿದ್ದಾರೆ ಎಂದು ಪ್ರಶ್ನಿಸುವಂತಿದೆ ಸ್ಥಿತಿ. ಈ 'ಕನ್ನಡಿಗ' ಪದವನ್ನು ಜೋಡಿಸಿ ಹೇಳುವುದು ಕನ್ನಡಿಗರಿಗೇನೇ ಎಂದು ಅರ್ಥವಾದಾಗ ಪರಿಸ್ಥಿತಿಯ ಗಾಂಭೀರ್ಯ ಅರಿವಾದೀತು. ನಾನಿರುವ ಊರಿನಲ್ಲಿ ಇಂಗ್ಲಿಶ್ ವ್ಯಾಮೋಹ ಹೆಚ್ಚು. ಇಂಗ್ಲಿಶ್ ಸರಿಯಾಗಿ ಬಾರದಿದ್ದಾಗಲೂ ಇಂಗ್ಲಿಶನ್ನೇ ಮೋಹಿಸುವ ಮತ್ತು ಹಾಸ್ಯಾಸ್ಪದವಾಗಿ ಅದನ್ನೇ ಬಳಸುತ್ತ ವೃತ್ತಿ ಜೀವನ ವ್ಯಾಪಾರ ನಡೆಸುವ ವಕೀಲರು ತುಂಬ ಇದ್ದಾರೆ. ಅವರಾದರೂ ಅಭಾವ ವೈರಾಗ್ಯದಂತೆ ಕನ್ನಡದ ಬಳಕೆಯನ್ನು ಆರಂಭಿಸಬಹುದಾಗಿತ್ತು.

ವಕೀಲವೃತ್ತಿಯ ಕುರಿತು ಸಮಾಜದಲ್ಲಿ ವಿಚಿತ್ರ ಕುತೂಹಲವಿದೆ. ಒಂದು ವಿಸ್ಮಯ ಲೋಕದಲ್ಲಿ ಕರೀಕೋಟನ್ನು ಧರಿಸಿ ತಮ್ಮ ಸಮಸ್ಯೆಗಳನ್ನು ಇಂಗ್ಲಿಶಿನಲ್ಲಿ ಪರಿಹರಿಸುವವರು ಎಂದೇ ವಕೀಲರನ್ನು ಕಕ್ಷಿದಾರರು ಕಾಣುತ್ತಾರೆಂದು ನನಗನ್ನಿಸಿದೆ.

ಕನ್ನಡ ಮಾಧ್ಯಮ ಶಾಲೆಗಳಲ್ಲಿ ಓದಿ ಪದವಿ ಹಾಗೂ ಕಾನೂನು ವ್ಯಾಸಂಗವನ್ನು ಇಂಗ್ಲಿಶಿನಲ್ಲಿ ಮಾಡಿದವರಿಗೆ ಆರಂಭದಲ್ಲಿ ಇಂಗ್ಲಿಶ್ ಮಾತನಾಡುವುದಕ್ಕೆ ಒಂದು ರೀತಿಯ ತಯಾರಿ ಬೇಕಾಗುತ್ತದೆ; ಏಕೆಂದರೆ ನನ್ನದಲ್ಲದಂತಿರುವ ಇಂಗ್ಲಿಶನ್ನು ಅಭಿವ್ಯಕ್ತಿಯ ಮಾಧ್ಯಮವಾಗಿಸುವುದಕ್ಕೆ ಅಳುಕಿರುತ್ತದೆ. ಪ್ರಾಯಃ ಈ ಅಳುಕನ್ನು ಮೀರಿ ಮಾತನಾಡಲು ಅಭ್ಯಾಸ ಮಾಡುವವನಿಗೆ ಇರುವ ಮುಖ್ಯ ಪ್ರೇರಣೆಯೆಂದರೆ ಹೊಟ್ಟೆಪಾಡು. ತಾನು ಇಂಗ್ಲಿಶ್ಮಯ ವಾತಾವರಣಕ್ಕೆ ಹೊಂದಿಕೊಳ್ಳುವುದು ಅನಿವಾರ್ಯವೆಂದು ಗೊತ್ತಾದಾಗ ಅದಕ್ಕೆ ಬೇಕಾದ ಪರಿಕರಗಳನ್ನು ಸಜ್ಜುಮಾಡಿಕೊಳ್ಳುವುದೂ ಅಷ್ಟೇ ಅನಿವಾರ್ಯವಾಗುತ್ತದೆ. ನಮ್ಮ ಇಂಗ್ಲಿಶ್ ಮಾಧ್ಯಮದ ಅಧ್ಯಾಪನದ ಮೇಷ್ಟ್ರುಗಳೂ ಇದೇ ಅನುಭವದಲ್ಲಿದ್ದಾರೆಂದು ನಾನು ತಿಳಿದಿದ್ದೇನೆ. ಅವರಿಗೊಂದು ಅನುಕೂಲವಿದೆ: ತಾವು ಕಲಿತದ್ದನ್ನು ಹಾಗೆಯೇ ಅಥವಾ ಇನ್ನಷ್ಟು ಸಿದ್ಧತೆಗಳೊಂದಿಗೆ ಒಂದು ಗೊತ್ತಾದ ಚೌಕಟ್ಟಿನೊಳಗೆ ಅಭಿವ್ಯಕ್ತಿಸಿದರೆ ಅವರ ಜವಾಬ್ದಾರಿ ಮುಗಿಯುತ್ತದೆ; ಇನ್ನುಳಿದದ್ದು ಆಸಕ್ತಿಯ, ಐಚ್ಛಿಕತೆಯ ಉದ್ಯೋಗ.

ನಾನು ವಕೀಲ ವೃತ್ತಿಗಿಳಿದಾಗ ನನ್ನ ಕನ್ನಡ ತಕ್ಕ ಮಟ್ಟಿಗೆ ಚೆನ್ನಾಗಿತ್ತೆಂದು ನಂಬಿದ್ದೇನೆ. ಸಾಹಿತ್ಯದ ಹುಚ್ಚು ಸ್ವಲ್ಪ ಇತ್ತಾದ್ದರಿಂದ ಆಗಲೇ ನನ್ನ ಕವನಗಳು, ಕಥೆಗಳು, ಪ್ರಬಂಧಗಳು

ನಾಡಿನ ಕೆಲವು ಪತ್ರಿಕೆಗಳಲ್ಲಾದರೂ ಪ್ರಕಟವಾಗಿದ್ದುವು. ಕನ್ನಡವನ್ನು ಚೆನ್ನಾಗಿ ಪ್ರಯೋಗಿಸ ಬಲ್ಲೆನೆಂಬ ಒಣ ಅಹಂಕಾರದಿಂದಲೇ ಇದ್ದೆನಾದರೂ ನ್ಯಾಯಾಲಯಗಳಲ್ಲಿ ಎಲ್ಲರೂ ಇಂಗ್ಲಿಶ್ ಮಾತನಾಡುವುದನ್ನು ಕಂಡು ನರ್ವಸ್ ಆಗಿದ್ದೆ. ಇದೊಂದು ಇಂಗ್ಲಿಶ್ ಪ್ರಪಂಚ ವೆಂಬ ಅನುಭವ ನನಗಾಗಿತ್ತು. ಆರಂಭದ ದಿನಗಳಲ್ಲಿ ಎಷ್ಟೇ ಪ್ರಯತ್ನಪಟ್ಟರೂ 'May it please your honour' ಎಂದಷ್ಟೇ ಹೇಳುವುದಕ್ಕೂ ಬಹಳಷ್ಟು ಕಷ್ಟವಾಗುತ್ತಿತ್ತು. ಕೆಲವು ನ್ಯಾಯಾಧೀಶರುಗಳು ಸಹಜವಾಗಿಯೇ ಅಲ್ಲಲ್ಲಿ ಕನ್ನಡದಲ್ಲಿ ಸಂಭಾಷಿಸುತ್ತಿದ್ದರು. ನಾನು ವೃತ್ತಿ ಆರಂಭಿಸಿದಾಗ ಇನ್ನೂ ಕನ್ನಡ ಬೆರಳಚ್ಚಿನ ಪ್ರಯೋಗ ನ್ಯಾಯಾಲಯಗಳಲ್ಲಿ ಆಗಿರಲಿಲ್ಲ. ಫೋಟೋಪ್ರತಿ ವ್ಯವಸ್ಥೆಯಿರಲಿಲ್ಲ. ಅರ್ಜಿಗಳಾಗಲೀ ದಾವಾದ ಯಾವುದೇ ಪತ್ರಗಳಾಗಲೀ ಕನಿಷ್ಠ ಮೂರು ಪ್ರತಿಗಳಲ್ಲಿರಬೇಕಾಗಿತ್ತು. ಪೆನ್ಸಿಲ್ ಕಾರ್ಬನ್ ಹಾಳೆಯಿಟ್ಟು ಬರೆಯುವುದು ವಾಸ್ತವವಾದೀ ಧೋರಣೆಯಾಗಿರುವುದಿಲ್ಲ. ಸಮಯ-ಸ್ಥಳ ಈ ಎರಡೂ ಅಂಶಗಳನ್ನು ಯೋಚಿಸಿದರೆ ಇಂಗ್ಲೀಶಿನಲ್ಲಿ ಬೆರಳಚ್ಚು ಮಾಡುವುದೇ ಸರಿಯೆನ್ನಿಸುತ್ತಿತ್ತು. ಮೇಲಾಗಿ ಬಹುತೇಕ ಕಾನೂನಿನ ಪದಗಳು ಇಂಗ್ಲೀಶಿನಲ್ಲೇ ಸಂದರ್ಭಕ್ಕೆ ಸರಿಯಾಗಿ ಅಭಿವ್ಯಕ್ತಿಗೊಳ್ಳುತ್ತದೆ. ಇವಕ್ಕೆ ಪರ್ಯಾಯಪದಗಳು ಕನ್ನಡದಲ್ಲಿ ಇಲ್ಲವೆಂದಲ್ಲ; 'In the court of the Judicial Magistrate First Class' ಎನ್ನುವುದನ್ನು 'ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯದಲ್ಲಿ' ಎಂದು ಬರೆಯಬಹುದು. ಹಾಗಾಗಿ ಇಂಗ್ಲಿಶ್ ಪದಗಳು ಸ್ವಾಭಾವಿಕವಾಗಿಯೇ ಪ್ರಯೋಗಿಸಲ್ಪಡುತ್ತಿದ್ದವು.

ನನ್ನ ಸ್ನೇಹಿತರೊಬ್ಬರು ಹೇಳುತ್ತಿದ್ದ ತಮಾಷೆ ನೆನಪಾಗುತ್ತದೆ; ' ಯಾಕೋ ಸರಿಯಾಗಿ ಕೆಲಸ ಮಾಡುತ್ತಿಲ್ಲ?' ಎಂದು ಅಚ್ಚಕನ್ನಡದಲ್ಲಿ ಕೇಳಿದರೆ ಕೆಲಸಗಾರ 'ಯಾಕೆ ಸಾರ್ ? ನಾನು ಸರಿಯಾಗಿ ಕೆಲಸ ಮಾಡ್ತಿಲ್ವ? ಉಳಿದವರ ಕೆಲಸ ನೋಡಿ, ಇಷ್ಟೂ ಇಲ್ಲ' ಎನ್ನುತ್ತಾನೆ. ಅದೇ 'You Rascal, why are you not working properly?' ಎಂದು ಕೇಳಿದರೆ ಆತ 'ತಪ್ಪಾಯ್ತು ಬುದ್ದೀ, ಸರಿಯಾಗಿ ಮಾಡ್ತೀನಿ' ಅನ್ನುತ್ತಾನಂತೆ. ಅಂದರೆ ಭಾಷೆಯ ಹೊರತಾಗಿಯೂ ಯಜಮಾನನ ಪ್ರಶ್ನೆ ಅವನಿಗೆ ಅರ್ಥವಾಗುತ್ತದೆ. ಆದರೆ ಅವನ ಪ್ರತಿ ಕ್ರಿಯೆಯು, ಭಾಷೆಯು ಸಾಧಿಸುವ ಯಜಮಾನ್ಯನನ್ನವಲಂಬಿಸಿರುತ್ತದೆ. ಇಂಗ್ಲಿಶಿಗೆ ಇಂತಹ ಪ್ರತಿಷ್ಠೆ ಲಭಿಸಿದ್ದು ವಸಾಹತುಶಾಹಿಯ ಯಜಮಾನಿಕೆಯಿಂದ.

ಕಾನೂನಿಗೂ ಒಂದು ಭಾಷೆಯಿದೆಯೇ ಎಂದು ನಾನು ಅನೇಕ ಬಾರಿ ಕೇಳಿಕೊಂಡಿದ್ದೇನೆ. ಬಹಳ ಹಿಂದಿನ ದಾಖಲೆಗಳು ಕನ್ನಡದಲ್ಲೇ ಇದ್ದಾಗಲೂ ನಮ್ಮ ನ್ಯಾಯಾಲಯದ ನಡವಳಿಕೆ ಗಳು ಇಂಗ್ಲಿಶಿನಲ್ಲಿದ್ದವು. ಬ್ರಿಟಿಷರ ಆಡಳಿತದ ಪ್ರಭಾವವೇ ಈ ಸಾಮಾಜಿಕ ಭಾಷಾಂತರಕ್ಕೆ ಕಾರಣವಿರಬೇಕು. ನಮ್ಮ ದೇಶದ ಭಾಷೆ ಇಂಗ್ಲಿಶ್ ಅಲ್ಲದಿದ್ದರೂ, ನಮ್ಮ ಭಾಷೆಗಳು ಸಾಕಷ್ಟು ಜನವ್ಯಾಪಿಯಾಗಿದ್ದಾಗಲೂ ಇಂಗ್ಲಿಶ್ ಭಾಷೆ ನಮ್ಮ ನ್ಯಾಯಾಂಗವನ್ನು ಆವರಿಸಿ ದ್ದೇಕೆ? ಬಹುಶಃ ನ್ಯಾಯಾಂಗವೂ ಪ್ರಾದೇಶಿಕ ಅಗತ್ಯಗಳನ್ನು ಮೀರಿ ರಾಜ್ಯ-ಕೇಂದ್ರ ಹೀಗೆ ಆಡಳಿತದ ಕೃತಕ ಭೌಗೋಳಿಕ ಸೀಮೆಗಳನ್ನಾಧರಿಸಿರುವುದರಿಂದ ಎಲ್ಲರಿಗೂ ಅನುಕೂಲ ವಾಗಲಿ ಎಂಬುದಕ್ಕಿಂತ ಹೆಚ್ಚಾಗಿ ಆಳುವವರ (ಇದನ್ನು ಆಡಳಿತದ ಎಂದು ಹೇಳುತ್ತೇವೆ)

ಅನುಕೂಲಕ್ಕಾಗಿಯೇ ಇಂಗ್ಲಿಶ್ ನ್ಯಾಯಾಲಯದ ಭಾಷೆಯಾಗಿ ಸ್ವೀಕೃತವಾಗಿದೆ. ಈ ಸಮಸ್ಯೆ ನ್ಯಾಯಾಂಗಕ್ಕೆ ಮಾತ್ರವಲ್ಲ, ಅನೇಕ ಇತರ ಮಾನವಿಕ-ವೈಜ್ಞಾನಿಕ ಕ್ಷೇತ್ರಗಳಿಗೂ ಅನ್ವಯಿಸುತ್ತದೆ.

ವಕೀಲವೃತ್ತಿಗೆ ಬಹು ಅಗತ್ಯವೆನಿಸಿರುವ ಕಾನೂನು ಪುಸ್ತಕಗಳು, ಉಚ್ಚ ಮತ್ತು ಸರ್ವೋಚ್ಚ ಹಾಗೂ ವಿದೇಶಿ ನ್ಯಾಯಾಲಯಗಳ ತೀರ್ಪುಗಳು ಇಂಗ್ಲಿಶಿನಲ್ಲಿ ಮಾತ್ರ ಅಥವಾ ಸುಲಭವಾಗಿ ಸಿಗುತ್ತವೆ. ಪ್ರಕಟಣೆಯ ವೆಚ್ಚ ಹಾಗೂ ಪರಿಶ್ರಮದ ಕಾರಣಕ್ಕಾಗಿ ಈ ಕೃತಿಗಳು, ತೀರ್ಪುಗಳು ನಮ್ಮದೇ ಭಾಷೆಗಳಲ್ಲಿ ಬರುತ್ತಿಲ್ಲವಾದ್ದರಿಂದ ನಮ್ಮೆಲ್ಲ ಉತ್ಸಾಹದೊಂದಿಗೂ ಇಂಗ್ಲಿಶನ್ನು ಆಶ್ರಯಿಸುವುದು ವೃತ್ತಿಯ ಮುಂದುವರಿಕೆಗೆ ಅಗತ್ಯವಾಗಿದೆ.

ಅನೇಕ ನ್ಯಾಯಾಧೀಶರುಗಳು ಕನ್ನಡ ಬೆರಳಚ್ಚು ಲಭ್ಯವಿರುವಲ್ಲಿ ಕನ್ನಡದಲ್ಲೇ ಸಾಕ್ಷ್ಯ ನೀಡುವ ಕಕ್ಷಿದಾರರನ್ನು ಅರ್ಥ ಮಾಡಿಕೊಂಡು ಅದನ್ನು ಕನ್ನಡದಲ್ಲೇ ದಾಖಲಿಸುತ್ತಾರೆ. ಇಂಗ್ಲಿಶಿನಲ್ಲಿ ಸಾಕ್ಷ್ಯ ನೀಡಿದರೂ ಅದನ್ನು ಕನ್ನಡದಲ್ಲಿ ದಾಖಲಿಸುತ್ತಾರೆ ಮತ್ತು ಆದೇಶ ನಡವಳಿಕೆಗಳನ್ನು ಕನ್ನಡದಲ್ಲಿ ಬರೆಯುತ್ತಾರೆ. ಆದರೆ ನಾವು ವಕೀಲರು ದಾವಾಪತ್ರ-ಲಿಖಿತ ಹೇಳಿಕೆಗಳನ್ನು, ನೋಟೀಸುಗಳನ್ನು, ಅರ್ಜಿಗಳನ್ನು, ಪ್ರಮಾಣಪತ್ರಗಳನ್ನು ಇಂಗ್ಲಿಶಿನಲ್ಲಿ ಬರೆದು/ ಬೆರಳಚ್ಚು ಮಾಡಿ ಹಾಜರು ಮಾಡುತ್ತೇವೆ. ಇದು ಏಕೆ ಎಂದು ಅನೇಕ ಬಾರಿ ಪ್ರಶ್ನೆ ಮಾಡಿಕೊಂಡರೂ ತೃಪ್ತಿಯಾದ ಕಾರಣಗಳು ನನಗಿನ್ನೂ ಸಿಕ್ಕಿಲ್ಲ. ನೆಪಗಳು ಸಿಗುತ್ತವೆ. ತಾಂತ್ರಿಕ ಮತ್ತು ಪಾರಿಭಾಷಿಕ ಪದಗಳು ಇಂಗ್ಲಿಶಿನಲ್ಲಿ ಸುಲಭವಾಗಿ ಅರ್ಥವಾಗುತ್ತವೆ ಮತ್ತು ಅವಕ್ಕೆ ನಿರ್ದಿಷ್ಟವಾದ ಸಂವಹನ ಸಾಮರ್ಥ್ಯವಿರುತ್ತವೆ ಇತ್ಯಾದಿ. ಆದರೆ ಇವು ಸಮರ್ಥನೀಯವೆನ್ನಿಸುವುದಿಲ್ಲ. ನಾವು ಬಳಸಿದಂತೆ ತಾನೆ ಭಾಷೆ?

ನಮಗೆ ದಿನನಿತ್ಯ ಈ ರೀತಿಯ ಸಂಬಂಧಗಳು ಅನುಭವಕ್ಕೆ ಬರುತ್ತದೆ. ಕಕ್ಷಿದಾರರಿಗೆ ವಕೀಲರುಗಳು ಏನನ್ನುತ್ತಾರೆ ಅನ್ನುವುದು ಅರ್ಥವಾಗುವುದಕ್ಕಿಂತ ಅರ್ಥವಾಗದಿರುವುದೇ ಮುಖ್ಯವಾಗಿದೆಯೆಂಬಂತೆ, ಅವರು ವಕೀಲರು ಸರಳವಾಗಿ ಕನ್ನಡದಲ್ಲಿ ಹೇಳುವುದಕ್ಕಿಂತ ಅರ್ಥವಾಗದ ಇಂಗ್ಲಿಶಿನಲ್ಲಿ ಹೇಳುವುದನ್ನು ಬಯಸುತ್ತಾರೆ. ಕನ್ನಡದಲ್ಲಿ ಮಾತನಾಡುವುದೆಂದರೆ ಇಂಗ್ಲಿಶ್ ಬಾರದವರ ದುಃಸ್ಥಿತಿಯೆಂಬ ರೀತಿಯಲ್ಲಿ ಜನತೆ ವಕೀಲರನ್ನು ಮತ್ತು ನ್ಯಾಯಾಂಗವನ್ನು ಕಾಣುತ್ತಾರೆ.

ನ್ಯಾಯಾಲಯಗಳೂ ಅಷ್ಟೇ: ಅನಗತ್ಯ ಕೃತಕ, ಗಂಭೀರ ಹಾಗೂ ಭಯಪೂರಿತ ವಾತಾವರಣವನ್ನು ಸೃಷ್ಟಿಸಿ ಗೌರವವನ್ನು ತಮ್ಮ ಮೇಲೆ ಹೇರಿಕೊಂಡಂತಿದ್ದಾವೆ. ಕಕ್ಷಿದಾರರು ತಾವೇ ಪ್ರತಿನಿಧಿಸಬಹುದಾದ ಪ್ರಕರಣಗಳಲ್ಲೂ ವಕೀಲರ ಪ್ರಾತಿನಿಧ್ಯ ಅಗತ್ಯವೆಂಬಂತೆ ಅವರಿಗೆ ಕ್ಲಿಷ್ಟ ಕಾನೂನಿನ ತಾಂತ್ರಿಕತೆಗಳ ಮೂಲಕ ನ್ಯಾಯಾಲಯಗಳು ಎಚ್ಚರದ ಮಾತುಗಳನ್ನಾಡುತ್ತವೆ. ಉದಾಹರಣೆಗೆ ಬ್ಯಾಂಕೊಂದು ಸಾಲ ವಸೂಲಿಗೆ ದಾವಾ ಹೂಡಿದಾಗ ಸಾಲಗಾರನು ಗೊತ್ತಾದ ದಿನಾಂಕದಂದು ನ್ಯಾಯಾಲಯಕ್ಕೆ ಹಾಜರಾಗುತ್ತಾನೆನ್ನಿ. ಬಹುಪಾಲು ಪ್ರಕರಣಗಳಲ್ಲಿ ಅವನಿಗೆ ಬೇಕಾಗುವುದು ಸಾಲ ಮರುಪಾವತಿಸಲು ಸಾಕಷ್ಟು ಅವಧಿ;

ಬಡ್ಡಿಯಲ್ಲಿ ರಿಯಾಯಿತಿ. ಮೋಸ ಮಾಡಬೇಕೆಂದು ಬಯಸುವವರು ಅಪರೂಪ. ಆದರೆ, ಹಾಜರಾದ ಬಹುಪಾಲು ಪ್ರಕರಣಗಳಲ್ಲಿ ನ್ಯಾಯಾಲಯಗಳು "ನಿಮ್ಮ ಹೇಳಿಕೆಯನ್ನು ಸಿಪಿಸಿ ಪ್ರಕಾರ ಬರೆದು ಹಾಕಿ" ಎಂದು ಹೇಳಿದಾಗ ಕಕ್ಷಿದಾರನು ವಕೀಲರನ್ನು ಅವಲಂಬಿಸುವುದು ಅನಿವಾರ್ಯ. ಸಿಪಿಸಿ ಎಂದರೇನೆಂದು ಅವನಿಗೆ ಗೊತ್ತಿಲ್ಲ. ವಕೀಲರಾದರೂ ಅವನ ಪರವಾಗಿ ಅದನ್ನೇ ಬರೆಯುತ್ತಾರೆ. ಆದರೆ ಕಾನೂನಿನ ಉಲ್ಲೇಖವನ್ನು ಮಾಡದೆಯೂ ಆತ ಹೇಳಿದ್ದನ್ನು ಅಲ್ಲೇ ದಾಖಲಿಸಿ ತೀರ್ಮಾನಕ್ಕೆ ಬರಬಹುದೆಂದೂ ನ್ಯಾಯಾಲಯಗಳಿಗೆ ಅನ್ನಿಸುವುದೇ ಇಲ್ಲ.

ವಕೀಲರು ಕನ್ನಡದಲ್ಲಿ ವಾದಿಸಿದರೆ ಅದನ್ನು ಕೃತಕವೆಂಬಂತೆ, ಭಾಷಣವೆಂಬಂತೆ, ಕಕ್ಷಿದಾರರೂ, ಎದುರು ವಕೀಲರೂ, ನ್ಯಾಯಾಲಯವೂ ಪರಿಗಣಿಸುವುದಿದೆ. ಕಾರಣವೆಂದರೆ-ಕನ್ನಡದಲ್ಲಿ ಕಾನೂನನ್ನು ವಿವರಿಸುವುದು ಕಷ್ಟವಾಗುತ್ತದೆ. ಉದಾಹರಣೆಗೆ Adverse Possession ಎಂಬ ಕಾನೂನಿನ ಸಿದ್ಧಾಂತಕ್ಕೆ ಕನ್ನಡದ ಸಮಾನ ಪದ 'ಪ್ರತಿಕೂಲ ಸ್ವಾಧೀನ' ಎಂಬುದು. ಆದರೆ ಈ ಪದ ಜನರ ನಡುವೆ ಸಾಕಷ್ಟು ಬಳಕೆಯಾಗುವ ವರೆಗೆ ಕಾನೂನಿನಡಿ ವಿಧಿಸಲಾದ ಅರ್ಥವನ್ನು ಧ್ವನಿಸುವುದಿಲ್ಲ.

ನ್ಯಾಯಾಲಯಗಳಲ್ಲಿ ಕನ್ನಡ ಬಳಕೆಯ ಕುರಿತು ನಾನು ಅನೇಕ ವೇದಿಕೆಗಳಲ್ಲಿ ಮಾತನಾಡಿದ್ದೇನೆ; ನನ್ನ ಅನುಭವವನ್ನು ಹಂಚಿಕೊಂಡಿದ್ದೇನೆ. ಕಾನೂನು ಪದಕೋಶದನ್ವಯ ಕನ್ನಡ ಪದಗಳನ್ನು ಉಪಯೋಗಿಸಲೆತ್ನಿಸಿದ್ದೇನೆ. ಸ್ವಲ್ಪ ಮಟ್ಟಿಗೆ ಕಂದಾಯ, ಸಹಕಾರಿ, ಪೋಲೀಸ್, ಅರಣ್ಯ ಇಲಾಖೆಯ ಅರೆನ್ಯಾಯಿಕ ಅಧಿಕಾರಿಗಳು (ಅರೆನ್ಯಾಯಿಕ ಅಂದರೆ Quas-judicial ಎಂದರ್ಥ) ಕನ್ನಡದಲ್ಲಿ ಮಾಡಿದ ಅರ್ಜಿಗಳನ್ನು ಸ್ವೀಕರಿಸುತ್ತಾರೆ. ಕಾನೂನಿನ ಕ್ಲಿಷ್ಟತೆ, ಸಂದಿಗ್ಧತೆ ಇವುಗಳ ಬದಲು ವಿಷಯದ, ವಸ್ತುವಿನ ನೇರ ಮಂಡನೆಯನ್ನು ಅವರು ಇಷ್ಟ ಪಡುತ್ತಾರೆಂದು ಅನ್ನಿಸುತ್ತದೆ. (ಆದರೆ ಅವರಿಗೆ ಇಂಗ್ಲಿಶಿನ ಮತ್ತು ಕಾನೂನಿನ ತಿಳಿವಳಿಕೆಯಿಲ್ಲದ್ದರಿಂದ ಹೀಗೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.)

ವಕೀಲವೃತ್ತಿಯಲ್ಲಿ ಕನ್ನಡದ ಬಳಕೆ ಹೆಚ್ಚಾಗಬೇಕಾದ್ರೆ ಮೊದಲಿಗೆ ವೃತ್ತಿಯ ಮೇಲರಿಮೆ ಕುಗ್ಗಬೇಕು. ಇದು ಹೆಚ್ಚು ಹೆಚ್ಚು ಯೂಸರ್ ಫ್ರೆಂಡ್ಲಿ ಆಗಬೇಕು. ವಕೀಲನಾದ್ದರಿಂದಲೇ ತಾನು ಸಮಾಜದ ಮೇಲ್ವರ್ಗಕ್ಕೆ ಸೇರಿದ್ದೇನೆಂದೂ, ಮತ್ತು ಆ ಸ್ಥಾನಮಾನಕ್ಕೆ ಸರಿಯಾಗಿ ತನ್ನ ಜೀವನಪದ್ಧತಿ, ವರ್ತನೆ, ನಡೆನುಡಿ ಇರಬೇಕೆಂದೂ ವಕೀಲರು ತಿಳಿಯುವುದನ್ನು ನಿಲ್ಲಿಸಬೇಕು. ಇದಕ್ಕೆ ಇಂಬು ಕೊಡಬೇಕಾದರೆ ಸ್ವಲ್ಪ ಮಟ್ಟಿಗೆ ನಮ್ಮ ರೂಢಿಗತ ಸಂಪ್ರದಾಯಗಳು ನಶಿಸಬೇಕು. ಉದಾಹರಣೆಗೆ ಕರಿಕೋಟೆಂಬ ವಿಲಾಯಿತಿನ ವೇಷಭೂಷಣದಿಂದಾಗಿ ಉಳಿದವರಿಗೆ ನ್ಯಾಯಾಲಯದಲ್ಲಿ ತಾವು ಪರಕೀಯರೆಂಬ ಭಾವನೆ ಬರಬಹುದು. (ಇದೇ ಮಾತನ್ನು ಸರಕಾರದ ಖಾಕೀ ಮತ್ತಿತರ ಸಮವಸ್ತ್ರಗಳಿಗೆ ಹೇಳಲಾಗದು; ಆದರೆ ಖಾಸಗೀ ಪಬ್ಲಿಕ್ ಶಾಲೆಗಳ ಸೂಟಿನ ಯೂನಿಫಾರ್ಮಿಗೆ ಹೇಳಬಹುದು). ಸೂಟಿಗೆ ಮತ್ತು ಇಂಗ್ಲಿಶಿಗೆ ಒಂದು ಪ್ರತ್ಯೇಕ ಸಂಸ್ಕೃತಿಯಿದೆಯಷ್ಟೇ? ಅದಿನ್ನೂ ನಮ್ಮ ಜನಸಾಮಾನ್ಯರ ಸಂಸ್ಕೃತಿಯಾಗಿಲ್ಲವಲ್ಲ!

ವಕೀಲ ವೃತ್ತಿಯನ್ನು ಸಂವೇದನಾರಹಿತ ಬದುಕೆಂದು ಎಲ್ಲರೂ ತಿಳಿಯುವಂತೆ ನಮ್ಮಲ್ಲನೇಕರು ವ್ಯವಹರಿಸುತ್ತಾರೆ. 'ವಕೀಲರಾದರೂ ಅವರಿಗೆ ಕನ್ನಡದಲ್ಲಿ, ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯಿದೆ' ಎಂದು ಪರಿಚಯ ಮಾಡುವುದಕ್ಕೆ ನಾನೇ ಬಲಿಯಾದ್ದುಂಟು. ನಾನು ಪದ್ಯ, ಕಥೆ, ವಿಮರ್ಶೆ, ಪ್ರಬಂಧ ಇವುಗಳನ್ನು ಬರೆಯುವುದು, ನನ್ನ ಸಾಹಿತ್ಯಾಸಕ್ತಿ ಯನ್ನು ಪ್ರದರ್ಶಿಸುವಂತಲ್ಲದಿದ್ದರೂ ವೇಳೆ ಕಳೆಯುವುದಕ್ಕೆ ಯಾವುದಾದರೂ ಸಾಹಿತ್ಯ ಕೃತಿಯನ್ನು ವೃತ್ತಿಯ ನಡುವೆ ನನ್ನ ಛೇಂಬರ್ ನಲ್ಲಿ ಓದುವುದನ್ನು ನನ್ನ ಕಕ್ಷಿದಾರರಾಗಲೀ ನ್ಯಾಯಾಲಯಗಳಾಗಲೀ ಮಾನ್ಯ ಮಾಡುವುದಿಲ್ಲವೆಂಬುದನ್ನು ನಾನು ಅರಿತಿದ್ದೇನೆ. ಒಬ್ಬರು ನ್ಯಾಯಾಧೀಶರಂತೂ ಬಾಯಿಬಿಟ್ಟು 'ನಿಮ್ಮ ಕನ್ನಡ ಸೇವೆ, ಸಾಹಿತ್ಯ ಸೇವೆ ಇದೆಲ್ಲ ಬ್ಯಾಡ್ರೀ, ಒಬ್ಬ ಲಾಯರ್ ಮಾಡಬಹುದಾದ ಅತ್ಯುತ್ತಮ ಜನಸೇವೆಯೆಂದರೆ ಒಳ್ಳೆಯ ವಕೀಲಿ ಮಾಡುವುದು' ಎಂದರು. ಈ ತರ್ಕಕ್ಕೆ ನಾನು ಸುಮ್ಮನಾದೆ. ಜೊತೆಗೇ ಈ ತತ್ವವನ್ನು ಎಲ್ಲ ಉದ್ಯೋಗಸ್ಥರೂ ವೃತ್ತಿಪರರೂ ಪಾಲಿಸಿದರೆ ನಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿ ಮುಂತಾದ ಸಂವೇದನಶೀಲ ವಿಚಾರಗಳೆಲ್ಲವೂ ನಿರುದ್ಯೋಗ ನಿವಾರಣಾ ಯೋಜನೆಗಳಾಗಿ ಅಥವಾ ಪೂರ್ಣ ಪ್ರಮಾಣದ ವ್ಯಾವಸಾಯಿಕ ಯೋಜನೆಗಳಾಗಿ ಮಾತ್ರ ಉಳಿದಾವು ಎಂದುಕೊಂಡೆ ಮತ್ತು ತಿಳಿವಳಿಕೆಯಿಲ್ಲದ ಅಧಿಕಾರಸ್ತರಿಂದ ಏನೆಲ್ಲ ಕೇಳಬೇಕೋ ಎಂದು ವಿಷಾದಿಸಿದೆ.

ಇಷ್ಟೆಲ್ಲ ಹೇಳಿದ ಮೇಲೆ ನಾನು ನ್ಯಾಯಾಲಯದಲ್ಲಿ ನನ್ನ ವೃತ್ತಿಯಲ್ಲಿ ಹೇಗೆ ಕನ್ನಡವನ್ನು ಪ್ರಯೋಗಿಸುತ್ತೇನೆಂಬುದನ್ನು ಹೇಳಬೇಕು.

ನಾನು ಅತ್ತ ಪೂರ್ಣ ಕನ್ನಡವೂ ಅಲ್ಲದ ಇತ್ತ ಪೂರ್ಣ ಇಂಗ್ಲಿಶೂ ಅಲ್ಲದ ಹದಮಿಶ್ರಣದ ಭಾಷೆಯನ್ನು ಬಳಸುತ್ತೇನೆ. ನಾನು ಹೇಳಬೇಕಾದ್ದು ನ್ಯಾಯಾಲಯಕ್ಕೂ, ಕಕ್ಷಿದಾರನಿಗೂ ಅರ್ಥವಾಗುವ ಮಟ್ಟದಲ್ಲಿ ಭಾಷೆಯನ್ನು ಮಾಧ್ಯಮವಾಗಿ ಸ್ವೀಕರಿಸಿದ್ದೇನೆ. 'ಸ್ವಾಮೀ, ಈ ಕೇಸಿನ ಪ್ರತಿವಾದಿ Adverse possession ನ್ನು ಸಾಬೀತು ಮಾಡಿಲ್ಲ' ಎನ್ನುತ್ತೇನೆ. ಕನ್ನಡದ ಅತಿಮೋಹಕ್ಕಾಗಿ ನ್ಯಾಯದ ಮೂಲ ಸಿದ್ಧಾಂತಗಳನ್ನು ಕಾನೂನಿನ ಮೂಲಧಾತುಗಳನ್ನು ಅವು ಯಾವ ರೂಪದಲ್ಲಿವೆಯೋ, ಅದೇ ರೂಪದಲ್ಲೇ ಹೇಳಲಿಷ್ಟ ಪಡುತ್ತೇನೆಯೇ ಹೊರತು 'ಹೇಗಾದರೂ' ಎಂಬ ಕನ್ನಡದಲ್ಲಲ್ಲ. ಪೋಲೀಸರನ್ನು ಅರಕ್ಷಕ ರೆಂದು, ಸೆಷನ್ಸ್ ನ್ಯಾಯಾಧೀಶರನ್ನು ಸತ್ರನ್ಯಾಯಾಧೀಶರೆಂದು ಹೇಳುವುದಿಲ್ಲ. ಹಲವಾರು ಪದಗಳನ್ನು ಇತರ ಭಾಷೆಗಳಿಂದ ಕನ್ನಡಕ್ಕೆ ತಂದು ಪ್ರಯೋಗಿಸುವುದರಿಂದ ಕನ್ನಡ ಶ್ರೀಮಂತ ವಾಗುತ್ತದೆಂದು ನಾನು ನಂಬಿದ್ದೇನೆ. ತಹಶಿಲ್ದಾರ್, ಮುನ್ಸೀಫ್ ಮುಂತಾದ ಪದಗಳು ಕನ್ನಡವಾಗಿವೆ. ಇದರಿಂದಾಗಿ ನ್ಯಾಯದ ಹಾದಿಯಲ್ಲೂ ಕಲ್ಲುಗಳಿಲ್ಲ; ನನ್ನ ಭಾಷೆಯ ಪ್ರೀತಿಗೂ ತೊಡಕಿಲ್ಲ. ನನ್ನ ವೃತ್ತಿ ಮತ್ತು ಪ್ರವೃತ್ತಿ (ಈ ಪದಗಳೀಗ ಕ್ಲೀಶೆಯಾಗಿವೆ) ಗಳ ನಡುವೆ ಕನ್ನಡದ ಕೊಂಡಿಯಿದೆ; ಅದು ಇನ್ನಷ್ಟು ಬಿಗಿಯಾಗಬೇಕಾಗಿದೆ.

●

# ವಿಜ್ಞಾನವನ್ನು ಪರಿಣತರ ಸ್ವತ್ತಾಗಿಸುವ ಅಪಾಯ

● ಎಂ ಆರ್ ಎನ್ ಮೂರ್ತಿ

ಇತಿಹಾಸಪೂರ್ವಕಾಲದಿಂದಲೂ ವಿಜ್ಞಾನ ಎಲ್ಲ ಸಮಾಜಗಳಲ್ಲಿ ಕೆಲಮಟ್ಟಿಗೆ ಇದ್ದಿದೆ ಯೆಂದು ಹೇಳಬಹುದು. ಪ್ರಪಂಚದಲ್ಲಿ ವ್ಯಕ್ತವಾಗುವ ಎಲ್ಲ ಘಟನೆಗಳಿಗೂ ಅನ್ವಯಿಸುವ, ಸರ್ವಕಾಲಗಳಲ್ಲೂ ಸತ್ಯವೆನಿಸುವ ನಿಯಮಗಳಿರಬಹುದೆಂಬ ಪರಿಕಲ್ಪನೆಯನ್ನು ವೇದಗಳಲ್ಲಿ ನಾವು ಕಾಣುತ್ತೇವೆ. ಅಲ್ಲಿ ಇಂತಹ ನಿಯಮಗಳಿಗೆ 'ಋತ' ಎಂದು ಕರೆದಿದ್ದಾರೆ. ಆದರೆ ಈ ಪ್ರಕೃತಿ ನಿಯಮಗಳನ್ನು ಅರಸುವ, ಅವುಗಳನ್ನು ಕಂಡುಕೊಳ್ಳುವ ಹಿಂದಿನ ಮಾರ್ಗಗಳು ಇಂದಿನ 'ವೈಜ್ಞಾನಿಕ' ವಿಧಾನ ಎನಿಸುವುದಿಲ್ಲ. ಇಂದು ಪ್ರಚಲಿತವಿರುವ ವಿಜ್ಞಾನದ ಮಾದರಿ ಸುಮಾರು ೫೦೦ ವರ್ಷಗಳ ಹಿಂದೆ ಯೂರೋಪಿನಲ್ಲಿ ಪ್ರಾರಂಭವಾಯಿತು. ಇಂದು ಸಾಮಾನ್ಯವಾಗಿ ಒಪ್ಪಿಕೊಂಡಿರುವ ಅನೇಕ ವೈಜ್ಞಾನಿಕ ನಿಯಮಗಳು ಬುದ್ಧಿವಂತಿಕೆ, ಅಂತರ್ದೃಷ್ಟಿಗಳಿಂದ ಸ್ಫೂರ್ತಿಗೊಂಡಿದ್ದರೂ, ಪ್ರಯೋಗಗಳ ಆಧಾರದ ಮೇಲೆ ಮಾತ್ರ ಅವುಗಳ ಸತ್ಯಾಸತ್ಯತೆ ತೀರ್ಮಾನವಾಗುತ್ತದೆ. ಈ ನಿಯಮಗಳ ಅನುಸಾರ ಪ್ರಪಂಚ ನಡೆಯುತ್ತಿರುವವರೆಗೆ ಮಾತ್ರ ಅವುಗಳ 'ವೈಜ್ಞಾನಿಕ ನಿಯಮಗಳು' ಎನಿಸಿಕೊಳ್ಳುತ್ತವೆ. ಒಪ್ಪಿಕೊಂಡಿರುವ ನಿಯಮವನ್ನು ವಿರೋಧಿಸುವ ಒಂದೇ ಒಂದು ಘಟನೆ ಖಚಿತವಾಗಿ ಕಂಡುಬಂದರೂ ನಿಯಮ ಮುರಿದು ಬೀಳುತ್ತದೆ. ಅದರ ಜಾಗದಲ್ಲಿ ಹೊಸ ನಿಯಮ ಹುಡುಕಬೇಕಾದ ಅವಶ್ಯಕತೆ ಉಂಟಾಗುತ್ತದೆ. ಆದ್ದರಿಂದ, ವಿಜ್ಞಾನ ನಿರಂತರ ಬೆಳೆಯುತ್ತಾ, ಹೊಸ ವಿಶ್ವಕಲ್ಪನೆಗಳಿಗೆ ಎಡೆಗೊಟ್ಟು ಮುಂದೆ ಸಾಗುತ್ತದೆ.

ಇಂದಿನ ವಿಜ್ಞಾನದ ಪಿತಾಮಹ ಇಂಗ್ಲೆಂಡಿನ ನ್ಯೂಟನ್. ವಿಜ್ಞಾನದ ಪ್ರಾಥಮಿಕ ಬೆಳವಣಿಗೆಯಲ್ಲಿ ಪಶ್ಚಿಮ ಯೂರೋಪಿನ ಅನೇಕ ದೇಶಗಳು ಮಹತ್ವದ ಪಾತ್ರ ವಹಿಸಿದವು. ಇದರಿಂದಾಗಿ, ಪ್ರಪಂಚದಲ್ಲೇ ಮೊದಲಿಗೆ, ಯೂರೋಪಿನ ಅನೇಕ ದೇಶಗಳಲ್ಲಿ ಕೈಗಾರಿಕೆಯ ಅಭಿವೃದ್ಧಿ ಹೊಂದಿದವು. ಇಲ್ಲಿಯ ಅನೇಕ ದೇಶಗಳಿಗೆ ವಿಜ್ಞಾನದಲ್ಲಿ ಹಿಂದುಳಿದ ದೇಶಗಳನ್ನು ತಮ್ಮ ವಸಾಹತುಗಳನ್ನಾಗಿ ಮಾಡಿಕೊಳ್ಳಲು ಸಾಧ್ಯವಾಯಿತು. ಇದೆಲ್ಲಕ್ಕಿಂತ ಹೆಚ್ಚಾಗಿ, ದೀರ್ಘ ಕಾಲದ ಸಾಂಸ್ಕೃತಿಕ ಜಡತ್ವದಿಂದ ಯೂರೋಪ್ ಎಚ್ಚರಗೊಳ್ಳ ತೊಡಗಿತು. ವಿಜ್ಞಾನದ ಕಲ್ಪನೆಗಳಿಗೂ, ಯೂರೋಪಿನಲ್ಲಿ ಪ್ರಚಲಿತವಾಗಿದ್ದ ಧಾರ್ಮಿಕ ಭಾವನೆಗಳಿಗೂ ತಿಕ್ಕಾಟ ಪ್ರಾರಂಭವಾಗಿ, ಸಾಮಾಜಿಕ ಬದಲಾವಣೆಗಳ ಬಿರುಗಾಳಿಯೇ ಬೀಸತೊಡಗಿತು. ಖಗೋಳಶಾಸ್ತ್ರ ಭೂಮಿಯನ್ನು ವಿಶ್ವಕೇಂದ್ರದಿಂದ ಕಿತ್ತುಹಾಕಿತು. ಹಾಗೆಯೇ, ಜೀವಶಾಸ್ತ್ರ ಇತರ ಪ್ರಾಣಿಗಳಿಗೆ ಇಲ್ಲದ ವಿಶೇಷ ಮನುಷ್ಯನಿಗೆ ಇದೆಯೆಂಬ ನಂಬಿಕೆಯನ್ನು ಛಿದ್ರಮಾಡಿತು. ಇಂತಹ ವಿಚಾರಗಳನ್ನು ಅಲ್ಲಿಯ ಮಡಿವಂತರು ಒಪ್ಪಲಿಲ್ಲ. ವಿಜ್ಞಾನಕ್ಕೂ, ಧಾರ್ಮಿಕ ನಂಬಿಕೆಗಳಿಗೂ ತಿಕ್ಕಾಟ ಪ್ರಾರಂಭವಾಯಿತು. ಸಂಶೋಧನೆಗಳಲ್ಲಿ

ನಿರತರಾಗಿದ್ದ ಅನೇಕ ವಿಜ್ಞಾನಿಗಳು ಶೋಷಣೆಗೊಳಗಾದರು. ಅನೇಕ ವಿಜ್ಞಾನಿಗಳು ತಮ್ಮ ನೈತಿಕ ಸ್ಥೈರ್ಯ ಕಳೆದುಕೊಳ್ಳದೆ ತಾವು ಕಂಡುಕೊಂಡ ಸತ್ಯದ ಪರ ಹೋರಾಡಿದರು. ಇದರಿಂದ, ನಿಧಾನವಾಗಿ ವೈಜ್ಞಾನಿಕ ಕಲ್ಪನೆಗಳು ಸಾಮಾಜಿಕ ಜೀವನದಲ್ಲಿ ಮುಖ್ಯ ಪಾತ್ರ ವಹಿಸಲು ಪ್ರಾರಂಭಿಸಿದವು. ವಿಜ್ಞಾನ ಬೆಳೆದ ಹಾಗೆ ಅದರೊಟ್ಟಿಗೇ ಬೆಳೆದು ಬಂದ ತಂತ್ರಜ್ಞಾನ ಸಂಪತ್ತನ್ನು ಸೃಷ್ಟಿಸುವ, ಸಮರಗಳಲ್ಲಿ ಮೇಲುಕೈ ಸಾಧಿಸುವ ಮಾರ್ಗಗಳನ್ನು ತೋರಿಸಿತು. ಇದರಿಂದ ವಿಜ್ಞಾನ, ತಂತ್ರಜ್ಞಾನಗಳಿಗೆ ಸರಕಾರಗಳು ವಿಶೇಷ ಗಮನಕೊಡಲು ಪ್ರಾರಂಭಿಸಿದವು. ಮೊದಲಲ್ಲಿ ಆಸಕ್ತರ ಹವ್ಯಾಸವಾಗಿದ್ದ ವಿಜ್ಞಾನ ಸರ್ಕಾರ ಪೋಷಿತ ಉದ್ಯಮವಾಗಿ ಬೆಳೆಯಿತು. ಯೂರೋಪಿನಲ್ಲಿ ಪ್ರಾರಂಭವಾದ ವಿಜ್ಞಾನ ನಂತರ ಅಮೆರಿಕಾದ ಸಂಯುಕ್ತ ಸಂಸ್ಥಾನಕ್ಕೆ ಹರಡಿತು. ಇಪ್ಪತ್ತನೆಯ ಶತಮಾನದಲ್ಲಿ, ಸಂಯುಕ್ತ ಸಂಸ್ಥಾನ ವಿಜ್ಞಾನದ ತವರನ್ನೇ ಹಿಂದೆ ಹಾಕಿ ಪ್ರಗತಿ ಸಾಧಿಸಿತು. ಪ್ರತಿಭಾವಂತರ ವಲಸೆ ಹಾಗೂ ನೈಸರ್ಗಿಕ ಸಂಪತ್ತಿನಿಂದಾಗಿ, ಅಮೆರಿಕ ಬಹು ಬೇಗ ವೈಜ್ಞಾನಿಕ ಸಂಶೋಧನೆಗಳ ನಾಯಕತ್ವ ವಹಿಸಿತು. ಆದರೂ, ಯೂರೋಪಿನ ಅನೇಕ ದೇಶಗಳಲ್ಲಿ ಇಂದಿಗೂ ವೈಜ್ಞಾನಿಕ ಸಂಸ್ಕೃತಿ ಉಳಿದಿದೆ. ಇಲ್ಲಿಯ ಭಾಷೆಗಳಲ್ಲಿ ವೈಜ್ಞಾನಿಕ ಸಾಹಿತ್ಯ ಹೇರಳವಾಗಿದೆ. ಸಮಕಾಲೀನ ವಿಜ್ಞಾನದ ಪ್ರಗತಿಗೆ ಈ ಎಲ್ಲ ದೇಶಗಳೂ ತಮ್ಮದೇ ಆದ ಕಾಣಿಕೆ ಸಲ್ಲಿಸುತ್ತಲಿವೆ. ಶಾಲಾ ಬಾಲಕರ ಪಠ್ಯ ಪುಸ್ತಕಗಳು ಅವರಿಗೆ ಅತಿಪರಿಚಿತ ಭಾಷೆಗಳಲ್ಲೇ ದೊರೆಯುತ್ತವೆ. ಈ ದೇಶಗಳಲ್ಲಿ ವೈಜ್ಞಾನಿಕ ಸಂಶೋಧನೆಗಳು ಅವರವರ ಮಾತೃಭಾಷೆಗಳಲ್ಲೇ ನಡೆಯುತ್ತವೆ. ಮೆಕ್ಸಿಕೋ ಹಾಗೂ ದಕ್ಷಿಣ ಅಮೆರಿಕಾದ ಅನೇಕ ದೇಶಗಳಲ್ಲಿ ಇಂಗ್ಲಿಶ್ ಭಾಷೆ ಬಳಕೆಯಲ್ಲಿಲ್ಲ. ಆದರೆ ಈ ದೇಶಗಳಲ್ಲಿ ಪ್ರಚಲಿತವಿರುವ ಎಲ್ಲ ಭಾಷೆಗಳೂ ಯೂರೋಪಿನಿಂದ ಬಂದವು. ಈ ಎಲ್ಲ ಭಾಷೆಗಳಲ್ಲಿ ವೈಜ್ಞಾನಿಕ ಸಾಹಿತ್ಯ ವಿಪುಲವಾಗಿದೆ. ಆದ್ದರಿಂದ, ಇಲ್ಲಿಯ ಶಾಲಾ ಬಾಲಕರು, ತಾವು ಬಾಲ್ಯದಲ್ಲಿ ಕಲಿತ ಭಾಷೆಯಲ್ಲೇ ವಿಜ್ಞಾನ ಕಲಿಯುವ ಅವಕಾಶಗಳಿವೆ.

ವಿಜ್ಞಾನದಿಂದ ಲಭಿಸುವ ತಾಂತ್ರಿಕತೆಯ ಲಾಭ ಪಡೆಯಲು ಪೂರ್ವ ಜಗತ್ತಿನ ಅನೇಕ ದೇಶಗಳು ವೈಜ್ಞಾನಿಕ ಮಾರ್ಗಗಳನ್ನು ತಮ್ಮ ದೇಶಗಳಿಗೆ ಬರಮಾಡಿಕೊಂಡಿವೆ. ಈ ದೇಶಗಳಲ್ಲಿ ಜಪಾನಿಗೆ ಅಗ್ರಸ್ಥಾನ. ಈ ದೇಶ ಉನ್ನತಮಟ್ಟದ ತಾಂತ್ರಿಕತೆಯನ್ನು ಹೊಂದಿರುವುದೇ ಅಲ್ಲದೇ, ವಿಜ್ಞಾನದ ಎಲ್ಲ ಶಾಖೆಗಳಲ್ಲೂ ಬಹಳಷ್ಟು ಮುನ್ನಡೆ ಸಾಧಿಸಿದೆ. ಇಲ್ಲಿಯ ಅನೇಕ ಮೇಧಾವಿ ವಿಜ್ಞಾನಿಗಳು ತಮ್ಮ ಭಾಷೆಯಲ್ಲೇ ವಿಜ್ಞಾನ ಗ್ರಂಥಗಳನ್ನು ಬರೆದು, ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಜೊತೆಗೇ, ಪ್ರಪಂಚದ ಅತ್ಯಂತ ಮೇಧಾವಿಗಳು ಬರೆದಿರುವ ಪುಸ್ತಕಗಳನ್ನು ಇಲ್ಲಿನ ವಿಜ್ಞಾನಿಗಳು ತಮ್ಮ ಭಾಷೆಗೆ ತರ್ಜಮೆ ಮಾಡಿಕೊಂಡಿದ್ದಾರೆ. ಆದ್ದರಿಂದ ವಿದ್ಯಾರ್ಥಿಗಳಿಗೆ, ಆಸಕ್ತ ಜನರಿಗೆ ಅವರ ಮಾತೃಭಾಷೆಯಲ್ಲೇ ತೃಪ್ತಿಯಾಗುವಷ್ಟು ವೈಜ್ಞಾನಿಕ ಸಾಹಿತ್ಯ ದೊರೆಯುತ್ತದೆ. ಅತ್ಯಂತ ಚುರುಕಿನಿಂದ ಕಲಿಯಲು ಸಾಧ್ಯವಾಗುವ ಹರಯದಲ್ಲಿ, ಇಲ್ಲಿನ ವಿದ್ಯಾರ್ಥಿಗಳು ಭಾಷೆಯ ಗೊಂದಲಕ್ಕೆ ಒಳಪಡದೇ ತಮಗೆ ನಿಕಟ ಪರಿಚಯದ ಮಾತೃಭಾಷೆಯಲ್ಲೇ ವಿಜ್ಞಾನ ಕಲಿಯುತ್ತಾರೆ.

ಚೀನ ದೇಶದವರು ಜಪಾನಿನಷ್ಟು ಪ್ರಗತಿ ಸಾಧಿಸಿಲ್ಲವಾದರೂ, ಅವರ ಭಾಷೆಯಲ್ಲೇ ವಿಜ್ಞಾನದ ಕಲಿಕೆ ಸಾಧ್ಯವಾಗಿಸಿದ್ದಾರೆ. ನಮ್ಮ ದೇಶದಂತೆ ಇಲ್ಲಿಯೂ ಅನೇಕ ಆಡುಭಾಷೆಗಳಿವೆಯಾದರೂ ಈ ಬೃಹತ್ ದೇಶದಲ್ಲೆಲ್ಲಾ ಸಾಮಾನ್ಯವಾದ, ಎಲ್ಲ ತಿಳಿಯಬಲ್ಲ ಭಾಷೆಯಿರುವುದು ಇಂತಹ ಬೆಳವಣಿಗೆಗೆ ಸಹಾಯಕವಾಗಿದೆ. ಅದೇ ಇಂಡೋನೇಶಿಯ ನಮ್ಮ ಕರ್ನಾಟಕ ರಾಜ್ಯವನ್ನು ಹೋಲುವ ಸಣ್ಣ ದೇಶ. ಇಲ್ಲಿಯ ಆಡುಮಾತು ಬಹಾಸ ಮೆಲಯ್. ಪುಟ್ಟ ದೇಶವಾದರೂ, ಇಲ್ಲಿ ವಿಜ್ಞಾನವನ್ನು ತಮ್ಮ ಭಾಷೆಯಲ್ಲೇ ಕಲಿಸುತ್ತಾರೆ. ಬಹಳ ಭಾರತೀಯ, ಚೀನ ಮೂಲದ ಜನರಿರುವುದರಿಂದ, ಕೆಲವು ಶಾಲೆಗಳಲ್ಲಿ, ಇತರ ಭಾಷೆಗಳನ್ನು ಕಲಿಸಿದರೂ, ಎಲ್ಲರಿಗೂ ಬಹಾಸ ಮೆಲಯ್ ತಿಳಿದಿದೆ. ಎಲ್ಲ ಶಾಲಾ ಪುಸ್ತಕಗಳನ್ನೂ ಸರಕಾರವೇ ಹೊರತರುತ್ತದೆ. ಇವುಗಳ ಗುಣಮಟ್ಟ ಕಾಪಾಡಲು ತಜ್ಞರ ಸಮಿತಿಗಳಿವೆ. ಉನ್ನತ ವಿಜ್ಞಾನ ಕಲಿಯಲು ಇಂಗ್ಲಿಶ್ ಅತ್ಯಗತ್ಯವೆಂಬ ಅರಿವಿರುವುದರಿಂದ, ಬಾಲ್ಯದಿಂದಲೇ ಎಲ್ಲ ಮಕ್ಕಳಿಗೆ ಮಾತೃಭಾಷೆಯೊಟ್ಟಿಗೇ, ಇಂಗ್ಲಿಶನ್ನೂ ಕಲಿಸಲಾಗುತ್ತದೆ. ಆದರೆ, ವಿಜ್ಞಾನ, ಗಣಿತಗಳನ್ನು ಕಲಿಯುವುದು ಮಾತ್ರ ಮಾತೃಭಾಷೆಯಲ್ಲಿಯೇ.

ತೃತೀಯ ಜಗತ್ತಿನ ದೇಶಗಳಲ್ಲಿ ಭಾರತ ವಿಜ್ಞಾನದ ಮುಂಚೂಣಿಯಲ್ಲಿದೆ ಎಂದು ಹೇಳಬಹುದು. ನಮ್ಮ ದೇಶದಲ್ಲಿ ವೈಜ್ಞಾನಿಕ ಸಂಶೋಧನಾ ಕೇಂದ್ರಗಳನ್ನು ಮೊದಲಿಗೆ ಸ್ಥಾಪಿಸಿದವರು ಬ್ರಿಟಿಷರು. ಅವರ ದೇಶದ ಆರ್ಥಿಕ ಪ್ರಗತಿಗೆ ನಮ್ಮ ದೇಶದಲ್ಲಿ ದೊರೆಯುವ ಖನಿಜ ಹಾಗೂ ಅರಣ್ಯ ಸಂಪತ್ತು ಅಗತ್ಯವಾಗಿತ್ತು. ಹಡಗುಗಳನ್ನು ಕಟ್ಟಲು ಚೌಬೀನೆ ಬೇಕಿತ್ತು. ಲೋಹಗಳು ಬೇಕಿದ್ದವು. ಆದ್ದರಿಂದಲೇ ಅವರು ಮೊದಲು ಸ್ಥಾಪಿಸಿದ ಸಂಸ್ಥೆಗಳು ಈ ರಂಗಗಳಿಗೆ ಸೇರಿದ ವೈಜ್ಞಾನಿಕ ವಿಷಯಗಳನ್ನು ಕುರಿತಾಗಿದ್ದವು. 'ಜಿಯೊಲೋಜಿಕಲ್ ಸರ್ವೇ ಆಫ್ ಇಂಡಿಯಾ', 'ಫಾರೆಸ್ಟ್ ಡಿಪಾರ್ಟ್ಮೆಂಟ್' ಮತ್ತು 'ಡಿಪಾರ್ಟ್ಮೆಂಟ್ ಆಫ್ ಅಗ್ರಿಕಲ್ಚರ್' ಇವುಗಳ ಅವರು ಪ್ರಾರಂಭಿಸಿದ ಮೊದಲ ಸಂಸ್ಥೆಗಳಲ್ಲಿ ಹಲವು. ಈ ಸಂಸ್ಥೆಗಳು ಕೂಡಾ ನಮ್ಮ ದೇಶಕ್ಕೆ ಅಗತ್ಯವಾಗಿದ್ದ ವಿಷಯಗಳಿಗೂ ಹೆಚ್ಚಾಗಿ ಬ್ರಿಟಿಷರಿಗೆ ಬೇಕಾಗಿದ್ದ ಮಾಹಿತಿ ಸಂಗ್ರಹಿಸುವುದರಲ್ಲೇ ಉದ್ಯುಕ್ತವಾಗಿದ್ದವು. ಉದಾಹರಣೆಗೆ, 'ಅಗ್ರಿಕಲ್ಚರ್ ಡಿಪಾರ್ಟ್ಮೆನ್ಟುಗಳು' ಆಹಾರ ಧಾನ್ಯಗಳಿಗಿಂತ ಹತ್ತಿ, ಸೆಣಬು ಮುಂತಾದ ಅವರ ಕೈಗಾರಿಕೆಗಳಿಗೆ ಬೇಕಾದ ಉತ್ಪನ್ನಗಳ ಕಡೆಗೇ ಹೆಚ್ಚಿನ ಗಮನ ಕೊಟ್ಟವು. ಸರ್ಕಾರ ಸೈನಿಕರನ್ನೂ, ನೈಸಗಿರ್ಕ ಸಂಪತ್ತನ್ನೂ ರವಾನಿಸಲು ರೈಲ್ವೇ ಮಾರ್ಗಗಳನ್ನು ನಿರ್ಮಿಸಲು ತೊಡಗಿತು. ಇದರಿಂದ ಛಿದ್ರವಾಗಿದ್ದ ನಮ್ಮ ದೇಶ ಒಂದುಗೂಡಲು ಸಹಾಯಕವಾಯಿತು. ಹಾಗೆಯೇ, ವಿಜ್ಞಾನದ ಪ್ರಾಮುಖ್ಯತೆಯ ಅರಿವು ಕೆಲವು 'ಇಂಗ್ಲಿಶ್' ಕಲಿತ ಜನರಲ್ಲಾದರೂ ಮೂಡಿಬರಲು ಸಹಾಯಕವಾಯಿತು. ಆದರೆ ವಿಜ್ಞಾನ ಮಾತ್ರ ನಮ್ಮ ಸಾಮಾಜಿಕ ಬದುಕಿನ ಅಂಗವಾಗಲಿಲ್ಲ. ಯೂರೋಪಿನಲ್ಲಿ ಕಂಡಂತಹ ವಿಜ್ಞಾನ ಮತ್ತು ಸಾಂಪ್ರದಾಯಿಕ ನಂಬಿಕೆಗಳ ನಡುವಣ ಹೋರಾಟ ನಮ್ಮ ದೇಶದಲ್ಲಿ ಆಗಿಲ್ಲವೆಂದೇ ಹೇಳಬಹುದು. ಅವೈಜ್ಞಾನಿಕ ನಂಬಿಕೆ, ಸಂಪ್ರದಾಯಗಳ ವಿರುದ್ಧ ಧ್ವನಿ ಎತ್ತುವ ವಿಜ್ಞಾನಿಗಳು ತೀರ ವಿರಳ. ವಿಜ್ಞಾನದ

ಭಾಷೆ ಮೊದಲಿಗೆ ಆರಂಭವಾದ ಇಂಗ್ಲಿಶಿನ ಮಾಧ್ಯಮಗಳಲ್ಲಿ ಉಳಿದಿರುವುದೇ ಇದಕ್ಕೆ ಕಾರಣವೆಂಬುದರಲ್ಲಿ ಅನುಮಾನವಿಲ್ಲ. ಇದರಿಂದ ಹೆಚ್ಚಿನ ವಿದ್ಯಾರ್ಥಿಗಳಿಗೆ ವಿಜ್ಞಾನ ಕಲಿಯಲು ಭಾಷೆ ಬಹುದೊಡ್ಡ ಅಡ್ಡಿಯಾಗುತ್ತದೆ. ಅದೂ ಹಳ್ಳಿಗಳ, ಸಣ್ಣ ಪಟ್ಟಣಗಳ ಪ್ರತಿಭಾವಂತ ವಿದ್ಯಾರ್ಥಿಗಳ ಹೆಚ್ಚಿನ ಶ್ರಮವೆಲ್ಲಾ ಭಾಷೆಯ ಕಲಿಕೆಯಲ್ಲೇ ಖರ್ಚಾಗುತ್ತದೆ. ದೊಡ್ಡ ಪಟ್ಟಣಗಳಲ್ಲಿ ಇಂಗ್ಲಿಶ್ ಮಾಧ್ಯಮದಲ್ಲಿ ಓದಿರುವ ವಿದ್ಯಾರ್ಥಿಗಳೂ ಇಂಗ್ಲಿಶನ್ನು ಚುರುಕಾಗಿ ಓದಿ ಅರ್ಥಮಾಡಿಕೊಳ್ಳಲಾರರು. ಆದ್ದರಿಂದ ಇವರಿಗೆ ಇಂಗ್ಲಿಶಿನಲ್ಲಿ ದೊರೆಯುವ ಒಳ್ಳೆಯ ಪುಸ್ತಕಗಳನ್ನು ಓದಿ ಜೀರ್ಣಿಸಿಕೊಳ್ಳುವುದು ಸುಲಭ ಎನಿಸುವುದಿಲ್ಲ.

ಸ್ವಾತಂತ್ರಪೂರ್ವ ಹಾಗೂ ಸ್ವಾತಂತ್ರ ಬಂದ ಹೊಸದರಲ್ಲಿ, ದೇಶಭಕ್ತಿಯಲ್ಲೇ ಮುಳುಗಿದ್ದ ಅನೇಕ ವಿಜ್ಞಾನಿಗಳು, ವಿಜ್ಞಾನವನ್ನು ನಮ್ಮದಾಗಿಸಿಕೊಳ್ಳಲು, ಅದನ್ನು ನಮ್ಮ ಸಂಸ್ಕೃತಿಯ ಭಾಗವಾಗಿಸಲು ಬಹಳ ಉತ್ಸಾಹ ತೋರಿದರು. ಬಂಗಾಳದಲ್ಲಿ ಬೋಸ್ ಮುಂತಾದವರು ವಿಜ್ಞಾನವನ್ನು ಬೆಂಗಾಲೀಕರಣಗೊಳಿಸಲು ಬಹಳಷ್ಟು ಪ್ರಯತ್ನಿಸಿದರು. ಈ ಮುಂದಾಳುಗಳ ಪ್ರಯತ್ನದಿಂದಾಗಿ ಇಂದಿಗೂ ಬಂಗಾಳಿಗಳಿಗಿರುವ ವಿಜ್ಞಾನದ ಪರಿಚಯ ಬೇರೇ ರಾಜ್ಯದಲ್ಲಿರುವವರಿಗೆ ಲಭ್ಯವಿಲ್ಲ. ಕರ್ನಾಟಕದಲ್ಲಿ ಹಲವಾರು ವಿಜ್ಞಾನಿಗಳು ಕನ್ನಡದಲ್ಲೇ ವೈಜ್ಞಾನಿಕ ಬರವಣಿಗೆಗಳು ದೊರಕುವಂತೆ ಮಾಡುವ ಪ್ರಯತ್ನ ಮಾಡಿದ್ದಾರೆ. ಇಂತಹವರಲ್ಲಿ ಶಿವರಾಮ ಕಾರಂತರು ಮೊದಲಿಗರಲ್ಲೊಬ್ಬರು. ಇವರಿಗಿಂತಲೂ ಕಿರಿಯವರಲ್ಲಿ ಒಳ್ಳೆಯ ಬರಹ ನೀಡಿರುವ ಕೆಲವರೆಂದರೆ ಜೆ.ಆರ್. ಲಕ್ಷ್ಮಣರಾಯರು, ಜಿ.ಟಿ. ನಾರಾಯಣ ರಾಯರು, ಬೀ.ಜಿ.ಎಲ್.ಸ್ವಾಮಿ ಮುಂತಾದವರು. ಆದರೆ, ನಮ್ಮ ಕರ್ನಾಟಕದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯನ್ನು ಗಮನಕ್ಕೆ ತೆಗೆದುಕೊಂಡರೆ, ನಡೆದಿರುವ ಬರವಣಿಗೆ ಲೆಕ್ಕಕ್ಕೇ ಬಾರದಷ್ಟು ಕಡಿಮೆ.

ಮೂರು ಬಗೆಯ ವಿಜ್ಞಾನ ಗ್ರಂಥಗಳು ನಮಗೆ ಬೇಕಾಗುತ್ತವೆ. ಇವುಗಳಲ್ಲಿ ಮೊದಲನೆಯದು ವಿದ್ಯಾರ್ಥಿಗಳಿಗೆ ಬೇಕಾಗುವ ಪಠ್ಯಪುಸ್ತಕಗಳು. ಈ ಪುಸ್ತಕಗಳನ್ನು ಸದಾ ನವೀಕರಿಸುವ ಅಗತ್ಯವಿದೆ. ನಮ್ಮಲ್ಲಿ ಲಭ್ಯವಿರುವ ಪುಸ್ತಕಗಳು ಸಾಮಾನ್ಯವಾಗಿ ವಿದ್ಯಾರ್ಥಿಗಳ ಕುತೂಹಲ ಕೆರಳಿಸುವುದಿಲ್ಲ. ಅವರ ಕಲ್ಪನೆ ಗರಿಗೆದರುವಂತೆ ಮಾಡುವುದಿಲ್ಲ. ಪಠ್ಯಪುಸ್ತಕ ಬರೆಯಲು ಆಳವಾದ ತಿಳುವಳಿಕೆ, ಬರೆಯುವ ಚಾತುರ್ಯ ಹಾಗೂ ಕಲಿಯುವ ಮಕ್ಕಳ ಸಾಮರ್ಥ್ಯದ ಅರಿವು ಬೇಕಾಗುತ್ತದೆ. ವಿಜ್ಞಾನದಲ್ಲಿ ಪಳಗಿದವರಿಗೆ ಕನ್ನಡದ ನಿಕಟ ಪರಿಚಯ ಇರುವುದು ಬಹಳ ಅಪರೂಪ. ಮಕ್ಕಳಿಗೆ ಪಾಠ ಹೇಳಿ ರೂಢಿಯಂತೂ ಇರುವುದೇ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ನುರಿತ ವಿಜ್ಞಾನಿಗಳಿಂದ ಒಳ್ಳೆಯ ಪಠ್ಯ ಪುಸ್ತಕಗಳನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಈಗ ಇಂಗ್ಲಿಶಿನಲ್ಲಿ ದೊರಕುವ ಅತ್ಯಂತ ಶ್ರೇಷ್ಠ ಪಠ್ಯ ಪುಸ್ತಕಗಳನ್ನು ಅಮೆರಿಕಾದ ಪ್ರೊಫೆಸರರು ಬರೆದಿರುತ್ತಾರೆ. ಅಲ್ಲಿಯ ಯೂನಿವರ್ಸಿಟಿಗಳಲ್ಲಿ ಆಧುನಿಕ ಸಂಶೋಧನೆ ಹಾಗು ಕಿರಿಯರ ಬೋಧನೆ ಸಮಾನಾಂತರವಾಗಿ ಸಾಗುತ್ತವೆ. ಆದ್ದರಿಂದಲೇ ಉತ್ಕೃಷ್ಟ ಪಠ್ಯ ಪುಸ್ತಕಗಳು ಹೊರಬರುತ್ತವೆ. ನಮ್ಮಲ್ಲಿ, ವೈಜ್ಞಾನಿಕ ಸಂಶೋಧನೆ ನಮ್ಮ

ದೇಶೀಯ ಸಂಶೋಧನಾ ಸಂಸ್ಥೆಗಳಲ್ಲಿ ನಡೆಯುತ್ತದೆ. ಇಲ್ಲಿಯ ವಿಜ್ಞಾನಿಗಳಿಗೆ ಪಾಠ ಹೇಳಿ ಅನುಭವವಿಲ್ಲ. ಯೂನಿವರ್ಸಿಟಿ ಅಧ್ಯಾಪಕರು ಬಹಳ ಪಾಠವನ್ನೇನೋ ಹೇಳುತ್ತಾರೆ. ಆದರೆ ಅವರಿಗೆ ವಿಜ್ಞಾನದಲ್ಲಿ ನಡೆಯುತ್ತಿರುವ ಸಮಕಾಲೀನ ಸಂಶೋಧನೆಗಳ ಪರಿಚಯವಿಲ್ಲ. ಆದ್ದರಿಂದ ಇವರಿಗೂ ಒಳ್ಳೆಯ ಪುಸ್ತಕಗಳನ್ನು ಬರೆಯುವ ಸಾಮರ್ಥ್ಯ ಕಡಿಮೆ. ಜೊತೆಗೆ ಇವರಿಗೂ ಪ್ರೈಮರಿ ಅಥವಾ ಹೈಸ್ಕೂಲು ವಿದ್ಯಾರ್ಥಿಗಳಿಗೆ ಪಾಠ ಹೇಳಿದ ಅನುಭವವಿರುವುದಿಲ್ಲ. ಆದ್ದರಿಂದ ಇವರೂ ಮಕ್ಕಳಿಗೆ ರುಚಿಸುವಂತೆ ಪುಸ್ತಕಗಳನ್ನು ಬರೆಯಲಾರರು. ಇನ್ನು ಮಕ್ಕಳಿಗೆ ಪಾಠ ಹೇಳುವ ಅಧ್ಯಾಪಕರಿಗೆ ವಿಜ್ಞಾನದ ಆಳವಾದ ಅರಿವಿರುವುದು ಕಡಿಮೆ. ಆದ್ದರಿಂದ, ಪಠ್ಯ ಪುಸ್ತಕಗಳನ್ನು ಹೊರತರುವಲ್ಲಿ, ಹಲ್ಲಿದ್ದವನಿಗೆ ಕಡಲೆಯಿಲ್ಲ, ಕಡಲೆಯಿದ್ದವನಿಗೆ ಹಲ್ಲಿಲ್ಲ ಎಂಬ ಪರಿಸ್ಥಿತಿಯಿದೆ. ಆದ್ದರಿಂದಲೇ ನಮ್ಮ ಪಠ್ಯ ಪುಸ್ತಕಗಳು ವಿದ್ಯಾರ್ಥಿಗಳನ್ನು ರಂಜಿಸಲಾರವು. ಜೊತೆಗೇ, ವಿಜ್ಞಾನದ ಪುಸ್ತಕ ಹೆಚ್ಚು ಉಪಯೋಗವಾಗಬೇಕಾದರೆ, ಒಳ್ಳೆಯ ಚಿತ್ರಗಳ ಸಹಾಯದಿಂದ ವಿಷಯ ತಿಳಿಸಬೇಕಾಗುತ್ತದೆ. ಇಂತಹ ಪುಸ್ತಕಗಳನ್ನು ಮುದ್ರಿಸಲು ಹೆಚ್ಚು ವೆಚ್ಚ ತಗಲುತ್ತದೆ. ಬಡ ಮಕ್ಕಳಿಗೂ ಕೊಳ್ಳಲಾಗುವಂತೆ ಪುಸ್ತಕಗಳನ್ನು ಮುದ್ರಿಸಬೇಕೆಂಬ ಆತುರದಲ್ಲಿ ಪುಸ್ತಕಗಳ ಗುಣಮಟ್ಟ ಕಾಪಾಡುವುದು ಮುಖ್ಯವೆನಿಸುವುದಿಲ್ಲ. ಇದಕ್ಕೆ ಇರುವ ಪರಿಹಾರವೆಂದರೆ, ಸರ್ಕಾರ ಪಠ್ಯ ಪುಸ್ತಕಗಳ ಭಾಗಶಃ ಖರ್ಚನ್ನು ವಹಿಸಿಕೊಳ್ಳಬೇಕು. ಜೊತೆಗೇ, ವಿದ್ವತ್ ಇರುವ ನಿವೃತ್ತ ಪ್ರೊಫೆಸರರನ್ನು ಹಲವಾರು ವರ್ಷಗಳು ಪ್ರೈಮರಿ ಹಾಗೂ ಹೈಸ್ಕೂಲುಗಳಲ್ಲಿ ಬೋಧಿಸಲು ನೇಮಿಸಿ, ಅವರಿಂದ ಪಠ್ಯ ಪುಸ್ತಕಗಳನ್ನು ಬರೆಯಿಸಬೇಕು. ಪಠ್ಯ ಪುಸ್ತಕಗಳನ್ನು ಅನೇಕ ವರ್ಷಗಳ ಪಾಠ ಮಾಡಲು ಬಳಸಿದ ಟಿಪ್ಪಣಿ ಬಳಸಿ ಬರೆದರೆ, ಅದು ವಿದ್ಯಾರ್ಥಿಗಳಲ್ಲಿ ಉತ್ಸಾಹ ಮೂಡಿಸುವುದರಲ್ಲಿ ಯಶಸ್ವಿಯಾಗುತ್ತದೆ. ಇದೆಲ್ಲಾ ಸರ್ಕಾರಕ್ಕೆ, ವಿದ್ಯಾ ಇಲಾಖೆಯ ಅಧಿಕಾರಿಗಳಿಗೆ ಆಸಕ್ತಿ ಇದ್ದರೆ ಕಷ್ಟವಾಗಲಾರದು.

ವಿಜ್ಞಾನ ನಮ್ಮ ಮುಂದೆ ಒಂದು ಅದ್ಭುತ ಪ್ರಪಂಚವನ್ನೇ ತೆರೆದು ನಿಲ್ಲಿಸುತ್ತದೆ. ನಮ್ಮ ಕಣ್ಣಿಗೆ ಕಾಣಿಸದ ಅಣುಪ್ರಪಂಚದಿಂದ ಹಿಡಿದು ಊಹೆಗೂ ನಿಲುಕದ ನಕ್ಷತ್ರ ಲೋಕದವರೆಗೆ ವಿಶ್ವದ ಅನೇಕ ಸ್ತರಗಳನ್ನು ನಮಗೆ ಪರಿಚಯಿಸುತ್ತದೆ. ವಿಶ್ವವ್ಯಾಪಾರದಲ್ಲೇ ಅತ್ಯಂತ ನಿಗೂಢವಾದ, ವೈವಿಧ್ಯಮಯ ಜೀವಪ್ರಪಂಚದ ಬಾಗಿಲು ತೆರೆದು ತೋರಿಸುತ್ತದೆ, ಪ್ರಪಂಚದಲ್ಲಿ ಸಂಭವಿಸುವ ಘಟನೆಗಳಿಗೆ ತಾರ್ಕಿಕ ಸಂಬಂಧ ತಿಳಿಸಿಕೊಡುತ್ತದೆ. ಕುರುಡು ನಂಬಿಕೆಗಳ ಶಮನಕ್ಕೆ ವಿಜ್ಞಾನದ ಅರಿವಿಗಿಂತ ಹೆಚ್ಚಿನ ಒಳ್ಳೆಯ ಮದ್ದಿಲ್ಲ. ಆದ್ದರಿಂದ, ವಿಜ್ಞಾನದ ಸಾಮಾನ್ಯ ಪರಿಚಯ ಎಲ್ಲ ಜನರಿಗೂ ಆಗಬೇಕು. ಜೊತೆಗೇ, ವಿಜ್ಞಾನದಿಂದ ಲಭಿಸುವ ತಂತ್ರಜ್ಞಾನ ನಮ್ಮ ಬದುಕಿನ ಎಲ್ಲ ರಂಗಗಳಲ್ಲಿ ದಾಪುಗಾಲಿಟ್ಟು ಮುನ್ನಡೆದಿದೆ. ಇತ್ತೀಚೆಗೆ ವಿಜ್ಞಾನ ಹಿಂದೆಂದೂ ಕಂಡಿರದ ವೇಗದಿಂದ ಸಾಮಾಜಿಕ ಬದಲಾವಣೆಗಳನ್ನು ಉಂಟುಮಾಡುತ್ತಿದೆ. ಈ ಬದಲಾವಣೆಗಳಿಗೆ ಜಾಣತನದಿಂದ ಹೊಂದಿಕೊಳ್ಳಲು ವಿಜ್ಞಾನದ ಸ್ಥೂಲ ಪರಿಚಯ ಅಗತ್ಯ. ಆದ್ದರಿಂದ ವಿಜ್ಞಾನದ ಎಲ್ಲ ಶಾಖೆಗಳನ್ನೂ ಪರಿಚಯಿಸುವ

ಸರಳ ಗ್ರಂಥಗಳು ಲಭ್ಯವಾಗಬೇಕು. ಚೆನ್ನಾಗಿ ಬರೆದ ಇಂತಹ ಪುಸ್ತಕಗಳು ಕತೆ, ಕಾದಂಬರಿಗಳಿ ಗಿಂತ ಹೆಚ್ಚಾಗಿ ಮನರಂಜನೆ ನೀಡುತ್ತವೆ; ಅರಳುತ್ತಿರುವ ಮಕ್ಕಳ, ಓದುಗರ ಮನಸ್ಸನ್ನು ಪ್ರಚೋದಿಸುತ್ತವೆ. ಇಂತಹ ಜನಪ್ರಿಯ ವಿಜ್ಞಾನದ ಪುಸ್ತಕಗಳು ನಮಗೆ ಬೇಕಾಗುವ ಎರಡನೆಯ ಗುಂಪಿನ ಪುಸ್ತಕಗಳು. ವಿಜ್ಞಾನ ಜನಜೀವನದ ಅವಿಭಾಜ್ಯ ಅಂಗವಾಗಬೇಕಾದರೆ, ಇಂತಹ ಗ್ರಂಥಗಳು ಅತ್ಯವಶ್ಯ. ಸಮಾಜದಲ್ಲಿ ಇನ್ನೂ ಒಂದು ಮುಖ್ಯ ಕಾರಣಕ್ಕೆ ವೈಜ್ಞಾನಿಕ ಅರಿವು ಅತ್ಯಗತ್ಯ. ವೈಜ್ಞಾನಿಕ ಮಾಹಿತಿಯನ್ನು ಅನೇಕ ಮಾರ್ಗಗಳಲ್ಲಿ ಬಳಸಿಕೊಳ್ಳಬಹುದು. ಅಣುಶಕ್ತಿಯನ್ನು ವಿದ್ಯುತ್ ಪಡೆಯಲೂ ಬಳಸಬಹುದು, ಪರಮಾಣು ಬಾಂಬುಗಳನ್ನು ತಯಾರಿಸಲೂ ಬಳಸಬಹುದು. ಜೀವಶಾಸ್ತ್ರದ ಜ್ಞಾನವನ್ನು ವೈದ್ಯಕೀಯಕ್ಕಲ್ಲದೇ ಜೈವಿಕ ಅಸ್ತ್ರಗಳ ತಯಾರಿಕೆಗೂ ಬಳಸಬಹುದು. ವಿಜ್ಞಾನವನ್ನು ಹೇಗೆ ಬಳಸಬೇಕೆಂಬ ತೀರ್ಮಾನ ಒಟ್ಟು ಸಮಾಜಕ್ಕೆ ಸೇರಿದ ನಿರ್ಧಾರವಾಗಬೇಕು. ವಿಜ್ಞಾನವನ್ನು ಯಾವ ರೀತಿ ಬಳಸಬೇಕೆಂಬು ದನ್ನು ಸಮರ್ಪಕವಾಗಿ ನಿರ್ಧರಿಸಲು ಜನಸಾಮಾನ್ಯರಿಗೆ ವಿಜ್ಞಾನದ ಸಾಮಾನ್ಯ ಪರಿಚಯ ಇರಬೇಕಾಗುತ್ತದೆ. ವಿಜ್ಞಾನವನ್ನು ಬರಿಯ ಪರಿಣತ ವಿಜ್ಞಾನಿಗಳ ಸ್ವತ್ತಾಗಿಸುವುದು ಕ್ಷೇಮಕರ ವಲ್ಲ.

ಇಂಗ್ಲಿಶಿನಲ್ಲಿ ಇಂತಹ ಜನಪ್ರಿಯ ವಿಜ್ಞಾನದ ಪುಸ್ತಕಗಳು ತಿಂಗಳಿಗೆ ಹತ್ತಾರು ಹೊರಬರುತ್ತವೆ. ಈ ಪುಸ್ತಕಗಳನ್ನು ಓದಿ ಆನಂದಿಸುವ ಭಾಗ್ಯ ಕನ್ನಡಿಗರಿಗಿಲ್ಲ. ಕನ್ನಡದಲ್ಲಿ ಅಪರೂಪಕ್ಕೊಮ್ಮೆ ಇಂತಹ ಪುಸ್ತಕಗಳು ಪ್ರಕಟವಾಗುತ್ತವೆ. ಆದರೆ, ಮುದ್ರಣವಾಗುವ ಪ್ರತಿಗಳು ಕಡಿಮೆ. ಪ್ರತಿಗಳು ಮುಗಿದ ನಂತರ ಪುನರ್‌ಮುದ್ರಣಗೊಳ್ಳುವ ಸಂದರ್ಭಗಳು ಅಪರೂಪ. ಹಾಗೆಯೇ, ಇವು ಎಲ್ಲೆಡೆ ಸುಲಭವಾಗಿ ದೊರೆಯುವುದಿಲ್ಲ. ಪುಸ್ತಕ ಮಾರುವ ಅಂಗಡಿಗಳು ಸಾಮಾನ್ಯವಾಗಿ ಪಠ್ಯಪುಸ್ತಕಗಳನ್ನು ಹೊರತು ಬೇರೆಯ ಪುಸ್ತಕಗಳನ್ನು ಮಾರುವು ದಿಲ್ಲ. ಹಾಗೆಯೇ, ಪೋಷಕರೂ, ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಎಷ್ಟು ಖರ್ಚು ಮಾಡಿದರೂ, ಅವರ ಜ್ಞಾನಾರ್ಜನೆಗಾಗಿ ಇಂತಹ ಪುಸ್ತಕಗಳನ್ನು ಕೊಳ್ಳಲು ತಯಾರಿರುವುದಿಲ್ಲ. ಇಂತಹ ಪುಸ್ತಕಗಳನ್ನು ಬರೆಯುವ ಶಕ್ತಿಯುಳ್ಳವರನ್ನು ಸರ್ಕಾರ ಗುರುತಿಸಿ ಅವರಿಂದ ಬರೆಸಿ, ಮುದ್ರಿಸಬೇಕು. ತನ್ನ ಖರ್ಚಿನಲ್ಲಿ ಎಲ್ಲ ಶಾಲೆಗಳಿಗೆ ಹಂಚಬೇಕು. ಈ ಕಾರ್ಯ ಒಮ್ಮೆ ಮಾಡಿದರೆ ಸಾಲದು, ನಿರಂತರ ಮಾಡುತ್ತಿರಬೇಕು. ಇದೆಲ್ಲಾ ಮನಸ್ಸಿದ್ದರೆ, ಕಷ್ಟದ ಕೆಲಸವಲ್ಲ.

ಮೂರನೆಯ ಜಾತಿಗೆ ಸೇರಿದ ವಿಜ್ಞಾನದ ಲೇಖನಗಳು ಉನ್ನತ ಸಂಶೋಧನೆಗೆ ಸೇರಿದವು. ಈ ರಂಗದಲ್ಲಿ ಕನ್ನಡದಲ್ಲೇ ಕೆಲಸ ಮಾಡುವ ಕಾಲ ಬರುವಂತೆ ಕಾಣಿಸುವುದಿಲ್ಲ. ವಿಜ್ಞಾನ ದಲ್ಲಿ ಸಂಶೋಧನೆ ಕೈಗೊಳ್ಳುವ ಆಸಕ್ತಿ, ಪ್ರತಿಭೆ ಇರುವವರು ಇಂಗ್ಲಿಶನ್ನು ಕಲಿಯದೇ ಗತ್ಯಂತರವಿಲ್ಲ ಎನಿಸುತ್ತದೆ. ಆದ್ದರಿಂದ, ಸಂಶೋಧನಾ ಗ್ರಂಥಗಳನ್ನು ಕನ್ನಡದಲ್ಲಿ ಸಂಪಾದಿ ಸುವುದು ಸದ್ಯಕ್ಕೆ ಪ್ರಸ್ತುತವಲ್ಲ ಎನಿಸುತ್ತದೆ.

ಜಪಾನ್, ಚೀನಗಳಲ್ಲಿರುವಂತೆ ನಮ್ಮಲ್ಲೂ ವಿಜ್ಞಾನವನ್ನೆಲ್ಲಾ ಕನ್ನಡದಲ್ಲೇ ಕಲಿಯ ಬೇಕೆಂದು ಬಲಾತ್ಕಾರ ಮಾಡುವುದು ಸದ್ಯದ ಪರಿಸ್ಥಿತಿಯಲ್ಲಿ ಸಾಧುವೆನಿಸುವುದಿಲ್ಲ. ಜಪಾನ್

ತನ್ನದೇ ಆದ ತಾಂತ್ರಿಕತೆ ಹೊಂದಿದೆ. ಪ್ರತಿಭಾವಂತ ವಿಜ್ಞಾನಿಗಳಿಗೆ, ಇಂಜಿನಿಯರರಿಗೆ, ವೈದ್ಯರಿಗೆ ತಮ್ಮ ಭಾಷೆ ಬಳಸಿಯೇ, ತಮ್ಮ ಚಾತುರ್ಯವನ್ನೆಲ್ಲಾ ಹೊರದೋರುವ ಅವಕಾಶ ವಿದೆ. ನಮ್ಮಲ್ಲಿ ಬಹಳ ಧೀಶಕ್ತಿಯಿರುವವರು ಅಮೆರಿಕೆಗೆ ಹೋಗುತ್ತಾರೆ. ನಮ್ಮ ಕೈಗಾರಿಕೆ ಗಳು ಅವರ ಬುದ್ಧಿಮತ್ತತೆಯ ಲಾಭ ಪಡೆಯುವಷ್ಟು ಸಂಶೋಧನಾ ಕ್ಷೇತ್ರದಲ್ಲಿ ಮುಂದು ವರೆದಿಲ್ಲ. ಹೀಗಾಗಿ, ಎಷ್ಟೇ ಜಾಣರಿದ್ದರೂ, ಅವರ ಜಾಣತನ ಪ್ರಕಟವಾಗಬೇಕಾದರೆ, ಇಂಗ್ಲಿಶಿನ ಪರಿಚಯ ಅಗತ್ಯವಾಗುತ್ತದೆ.

ಇಂಗ್ಲಿಶಿನಲ್ಲಿ ವಿಜ್ಞಾನವನ್ನು ಬೋಧಿಸುತ್ತಿರುವುದರಿಂದ ಎರಡು ಬಗೆಯ ನಷ್ಟವನ್ನು ನಾವು ಅನುಭವಿಸುತ್ತೇವೆ. ಮೊದಲನೆಯದಾಗಿ, ನಮ್ಮ ವಿಜ್ಞಾನಿಗಳು ಅವರ ಪೂರ್ಣ ಬೌದ್ಧಿಕತೆಯನ್ನು ಪ್ರಕಟಿಸಲು ಅಸಮರ್ಥರಾಗುತ್ತಾರೆ. ಬೋಸ್, ರಾಮನ್ ಅವರ ಮಟ್ಟದ ಮೇಧಾವಿಗಳಿಗೆ ಬಹು ಜನಸಂಖ್ಯೆಯ ಯಾವ ಸಮಾಜದಲ್ಲೂ ಕೊರತೆ ಇರುವುದಿಲ್ಲ. ಆದರೆ, ಅವರಂತೆ ಸಾಧನೆ ಸಾಧಿಸಲು, ಸರಿಯಾದ ವಿದ್ಯಾಭ್ಯಾಸ, ಅವಕಾಶಗಳು ಬೇಕಾಗುತ್ತದೆ. ಭಾಷೆಯ ತೊಡಕು ಇಂತಹ ಉನ್ನತಿ ಸಾಧಿಸುವಲ್ಲಿ ಅಡ್ಡಿ ಬರುತ್ತದೆ. ಇದೇ ತೊಡಕಿನಿಂದ ಭಾರತೀಯ ವಿಜ್ಞಾನಿಗೆ ಪೂರ್ಣ ವಿಕಾಸಗೊಳ್ಳುವ ಅವಕಾಶಗಳು ತಪ್ಪುತ್ತವೆ. ಇದಕ್ಕಿಂತಲೂ ಹೆಚ್ಚಿನ ನಷ್ಟ, ವಿಜ್ಞಾನ ನಮ್ಮ ಸಾಮಾಜಿಕ ಬದುಕಿನ ಅಂಗವಾಗ ದಿರುವುದು. ವಿಜ್ಞಾನ ನಮ್ಮ ಅಂಗಳದಲ್ಲಿ ಬೆಳೆದ ಹೂವೇ ಅಲ್ಲ, ಅದು ಕೊಂಡು ತಂದದ್ದು. ಆದ್ದರಿಂದಲೇ, ವೈಜ್ಞಾನಿಕ ಸತ್ಯಗಳಿಗೆ ಹೊಂದಿಕೊಂಡು ಬಾಳಬೇಕೆಂಬ ತುಡಿತ ನಮ್ಮ ವಿಜ್ಞಾನಿಗಳಲ್ಲಿ ಕಂಡುಬರುವುದಿಲ್ಲ. ಅಂತಹ ಮನೋಭಾವ, ನಮ್ಮ ಸಮಾಜದಲ್ಲಿ ಸಹಸ್ರಾರು ವರ್ಷಗಳಿಂದ ಬೇರೂರಿರುವ ಮೂಢನಂಬಿಕೆಗಳನ್ನು, ಅರ್ಥಶೂನ್ಯ ಆಚರಣೆ ಗಳನ್ನು ತೊಡೆದುಹಾಕಲು ಅತ್ಯಗತ್ಯವಾದುದರಿಂದ, ಅಂತಹ ಅವಕಾಶಗಳಿಂದ ನಾವು ವಂಚಿತರಾಗುತ್ತಿದ್ದೇವೆ. ಆದರೂ ಈ ಪರಿಸ್ಥಿತಿಯಿಂದ ನಾವು ತಪ್ಪಿಸಿಕೊಳ್ಳುವ ಲಕ್ಷಣಗಳು ಕಂಡುಬರುತ್ತಿಲ್ಲ. ಎಲ್ಲಿಯವರೆಗೆ ದುಡಿಯುವ ಶಕ್ತಿಗೂ ಇಂಗ್ಲಿಶಿಗೂ ಸಂಬಂಧ ತಪ್ಪುವು ದಿಲ್ಲವೋ ಅಲ್ಲಿಯವರೆಗೆ ಕನ್ನಡದ ಅಭಿಮಾನವನ್ನು ಬೆಳೆಸಿಕೊಳ್ಳಿ ಎಂದು ಬೋಧಿಸುವುದು ಹಸಿದವನಿಗೆ ತತ್ವಶಾಸ್ತ್ರ ಬೋಧಿಸಿದಷ್ಟೇ ಮೂರ್ಖತನವಾಗುತ್ತದೆ.

●

## ಪಾಶ್ಚಾತ್ಯ ವಿಚಾರಗಳಿಗೆ ಸಂಪೂರ್ಣ ದಾಸರಾಗಿದ್ದೇವೆ

● ರಾಜಾರಾಮ ತೋಳ್ಪಾಡಿ

ಮಾನವಿಕ ಶಾಸ್ತ್ರಗಳಲ್ಲಿ ಒಂದೆಂದು ಪರಿಗಣಿಸಲಾದ ರಾಜಕೀಯ ಶಾಸ್ತ್ರವನ್ನು ಕನ್ನಡದಲ್ಲಿ ನಿರ್ವಹಿಸುವ ಚಟುವಟಿಕೆಗೆ ಸಂಬಂಧಿಸಿದ ಕೆಲವು ತೊಡಕುಗಳನ್ನು ನಿಮ್ಮ ಮುಂದಿಡಲು

ಇಷ್ಟಪಡುತ್ತೇನೆ. ನನ್ನ ಪ್ರತಿಫಲನ ತತ್‌ಕ್ಷಣದ್ದಾದ್ದರಿಂದ, ಇವು ಒರಟಾಗಿಯೂ ತತ್‌ಕ್ಷಣಿಕವಾಗಿಯೂ ಇರಬಹುದು. ಇವು ಹೆಚ್ಚು ನಾಜೂಕುಗೊಳಿಸುವ ಹಾಗೂ ತಾತ್ವಿಕವಾಗಿ ಪರಿಷ್ಕೃತಗೊಳಿಸುವ ಅಗತ್ಯ ಇದೆ ಎನ್ನುವ ಅರಿವಿನೊಂದಿಗೆ ಈ ಕೆಳಗಿನ ಮಾತುಗಳನ್ನು ಮುಂದಿಡುತ್ತೇನೆ.

ಜಾಗತೀಕರಣದ ಈ ಚಾರಿತ್ರಿಕ ಘಟ್ಟದಲ್ಲಿ ಮಾನವಿಕ ಶಾಸ್ತ್ರಗಳು ಹಿಂದೆಂದೂ ಅನುಭವಿಸದ ಸಂಕಟವೊಂದನ್ನು ಎದುರಿಸುತ್ತಿವೆ ಎನ್ನುವ ಮಾತುಗಳನ್ನು ಕೇಳುತ್ತಿದ್ದೇವೆ. ಮಾರುಕಟ್ಟೆಯ ಸ್ಪರ್ಧಾತ್ಮಕ ಜಗತ್ತಿನಲ್ಲಿ ಮಾನವಿಕ ಶಾಸ್ತ್ರಗಳು ತಮ್ಮ ಘನತೆಯನ್ನು ಉಳಿಸಿಕೊಳ್ಳಲಾಗದೆ ಒಂದು ಬಗೆಯ ಹಿಂಜರಿಕೆಯನ್ನು ಅನುಭವಿಸುತ್ತಿವೆ ಎನ್ನುವುದು ಮಾನವಿಕ ಶಾಸ್ತ್ರಗಳ ವಿವಿಧ ಶಿಸ್ತುಗಳಲ್ಲಿ ಕೆಲಸ ನಡೆಸುತ್ತಿರುವ ನಮ್ಮೆಲ್ಲರ ಅನುಭವ. ಜಾಗತೀಕರಣವು ತಮ್ಮ ಮುಂದೆ ಒಡ್ಡಿರುವ ಸಮಸ್ಯೆಯನ್ನು ಹಾಗೂ ಸವಾಲುಗಳನ್ನು ಪರಿಹರಿಸಿಕೊಳ್ಳುವಲ್ಲಿ ಮಾನವಿಕ ಶಾಸ್ತ್ರಗಳು ಯಶಸ್ವಿಯಾಗುತ್ತವೆಯೇ? ಇದನ್ನು ವಿಶದವಾಗಿ ಚರ್ಚಿಸುವುದು ಈ ಬರವಣಿಗೆಯ ಉದ್ದೇಶವಲ್ಲ. ಬದಲಾಗಿ ಜಾಗತೀಕರಣದ ಈ ಕಾಲಘಟ್ಟದಲ್ಲಿ ಭಾರತದಂತಹ ವಸಾಹತೋತ್ತರ ಸಮಾಜಗಳ ನಾವು ಎದುರಿಸುತ್ತಿರುವ ಕೆಲವು ಅಂಶಗಳನ್ನು ಪ್ರಸ್ತಾಪಿಸುವುದಾಗಿದೆ.

ಮಾನವಿಕ ಶಾಸ್ತ್ರಗಳ ಹುಟ್ಟು ಹಾಗೂ ವಿಕಾಸವು ಪಾಶ್ಚಾತ್ಯ ಜಗತ್ತಿನಲ್ಲಿ ಸಂಭವಿಸಿದ್ದು ಎನ್ನುವುದು ನಮಗೆಲ್ಲ ತಿಳಿದಿರುವ ವಿಚಾರ. ಹಾಗಾಗಿಯೇ ಅವುಗಳ ಪರಿಕರ ಹಾಗೂ ವಿಧಾನಕ್ರಮಗಳ ಮೇಲೆ ಪಾಶ್ಚಾತ್ಯ ನಾಗರಿಕತೆಯ ಛಾಪು ಇದೆ. ಈ ಮಾನವಿಕ ಶಾಸ್ತ್ರಗಳಲ್ಲಿ ಬಳಸುವ ಪದಗಳು, ಪರಿಕಲ್ಪನೆಗಳು ಹಾಗೂ ವರ್ಗೀಕರಣ ಪದಗಳು ಪಾಶ್ಚಾತ್ಯ ಜಗತ್ತಿನ ಚಾರಿತ್ರಿಕ ಅನುಭವದಿಂದ ರೂಪುಗೊಂಡಿವೆ. ಆದ್ದರಿಂದಲೇ ಅವನ್ನು ಪಶ್ಚಿಮೇತರ ಸಮಾಜ ಗಳಲ್ಲಿ ಬಳಸುವಾಗ ವಿಶೇಷ ಎಚ್ಚರಿಕೆ ವಹಿಸಬೇಕಾಗುತ್ತದೆ. ಮಾನವಿಕ ಶಾಸ್ತ್ರಗಳು ಪಾಶ್ಚಾತ್ಯ ಮೂಲದವು ಎನ್ನುವ ಅರಿವು ನಮ್ಮಲ್ಲಿ ಅನೇಕರಿಗೆ ಇದ್ದರೂ, ಈ ಕಟುಸತ್ಯದ ಸಾಂಸ್ಕೃತಿಕ ಪರಿಣಾಮಗಳ ಕುರಿತು ಸಾಕಷ್ಟು ಸಂವೇದನಾಶೀಲರಾಗಿಲ್ಲ ಎನ್ನುವುದನ್ನು ಇಲ್ಲಿ ಹೇಳಲೇ ಬೇಕು. ಈ ಮಾತು ವಿಶೇಷತಃ ದೇಶಭಾಷೆಗಳಲ್ಲಿ ಚಿಂತನೆ ಹಾಗೂ ಬರವಣಿಗೆ ನಡೆಸುತ್ತಿರುವ, ಮಾನವಿಕ ಶಾಸ್ತ್ರಗಳನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡ ನಮ್ಮಂತಹ ಅನೇಕರಿಗೆ ಹೆಚ್ಚು ಅನ್ವಯವಾಗುತ್ತದೆ. ನಾವು ಇಂದು ಮಾನವಿಕ ಶಾಸ್ತ್ರಗಳು ಎನ್ನುವ ಹೆಸರಿನಲ್ಲಿ ಗುರುತಿಸುವ ವಿವಿಧ ಶಿಸ್ತುಗಳಲ್ಲಿನ ನಮ್ಮ ಚಟುವಟಿಕೆಗಳಲ್ಲಿ, ಮಾನವಿಕ ಶಾಸ್ತ್ರದ ಪಾಶ್ಚಾತ್ಯ ಉಗಮದ ಸಾಂಸ್ಕೃತಿಕ ಪರಿಣಾಮಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರಿಸುತ್ತಿದ್ದೇವೆ. ಆದ್ದರಿಂದಲೇ ನಮ್ಮ ಪಾಠಕ್ರಮಗಳಲ್ಲಿ ಪಾಶ್ಚಾತ್ಯ ಚಿಂತಕರ ಹೆಸರುಗಳು, ಉಲ್ಲೇಖಗಳು ಹಾಗೂ ಪರಿಭಾಷೆಗಳು ಹೇರಳವಾಗಿ ಕಾಣುತ್ತವೆ. ಉದಾಹರಣೆಗೆ ಯೂನಿವರ್ಸಿಟಿ ಹಾಗೂ ಕಾಲೇಜುಗಳಲ್ಲಿ ರಾಜಕೀಯ ಶಾಸ್ತ್ರವನ್ನು ಪಾಠ ಮಾಡುವ ನಾವು ಡೈಸಿಯವರು ಏನು ಹೇಳುತ್ತಾರೆ, ಲಾಸ್ಕಿಯವರು ರಾಜಕೀಯ ಶಾಸ್ತ್ರವನ್ನು ಹೇಗೆ ವ್ಯಾಖ್ಯಾನಿಸುತ್ತಾರೆ, ಬ್ರೈಸ್, ಬಾರ್ಕರ್,

ಗಿಲ್ ಕ್ರೈಸ್ಟ್ ಮೊದಲಾದವರು ಏನು ಹೇಳುತ್ತಾರೆ ಎಂಬುದರ ಬಗ್ಗೆಯೇ ಹೆಚ್ಚು ಕಾಲಹರಣ ಮಾಡುತ್ತೇವೆ. ಯಾವುದೇ ಪದ ಅಥವಾ ಪರಿಕಲ್ಪನೆಯನ್ನು ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಮರುವ್ಯಾಖ್ಯಾನಿಸಿದರೆ ಮಾತ್ರ ಅದಕ್ಕೆ ಅರ್ಥವಂತಿಕೆ ಇರುತ್ತದೆ, ಎನ್ನುವ ಸರಳಸತ್ಯ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಇದು ಬಹುಶಃ ಪಾಶ್ಚಾತ್ಯ ಜಗತ್ತಿನ ವಿಚಾರಗಳಿಗೆ ನಾವು ಸಂಪೂರ್ಣವಾಗಿ ದಾಸರಾಗಿರುವುದಕ್ಕೆ ಸಂಕೇತವಾಗಿದೆ. ಮೇಲೆ ಹೇಳಿದ ಲೇಖಕರನ್ನಾಗಲೀ ಅವರ ವಿಚಾರಗಳನ್ನಾಗಲೀ ಪ್ರಸ್ತಾಪಿಸಬಾರದು ಎನ್ನುವುದು ಈ ಮಾತಿನ ಅರ್ಥವಲ್ಲ. ಬದಲಾಗಿ ಅವರನ್ನು ನಾವು ಯಾಕೆ, ಎಷ್ಟು ನಮ್ಮ ಸಂದರ್ಭಕ್ಕೆ ಸೂಕ್ತವಾಗುವಂತೆ ಬಳಸಿಕೊಳ್ಳಬೇಕು ಎನ್ನುವುದರ ಬಗ್ಗೆ ನಮ್ಮಲ್ಲಿ ಪ್ರಜ್ಞೆ ಇಲ್ಲದಿರುವುದನ್ನು ಸೂಚಿಸುವುದಕ್ಕೆ ಈ ಮಾತುಗಳನ್ನು ಹೇಳಿದ್ದೇನೆ.

ಮಾನವಿಕ ಶಾಸ್ತ್ರಗಳು ಮೂಲತಃ ಪಶ್ಚಿಮಜನ್ಯವಾದವು ಎನ್ನುವುದು ಅವುಗಳ ನಿರಾಕರಣೆಗೆ ಕಾರಣವಾಗಬೇಕಿಲ್ಲ. ಈ ಶಾಸ್ತ್ರಗಳು ಪಾಶ್ಚಾತ್ಯ ಜಗತ್ತಿನಲ್ಲಿ ಹೇಗೆ ಹುಟ್ಟಿಕೊಂಡವು ಹಾಗೂ ಯಾವ ರೀತಿಯ ವಿಕಾಸವನ್ನು ಪಡೆದುಕೊಂಡವು ಎನ್ನುವುದನ್ನು ನಾವು ತಿಳಿದುಕೊಳ್ಳಬೇಕು. ಅದರಲ್ಲೂ ಈ ಪಾಶ್ಚಾತ್ಯ ಜಗತ್ತಿನಿಂದ ಹೊಮ್ಮಿಬಂದ ಅತ್ಯಂತ ಶ್ರೇಷ್ಠ ಅಭಿವ್ಯಕ್ತಿಗಳನ್ನು ನಾವು ಸಾಕಷ್ಟು ಶಿಸ್ತಿನಿಂದ ತಿಳಿದುಕೊಳ್ಳಬೇಕು. ಈ ತಿಳುವಳಿಕೆ ಅರ್ಥಪೂರ್ಣವಾದ ಮಾನವಿಕ ಶಾಸ್ತ್ರಗಳನ್ನು ನಮ್ಮ ಸಮಾಜದಲ್ಲಿ ಹುಟ್ಟು ಹಾಕುವುದಕ್ಕೆ ತೀರಾ ಅಗತ್ಯವಾಗಿದೆ. ಈ ಮಾತನ್ನು ಯಾಕೆ ಒತ್ತಿ ಹೇಳಬೇಕಾಗಿದೆ ಎಂದರೆ, 'ಪಾಶ್ಚಾತ್ಯ ಸಮಾಜದಿಂದ ಬಂದವುಗಳು ನಮಗೆ ಬೇಡ, ನಾವು ನಮ್ಮದೇ ಆದ ಸ್ವದೇಶೀಯ ಸರಕನ್ನು ಸೃಷ್ಟಿಸೋಣ' ಎನ್ನುವ ಮಾತುಗಳನ್ನು ಇತ್ತೀಚೆಗೆ ವಿಪರೀತವಾಗಿ ಕೇಳುತ್ತಿದ್ದೇವೆ. ಆದರೆ ಮಾನವಿಕ ಶಾಸ್ತ್ರಗಳು ಪಾಶ್ಚಾತ್ಯ ಜಗತ್ತಿನಿಂದ ಬಂದವುಗಳು ಎನ್ನುವ ಸಂಗತಿ ಒಂದು ಚಾರಿತ್ರಿಕ ವಿದ್ಯಮಾನವಾಗಿ ಮಾತ್ರ ನಮ್ಮ ನೆನಪಿನಲ್ಲಿರಬೇಕಾಗುತ್ತದೆ. ಅದು ಪಾಶ್ಚಾತ್ಯ ಜಗತ್ತು ಈವರೆಗೆ ಸೃಷ್ಟಿಸಿರುವ ಸಂಗತಿಗಳನ್ನು, ಮಾಡಿದ ಸಾಧನೆಗಳನ್ನು ನಾವು ನಿರಾಕರಿಸುವ ನಿಟ್ಟಿನಲ್ಲಿ ಕೆಲಸ ಮಾಡಬಾರದು. ಪಾಶ್ಚಾತ್ಯ ಜಗತ್ತು ತತ್ತ್ವಜ್ಞಾನದಲ್ಲಿ ಹಾಗೂ ವಿಜ್ಞಾನದಲ್ಲಿ ನಾವು ಗಂಭೀರವಾಗಿ ತೆಗೆದುಕೊಳ್ಳಬೇಕಾದ ಸಾಧನೆಗಳನ್ನು ಮಾಡಿದೆ ಎನ್ನುವ ಅರಿವಿನೊಂದಿಗೆ ನಾವು ನಮ್ಮ ಸಮಾಜಕ್ಕೆ ಸೂಕ್ತವಾಗುವ, ನಮ್ಮ ಸಾಂಸ್ಕೃತಿಕ ಪರಿಸರಕ್ಕೆ ಒಗ್ಗಿಕೊಳ್ಳುವ, ನಮ್ಮ ನೆಲದ ಹವಾಮಾನಕ್ಕೆ ಹೊಂದಿಕೆಯಾಗುವ, ನಮ್ಮದೇ ಆದ ಚಿಂತನಾಕ್ರಮಗಳನ್ನು ಬೆಳೆಸಿಕೊಳ್ಳಬೇಕು. ನಮ್ಮ ಸಾಮಾಜಿಕ ಸಾಂಸ್ಕೃತಿಕ ಹಾಗೂ ರಾಜಕೀಯ ಪರಿಸರವನ್ನು ಅರ್ಥವಂತಿಕೆಯಿಂದ ವಿಶ್ಲೇಷಿಸಬಲ್ಲ ಸಂವೇದನಾಶೀಲ ಮಾನವಿಕ ಶಾಸ್ತ್ರಗಳನ್ನು ಹುಟ್ಟು ಹಾಕಿಲ್ಲ ಎನ್ನುವುದನ್ನು ನಮ್ಮ ಅನೇಕ ವಿವೇಕಶೀಲ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಇದು ನಮ್ಮ ಸಾಮಾಜಿಕ ರಾಜಕೀಯ ಬದುಕಿನ ಸಂಕೀರ್ಣತೆ ಹಾಗೂ ವೈರುಧ್ಯಗಳನ್ನು ನಿಖರವಾಗಿ ಗುರುತಿಸುವಲ್ಲಿ ಹಾಗೂ ಅವುಗಳ ಬಗ್ಗೆ ಸಮರ್ಪಕವಾದ ವಿಮರ್ಶೆಯನ್ನು ಒದಗಿಸುವಲ್ಲಿ ನಾವು ಸೋತಿರುವ ಸಂಕೇತ. ಮಾನವಿಕ ಶಾಸ್ತ್ರಗಳ ವಿವಿಧ ಶಿಸ್ತಿನ ಅಡಿಯಲ್ಲಿ

ನಾವು ನಡೆಸುವ ಚಟುವಟಿಕೆಗಳು, ಪಾಶ್ಚಾತ್ಯ ಅನುಭವವನ್ನು ಪ್ರತಿಧ್ವನಿಸುವಂತೆ ಕಾಣಿಸಿಕೊಳ್ಳುತ್ತವೆ. ನಮ್ಮ ಮಾನವಿಕ ಶಾಸ್ತ್ರಗಳ ಭೌತಿಕ ನೆಲೆಗಳು ಪಾಶ್ಚಾತ್ಯ ನಾಗರಿಕತೆಯ ಚರಿತ್ರೆಯಲ್ಲಿ ಹೂತು ಹೋಗಿರುವುದರಿಂದಲೇ, ಯಾವುದೇ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ವಿದ್ಯಮಾನಗಳಿಗೆ ನಮ್ಮದೇ ಆದ ನೈಜ ಪ್ರತಿಕ್ರಿಯೆ ಅಥವಾ ಪ್ರತಿಸ್ಪಂದನವನ್ನು ನಾವು ಕೊಡಲಾರದೆ ಹೋಗಿದ್ದೇವೆ.

ಮಾನವಿಕ ಶಾಸ್ತ್ರಗಳ ಸದ್ಯದ ನಮ್ಮ ಸಂಕಟದ ಕುರಿತು ನಮ್ಮ ಅನೇಕ ಸಂವೇದನಾಶೀಲ ಮಾನವಿಕ ಶಾಸ್ತ್ರಜ್ಞರು ವಿಚಾರ ಮಾಡಿದ್ದಾರೆ. ಸಂಕಟದ ಅನೇಕ ಮಜಲುಗಳನ್ನು ಎತ್ತಿ ತೋರಿಸಿದ್ದಾರೆ. ಈ ಸಂಕಟವನ್ನು, ಅಂದರೆ ಪಶ್ಚಿಮಜನ್ಯವಾದ ತತ್ತ್ವವನ್ನು ಅದರ ಜನ್ಮಸ್ಥಾನದಿಂದ ಇನ್ನೊಂದು ಕಡೆಗೆ ವರ್ಗಾಯಿಸುವಾಗ ಎದ್ದು ಬರುವ ಸಮಸ್ಯೆ ಹಾಗೂ ಆತಂಕಗಳನ್ನು, ಕುರಿತು ವಿದ್ವಾಂಸರು ನಡೆಸಿರುವ ವಾಙ್ಮಯವನ್ನು, 'ತತ್ತ್ವದ ವರ್ಗಾವಣೆ'ಯ ಸಮಸ್ಯೆ (The problem of transfer of Theory) ಎಂದು ಗುರುತಿಸಲಾಗಿದೆ. ಈ ವಾಙ್ಮಯದಲ್ಲಿ ಅನೇಕ ಸೂಕ್ಷ್ಮ ಸಂಗತಿಗಳಿವೆ. ಸದ್ಯಕ್ಕೆ ಇಲ್ಲಿ ತತ್ತ್ವದ ವರ್ಗಾವಣೆಯ ಚಟುವಟಿಕೆಯ ಒಂದು ಪ್ರಮುಖ ಅಂಶದ ಕುರಿತು ಹೇಳಬಹುದು. ಯಾವುದೇ ತತ್ತ್ವ, ಸಿದ್ಧಾಂತ ಅಥವಾ ಚಿಂತನಾಕ್ರಮವು ತನ್ನ ಅರ್ಥವಂತಿಕೆ ಪಡೆಯುವುದು, ಅದು ತಾನು ಪ್ರಚಲಿತದಲ್ಲಿರುವ ಸಮಾಜದ ಸಂಗತಿಗಳಿಗೆ ಪ್ರತಿಸ್ಪಂದಿಸಿದಾಗ ಮಾತ್ರ; ಈ ಅರ್ಥದಲ್ಲಿ ಮಾನವಿಕ ಶಾಸ್ತ್ರಗಳು ಬಳಸುವ ಪದ ಹಾಗೂ ಪರಿಕಲ್ಪನೆಗಳಿಗೆ ಅರ್ಥ ಬರುವುದು, ಅವನ್ನು ನಾವು ನಮ್ಮ ಸಂದರ್ಭಕ್ಕೆ ಮರುವ್ಯಾಖ್ಯಾನಿಸಿಕೊಂಡಾಗ ಮಾತ್ರ. ಈ ಮರುವ್ಯಾಖ್ಯಾನ ಬಹಳ ಜಾಗ್ರತೆಯಿಂದ ಹಾಗೂ ಸಂವೇದನಾಶೀಲತೆಯಿಂದ ನಡೆಯಬೇಕಾದ ಕ್ರಿಯೆ.

ನಾವು ಈ ದೇಶದಲ್ಲಿ ಕಳೆದ ೫೦ ವರ್ಷಗಳಲ್ಲಿ ಇಂತಹ ಸಂವೇದನಾಶೀಲವಾದ ಮರುವ್ಯಾಖ್ಯಾನದ ಚಟುವಟಿಕೆಯನ್ನು ನಡೆಸಿಲ್ಲ ಎನ್ನುವುದು ಖೇದದ ಸಂಗತಿ. ಯಾಂತ್ರಿಕವಾಗಿ ನಾವು ಪದಗಳನ್ನು ಬಳಸುತ್ತೇವೆ. ಅಷ್ಟೇ ಯಾಂತ್ರಿಕವಾಗಿ ಆದರೆ ನಿರರ್ಗಳವಾಗಿ ಪರಿಕಲ್ಪನೆಗಳನ್ನು ಎಸೆದುಬಿಡುತ್ತೇವೆ. ನಮ್ಮ ರಾಜಕೀಯ ಶಾಸ್ತ್ರವಂತೂ ಈ ಅರ್ಥಹೀನ ಯಾಂತ್ರಿಕ ಪದಗಳ ಹಾಗೂ ಪರಿಕಲ್ಪನೆಗಳ ಒಂದು ರಾಶಿಯಾಗಿ ಕಾಣಿಸುತ್ತದೆ. ನಮ್ಮ ಬೋಧನೆ-ಸಂಶೋಧನೆಗಳಲ್ಲಿ ಪದ ಹಾಗೂ ಪರಿಕಲ್ಪನೆಗಳನ್ನು ಎಷ್ಟು ಲೀಲಾಜಾಲವಾಗಿ ಬಳಸುತ್ತೇವೆ ಎಂದರೆ, ಆ ಪದಗಳ ಬಗ್ಗೆ ಯಾವ ರೀತಿಯ ಪ್ರತಿಫಲವನ್ನೂ ಮಾಡುವುದಿಲ್ಲ. ಆ ಪದ ಅಥವಾ ಪರಿಕಲ್ಪನೆಗಳು ನಮ್ಮ ಸಂದರ್ಭಕ್ಕೆ ಸೂಕ್ತವಾದುವೇ ಎನ್ನುವ ಪ್ರಶ್ನೆಯನ್ನು ಕೇಳುವುದಿಲ್ಲ. ಉದಾಹರಣೆಗೆ 'ಲಿಬರಲಿಸಂ' ಅನ್ನುವ ಒಂದು ಪಾಶ್ಚಾತ್ಯ ಚಿಂತನಕ್ರಮವನ್ನು 'ಉದಾರವಾದ' ಎಂದು ಸಲೀಸಾಗಿ ಕರೆದುಬಿಡುತ್ತೇವೆ. ನನ್ನ ಗೆಳೆಯರೊಬ್ಬರು ಹೇಳಿದರು: ಔದಾರ್ಯವೇ ಇಲ್ಲದ ಚಿಂತನಾ ಪರಂಪರೆಗೆ ನಾವು 'ಉದಾರವಾದ' ಎನ್ನುತ್ತೇವೆ ಎಂದು. ಅಂತೆಯೇ ನಾವು ಇಂಗ್ಲಿಶ್‌ನಲ್ಲಿ 'ಸೆಕ್ಯುಲರಿಸಂ' ಎಂದು ಗುರುತಿಸುವ ಚಿಂತನೆಯನ್ನು 'ಧರ್ಮನಿರಪೇಕ್ಷತೆ' ಅಥವಾ 'ಜಾತ್ಯತೀತತೆ' ಎಂದು ಕರೆಯುತ್ತೇವೆ. ಮೇಲಿನ ಎರಡೂ

ಕನ್ನಡೀಕರಣಗಳು ಕೇವಲ ಭಾಷಿಕ ನೆಲೆಯಲ್ಲಿ ಮಾಡಿದಂಥವುಗಳು. ಈ ಪರಿಕಲ್ಪನೆಗಳು ಪಾಶ್ಚಾತ್ಯ ಜಗತ್ತಿನಲ್ಲಿ ಹೇಗೆ ಮತ್ತು ಯಾಕೆ ಹುಟ್ಟಿದವು, ಯಾವ ರೀತಿಯ ಬೆಳವಣಿಗೆಯನ್ನು ಪಡೆದವು ಎನ್ನುವುದರ ಕುರಿತು ಯೋಚಿಸಿದಂತೆ ಕಾಣುವುದಿಲ್ಲ. 'ಸ್ಟೇಟ್'ಗೆ 'ರಾಜ್ಯ ಸಿವಿಲ್ ಸೊಸೈಟಿ'ಗೆ 'ನಾಗರಿಕ ಸಮಾಜ' ಎನ್ನುವ ಪದಗಳನ್ನು ನಿರರ್ಗಳವಾಗಿ ಬಳಸುತ್ತೇವೆ. ಪದಗಳಿಗೆ ಚಾರಿತ್ರಿಕ ಬೆಳವಣಿಗೆಯಿರುತ್ತವೆ. ಅನೇಕ ಅರ್ಥಛಾಯೆಗಳಿರುತ್ತವೆ. ಅವು ಕಾಲಾಂತರದಲ್ಲಿ ಮಾರ್ಪಾಡನ್ನು ಹೊಂದುತ್ತವೆ ಎನ್ನುವ ಸರಳ ಸತ್ಯ ನಮಗೆ ಗೋಚರಿಸು ವುದೇ ಇಲ್ಲ. ಯಾಂತ್ರಿಕವಾದ ಪ್ರತಿಫಲನಾರಹಿತವಾದ ಮಾನವಿಕ ಶಾಸ್ತ್ರಗಳ ನಿರ್ವಹಣೆ ಯನ್ನು ಮಾಡುತ್ತಿದ್ದೇವೆ ಎನ್ನುವುದಕ್ಕೆ ಮೇಲಿನ ಉದಾಹರಣೆಗಳೇ ಸಾಕ್ಷಿ. ವಿಶೇಷವಾಗಿ ರಾಜಕೀಯ ಶಾಸ್ತ್ರದಲ್ಲಿ ನಾವು ನಡೆಸುತ್ತಿರುವ ಅಧ್ಯಯನಗಳು, ಪಾಠ ಮಾಡುವ ರೀತಿ, ಓದುವ ಕ್ರಮ ತೀರಾ ಅನುಚಿತವಾದದ್ದೆಂದೇ ನನ್ನ ಅನಿಸಿಕೆ. ಆದ್ದರಿಂದಲೇ ನಮ್ಮ ಪರಿಸರದ ಬಗ್ಗೆ, ಸಾಮಾಜಿಕ, ರಾಜಕೀಯ ಸ್ಥಿತಿಗಳ ಬಗ್ಗೆ, ಸಾಂಸ್ಕೃತಿಕ ತಲ್ಲಣಗಳ ಬಗ್ಗೆ, ಚಿಂತಕರ ಬಗ್ಗೆ ಜಗತ್ತನ್ನು ಬೆರಗಾಗಿಸುವ ಸೃಷ್ಟಿಯನ್ನು ನಾವು ಮಾಡಿಲ್ಲ. ತೀರಾ ಯಾಂತ್ರಿಕವಾದ ಔಪಚಾರಿಕವಾದ, ನಮ್ಮ ಸಂದರ್ಭಕ್ಕೆ ಅವಾಸ್ತವವಾದ ರೀತಿಯಲ್ಲಿ ಅಧ್ಯಯನವನ್ನು ನಡೆಸುತ್ತಿದ್ದೇವೆ; ನಾವು ಓದುವ, ಕಲಿಸುವ ಮಾನವಿಕ ಶಾಸ್ತ್ರಗಳಲ್ಲಿ ಯಾವ ಹೊಳಹೂ ನಮ್ಮ ವ್ಯಕ್ತಿತ್ವವನ್ನು ಹಾಗೂ ಬದುಕನ್ನು ಪ್ರವೇಶಿಸಿಲ್ಲ; ನಮ್ಮದಲ್ಲದ, ನಮಗೆ ಸಂಬಂಧ ಪಡದ, ನಮ್ಮ ಮೇಲೆ ಒತ್ತಾಯಪೂರ್ವಕವಾಗಿ ಹೇರಿದ ಕಸುಬೊಂದನ್ನು ಕಷ್ಟದಿಂದ ನಿರ್ವಹಿಸುತ್ತಿರುವಂತೆ ವರ್ತಿಸುತ್ತಿದ್ದೇವೆ.

ಕರ್ನಾಟಕದ ರಾಜಕೀಯ ಶಾಸ್ತ್ರದ ಓದು ಬರಹ ಬೋಧನೆ ಸಂಶೋಧನೆಗಳ ಮೇಲೆ ಪಕ್ಷಿನೋಟ ಹರಿಸಿದಾಗ, ಮೇಲಿನ ಮಾತುಗಳ ಸತ್ಯ ಅರಿವಿಗೆ ಬರುತ್ತದೆ. ಕಳೆದ ೫೦ ವರ್ಷಗಳಲ್ಲಿ ಒಂದು ಸೃಜನಶೀಲ ಸೃಷ್ಟಿಯನ್ನು ಕರ್ನಾಟಕದ ರಾಜಕೀಯ ಶಾಸ್ತ್ರಜ್ಞರು ಕೊಟ್ಟಿಲ್ಲ. ನಮ್ಮ ಯಾವುದೇ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ವಿದ್ಯಮಾನಗಳ ಬಗ್ಗೆ, ಈ ರಾಜಕೀಯ ಶಾಸ್ತ್ರಜ್ಞರಿಂದ ಹೇಳಿಕೊಳ್ಳುವ ಯಾವುದೇ ವಿಶ್ಲೇಷಣೆಗಳು ಬಂದಿಲ್ಲ. ಬದಲಿಗೆ ತೀರಾ ಸಾಧಾರಣಮಟ್ಟದ, ಸಪ್ಪೆಯಾದ, ಯಾವ ಮಹತ್ತ್ವದ ಹೊಳಹೂ ಇಲ್ಲದ ಅರ್ಥಶೂನ್ಯ ಬರವಣಿಗೆಗಳು ಬೇಕಾದಷ್ಟಿವೆ. ಅವಾವುವೂ ನಮ್ಮ ರಾಜಕೀಯ ಚಿಂತನೆಯನ್ನು ಗುಣಾತ್ಮಕವಾಗಿ ಮೇಲೆತ್ತುವಲ್ಲಿ ಶಕ್ತವಾಗಿಲ್ಲ. ಈ ಮೊದಲೇ ತಿಳಿಸಿದಂತೆ ಪಶ್ಚಿಮದ ಯಾರಾದರೊಬ್ಬ ರಾಜಕೀಯ ಶಾಸ್ತ್ರಜ್ಞನು ಕೊಟ್ಟ ವ್ಯಾಖ್ಯಾನವನ್ನು ನಾವು ಗಿಳಿಪಾಠ ಒಪ್ಪಿಸು ತ್ತೇವೆ. ನಾವು ಬಳಸುವ ಪದಗಳನ್ನು, ಪರಿಕಲ್ಪನೆಗಳನ್ನು ಹಾಗೂ ವರ್ಗೀಕರಣ ಪದಗಳನ್ನು ವಿಮರ್ಶಿಸುವ, ಅವುಗಳ ಸಾಮಂಜಸ್ಯತೆಯನ್ನು ಪರೀಕ್ಷಿಸುವ ಕೆಲಸವನ್ನು ಮಾಡಿಲ್ಲ. ಒಟ್ಟಿನಲ್ಲಿ ಒಂದು ಬಗೆಯ 'ಬಿಕೋ' ಎನಿಸುವ ವಾತಾವರಣ ಕರ್ನಾಟಕದ ಸಂದರ್ಭದಲ್ಲಿ ಮಾನವಿಕ ಶಾಸ್ತ್ರದ ವಿವಿಧ ಶಿಸ್ತುಗಳ ಚಟುವಟಿಕೆಗಳಲ್ಲಿ ಕಾಣಸಿಗುತ್ತದೆ.

ಪಶ್ಚಿಮಜನ್ಯವಾದ ಮಾನವಿಕ ಶಾಸ್ತ್ರಗಳನ್ನು ಹಾಗೂ ಅವುಗಳ ಚಾರಿತ್ರಿಕ ನೆಲೆಗಳನ್ನು

ನಾವು ತಿರಸ್ಕರಿಸಿ ನಮ್ಮದೇ ನೆಲೆಯ ಮಾನವಿಕ ಶಾಸ್ತ್ರಗಳನ್ನು ಬೆಳೆಸಬೇಕು ಎನ್ನುವ ವಾದವನ್ನು ಅತಿರೇಕಕ್ಕೆ ತೆಗೆದುಕೊಂಡು ಹೋಗುವಂತಿಲ್ಲ. ಮಾನವಿಕ ಶಾಸ್ತ್ರ ಎಂಬ ಕಲ್ಪನೆಯೇ ಪಶ್ಚಿಮದಾದ್ದರಿಂದ, ನಮ್ಮ ನೆಲೆಯ ನಮ್ಮ ವಾಸ್ತವಕ್ಕೆ ಪ್ರತಿಸ್ಪಂದಿಸುವ ಮಾನವಿಕ ಶಾಸ್ತ್ರಗಳು ಪಶ್ಚಿಮದಿಂದ ಸಂಪೂರ್ಣವಾಗಿ ಪ್ರತ್ಯೇಕಿಸಲ್ಪಟ್ಟದ್ದಾಗಿರಲಾರದು ಅಥವಾ ಪಶ್ಚಿಮದ ಸಂಪೂರ್ಣ ನಿರಾಕರಣೆಯ ನೆಲೆಯದ್ದೂ ಆಗಿರಲಾರದು. ಕನಿಷ್ಟ ೧೯೦ ವರ್ಷಗಳ ವಸಾಹತುಶಾಹಿಯ ಚರಿತ್ರೆಯಿರುವ ನಾವು ಅಷ್ಟು ಪರಿಶುದ್ಧವಾದ, ನಮ್ಮದೇ ಆದ ಯಾವುದನ್ನೂ ಸೃಷ್ಟಿಸಲಾರೆವು, ಸೃಷ್ಟಿಸಬೇಕಾಗಿಯೂ ಇಲ್ಲ. ಎರಡು ಶತಮಾನಗಳ ವಸಾಹತುಶಾಹಿಯ ಚರಿತ್ರೆಯಲ್ಲಿ ನಡೆದ ಆಯಾತ ನಿರ್ಯಾತಗಳ ಪ್ರಕ್ರಿಯೆಯಲ್ಲಿ 'ಪರಿಶುದ್ಧ ಭಾರತೀಯ'ವಾದದ್ದನ್ನು ಕಲ್ಪಿಸುವುದು ಆಧುನಿಕ ಸ್ವದೇಶೀವಾದಿಗಳಿಗೆ ಮಾತ್ರ ಸಾಧ್ಯ. ಅವರೂ ನಿಜಕ್ಕೂ ಎಷ್ಟು 'ಸ್ವದೇಶಿ' ಎನ್ನುವುದು ಬೇರೆಯದೇ ಆದ ಚರ್ಚೆ. ಅದೇನೇ ಇದ್ದರೂ 'ಅಂತಃಸತ್ತ್ವವಾದ' (Essentialism)ದ ನೆಲೆಯಲ್ಲಿ ಮಂಡಿಸಲ್ಪಡುವ ಸ್ವದೇಶಾಭಿಮಾನದ ಅನುಯಾಯಿ ನಾನಲ್ಲ. ಆದರೆ ನಮ್ಮ ಸಾಮಾಜಿಕ ಸಾಂಸ್ಕೃತಿಕ ಸಂದರ್ಭಕ್ಕೆ ಸೂಕ್ತವಾದ ನಮ್ಮ ನೆಲದ ಹವಾಮಾನಕ್ಕೆ ಒಗ್ಗುವ ನಮ್ಮ ಸ್ವಂತಿಕೆಯನ್ನು ಪ್ರತಿಫಲಿಸುವ ಚಿಂತನಾಕ್ರಮಗಳು ನಮಗೆ ಬೇಕು ಎನ್ನುವುದನ್ನು ಗಟ್ಟಿಯಾಗಿ ನಂಬಿದವನು. ನಾನು ಕಲಿಯುವ, ಕಲಿಸುವ ರಾಜಕೀಯ ಶಾಸ್ತ್ರ ನನ್ನ ಸಮಾಜದ ಸಮಸ್ಯೆಗಳಿಗೆ ಸ್ಪಂದಿಸಬೇಕು. ಅಂತಹ ಅರ್ಥಪೂರ್ಣ ಪ್ರತಿಫಲನಾತ್ಮಕ ರಾಜಕೀಯ ಶಾಸ್ತ್ರವನ್ನು ನಾವು ರೂಪುಗೊಳಿಸಬೇಕು. ಈ ರೂಪುಗೊಳಿಸುವಿಕೆ ನಮ್ಮ ಸ್ವಂತಿಕೆಯ ಹುಡುಕಾಟವೂ ಹೌದು.

ಕನ್ನಡದಲ್ಲಿ ಮಾನವಿಕ ಶಾಸ್ತ್ರೀಯ ಚಿಂತನೆ ಬಡಕಲಾಗಿರುವುದಕ್ಕೆ ಇನ್ನೊಂದು ಕಾರಣವನ್ನು ಕೊಡಬಹುದು. ಬಹುತೇಕ ಓದುಬರಹ ಬಲ್ಲ ಕನ್ನಡದ ಜನವರ್ಗದಲ್ಲಿ ಮಾನವಿಕ ಶಾಸ್ತ್ರಗಳ ಬಗ್ಗೆ ಒಂದು ಅಪಕಲ್ಪನೆಯಿದೆ. ಅದೆಂದರೆ- 'ಸಮಾಜಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು ಅಥವಾ ರಾಜಕೀಯ ಶಾಸ್ತ್ರಜ್ಞರು ಸಮಾಜದ ವಸ್ತುಸತ್ಯಾಂಶಗಳನ್ನು ಸಂಗ್ರಹಿಸುವವರು, ಅವರು ಸಮಾಜದ ಸ್ಥಿತಿಗತಿಗಳ ಬಗ್ಗೆ ಒಂದಿಷ್ಟು ಅಂಕಿಅಂಶಗಳನ್ನು ಒದಗಿಸಬಲ್ಲರೇ ಹೊರತು, ಸಾಂಸ್ಕೃತಿಕ ಜಗತ್ತಿನ ಅಂತರಾಳವನ್ನು ಹೊಕ್ಕು ಅದರ ವಿಶ್ಲೇಷಣೆಯನ್ನು ಮಾಡಲಾರರು' ಎನ್ನುವುದು. 'ಸಾಂಸ್ಕೃತಿಕ ಬದುಕಿನ ವಿಶ್ಲೇಷಣೆ ಕೇವಲ ಸಾಹಿತಿಗಳಿಗೆ ಸಂಬಂಧಪಟ್ಟದ್ದು, ಅವರು ಮಾತ್ರ ಸಂಸ್ಕೃತಿಯ ಶೋಧನೆಯನ್ನು ಮಾಡುವ ಶಕ್ತಿಯಿದ್ದವರು, ಅವರಿಗೆ ಮಾತ್ರ ಮಾನವ ಸಂಬಂಧಗಳ ಸೂಕ್ಷ್ಮಾತಿಸೂಕ್ಷ್ಮತೆಗಳನ್ನು ಗ್ರಹಿಸಲು ಸಾಧ್ಯ' ಎನ್ನುವ ಸಾಹಿತ್ಯ ಭೂಯಿಷ್ಠ ಗ್ರಹೀತಗಳು ನಮ್ಮಲ್ಲಿ ವ್ಯಾಪಕವಾಗಿ ಕಂಡುಬರುತ್ತವೆ. ಸಾಹಿತ್ಯದ ಈ ಒಂದು ಬಗೆಯ 'ಸಾಂಸ್ಕೃತಿಕ ಪ್ರಭುತ್ವ' ವಿಶೇಷವಾಗಿ ಕನ್ನಡದಲ್ಲಿ ಕಣ್ಣಿಗೆ ಕಟ್ಟುವಂತೆ ಇದೆ. ಅಂತೆಯೇ ಆಧಿಪತ್ಯದ ಆಶೀರ್ವಾದವೂ ಸಾಹಿತ್ಯದ ಚಟುವಟಿಕೆಗೆ ಇದೆ. ಇದರಿಂದಾಗಿ ಮಾನವಿಕ ಶಾಸ್ತ್ರದ ಚಿಂತನಾಕ್ರಮಗಳು ಬದಿಗೆ ಸರಿಸಲ್ಪಟ್ಟಿವೆ. ಬಹುಶಃ ಕನ್ನಡದಲ್ಲಿ ಅರ್ಥಪೂರ್ಣವಾದ ಶಕ್ತಿಯುತವಾದ ಪ್ರತಿಫಲನಾತ್ಮಕವಾದ

ಮಾನವಿಕ ಶಾಸ್ತ್ರದ ಚಿಂತನಾ ಕ್ರಮವನ್ನು ಚಾಲ್ತಿಗೆ ತರುವುದಾದರೆ, ಸಾಹಿತ್ಯದ ಈ ಸಾಂಸ್ಕೃತಿಕ ಪ್ರಭುತ್ವದ ವಿರುದ್ಧವೂ ಹೋರಾಟ ನಡೆಸಬೇಕಾಗುತ್ತದೆ. ಈ ಮಾತಿನ ಅರ್ಥ ಕನ್ನಡದಲ್ಲಿ ಅರ್ಥಪೂರ್ಣವಾದ ಮಾನವಿಕ ಶಾಸ್ತ್ರಗಳ ಅನುಪಸ್ಥಿತಿಗೆ ಸಾಹಿತ್ಯದ ಪ್ರಭುತ್ವವೇ ಕಾರಣ ಎಂದಲ್ಲ. ನಮ್ಮ ಮಾನವಿಕ ಶಾಸ್ತ್ರಜ್ಞರು ನಿರುಪಯುಕ್ತವಾದ ಅನೇಕ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಅವರು ತಮ್ಮ ಕಸುಬಿನ ಅರ್ಥವಂತಿಕೆಯ ಬಗೆಗೆ ಮೂಲಜಿಜ್ಞಾಸೆಯನ್ನು ನಡೆಸಬೇಕು. ಹಾಗೂ ತಮ್ಮ ವಾಸ್ತವದ ಸಾಂಸ್ಕೃತಿಕ ಸಮಸ್ಯೆಗಳನ್ನು ನೇರವಾಗಿ ಎದುರಿಸಬೇಕು.

●

## ಭಾಷೆ: ಮಾಧ್ಯಮವೇ ಹೊರತು ಹೊರೆಯಲ್ಲ

● ಶರತ್ ಅನಂತಮೂರ್ತಿ

ಹಲವಾರು ವರ್ಷ ಪಿಎಚ್.ಡಿ. ಅಧ್ಯಯನಕ್ಕೆಂದು ಅಮೇರಿಕಾದಲ್ಲಿದ್ದು ಹಿಂದಿರುಗಿದಾಗ, ನನಗೆ ಮೊದಲಿಗೆ ಸಿಕ್ಕ ಎಲ್ಲಾ ಕೆಲಸಗಳು ಬೆಂಗಳೂರಿನ ಉನ್ನತ ಸಂಶೋಧನಾ ಸಂಸ್ಥೆಗಳಲ್ಲಿ. ಮನೆ ಮಾತು ಕನ್ನಡವಾಗಿದ್ದರೂ, ಇಂಗ್ಲಿಶಿನಲ್ಲೇ ಅಭ್ಯಸಿಸಿದ್ದ ಹಾಗೂ ಅಮೇರಿಕಾದಲ್ಲಿ ಕಲಿಯುತ್ತಿದ್ದ ಕಾರಣದಿಂದ, ಇತರರೊಡನೆ ಸಂಪರ್ಕಿಸುವಾಗಲೂ ನಾನು ಹೆಚ್ಚಾಗಿ ಇಂಗ್ಲಿಶನ್ನೇ ಬಳಸುತ್ತಿದ್ದೆ. ನಾನು ಮನೆ ಮಾತಾದ ಕನ್ನಡ ಭಾಷೆ ಹಾಗೂ ನನ್ನ ಅಧ್ಯಯನದ ವಿಷಯವಾದ ಭೌತಶಾಸ್ತ್ರದ ನಡುವಿನ ಸಂಬಂಧದ ಬಗ್ಗೆಯಾಗಲೀ, ಇತರ ಪ್ರಾಂತೀಯ ಭಾಷೆಗಳಲ್ಲಿ ಕಲಿತು ಅನಂತರ ತಮ್ಮ ಕ್ಷೇತ್ರದಲ್ಲಿ ಸಂಪರ್ಕಕ್ಕಾಗಿ ಬೇರೆ ಭಾಷೆಗಳನ್ನು (ಮುಖ್ಯವಾಗಿ ಇಂಗ್ಲಿಶ್) ಬಳಸುವವರ ಕಷ್ಟಗಳ ಬಗ್ಗೆಯಾಗಲೀ ಹೆಚ್ಚಿನ ಗಮನ ಹರಿಸಿರಲಿಲ್ಲ. ಅಮೇರಿಕಾದಲ್ಲಿದ್ದಾಗ, ನನ್ನ ಸಹೋದ್ಯೋಗಿಗಳಾಗಿದ್ದ ಕೆಲವು ಭಾಗತೀಯರೂ ಹೆಚ್ಚಾಗಿ ಮಧ್ಯಮ ವರ್ಗದವರಾಗಿದ್ದರು. ಇಂಗ್ಲಿಶ್ ಬಳಕೆಯಿರುವ ಮನೆಗಳಿಂದ ಬಂದವರಾಗಿದ್ದರು. ತರಗತಿಯಲ್ಲಿದ್ದ ಇತರ ಚೀನೀ ವಿದ್ಯಾರ್ಥಿಗಳು ಇಂಗ್ಲಿಶನ್ನು ಹೇಗೋ ಕಲಿತು, ತಡವರಿಸುತ್ತಾ ಮಾತನಾಡುವವರಾಗಿದ್ದರೂ, ಅವರು ಹೆಚ್ಚಾಗಿ ತಮ್ಮ ಅಧ್ಯಯನದ ವಿಷಯವಾದ ಭೌತಶಾಸ್ತ್ರವನ್ನು ತಮ್ಮದೇ ಭಾಷೆಯಲ್ಲಿ ಕಲಿತವರಾಗಿದ್ದರಿಂದ, ಅವರ 'ವಿಷಯ ಜ್ಞಾನ' ಉತ್ತಮಗುಣಮಟ್ಟದ್ದೇ ಆಗಿರುತ್ತಿತ್ತು. ಇಲ್ಲಿನ ಸಂಶೋಧನಾ ಕೇಂದ್ರಗಳಲ್ಲಿ ಕೆಲಸ ಮಾಡುತ್ತಿದ್ದ, ಸಾಧಾರಣ ಇಂಗ್ಲಿಶ್ ಮಾತನಾಡುತ್ತಿದ್ದ ಬಂಗಾಳಿಯರು ಕೂಡ, ತಮ್ಮ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿ, ಉನ್ನತ ಶಿಕ್ಷಣವನ್ನು ಇಂಗ್ಲಿಶ್‌ನಲ್ಲಿ ಮಾಡಿ, ಅದರಿಂದ ಸಾಕಷ್ಟು ಸಮಸ್ಯೆಗಳನ್ನು ಎದುರಿಸಿದ್ದರು. ಅವರಲ್ಲಿ ಅದರ ಬಗ್ಗೆ ಹಿಂಜರಿಕೆಯಿದ್ದರೂ, ತಮ್ಮ ಬಂಗಾಳಿ ಭಾಷಾ-ಸಂಸ್ಕೃತಿಯ ಜ್ಞಾನ ಮತ್ತು ಅರಿವು ಅವರನ್ನು

ಅವರ ಇಂಗ್ಲಿಶಿನ ಅಭಾವದ ಬಗ್ಗೆ ಹೆಚ್ಚಿನ ಪ್ರಾಮುಖ್ಯತೆ ಕೊಡದಿರುವಂತೆ ಮಾಡುತ್ತಿತ್ತು.

ಪಾಠ, ಪ್ರವಚನ ಯಾವತ್ತೂ ನನ್ನ ಇಷ್ಟದ ವಿಷಯವಾದ್ದುದರಿಂದ, ಸಂಶೋಧನೆಗೂ ಅವಕಾಶವಿದ್ದುದರಿಂದ ನಾನು ಭೌತಶಾಸ್ತ್ರವನ್ನು ಎಂಎಸ್‌ಸಿ ಮಟ್ಟದಲ್ಲಿ ಹೇಳಿಕೊಡಲು ವಿಶ್ವವಿದ್ಯಾನಿಲಯವನ್ನು ಸೇರಿದೆ. ಆ ಸಮಯದಲ್ಲಿ ನನಗೆ, ವಿದ್ಯಾರ್ಥಿಗಳು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯದೇ ಅಥವಾ ಕೆಳಮಟ್ಟದ ಇಂಗ್ಲಿಶ್ ಮಾಧ್ಯಮ ಶಾಲೆಗಳಲ್ಲಿ ಕಲಿತು, ಅವರ ಎಂಎಸ್‌ಸಿ ಅಧ್ಯಯನವನ್ನೆಲ್ಲಾ ಇಂಗ್ಲಿಶ್‌ನಲ್ಲೇ ಮಾಡಬೇಕಾಗಿ ಬಂದಾಗ, ಅವರ ಭಾಷೆಗೂ ಅಧ್ಯಯನದ ವಿಷಯಕ್ಕೂ ಇರುವ ತಾರತಮ್ಯದ ಪರಿಣಾಮ ಹಾಗೂ ಬಿಕ್ಕಟ್ಟಿನ ಸ್ಥಿತಿಯ ಅರಿವಾಯಿತು. ಭೌತಶಾಸ್ತ್ರದಲ್ಲಿರುವ ಅಮೂರ್ತ ಸ್ವರೂಪವನ್ನೂ ಉದಾಹರಣೆಗಳನ್ನೂ ಹೇಳಿಕೊಡುವಾಗ ಎದುರಾಗುವ ಸಮಸ್ಯೆಗಳೇನು? ಹೀಗೆ ಎದುರಾಗುವ ಸಮಸ್ಯೆಗಳು ಕೇವಲ ಒಂದು 'ಭಾಷೆ'ಯಲ್ಲಿರುವ ಮಿತಿಯೋ ಅಥವಾ ನಮ್ಮ ಶಾಲಾ ಕಾಲೇಜುಗಳ ಕಲಿಕೆಯ ಗುಣಮಟ್ಟದ ಮಿತಿಯೋ? ಈ ಬಗ್ಗೆ ನಾನು ಯೋಚಿಸಬೇಕಾಯಿತು.

ನಾನು ಪಾಠ ಮಾಡುವ ತರಗತಿಯ ವಿದ್ಯಾರ್ಥಿಗಳು ಬೇರೆ ಬೇರೆ ಭಾಷಾ ಹಿನ್ನೆಲೆಗಳಿಂದ ಬಂದವರಾಗಿದ್ದರೂ, ಪ್ರಮುಖವಾಗಿ ಇವರೆಲ್ಲಾ ಬೆಂಗಳೂರಿನ ಸುತ್ತಮುತ್ತಲಿನ ಸಣ್ಣಪುಟ್ಟ ಊರು ಅಥವಾ ಹಳ್ಳಿಗಳಿಂದ ಬಂದವರಾಗಿದ್ದಾರೆ. ಇತ್ತೀಚೆಗೆ ದೊಡ್ಡ ನಗರಗಳಲ್ಲಿನ ಇಂಗ್ಲಿಶ್ ಭಾಷಾ ಪ್ರಭಾವ ಹಾಗೂ ಸೌಲಭ್ಯಗಳಿಂದಾಗಿ, ಅಲ್ಲಿನ ವಿದ್ಯಾರ್ಥಿಗಳು ಮುಖ್ಯ ವಾಗಿ ವೃತ್ತಿಪರ ಶಿಕ್ಷಣದ ಕಡೆಗೇ ಮಹತ್ವ ನೀಡುತ್ತಿದ್ದಾರೆ. ಇದರಿಂದ ಸಹಜವಾಗಿ, ವಿಜ್ಞಾನ ಹಾಗೂ ಕಲಾವಿಭಾಗದ ವಿದ್ಯಾರ್ಥಿಗಳು ಹೆಚ್ಚಾಗಿ ಗ್ರಾಮಾಂತರ ಪ್ರದೇಶದವರೇ ಆಗಿರುತ್ತಾರೆ. ಇಂತಹ ವಿದ್ಯಾರ್ಥಿಗಳಿಗೆ ಇಂಗ್ಲಿಶ್, ಮನೆ ಅಥವಾ ಮಾಧ್ಯಮದ ಭಾಷೆಯಾಗಿರದ ಕಾರಣ, ಇಂಗ್ಲಿಶಿನಲ್ಲಿ ಸಂಪರ್ಕಿಸಲು ಹಿಂಜರಿಯುತ್ತಾರೆ. ಉನ್ನತ ಶಿಕ್ಷಣ ಇಂಗ್ಲಿಶ್‌ನಲ್ಲಿರುವುದರಿಂದ ಇವರು ತರಗತಿಯಲ್ಲೂ ತೊಂದರೆಗೊಳಗಾಗುತ್ತಾರೆ. ಇದರ ಜೊತೆಗೇ, ಹಳ್ಳಿಯ ಶಾಲೆ ಗಳಲ್ಲಿ ವಿಜ್ಞಾನವನ್ನು ಸರಿಯಾಗಿ ಕಲಿಸುವ ರೀತಿಯಲ್ಲಿ ಹಾಗೂ ದೊರಕುವ ಸೌಲಭ್ಯಗಳಲ್ಲಿ ಕೊರತೆಯಿರುವುದರಿಂದ, ಅಧ್ಯಯನ ವಿಷಯದ ಮೂಲಭೂತ ಜ್ಞಾನದ ಕೊರತೆಯೂ ಇರುತ್ತದೆ. ಇದು ಪಟ್ಟಣದ ವಿದ್ಯಾರ್ಥಿಗಳ ವಿಷಯದಲ್ಲೂ ಸತ್ಯ. ಇವರಲ್ಲಿ ಕೆಲವರು, ವಿಷಯದ ಬಗ್ಗೆ ಆಳವಾದ ಅಭ್ಯಾಸ ನಡೆಸದಿದ್ದರೂ, ಬರಿಯ ಇಂಗ್ಲಿಶ್ ಭಾಷೆಯ ಪ್ರಭುತ್ವದಿಂದ ತಾವು ಮುಂಬರಬಹುದು ಎಂಬ ಭ್ರಮೆಯಲ್ಲಿರುತ್ತಾರೆ.

ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯದೇ, ಇತರ ಭಾರತೀಯ-ಪ್ರಾಂತೀಯ ಭಾಷಾ ಮಾಧ್ಯಮಗಳಲ್ಲಿ (ಉದಾ: ಕನ್ನಡದಲ್ಲಿ) ವಿದ್ಯಾಭ್ಯಾಸ ಮಾಡಿದವರಿಗೆ, ಉನ್ನತ ವ್ಯಾಸಂಗ ದಲ್ಲಿ ಉಂಟಾಗುವ ತೊಂದರೆಗಳನ್ನು ಅವಲೋಕಿಸಿದರೆ, ಸಿಗುವ ಉತ್ತರಗಳು:

ಮೊದಲನೆಯದಾಗಿ, ಶಾಲಾ ಕಾಲೇಜಿನ ಮಟ್ಟದಲ್ಲಿ ಉತ್ತಮ ಗುಣಮಟ್ಟದ ಕನ್ನಡದ ಪಠ್ಯಪುಸ್ತಕಗಳ ಕೊರತೆ; ಎರಡನೆಯದಾಗಿ, ಇಂಗ್ಲಿಶ್ ಭಾಷೆಯಲ್ಲಿ ಪ್ರಕಟವಾಗುವಷ್ಟು ವೈಜ್ಞಾನಿಕ ಸಾಹಿತ್ಯ (ಪುಸ್ತಕ ಅಥವಾ ಪತ್ರಿಕಾ ರೂಪದಲ್ಲಿ) ಕನ್ನಡದಲ್ಲಿ ಆಗದೇ ಇರುವುದು.

ಈ ಎಲ್ಲದರ ಬಗ್ಗೆ ನಾವು ಎಷ್ಟು ಗಮನ ಹರಿಸಿದರೂ, ಇದು ಕೇವಲ ಅರ್ಧ ಸತ್ಯ. ಭೌತಶಾಸ್ತ್ರದಲ್ಲಿ ಭಾವ ವಿವರಣೆಗೆ ಸಿಲುಕದ ಹಲವು ಅಮೂರ್ತ ಸ್ವರೂಪದ ವಿಷಯಗಳಿರುತ್ತವೆ. ಪ್ರಕೃತಿಯ ವೈಶಿಷ್ಟ್ಯದ ಗ್ರಹಿಕೆಗೆ, ಅದರಲ್ಲೂ 'ಕ್ವಾಂಟಮ್' ಪ್ರಪಂಚದ ಅಧ್ಯಯನಕ್ಕೆ ನಾವು ಹಲವಾರು ಮಾದರಿ (ಮಾಡೆಲ್)ಗಳನ್ನು ಉಪಯೋಗಿಸಬೇಕಾಗುತ್ತದೆ. ಈ ಮಾದರಿಗಳಿಗೆ ಪ್ರಕೃತಿಯಲ್ಲಿ ಹಲವು ಹೋಲಿಕೆಗಳಿದ್ದರೂ, ಇವು ಈ ಹೋಲಿಕೆಗಳನ್ನು ಮೀರಿದ ಆದರ್ಶರೂಪದ ಮಾದರಿಗಳಾಗಿರುತ್ತವೆ. ವಿದ್ಯಾರ್ಥಿಗಳನ್ನು ಪ್ರಾಥಮಿಕ ಮಟ್ಟದಲ್ಲಿಯೇ ಹಲವಾರು ಉದಾಹರಣೆಗಳಿಗೆ ಹಾಗೂ ಸನ್ನಿವೇಶಗಳಿಗೆ ತೆರೆದಿಡುವುದರಿಂದ ಮಾತ್ರ ಇಂತಹ ಮಾದರಿಗಳ ಗ್ರಹಿಕೆ ಸಾಧ್ಯವಾದೀತು. ವಿದ್ಯಾರ್ಥಿಗಳಲ್ಲಿ ಇಂತಹ ಗ್ರಹಿಕಾ ಸಾಮರ್ಥ್ಯ ಬೆಳೆಯಬೇಕೆಂದಾದರೆ, ಅವರು ತಮ್ಮ ಭಾಷೆಯಲ್ಲಿಯೇ ಯೋಚಿಸುವ ವಿಧಾನವನ್ನು ಹುಟ್ಟುಹಾಕಿಕೊಳ್ಳಬೇಕಾಗಿರುವುದು ಅತೀ ಮುಖ್ಯ. ಈ ಯೋಚನಾಕ್ರಮ ವಿಜ್ಞಾನದ ಕಲಿಕೆಗೆ ಮಾತ್ರ ಮೀಸಲಾಗಿರಬೇಕಾಗಿಲ್ಲ. ತಮ್ಮ ಭಾಷೆ-ಸಾಹಿತ್ಯ-ಸಂಸ್ಕೃತಿ-ಚರಿತ್ರೆಯ ಗಹನವಾದ ಅಭ್ಯಾಸ ಕೂಡ ಇದಕ್ಕೆ ಸಹಕಾರಿಯಾದೀತು. ನಾನು ಈ ಮೊದಲೇ ಹೇಳಿದಂತೆ, ಬಂಗಾಳಿಯರ ಉತ್ತಮ ಗುಣಮಟ್ಟದ ಸಾಹಿತ್ಯ-ಚರಿತ್ರೆಯ ಅಭ್ಯಾಸ, ಅವರ ಯೋಚನಾಕ್ರಮಗಳನ್ನು ರೂಪಿಸುವುದಕ್ಕೆ ಸಹಕಾರಿಯಾಗಿದೆ. ಭೌತಶಾಸ್ತ್ರದಲ್ಲಿನ ಅಮೂರ್ತತೆಯನ್ನು ಗ್ರಹಿಸಲು ಅಥವಾ ಅಭ್ಯಸಿಸಲು, ನಮ್ಮ ಸಹಜವಾದ ಸಲೀಸಾದ ಮನೆಮಾತಿನಿಂದಲೇ ಸಾಧ್ಯ ಎಂಬುದರಲ್ಲಿ ನನಗೆ ಈಗ ಯಾವ ಅನುಮಾನವೂ ಇಲ್ಲ.

ಕೊನೆಯದಾಗಿ, ಈ ವಾಸ್ತವ ಪರಿಸ್ಥಿತಿಯನ್ನು ಸುಲಭಗೊಳಿಸಲು ನಾವು ಬಹುಶಃ ನಮ್ಮ ಪ್ರವಚನ ಕ್ರಮದಲ್ಲಿಯೇ ಬದಲಾವಣೆಯನ್ನು ಮಾಡಿಕೊಳ್ಳಬೇಕು. ನಮ್ಮ ವಿಶ್ವವಿದ್ಯಾನಿಲಯದ ವ್ಯಾಸಂಗ ಕಾಲವನ್ನು 'ಸೆಮಿಸ್ಟರ್' ಪದ್ಧತಿಯನ್ನಾಗಿ ಬದಲಿಸಬೇಕು. ಪಾಠಕ್ರಮದ ಪ್ರಧಾನಾಂಶಗಳ ಜೊತೆಗೆ ಮೊದಲು ಸೆಮಿಸ್ಟರ್‌ನಲ್ಲಿ ಇಂಗ್ಲಿಶನ್ನು ವಿಜ್ಞಾನದಲ್ಲಿ ಪರಿಣಾಮಕಾರಿಯಾಗಿ ಬಳಸಲು ಹೇಳಿಕೊಡಬೇಕು. ವಿಷಯದ ಅಧ್ಯಯನಕ್ಕೆ ಭಾಷೆ ಸಹಕಾರಿಯಾಗಬೇಕಷ್ಟೇ ಹೊರತು ಅಡಚಣೆಯಾಗಬಾರದು. ಯಾವುದೇ ಅಧ್ಯಯನಕ್ಕೆ ಭಾಷೆ ಒಂದು ಮಾಧ್ಯಮವೇ ಹೊರತು ಹೊರೆಯಲ್ಲ.

●

## ಕೆಲವು ಪ್ರಶ್ನೆಗೆ ಉತ್ತರ ಸಿಕ್ಕಿಲ್ಲ

● ಬಿ ಎಸ್ ಶೈಲಜಾ

ಖಗೋಳವಿಜ್ಞಾನ ಎಂಬ ಪದದ ಪರಿಚಯ ನನಗೆ ಆದದ್ದು ತಡವಾಗಿ ಎನ್ನಬಹುದು. ನಾನಾಗ ಕಾಲೇಜಿನಲ್ಲಿದ್ದೆ. ಅಂದಮಾತ್ರಕ್ಕೇ ಅಲ್ಲಿಯವರೆಗೆ ನನಗೆ ಅದರ ಅರಿವೇ

ಇರಲಿಲ್ಲವೆಂದಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಗ್ರಂಥಾಲಯದಲ್ಲಿದ್ದ "ಅದ್ಭುತ ಜಗತ್ತು" (ಶಿವರಾಮ ಕಾರಂತರದ್ದು) ಸಂಪುಟಗಳನ್ನು ಶಾಲಾದಿನಗಳಲ್ಲಿ ಅದೆಷ್ಟು ಬಾರಿ ತಿರುವಿಹಾಕಿದ್ದೆನೋ ನೆನಪಿಲ್ಲ. ಆಕಾಶದಲ್ಲಿ ಮೋಡದ ಹಾಗೆ ಕಾಣುತ್ತದೆ ಎಂದು ಅವರು ವಿವರಿಸಿದ್ದ ಆಕಾಶಗಂಗೆಯನ್ನು ಹುಡುಕಿ ಸೋತಿದ್ದೆ. ಪರಿಹಾರ ದೊರಕಿದ್ದು ಅನೇಕ ವರ್ಷಗಳ ನಂತರ-ಪ್ರೊಫೆಸರ್ ಜೆ.ಸಿ. ಭಟ್ಟಾಚಾರ್ಯ ಅವರಿಂದ. "ಅಗೋ ಅಲ್ಲಿದೆ ಆಕಾಶಗಂಗೆ" ಎಂದವರು ಬೊಟ್ಟು ಮಾಡಿ ತೋರಿಸಿದ್ದರು. ಈ ಪ್ರಾತ್ಯಕ್ಷಿಕೆ ನಡೆದಿದ್ದು ಕಾವಲೂರಿನ ನಾಲ್ಕಂತಸ್ತಿನ ಎತ್ತರದ ಗುಮ್ಮಟದ "ನಡೆದಾಣ"ದಲ್ಲಿ (ನಡೆದಾಡುತ್ತಾ ಆಕಾಶವನ್ನು ವೀಕ್ಷಿಸಲು ಅನುಕೂಲವಾಗುವಂತೆ ನಿರ್ಮಿಸಿರುವ ಜಾಲರಿ ವ್ಯವಸ್ಥೆ-catwalk)

ಇಂಗ್ಲಿಶನ್ನು ಓದಿ ಅರ್ಥಮಾಡಿಕೊಳ್ಳುವ ಆತ್ಮವಿಶ್ವಾಸ ಮೂಡಿದ್ದು ಕಾಲೇಜಿನ ದಿನಗಳಲ್ಲಿ. ಅದುವರೆಗಿನ ಇಂಗ್ಲಿಶ್ ಜ್ಞಾನ ಪಠ್ಯಪುಸ್ತಕಗಳಿಗೆ ಮಾತ್ರ ಸೀಮಿತವಾಗಿತ್ತು. ಡಾಪ್ಲರ್ ಪರಿಣಾಮ ಎಂಬ ವಿಷಯವನ್ನು ಕಲಿಯುವಾಗ, ಇದು ನಕ್ಷತ್ರಗಳ ಅಧ್ಯಯನದಲ್ಲಿ ಉಪಯೋಗಿ ಎಂಬ ಒಂದು ವಾಕ್ಯ ನನ್ನನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಇದು ಹೇಗೆ ಎಂದು ತಿಳಿಯಬೇಕೆಂಬ ಉತ್ಸಾಹದಿಂದ ಗ್ರಂಥಾಲಯಕ್ಕೆ ಓಡಿದಾಗ ಸಿಕ್ಕಿದ ಪುಸ್ತಕಗಳೆಲ್ಲಾ ಇಂಗ್ಲಿಶ್‌ನಲ್ಲಿದ್ದವು. ಅವುಗಳ ಭಾಷೆ, ಉದ್ದಕ್ಕೂ ಕಂಡುಬರುತ್ತಿದ್ದ ಗಣಿತಸೂತ್ರಗಳು ಭಯ ಹುಟ್ಟಿಸುವಂತಿದ್ದವು. ಈ "ಆನೆಗಳ" ಮಧ್ಯೆ ಇಲಿಯಂತೆ ಹುದುಗಿದ್ದ ಒಂದು ಪುಸ್ತಕವನ್ನು ಹೊರಗೆಳೆದೆ. ಅದು ಫ್ರೆಡ್‌ಹಾಯ್ಲ್ ಅವರ "Nature of the Universe". ಈ ಪುಟ್ಟ ಪುಸ್ತಕ ಓದಿ ಜೀರ್ಣಿಸಿಕೊಳ್ಳಲು ನನಗೆ ಒಂದು ತಿಂಗಳೇ ಬೇಕಾಯಿತು. ದಿನವೂ ಹೋಗಿ ಐದಾರು ಪುಟಗಳನ್ನು ಗ್ರಂಥಾಲಯದಲ್ಲೇ ಕುಳಿತು ಓದುತ್ತಿದ್ದೆ. (ಇಂಗ್ಲಿಶ್ - ಕನ್ನಡ ಪದಕೋಶ ಅವಶ್ಯವಾಗಿದ್ದುದರಿಂದ ಆ ಬೀರುವಿನ ಪಕ್ಕವೇ ಕುಳಿತುಕೊಳ್ಳುತ್ತಿದ್ದೆ.) ಇದನ್ನು ಓದಿ ಮುಗಿಸಿದ ಮೇಲೆ ಇಂತಹುದೊಂದು ಪುಸ್ತಕ ಕನ್ನಡದಲ್ಲಿ ಇದ್ದಿದ್ದರೆ.. ಎನ್ನಿಸಿತು. ಗ್ರಂಥಪಾಲಕರನ್ನು ಕೇಳಿಯೂಬಿಟ್ಟೆ. ಅವರು ಒಂದು ಪುಸ್ತಕವನ್ನು ಆರಿಸಿ ಕೊಟ್ಟರು. ಅದರ ಹೆಸರು "ಖಗೋಳವಿಜ್ಞಾನ". ಹೀಗೆ ಈ ಪದದ ಪರಿಚಯ ನನಗಾಯಿತು.

ಇಂದಿನ ಪರಿಸ್ಥಿತಿ ಬೇರೆ ಮೂರು-ನಾಲ್ಕನೆಯ ತರಗತಿಗಳಲ್ಲೇ ಮಕ್ಕಳಿಗೆ "ವಿಶ್ವ"ದ ಕುರಿತು ಪಾಠ ಉಂಟು. ಅವರ ಪದಜ್ಞಾನವೂ ಹೆಚ್ಚಿದೆ. ಜ್ಞಾನತೃಷೆಯನ್ನು ತಣಿಸುವ ಅನೇಕ ಪುಸ್ತಕಗಳೂ ಈಗ ಸಾಕಷ್ಟು ಪ್ರಕಟವಾಗಿವೆ. ಈ ಸಂದರ್ಭದಲ್ಲಿ ಶ್ರೀಯುತ ಜಿ.ಟಿ. ನಾರಾಯಣರಾಯರನ್ನು ನೆನೆಯದಿದ್ದರೆ ಅಕ್ಷಮ್ಯ ಅಪರಾಧವಾಗುತ್ತದೆ. ಅವರು ರಚಿಸಿದ ವರ್ಣರಂಜಿತ ಪುಸ್ತಕವೊಂದನ್ನು ನಾನು ಹತ್ತಿಪ್ಪತ್ತು ಬಾರಿ ಓದಿದ್ದೆ. ನಮ್ಮ ತಂದೆ ಅದನ್ನು ಹುಡುಕಿ ತಂದುಕೊಟ್ಟಿದ್ದರು.

ಮುಂದಿನ ಅಧ್ಯಯನದ ಹಂತಗಳಲ್ಲಿ ಇಂಗ್ಲಿಶ್ ಅನಿವಾರ್ಯವಾಯಿತು. ತತ್ಪರಿಣಾಮವಾಗಿ ಪದಕೋಶದ ಬಳಕೆ ಕಡಿಮೆಯಾಗುತ್ತಾ ಬಂದು ಕೊನೆಗೆ ಬಿಟ್ಟೇಹೋಯಿತು. ಪಿಎಚ್.ಡಿ.ಗಾಗಿ ಸಿದ್ಧತೆ ನಡೆಸುತ್ತಿದ್ದಾಗ ಇಂಗ್ಲಿಶ್ ಆಡುಭಾಷೆಯಾಯಿತು.

ಸಹೋದ್ಯೋಗಿಗಳಲ್ಲಿ ಕನ್ನಡಬಲ್ಲವರು ಯಾರೂ ಇರಲಿಲ್ಲ. (ಒಬ್ಬರಿಗೆ ಬರುತ್ತಿತ್ತೆಂದು ಅನೇಕ ವರ್ಷಗಳ ನಂತರ ನನಗೆ ತಿಳಿಯಿತು.) ಇದು ಆರಂಭದಲ್ಲಿ ಕಿರಿಕಿರಿ ಎನ್ನಿಸಿತಾದರೂ ಕ್ರಮೇಣ ರೂಢಿಯಾಯಿತು. ಕಾಲೇಜು ಗ್ರಂಥಾಲಯಲ್ಲಿ ಭಯ ಹುಟ್ಟಿಸಿದ್ದ ದೈತ್ಯಾಕಾರದ ಗ್ರಂಥಗಳೇ ಈಗ ಅಗತ್ಯವಾದವು. ಹಿರಿಯರೊಡನೆ ಚರ್ಚೆ ಮಾತ್ರವಲ್ಲ ಆಡಳಿತಾತ್ಮಕ ವ್ಯವಹಾರಗಳು ಇಂಗ್ಲಿಶಿನಲ್ಲೇ. ಕೇಂದ್ರ ಸರಕಾರದ ಕಛೇರಿಗಳಲ್ಲಿಯ ಉದ್ಯೋಗಿಗಳಾದರೂ ವಾಸಿ. ವ್ಯವಹಾರ ಕನ್ನಡದಲ್ಲಿ ನಡೆಸುತ್ತಾರೆ. ಆದರೆ ನನಗೆ ಹಾಗಿರಲಿಲ್ಲ. "ಗಂಟೆ ಎಷ್ಟು"ನಿಂದ ಹಿಡಿದು "ಸಂಶೋಧನಾ ಪ್ರಬಂಧ"ದ ವರೆಗಿನ ಎಲ್ಲ ವ್ಯವಹಾರಗಳೂ ಇಂಗ್ಲಿಶ್‌ನಲ್ಲೇ ನಡೆಯುತ್ತಿದ್ದವು. ಇಲ್ಲಿ ಕನ್ನಡ ಅರಳಲು ಅವಕಾಶವಿರಲಿಲ್ಲ.

ಜನಪ್ರಿಯ ವೈಜ್ಞಾನಿಕ ಲೇಖನಗಳನ್ನು ಬರೆಯುವ ಮೊದಲ ಪ್ರಯತ್ನ ಮಾಡಿದ್ದು ಕಾಲೇಜಿನಲ್ಲಿದ್ದಾಗ. ಕನ್ನಡ ಸಾಹಿತ್ಯ ಪರಿಷತ್ತಿನ ಉದಯೋನ್ಮುಖ ಲೇಖಕರ "ಪ್ರಬಂಧ ಗಳು" ಶೀರ್ಷಿಕೆಗೆ ಆಯ್ಕೆಯಾದದ್ದು ಮೊದಲಹೆಜ್ಜೆ. ಆಮೇಲೆ ಇಂಗ್ಲಿಶ್ ನಲ್ಲಿ ಮುಳುಗಿ ತೇಲುತ್ತಿದ್ದರೂ ಆಗೊಮ್ಮೆ ಈಗೊಮ್ಮೆ ಸಣ್ಣಕತೆ, ಲಲಿತಪ್ರಬಂಧಗಳನ್ನು ಬರೆಯುತ್ತಾ ಸಾರಸ್ವತಲೋಕದ ಸ್ವಾದ ಅನುಭವಿಸುತ್ತಿದ್ದೆ. ಬೆಂಗಳೂರು ವಿಶ್ವವಿದ್ಯಾಲಯ "ಜನಪ್ರಿಯ ವಿಜ್ಞಾನ" ಎಂಬ ಪತ್ರಿಕೆಯನ್ನು ಆರಂಭಿಸಿದಾಗ ಅದರಲ್ಲಿ ಲೇಖನಗಳನ್ನು ಪ್ರಕಟಿಸಿದೆ. ಆಗ ನಾನು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋಫಿಸಿಕ್ಸ್‌ಗೆ ಇನ್ನೂ ಸೇರಿರಲಿಲ್ಲ. "ಕೇಂದ್ರೀಯ ವಿದ್ಯುತ್ ಅನುಸಂಧಾನ ಸಂಸ್ಥೆ" ಎಂಬಲ್ಲಿದ್ದೆ. ಈ ಹಿಂದಿ ಅನುವಾದದ ಹೆಸರಿನಿಂದ ಈ ಕಚೇರಿ ಯಾವುದು ಎಂದು ತಿಳಿಯಲು ಸಾಧ್ಯವಿಲ್ಲ. ಹಾಗಾಗಿ ನನ್ನಿಂದ ರೇಡಿಯೋ ಭಾಷಣವನ್ನು ಅಪೇಕ್ಷಿಸಿ, ಅಂದು ವಿಜ್ಞಾನಾಧಿಕಾರಿಯಾಗಿದ್ದ ಶ್ರೀ ಎಚ್.ಆರ್. ಕೃಷ್ಣಮೂರ್ತಿ ಅವರು ಬರೆದ ಪತ್ರ ಬೆಂಗಳೂರಿನ ಎಲ್ಲ ಮೂಲೆಗೂ ಹೋಗಿ ಕೊನೆಗೆ ಶೇಷಾದ್ರಿಪುರದ ದಕ್ಷಿಣವಲಯ ವಿದ್ಯುತ್ ಮಂಡಲಿ ಎಂಬ ಕಛೇರಿಗೆ ಬಂದಿತು. ಅಲ್ಲಿಯವರೊಬ್ಬರು ಕನ್ನಡ ಬಲ್ಲವರು, ನನ್ನನ್ನೂ ಬಲ್ಲವರು, ಆ ಕಾಗದವನ್ನು ನನಗೆ ತಲುಪಿಸಿದ್ದರು. ಹೀಗೆ ಆಕಾಶವಾಣಿಯಲ್ಲೂ ವೈಜ್ಞಾನಿಕ ವಿಷಯ ಕುರಿತು ಭಾಷಣ ಮಾಡುವ ಅವಕಾಶ ದೊರೆಯಿತು.

ಮುಂದೆ ಸಂಶೋಧನೆಯ ಕಾರಣ ಇಂಗ್ಲಿಶ್ ಮಹಾಸಾಗರದಲ್ಲಿ ಈಜುತ್ತಿದ್ದಾಗ ಒಂದು ಕನ್ನಡದ ನಡುಗಡ್ಡೆ ಎಡೆತಾಕಿತು. ೧೯೮೦ರ ಪೂರ್ಣ ಸೂರ್ಯಗ್ರಹಣದ ಸಂದರ್ಭ. ಆರು ತಿಂಗಳ ಮುಂಚಿತವಾಗಿಯೇ ಲೇಖನಗಳನ್ನು ಪ್ರಕಟಿಸಿ ಜನಜಾಗೃತಿ ಉಂಟುಮಾಡಲು ಪ್ರೊಫೆಸರ್ ಭಟ್ಟಾಚಾರ್ಯ ಹಾಗೂ ದಿವಂಗತ ಪ್ರೊಫೆಸರ್ ವೈನುಬಾಪ್ಪು ನನ್ನನ್ನು ಪ್ರೇರೇಪಿಸಿದರು. "ಸುಧಾ" ಪತ್ರಿಕೆಯಲ್ಲಿ ಪ್ರಕಟವಾದ ಲೇಖನ ಸಾಕಷ್ಟು ಉತ್ಸಾಹಿಗಳನ್ನು ಪ್ರಚೋದಿಸಿತು. ಕನ್ನಡ ಪದಗಳನ್ನು ಬಳಸುವಾಗ ಲೇಖನದಲ್ಲೊಂದು ದೊಡ್ಡ ತಪ್ಪು ಮಾಡಿದ್ದೆ. Perihelion ಎಂಬ ಪದಕ್ಕೆ ಅಪರವಿ ಎಂದು ಬರೆದಿದ್ದೆ. ಶ್ರೀಯುತ ಜಿ.ಟಿ.ಎನ್. ರವರು ತಪ್ಪನ್ನು ತೋರಿಸಿಕೊಟ್ಟರು. ಅಂದಿನಿಂದ ಕನ್ನಡ ಲೇಖನಗಳನ್ನು ಬರೆಯುವಾಗ

ಅವರ ಪುಸ್ತಕಗಳನ್ನು ಪಕ್ಕದಲ್ಲಿ ಇರಿಸಿಕೊಳ್ಳುವ ಪರಿಪಾಠ ಬೆಳೆಸಿಕೊಂಡೆ (ಇದು ಈಗಲೂ ನಡೆದಿದೆ).

ಗ್ರಹಣದ ದಿನ ಇನ್ನೊಂದು ಸವಾಲು ನನಗೆದುರಾಯಿತು. ರಾಯಚೂರಿನ ಜವಳಗೇರಿಯ ಕ್ಯಾಂಪ್‌ನಲ್ಲಿ ನನಗೆ ಕೈತುಂಬ (ಬಾಯ್ತುಂಬ?) ಕೆಲಸ. ಸುತ್ತಲಿನ ಜನ ನಾವೇನು ಮಾಡುತ್ತಿದ್ದೇವೆ ಎಂದು ತಿಳಿದುಕೊಳ್ಳಲು ಒಬ್ಬೊಬ್ಬರಾಗಿ ಬಂದವರು ಗ್ರಹಣದ ಹೊತ್ತಿಗೆ ಗಾಡಿಗಳಲ್ಲಿ (ಚಕ್ಕಡಿ) ಶಾಲಾಮಕ್ಕಳನ್ನು ಕರೆದುಕೊಂಡು ಬಂದರು. ಆ ಮಕ್ಕಳಿಗೆ ನಾವು ನಡೆಸುತ್ತಿರುವ ಪ್ರಯೋಗಗಳ ಬಗ್ಗೆ, ಸೂರ್ಯಗ್ರಹಣದ ಬಗ್ಗೆ ಕನ್ನಡದಲ್ಲಿ ವಿವರಿಸಿ ಹೇಳುವುದು ಸುಲಭದ ಕೆಲಸವಾಗಿರಲಿಲ್ಲ. (ಪಕ್ಕದಲ್ಲಿ ಪದಕೋಶವೂ ಇರಲಿಲ್ಲವಲ್ಲ!) ಸಂಶೋಧನೆಯ ಹಂತದಲ್ಲಿ ಕನ್ನಡದ ಬಳಕೆ ಎಷ್ಟು ಕಷ್ಟ ಎಂದು ನನಗೆ ಆಗಲೇ ಅರಿವಾಯಿತು.

ಕೆಲವು ಸಂಶೋಧನಾ ಪ್ರಬಂಧಗಳು ಆಗ್ಗೆ ಇಂಗ್ಲಿಶ್ ಅಲ್ಲದೆ ಬೇರೆ ಭಾಷೆಗಳಲ್ಲಿಯೂ ಪ್ರಕಟವಾಗುತ್ತಿದ್ದವು. ಅವುಗಳನ್ನು ಭಾಷಾಂತರಕಾರರಿಗೆ ಕೊಟ್ಟು ತರಿಸಿಕೊಳ್ಳುವಲ್ಲಿ ವಿಳಂಬವಾಗುತ್ತಿತ್ತು. ನನ್ನ ಸ್ನೇಹಿತರಲ್ಲಿ ಕೆಲವರು ಫ್ರೆಂಚ್ ಕಲಿತರು. ಅಂತಹವರ ಸಹಾಯದಿಂದ ಪ್ರಬಂಧಗಳ ಸ್ಥೂಲ ಸಾರಾಂಶ ತಿಳಿದುಕೊಳ್ಳುತ್ತಿದ್ದೆವು. ನಾನೂ ಜರ್ಮನ್ ಕಲಿತೆ. ಆದರೆ ಸಾಹಿತ್ಯದ ಸೊಗಸು ಸವಿಯುವಷ್ಟಲ್ಲ. ಐರೋಪ್ಯ ಜರ್ನಲ್‌ಗಳನ್ನು ಪದೇಪದೇ ತಿರುವಿ ಹಾಕಿದ್ದ ಅನೇಕ ಹಿರಿಯರು ಪದಗಳ ಜೋಡಣೆಯಿಂದಲೇ ವಾಕ್ಯವನ್ನು ಊಹಿಸಿಬಿಡುತ್ತಿದ್ದರು. ರಷ್ಯನ್ ಚಿತ್ರವಿವರಣೆಗಳಿಗೆ ನಾನು ಇದೇ ಉಪಾಯ ಮಾಡುತ್ತಿದ್ದೆ.

ಭಾರತೀಯ ಭಾಷೆಯೊಂದರಲ್ಲಿ ಇಂತಹ ಗೊಂದಲ ಎದುರಿಸಬೇಕಾಯಿತು. ಅಹ್ಮದಾಬಾದ್‌ನ ವಿಕ್ರಮ್ ಸಾರಾಭಾಯ್ ವಿಜ್ಞಾನ ಕೇಂದ್ರದಲ್ಲಿ ಖಗೋಳ ವಿಜ್ಞಾನದ ಕುರಿತು ಮಕ್ಕಳೊಡನೆ ಚರ್ಚಿಸುವ ಸಂದರ್ಭ. ಇಂಗ್ಲಿಶ್‌ನಲ್ಲಿ ಐದಾರು ವಾಕ್ಯಗಳನ್ನು ಹೇಳಿ ಆರಂಭಿಸಿದಾಗ ಮಕ್ಕಳ ಮುಖದಲ್ಲಿನ ಪ್ರತಿಕ್ರಿಯೆ ಸೊನ್ನೆ. ಅವರೆಲ್ಲಾ ಗುಜರಾತಿ ಮಾಧ್ಯಮದವರು. ನಾನು ಹತಾಶಳಾದೆ. ಆಮೇಲೆ ಶಿಕ್ಷಕರ ಸಲಹೆಯಂತೆ ಹಿಂದಿ ಕ್ರಿಯಾಪದಗಳನ್ನು ಬಳಸತೊಡಗಿದಾಗ ಮಕ್ಕಳ ಮುಖಗಳು ಸ್ವಲ್ಪ ಅರಳಿದವು. ಒಂದು ಗಂಟೆ ಹೀಗೆ ಹಿಂದಿ ಮಿಶ್ರಿತ ಇಂಗ್ಲಿಶ್ ಬಳಸಿ ಬೋರ್ಡ್ ಮೇಲೆ ಚಿತ್ರ ಬರೆದು ವಿವರಣೆ ಕೊಟ್ಟಿದ್ದು ಒಂದು ಅದ್ಭುತ ಪ್ರಯೋಗವೇ ಆಯಿತು.

ನಾನು ಸಂಶೋಧನೆಯಲ್ಲೇ ಮುಂದುವರೆದಿದ್ದರೆ ಲೇಖನವನ್ನು ಇಲ್ಲಿಯೇ ಮುಗಿಸಿಬಿಡಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ತಾರಾಲಯದಲ್ಲಿ ನನಗೆ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು, ಶಿಕ್ಷಕರು- ಇಂತಹವರೊಡನೆ ಸಂಪರ್ಕ ಏರ್ಪಟ್ಟಿತು. ನನ್ನ ಕಾಲೇಜು ದಿನಗಳಿಗೂ ಇಂದಿಗೂ ನಡುವಿನ ದೊಡ್ಡ ಕಂದರ ಗೋಚರವಾಗತೊಡಗಿತು. ನನಗೆ ಇಂಗ್ಲಿಶ್ ಅನಿವಾರ್ಯವಾಗಿತ್ತು. ಅದಕ್ಕೆ ತಕ್ಕ ಅನುಕೂಲವೂ ಇತ್ತು. ಇಂದಿನವರಿಗೆ ಅನಿವಾರ್ಯತೆ ಇದೆ. ಅನುಕೂಲವಿರಲಿಲ್ಲ. ಪರ್ಯಾಯವಾಗಿ ಕನ್ನಡ ಪುಸ್ತಕಗಳೂ ದೊರೆಯುತ್ತಿರಲಿಲ್ಲ. ಹೀಗಾಗಿ ನನ್ನ ಅಳಿಲು ಸೇವೆ ಆರಂಭವಾಯಿತು.

ಕನ್ನಡ ಪುಸ್ತಕ ಪ್ರಾಧಿಕಾರದವರು ನನ್ನಿಂದ "ಗೆಲಿಲಿಯೋ" ಎಂಬ ಪುಸ್ತಕ ಬರೆಯಿಸಿದರು. ಅದುವರೆಗೂ ಪುಸ್ತಕ ಬರೆಯಬಲ್ಲೆನೆಂಬ ಆತ್ಮವಿಶ್ವಾಸ ನನಗಿರಲಿಲ್ಲ. ಆ ಪುಸ್ತಕಕ್ಕೆ ಶ್ರೀಯುತ ಜಿ.ಟಿ.ಎನ್.ರವರೇ ಪರಿಶೀಲಕರಾಗಿದ್ದು ಒಂದು ಸುಯೋಗ. ಅದು ಮರು ಮುದ್ರಣಗಳನ್ನು ಕಂಡಿತಲ್ಲದೇ, ಅದರಲ್ಲಿ ಪ್ರಾಯೋಗಿಕವಾಗಿ ಸೂಚಿಸಿದ್ದ ಕೆಲವು ಲೆಕ್ಕಗಳನ್ನು ಕೆಲವರು ಮಾಡಿ ನನಗೆ ಉತ್ತರ ಕಳಿಸಿದ್ದು ತುಂಬ ಸಮಾಧಾನದ ವಿಷಯ. ನವಕರ್ನಾಟಕದ ಜ್ಞಾನ ವಿಜ್ಞಾನ ಕೋಶವೂ ಹೀಗೆಯೇ ತೃಪ್ತಿತಂದ ಚಟುವಟಿಕೆಯಾಯಿತು.

ಕರ್ನಾಟಕ ರಾಜ್ಯ ಸರಕಾರದ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ನಿರ್ದೇಶನಾಲಯಕ್ಕಾಗಿ "ಸೂರ್ಯ" ಎಂಬ ಪುಸ್ತಕ- ಇದರಲ್ಲಿ ಬಣ್ಣದ ಚಿತ್ರಗಳೇ ಮುಖ್ಯ- ರಚಿಸಿಕೊಟ್ಟೆ. ನನಗೆ ತುಂಬ ತೃಪ್ತಿ ತಂದುಕೊಟ್ಟ ಈ ಪುಸ್ತಕದ ೨೮೦೦೦ ಪ್ರತಿಗಳು ಪ್ರಕಟವಾದ ಒಂದೇ ತಿಂಗಳಿಗೆ ಖಾಲಿಯಾಗಿಬಿಟ್ಟವು. (ಇದು ಉಚಿತ ವಿತರಣೆಗಾಗಿ ಎಂದಿತ್ತು.) ಇದರಲ್ಲಿಯೂ ಮಕ್ಕಳೇ ಮಾಡಬಹುದಾದ ಸರಳ ಚಟುವಟಿಕೆಗಳಿದ್ದವು. ಮಕ್ಕಳು ಉತ್ತರಿಸಿ ಕಳುಹಿಸಲು ಒಂದು ಪ್ರಶ್ನಾವಳಿಯೂ ಇತ್ತು. ೨೮೦೦೦ದಲ್ಲಿ ಒಂದೂ ಉತ್ತರ ನನಗೆ ಹಿಂದಿರುಗದೇ ಇದ್ದದ್ದು ವಿಪರ್ಯಾಸವಲ್ಲವೇ?

ವಿವಿಧ ಸ್ತರದ ವಿದ್ಯಾರ್ಥಿಗಳು- ಇಂಗ್ಲಿಶ್ ಮತ್ತು ಕನ್ನಡ ಮಾಧ್ಯಮದವರು- ನನ್ನನ್ನು ಭೇಟಿ ಮಾಡುತ್ತಿರುತ್ತಾರೆ. ವಿಜ್ಞಾನವನ್ನು ಆಯ್ಕೆ ಮಾಡಿಕೊಂಡವರಿಗೆ ಭಾಷಾಜ್ಞಾನದ ಮೇಲೆ ಒತ್ತು ಇಲ್ಲ. ಭಾಷಾಕಲಿಕೆ ಹೀಗೆ ಮೂಲೆಗುಂಪಾಗಿರುವುದರ ಕಾರಣ ಹೆಚ್ಚಿನ ವಿದ್ಯಾರ್ಥಿಗಳಿಗೆ ಜನಪ್ರಿಯ ಲೇಖನಗಳೂ ಪೂರ್ತಿಯಾಗಿ ಮನದಟ್ಟಾಗುವುದಿಲ್ಲ. ಇಂಗ್ಲಿಶ್ ಮಾಧ್ಯಮದ ವಿದ್ಯಾರ್ಥಿಗಳಿಗೂ ಅಷ್ಟೇ. ಸ್ಟೀಫನ್ ಹಾಕಿಂಗ್ ಪುಸ್ತಕದ ಶೇಕಡಾ ೧೦ ಭಾಗ- ಆತನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ಭಾಗವನ್ನು ಮಾತ್ರ ಅವರು ನೆನಪಿಸಿಕೊಳ್ಳಬಲ್ಲರು. ಇನ್ನು ಹಿರಿಯ ವಿಜ್ಞಾನಿಗಳ ಭಾಷಾಪ್ರೌಢಿಮೆಯನ್ನು ಅವರು ಹೇಗೆ ಅರ್ಥಮಾಡಿಕೊಂಡಾರು? ಅವರಿಗೆ ಇಂಗ್ಲಿಶ್ ಅನ್ನು ಸರಿಯಾಗಿ ಕಲಿಸದೇ ಇದ್ದುದರಿಂದ ಅನ್ಯಾಯ ಮಾಡಿದಂತಾಗಿದೆ ಎಂದು ನನಗೆ ಅನೇಕಬಾರಿ ಅನ್ನಿಸಿದೆ. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳೂ ಇದಕ್ಕೆ ಹೊರತಲ್ಲ. ಉದ್ದುದ್ದನೆಯ ವಾಕ್ಯಗಳು ಗಣಿತಸೂತ್ರಗಳೊಡನೆ ಕಾಣಿಸಿಕೊಂಡರೆ ಅವರು ತಬ್ಬಿಬ್ಬಾಗುತ್ತಾರೆ. ಶ್ರೀಯುತ ಜಿ.ಟಿ.ಎನ್. ರವರ ಪುಸ್ತಕಗಳು ಇವರಿಗೆ "ನೀರಿಗಿಳಿಯದ ಗಂಟಲಲ್ಲಿಳಿದ ಕಡುಬು"-ಇಂಗ್ಲಿಶ್ ನಿಲುಕದು. ಹಾಗಾಗಿ ಇಲ್ಲಿಯೂ, ಅಲ್ಲಿಯೂ ಸಲ್ಲದವರಾಗಿ ಬಿಡುತ್ತಾರೆ.

ಇನ್ನು ಸಂಶೋಧನೆಯ ವಿಚಾರ-ಇತಿಹಾಸ, ಸಮಾಜ ವಿಜ್ಞಾನ ಮುಂತಾದ ವಿಷಯಗಳಲ್ಲಿ ಆರಂಭದ ಹಂತಗಳನ್ನು ಕನ್ನಡದಲ್ಲಿ ನಡೆಸಿ ಸಂಶೋಧನೆಯ ಜಾಡು ಹಿಡಿದವರು ಆಮೇಲೆ ಇಂಗ್ಲಿಶಿಗೆ ದಾಟಬಹುದು. ಆದರೆ ವಿಜ್ಞಾನದಲ್ಲಿ ಹಾಗಲ್ಲ- ಆರಂಭದ ಹಂತಗಳಿಗೂ ಇಂಗ್ಲಿಶ್ ಜ್ಞಾನ ಅತ್ಯವಶ್ಯಕವಾಗುತ್ತದೆ. ಇಂಗ್ಲಿಶ್‌ನ ಪರಿಪೂರ್ಣ ಪಾಂಡಿತ್ಯವಲ್ಲದಿದ್ದರೂ, ಸಂಶೋಧನಾ ಪ್ರಬಂಧಗಳನ್ನು ಓದಿ ಜೀರ್ಣಿಸಿಕೊಳ್ಳಲು ಅಗತ್ಯವಾದಷ್ಟಾದರೂ

ಬೇಕೇಬೇಕಾಗುತ್ತದೆ. ಇತ್ತೀಚಿನ ಸಂಶೋಧನೆಗಳ ವಿವರ ಇಂಗ್ಲಿಶ್‌ನಲ್ಲಿ ಮಾತ್ರ ಸಿಗುತ್ತಿದೆ.

ಹಿಂದೆ ನಾನು ಪ್ರಸ್ತಾಪಿಸಿದ ಐರೋಪ್ಯಭಾಷೆಗಳ ಪತ್ರಿಕೆಗಳೆಲ್ಲ ಈಗ ಐಕ್ಯವಾಗಿ ಒಂದೇ ಒಂದು ಪತ್ರಿಕೆ ಹೊರಬರುತ್ತಿದೆ. ಮೊದಲು ಫ್ರೆಂಚ್, ಜರ್ಮನ್ ಹೀಗೆ ಬೇರೆ ಬೇರೆ ಭಾಷೆಗಳ ಪ್ರಬಂಧಗಳು ಅದರಲ್ಲಿರುತ್ತಿದ್ದವು. ಈಗ ಕ್ರಮೇಣ ಎಲ್ಲವೂ ಇಂಗ್ಲಿಶ್‌ನಲ್ಲೇ ಬರುತ್ತಿವೆ. ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಇದೂ ಅನಿವಾರ್ಯವಾಗಿದೆ. ರಷಿಯನ್ ಪತ್ರಿಕೆಗಳ ಇಂಗ್ಲಿಶ್ ಭಾಷಾಂತರವೂ ಈಗ ಲಭ್ಯವಾಗಿದೆ.

ಸುಮಾರು ಐದು ವರ್ಷಗಳ ಹಿಂದೆ ಕನ್ನಡ ವಿಶ್ವವಿದ್ಯಾಲಯದಿಂದ - "ಕನ್ನಡದಲ್ಲಿ ಖಗೋಳವಿಜ್ಞಾನದಲ್ಲಿ ಸಂಶೋಧನೆ ನಡೆಸುವವರಿಗೆ ಮಾರ್ಗದರ್ಶಿಯಾಗುವಿರಾ?" ಎಂಬ ಅರ್ಥದ ಪ್ರಶ್ನೆಯಿರುವ ಕಾಗದ ನನಗೆ ಬಂದಿತು-ನನ್ನನ್ನು ಗೊಂದಲಕ್ಕೀಡು ಮಾಡಿತು. ಸಾಹಿತ್ಯ ಸರ್ವೇಕ್ಷಣೆ ಮಾಡುವುದು ಹೇಗೆ? ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಬಂಧವನ್ನು ತೂಗುವುದು ಹೇಗೆ? ಪ್ರಾಯೋಗಿಕ ವೀಕ್ಷಣೆ ನಡೆಸಿ ವಿಶ್ಲೇಷಣೆ ನಡೆಸುವುದು ಕನ್ನಡದಲ್ಲಿ ಸಾಧ್ಯವೇ? ಕಂಪ್ಯೂಟರ್ ಬಳಸುವುದು ಹೇಗೆ? ಈ ಪ್ರಶ್ನೆಗಳಿಗೆ ನನಗೆ ಇನ್ನೂ ಉತ್ತರ ಸಿಕ್ಕಿಲ್ಲ.



## ಕನ್ನಡ ಬಳಸುವ ತೃಪ್ತಿಯೊಂದು ಸಾಕೆ?

● ಜೆ ಎಸ್ ಸದಾನಂದ

ಮಾತೃಭಾಷೆ ಆಡಳಿತ ಭಾಷೆಯಾಗಿಬೇಕು, ಶಿಕ್ಷಣದ ಮಾಧ್ಯಮವಾಗಬೇಕು ಎಂದು ಹೇಳುವ ನಾವೆಲ್ಲರೂ ಹಾಗೆ ಮಾಡುವುದರ ಉದ್ದೇಶದ ಬಗ್ಗೆ ಸದಾ ಎಚ್ಚರದಿಂದಿರಬೇಕು. ಮಾತೃಭಾಷೆಯಲ್ಲದ ಭಾಷೆ ಆಡಳಿತ ಭಾಷೆಯಾದರೆ, ಶಿಕ್ಷಣದ ಮಾಧ್ಯಮವಾದರೆ ಮಾತೃಭಾಷೆಯಲ್ಲಿಯೇ ವ್ಯವಹರಿಸುವ ಸ್ಥಳೀಯರು ಆಡಳಿತದಲ್ಲಿ ಭಾಗವಹಿಸುವುದಾಗಲಿ, ಶಿಕ್ಷಣದ ಲಾಭ ಪಡೆಯುವುದಾಗಲಿ ಸಾಧ್ಯವಾಗುವುದಿಲ್ಲ. ನಮ್ಮ ಸಂದರ್ಭವನ್ನು ಕುರಿತು ಹೇಳುವುದಾದರೆ, ಅವರೆಲ್ಲ ಇಂಗ್ಲಿಶ್ ಬಲ್ಲವರನ್ನು ಆಶ್ರಯಿಸಬೇಕಾಗುತ್ತದೆ. ಇಂಗ್ಲಿಶ್ ಕಲಿತ ಒಂದೇ ಕಾರಣದಿಂದ ಅವರು ಅಧಿಕಾರದ ಆಯಕಟ್ಟಿನ ಸ್ಥಾನದಲ್ಲಿ ಕುಳಿತುಕೊಳ್ಳುತ್ತಾರೆ. ಉನ್ನತ ಶಿಕ್ಷಣವನ್ನು ಪಡೆದು ಹೆಚ್ಚು ಹೆಚ್ಚು ಅಧಿಕಾರ ಪಡೆಯಲು ಅರ್ಹರಾಗುತ್ತಾರೆ. ಹೀಗೆ ತಮ್ಮದಲ್ಲದ ಭಾಷೆಯಲ್ಲಿ ಪರಿಣಿತಿ ಹೊಂದಲು ಸಾಧ್ಯವಾಗುವುದು. ಇಂಗ್ಲಿಶ್ ಕಲಿಸಿಕೊಡುವ ಪಟ್ಟಣದ ಶಾಲೆಗಳಲ್ಲಿ ಓದುವವರಿಗೆ, ಅಂದರೆ ಶ್ರೀಮಂತರಿಗೆ ಮಾತ್ರ. ಇಂತಹ ವ್ಯವಸ್ಥೆಯಿಂದಾಗಿ ಸಮಾಜದಲ್ಲಿ ಅಸಮಾನತೆ ಮತ್ತಷ್ಟು ಹೆಚ್ಚುತ್ತಾ ಹೋಗುತ್ತದೆ.

ಆಂಗ್ಲಭಾಷೆಯ ಕಲಿಕೆಯಿಂದ ವಂಚಿತರಾದವರು ಮತ್ತಷ್ಟು ಅವಕಾಶ ವಂಚಿತರಾಗುತ್ತಾರೆ.

ಈ ವಾದ ನಮಗೆಲ್ಲರಿಗೂ ಪರಿಚಿತವಾದದ್ದೆ. ಆದರೂ ಕೆಲವೊಮ್ಮೆ ಕನ್ನಡದ ವಿಷಯ ಒಂದು ಭಾವನಾತ್ಮಕ ವಿಷಯವಾಗಿ ಪರಿವರ್ತಿತಗೊಂಡು, ಕನ್ನಡಕ್ಕಾಗಿ ಜನರು ಎನ್ನುವ ಮಟ್ಟಕ್ಕೆ ಹೋಗಿಬಿಡುತ್ತದೆ. ಜನರಿಗಾಗಿ ಕನ್ನಡ ಎನ್ನುವುದು ಮರೆತು ಹೋಗುತ್ತದೆ. ಹಾಗಾದಾಗಲೆಲ್ಲ ಕನ್ನಡತನ, ಕನ್ನಡಕ್ಕೆ ಪ್ರಾಮುಖ್ಯತೆ (ಶಿಕ್ಷಣದಲ್ಲಿ ಹಾಗೂ ಆಡಳಿತದಲ್ಲಿ) ಮುಂತಾದವುಗಳೆಲ್ಲ ಕೇವಲ ಸಾಂಕೇತಿಕವಾಗಿ ಬಿಡುತ್ತವೆ. ಅಂತಹ ಸಾಂಕೇತಿಕ ಕಾರ್ಯಕ್ರಮ ಗಳನ್ನು ಹಮ್ಮಿಕೊಳ್ಳುವುದೆ ಕನ್ನಡದ ಉದ್ಧಾರಕ್ಕೆ ಸರ್ಕಾರ ಮಾಡುವ ಬೃಹತ್ ಕಾರ್ಯ ಎಂದು ಅಮಾಯಕ ಜನರನ್ನು ನಂಬಿಸಲಾಗುತ್ತದೆ. ಕನ್ನಡ ಎಂದರೆ ಸಾಹಿತ್ಯ, ಕನ್ನಡದ ಸಾಹಿತಿಗಳನ್ನು ಗೌರವಿಸುವುದೆಂದರೆ ಕನ್ನಡವನ್ನು ಗೌರವಿಸಿದಂತೆ, (ಹಾಗೆ ಗೌರವಿಸುವುದು ಎಂದರೆ ವಿವಿಧ ಪ್ರಾಧಿಕಾರಗಳು ಹಾಗೂ ಹುದ್ದೆಗಳನ್ನು ನಿರ್ಮಿಸಿ ಸಾಹಿತಿಗಳನ್ನು ನೇಮಕ ಮಾಡುವುದು) ಎಂದು ನಂಬಿದಂತಿದೆ.

ಈ ಮೇಲೆ ಹೇಳಿದಂತೆ ಹೀಗೆಲ್ಲ ಆಗುವುದು ಯಾವ ಉದ್ದೇಶದಿಂದ ನಾವು ಮಾತೃ ಭಾಷೆಗೆ ಮಹತ್ವ ಕೊಡಬೇಕು ಎನ್ನುವ ಪ್ರಶ್ನೆಯನ್ನು ಆಗಾಗ ಕೇಳಿಕೊಳ್ಳದೆ ಇರುವುದರಿಂದ. ಸಮಾಜಶಾಸ್ತ್ರಗಳ ಕಲಿಕೆಯ ವಿಷಯಕ್ಕೆ ಸಂಬಂಧಿಸಿದಂತೆ ಈ ವಿಚಾರವನ್ನು ಸ್ವಲ್ಪ ವಿವರವಾಗಿ ನಿಮ್ಮ ಮುಂದಿಡುತ್ತೇನೆ. ಈಗ ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಬಹುಪಾಲು ಸಮಾಜ ಶಾಸ್ತ್ರಗಳ ವಿದ್ಯಾರ್ಥಿಗಳು ಕನ್ನಡದಲ್ಲಿಯೇ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಬಹಳಷ್ಟು ಸಂಖ್ಯೆಯ ಉಪನ್ಯಾಸಕರುಗಳು ಕನ್ನಡದಲ್ಲಿಯೇ ಬೋಧಿಸುತ್ತಿದ್ದಾರೆ. ಇದು ಮೇಲ್ನೋಟಕ್ಕೆ ಒಳ್ಳೆಯ ಬೆಳವಣಿಗೆಯಂತೆ ಕಾಣಬಹುದು. ಆದರೆ ಅವರು ಯಾವ ಉದ್ದೇಶಕ್ಕಾಗಿ ಕನ್ನಡದಲ್ಲಿ ಶಿಕ್ಷಣವನ್ನು ಪಡೆಯಬೇಕಾಗಿದೆಯೋ ಆ ಉದ್ದೇಶವೇ ಈಡೇರುತ್ತಿಲ್ಲ. ಇದನ್ನು ಹೆಚ್ಚು ಸ್ಪಷ್ಟಪಡಿಸಬೇಕಾದ ಅಗತ್ಯವಿದೆ.

ಒಬ್ಬ ರಾಜ್ಯಶಾಸ್ತ್ರದ ಪ್ರಾಧ್ಯಾಪಕನಾದ ನನಗೆ ನಾನು ಕಲಿಸುತ್ತಿರುವ ವಿಷಯದ ಪ್ರಾಮುಖ್ಯತೆ, ಸಮಾಜಕ್ಕೆ ಅದರ ಕೊಡುಗೆ ಮೊದಲ ಆದ್ಯತೆ. ಕನ್ನಡ ಎರಡನೆಯದು. ಕನ್ನಡದಲ್ಲಿ ಸಮಾಜಶಾಸ್ತ್ರಗಳನ್ನು ಬೋಧಿಸುವುದರಿಂದ, ಸಂಶೋಧನೆ ನಡೆಸುವುದರಿಂದ ಸಮಾಜಶಾಸ್ತ್ರಗಳ ಕಲಿಕೆಯ ಉದ್ದೇಶ ಸಫಲವಾಗುತ್ತಿದೆ ಎಂದು ನನಗನಿಸುವುದರಿಂದ, ಸಮಾಜಶಾಸ್ತ್ರಗಳ ಕಲಿಕೆಯಲ್ಲಿ ಕನ್ನಡ ಬಳಕೆಯಾಗಬೇಕು ಎಂದು ನಾನು ಭಾವಿಸಿದ್ದೇನೆಯೆ ಹೊರತು, ಕನ್ನಡ ನಮ್ಮ ಭಾಷೆ, ಈ ನೆಲದ ಭಾಷೆ, ನಮ್ಮ ಸಂಸ್ಕೃತಿಯ ಪ್ರತೀಕ ಮುಂತಾದ ಕಾರಣಗಳಿಗಲ್ಲ. ನಾನು ಕಲಿಸುತ್ತಿರುವ ವಿಷಯಗಳಿಗೆ ಸಂಬಂಧಿಸಿದಂತೆ ಇವುಗಳು ಮುಖ್ಯ ವಾಗುವುದಿಲ್ಲ. ಅಧ್ಯಾಪಕನಾಗಿ ನನ್ನ ಇದುವರೆವಿಗಿನ ಅನುಭವದಲ್ಲಿ, ಆಂಗ್ಲಭಾಷೆಯ ಮಾಧ್ಯಮ ಮೂಲಕ ಮಾಡಿದ ಸಾಮಾಜಿಕ ಶಾಸ್ತ್ರಗಳ ಅಧ್ಯಯನ ಹಾಗೂ ಸಂಶೋಧನೆ ಗಳಿಂದ, ಒಳಿತಿಗಿಂತ ಹಾನಿಯೇ ಹೆಚ್ಚಾಗಿದೆ ಎಂದು ನನಗನಿಸುತ್ತದೆ. ನಮ್ಮ ಸಮಾಜ, ಸಂಸ್ಕೃತಿಯ ಬಗ್ಗೆ ಇದುವರೆವಿಗೆ ನಡೆದಿರುವ ಸಂಶೋಧನೆಗಳು, ಆ ಪ್ರಕ್ರಿಯೆಯಲ್ಲಿ

ಹುಟ್ಟಿಕೊಂಡಿರುವ ಪರಿಕಲ್ಪನೆಗಳು ನಮ್ಮ ಸುತ್ತಮುತ್ತಲಿನ ವಾಸ್ತವವನ್ನು ಗ್ರಹಿಸುವಲ್ಲಿ ವಿಫಲವಾಗಿವೆ. ಇದಕ್ಕೆ ಮುಖ್ಯ ಕಾರಣವೆಂದರೆ, ಸಾಮಾಜಿಕ ಶಾಸ್ತ್ರಗಳು ಶಾಸ್ತ್ರಬದ್ಧ ಅಧ್ಯಯನ ವಿಷಯಗಳಾಗಿ ನಮಗೆ ಪರಿಚಯಿಸಲ್ಪಟ್ಟವೆ. ಪಾಶ್ಚಾತ್ಯ ವಿದ್ಯಾಭ್ಯಾಸ ಪದ್ಧತಿ ಯಿಂದಾಗಿ ಅದರ ಒಳ ಹೂರಣ, ಕಲಿಸುವ ಬಗೆ ಹೇಗಿರಬೇಕೆಂಬುದನ್ನು ನಿರ್ಧರಿಸಿದ್ದು, ಸಹ ಪಾಶ್ಚಾತ್ಯರು ಅಥವಾ ನಂತರ ಪಾಶ್ಚಾತ್ಯ ವಿದ್ಯಾಭ್ಯಾಸ ಪದ್ಧತಿಯ ಪ್ರಭಾವಕ್ಕೊಳಗಾದ ಭಾರತೀಯ ವಿದ್ವಾಂಸರು. ನಮ್ಮ ಸಮಾಜ, ರಾಜಕೀಯ, ಆರ್ಥಿಕತೆಗಳನ್ನು ಗ್ರಹಿಸಲು ಬೇಕಾದ ಪರಿಕಲ್ಪನೆಗಳನ್ನು ರೂಪಿಸಿದ ಬಹಳಷ್ಟು ವಿದ್ವಾಂಸರುಗಳು ನಮ್ಮ ಸಮಾಜ, ಸಂಸ್ಕೃತಿಯ ಬಗ್ಗೆ ವ್ಯಾಖ್ಯಾನ ಕೊಡಲಾರಂಭಿಸಿದರು. ಅವು ಇಡೀ ಸಾಮಾಜಿಕ ಶಾಸ್ತ್ರಗಳಲ್ಲಿ ಅಧಿಕೃತ ಪರಿಕಲ್ಪನೆಗಳಾಗಿ ಉಳಿದು ಬಂದಿವೆ. ನಂತರದ ದಿನಗಳಲ್ಲಿ ಬಂದ ಭಾರತೀಯ ವಿದ್ವಾಂಸರುಗಳು, ಅಂತಹ ಅಧಿಕೃತ ಚೌಕಟ್ಟಿನಲ್ಲಿ ತಮ್ಮನ್ನು ವಿದ್ವಾಂಸರೆಂದು ಗುರುತಿಸಿ ಕೊಳ್ಳುವ ಪ್ರಯತ್ನವನ್ನೇ ಮಾಡಿದರು. ಈ ವಿದ್ವಾಂಸರುಗಳು ಸಾಮಾಜಿಕ ಶಾಸ್ತ್ರಗಳಲ್ಲಿ ಮಾಡಿದ ಸಂಶೋಧನೆ ಹಾಗೂ ಗ್ರಹಿಸಿದ ರೀತಿ ಸರಿಯೆ ಅಲ್ಲವೆ ಎಂದು ನಿರ್ಧಾರ ಮಾಡುವ ಕೆಲಸವನ್ನು, ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳಲ್ಲಿರುವ ವಿದ್ವಾಂಸರುಗಳು ಮಾಡುವ ಪರಿಪಾಠ ಬೆಳೆದು ಬಂದಿತು. ಅದು ಈಗಲೂ ಹಾಗೆಯೇ ಮುಂದುವರೆದಿದೆ. ಅಂತಹ ವಿದ್ವಾಂಸರುಗಳನ್ನು ಮುಟ್ಟಲು ಸಾಧ್ಯವಾಗುವುದು ಆಂಗ್ಲಭಾಷೆಯಿಂದ ಮಾತ್ರ. ಹಾಗಾಗಿ ಆಂಗ್ಲಭಾಷೆಯಲ್ಲಿ ಸಂಶೋಧನೆಗಳು ಪ್ರಕಟವಾಗುವುದು, ಅಂತಾರಾಷ್ಟ್ರೀಯ ಖ್ಯಾತಿ ಪಡೆದ ಪ್ರಕಾಶಕರುಗಳಿಂದ ಪುಸ್ತಕ ಪ್ರಕಟಿಸುವುದು, ತನ್ನ ವಿದ್ವತ್ತನ್ನು ಅಧಿಕೃತಗೊಳಿಸುವಲ್ಲಿ ಭಾರತೀಯ ವಿದ್ಯಾವಂತನಿಗೆ ಅನಿವಾರ್ಯವಾಯಿತು. ಇಂತಹ ಸಂಶೋಧನೆಗಳು ನಮ್ಮ ವಿದ್ಯಾರ್ಥಿಗಳಿಗೆ ತಲುಪಿಸುವಲ್ಲಿ ವಿಫಲರಾಗಿರುವುದಕ್ಕೆ ನಾವು ಗುರುತಿಸಿಕೊಂಡ ಮುಖ್ಯ ಕಾರಣ ಅವರಿಗೆ ಆಂಗ್ಲಭಾಷೆಯ ಜ್ಞಾನ ಇಲ್ಲದಿರುವುದು.

ನಾನೂ ಸಹ ಪ್ರಾರಂಭದಲ್ಲಿ ಹೀಗೆಯೇ ಭಾವಿಸಿದ್ದೆ. ಈ ಸಮಸ್ಯೆಯನ್ನು ಎರಡು ರೀತಿಯಲ್ಲಿ ಬಗೆಹರಿಸಬಹುದು ಎಂದು ಭಾವಿಸಿದ್ದೆವು. ಒಂದು: ವಿದ್ಯಾರ್ಥಿಗಳು ಇಂಗ್ಲಿಶ್ ಭಾಷೆ ಕಲಿಯುವಂತೆ ಮಾಡುವುದರ ಮೂಲಕ. ಇದು ಅಸಾಧ್ಯ ಎಂದು ತಿಳಿದಿದ್ದರಿಂದ ಇದನ್ನು ಕೈ ಬಿಡಲಾಯಿತು. ಎರಡು: ಇಂಗ್ಲಿಶ್ ಭಾಷೆಯಲ್ಲಿ ಬಂದ ಕೃತಿಗಳನ್ನು ಕನ್ನಡದಲ್ಲಿ ಅವರಿಗೆ ಅರ್ಥವಾಗುವ ರೀತಿಯಲ್ಲಿ ಹೇಳಿಕೊಡುವ ಮೂಲಕ. ನಾವು ಈಗ ಪ್ರಯೋಗಿಸುತ್ತಿ ರುವುದು ಇದನ್ನೇ. ಆದರೆ ಹೀಗೆ ಮಾಡುವುದರಿಂದ ಸಾಮಾಜಿಕ ಶಾಸ್ತ್ರಗಳ ಕಲಿಕೆಯ ಗುಣಮಟ್ಟವನ್ನು ಹೆಚ್ಚುಸುವಲ್ಲಿ ನಾವು ಸಫಲರಾಗಿಲ್ಲ ಎಂಬುದು ನನ್ನ ಅಭಿಮತ. ಏಕೆಂದರೆ ಸಾಮಾಜಿಕ ಶಾಸ್ತ್ರದ ಅಧ್ಯಯನ ನಮಗೆ ಹೆಚ್ಚು ಸಂಗತವಾಗಬೇಕಾದರೆ, ನಾವು ಉಪಯೋಗಿ ಸುವ ಪರಿಕಲ್ಪನೆಗಳು ವಾಸ್ತವವನ್ನು ಪ್ರತಿಬಿಂಬಿಸಬೇಕು. ಆದರೆ ನಾವು ಈಗ ಮಾಡುತ್ತಿರು ವುದು ವಾಸ್ತವವನ್ನು ಸರಿಯಾಗಿ ಗ್ರಹಿಸದ, ಕೆಲವೊಮ್ಮೆ ವಿಕೃತಗೊಳಿಸುವ ಪರಿಕಲ್ಪನೆಗಳನ್ನೇ ಇಂಗ್ಲಿಶ್‌ನಿಂದ ಕನ್ನಡಕ್ಕೆ ತರ್ಜುಮೆ ಮಾಡುತ್ತಿದ್ದೇವೆ. ಉದಾಹರಣೆಗೆ Stateಗೆ ರಾಜ್ಯ,

Civil Societyಗೆ ನಾಗರಿಕ ಸಮಾಜ, Casteಗೆ ಜಾತಿ, Religionಗೆ ಧರ್ಮ, ಇತ್ಯಾದಿ. ಪಾಶ್ಚಾತ್ಯ ದೇಶಗಳಲ್ಲಿ ಯಾವ ಸಂದರ್ಭಗಳಲ್ಲಿ ಈ ಪರಿಕಲ್ಪನೆಗಳು ಹುಟ್ಟಿಕೊಂಡವು, ಈ ಪರಿಕಲ್ಪನೆಗಳು ಏನನ್ನು ಸೂಚಿಸುತ್ತವೆ ಎನ್ನುವುದರ ಬಗ್ಗೆ ಯೋಚಿಸಲಿಲ್ಲ. 'ಸ್ಟೇಟ್' (State) ಎನ್ನುವುದು ಪಾಶ್ಚಾತ್ಯ ದೇಶಗಳಲ್ಲಿರುವುದಾದರೆ ನಮ್ಮಲ್ಲಿಯೂ ಇರಬೇಕು ಎನ್ನುವ ನಂಬಿಕೆಯಿಂದ ಅದನ್ನು ನಮ್ಮ ವಿದ್ಯಾರ್ಥಿಗಳಿಗೆ ಕಲಿಸಲು ಪ್ರಾರಂಭಿಸುತ್ತೇವೆ. State ಹಾಗೂ Civil Society ಗಳ ನಡುವಿನ ವ್ಯತ್ಯಾಸವನ್ನು ವಿದ್ಯಾರ್ಥಿಗಳು (ಉಪನ್ಯಾಸಕರೂ ಸಹ) ಗುರುತಿಸಲು ವಿಫಲರಾದರೆ, ಅದಕ್ಕೆ ಕಾರಣ ನಮ್ಮಲ್ಲಿ ನಿಜವಾಗಿಯೂ ಅಂತಹ ವ್ಯತ್ಯಾಸವಿಲ್ಲ ಎನ್ನುವ ಮೂಲಭೂತ ಸತ್ಯವನ್ನು ನಾವು ಗುರುತಿಸುವುದಿಲ್ಲ. ಬದಲಾಗಿ ಅವನಿಗೆ ಇಂಗ್ಲಿಶನ್ನು ಅರ್ಥಮಾಡಿಸುವುದು ಹೇಗೆ ಎಂದು ಚಿಂತಿತರಾಗುತ್ತೇವೆ.

ಈಗ ನಮ್ಮ ಮುಂದಿರುವ (ಅಂದರೆ ಸಾಮಾಜಿಕ ಶಾಸ್ತ್ರಗಳನ್ನು ಬೋಧಿಸುವವರ) ಸಮಸ್ಯೆ ನೋಡಿ. ಯಾವ ವಿಷಯವನ್ನು ಕನ್ನಡದಲ್ಲಿ ಹೇಳಿಕೊಡಲು ಪ್ರಯತ್ನಿಸುತ್ತೇವೆಯೋ ಅದನ್ನು ಹೇಳಿಕೊಡುವಲ್ಲಿ ಉಪಯೋಗಿಸುವ ನುಡಿಕಟ್ಟುಗಳು, ವಿದ್ಯಾರ್ಥಿಗೆ ಇಂಗ್ಲಿಶ್‌ನಷ್ಟೆ ಪರಕೀಯವಾದುದ್ದು. ಗ್ರಹಿಕೆಯ ಪರಿಮಿತಿಯ ಆಚೆ ಇರುವುದನ್ನು ಇಂಗ್ಲಿಶ್‌ನಲ್ಲಿ ಹೇಳಿದರೂ ಅಷ್ಟೇ, ಕನ್ನಡದಲ್ಲಿ ಹೇಳಿದರೂ ಅಷ್ಟೆ. ಪಾಠ ಹೇಳುವಾಗ ಕನ್ನಡ ಬಳಸುತ್ತಿದ್ದೇವೆ ಎನ್ನುವ ತೃಪ್ತಿಯೊಂದಿದ್ದರೆ ಸಾಕೆ? ಅದರ ಉದ್ದೇಶ ಈಡೇರುತ್ತದೆಯೆ ಎನ್ನುವುದನ್ನು ಕೇಳುವುದು ಬೇಡವೇ?

ಸಾಮಾಜಿಕ ಶಾಸ್ತ್ರಗಳಲ್ಲಿ ಭಾಷೆಯ ಮೂಲಕ ಸ್ಥಾಪನೆಗೊಳ್ಳುವ ಯಜಮಾನಿಕೆ (ಹೆಜಿಮೊನಿ) ಕೇವಲ ಪಾಶ್ಚಾತ್ಯರಿಗೆ ಮಾತ್ರ ಸಂಬಂಧಿಸಿದ್ದಲ್ಲ. ನಮ್ಮ ದೇಶದೊಳಗೂ ಅದೇ ರೀತಿಯ ಯಜಮಾನಿಕೆ ಮತ್ತೊಂದು ರೀತಿಯಲ್ಲಿ ಮುಂದುವರೆಯುತ್ತದೆ. ನಮ್ಮಲ್ಲಿ ಸಿದ್ಧಾಂತವನ್ನು ರೂಪಿಸುವವರು ಇಂಗ್ಲಿಶ್ ಭಾಷೆಯನ್ನು ಬಲ್ಲ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿರುವವರು, ನಮ್ಮ ದೃಷ್ಟಿಯಲ್ಲಿ ಅವರುಗಳು ಅತ್ಯಂತ ಘನತೆವೆತ್ತ ವಿದ್ವಾಂಸರುಗಳು (ಇದನ್ನು ನಾನು ವ್ಯಂಗ್ಯದಿಂದ ಹೇಳುತ್ತಿಲ್ಲ). ಏಕೆಂದರೆ ಅವರುಗಳು ವಿದ್ವಾಂಸರು ಎಂದು ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳಲ್ಲಿ ಗುರುತಿಸಲ್ಪಟ್ಟಿದ್ದಾರೆ. ಪಾಶ್ಚಾತ್ಯರು ಬರೆದ ಹಲವಾರು ಪುಸ್ತಕಗಳನ್ನು ಓದಿದ್ದಾರೆ ಹಾಗೂ ಸಾಕಷ್ಟು ಅಂತಾರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿರುತ್ತಾರೆ. ಒಬ್ಬ ವ್ಯಕ್ತಿ ವಿದ್ವಾಂಸನೆಂದು ಗುರುತಿಸಕೊಳ್ಳಲು ಇಷ್ಟೆಲ್ಲ ಇರಬೇಕು. ಇಲ್ಲಿ ಅವರ ವಿದ್ವತ್ತನ್ನಾಗಲಿ, ಶ್ರಮವನ್ನಾಗಲಿ ನಾನು ಅನುಮಾನಿಸುತ್ತಿಲ್ಲ. ಆದರೆ ಅಂತಹ ವಿದ್ವತ್ತಿನಿಂದ ಅವರ ಸಂಶೋಧನೆಗಳಿಂದ ನಮ್ಮ ಸಮಾಜಕ್ಕಾಗಿರುವ ಉಪಯೋಗವೇನು? ಹಾಗೂ ವ್ಯಕ್ತಿ ಉಪಯೋಗಿಸುವ ಪರಿಕಲ್ಪನೆಗಳು ನಮ್ಮ ವಾಸ್ತವವನ್ನು ಸರಿಯಾಗಿ ಗ್ರಹಿಸುತ್ತವೆಯೆ? ಇಂತಹ ಪ್ರಶ್ನೆಗಳನ್ನು ಕೇಳುವ ಅವಕಾಶಗಳನ್ನೆ ನಾವು ಸೃಷ್ಟಿಸಿಕೊಂಡಿಲ್ಲ. ನಮ್ಮ ಕೇಂದ್ರೀಕೃತ ರಾಜಕೀಯ

ವ್ಯವಸ್ಥೆಯಂತೆ 'ಅಧಿಕೃತವಾದದ್ದು' ಎನಿಸಿಕೊಳ್ಳಲು ಅದು ಮೇಲಿನಿಂದ ಕೆಳಗೆ ಬರಬೇಕು. ಕೆಳಗಿನಿಂದ ಮೇಲೇರುವ ರಚನೆಯನ್ನೇ ನಾವು ಸೃಷ್ಟಿಸಿಲ್ಲ.

ಜನಸಾಮಾನ್ಯರ ಹಿತಾಸಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಕನ್ನಡದ ಬಗ್ಗೆ ಯೋಚಿಸುವವರು ಸಮಾಜಕ್ಕೆ ಒಳಿತಾಗುವಂತೆ ನಮ್ಮ ಸಮಾಜ, ಸಂಸ್ಕೃತಿಗಳ ಬಗ್ಗೆ ಸರಿಯಾದ ರೀತಿಯಲ್ಲಿ ಚರ್ಚೆಯಾಗಬೇಕಾದರೆ, ಸಂಶೋಧನೆ ಮಾಡಲು ನಾವು ಎಂತಹ ಪರಿಸರವನ್ನು ಸೃಷ್ಟಿಸಬೇಕು; ನಾವು ಬದುಕುತ್ತಿರುವ ವಾಸ್ತವದ ಗ್ರಹಿಕೆಯಿಂದ ದೂರವಿರುವ ವಿದ್ವಾಂಸರುಗಳ ಯಾಜಮಾನಿಕೆಯನ್ನು ಹೇಗೆ ತಪ್ಪಿಸಬೇಕು ಎನ್ನುವುದರ ಬಗ್ಗೆ ಚಿಂತಿಸಬೇಕು. ಸ್ಥಳೀಯ ಪರಿಸರದಲ್ಲಿ ಒಂದು ಶಿಸ್ತುಬದ್ಧ ಸಮಾಜ ಶಾಸ್ತ್ರದ ಅಧ್ಯಯನವನ್ನು ರೂಪಿಸುವಲ್ಲಿ ಪ್ರಯತ್ನ ಪಡಬೇಕು. ಅಂತಹ ಸಂಶೋಧನೆಗಳು, ಸಮಾಜದ ಬದಲಾವಣೆಯ ಬಗ್ಗೆ ಹೊಸ ವಿಚಾರಗಳು ನಮ್ಮ ಸ್ಥಳೀಯ ಭಾಷೆಯಲ್ಲಿ ನಡೆಯುವಂತಾದರೆ, ಸರ್ಕಾರದ ನೀತಿ ನಿರೂಪಣೆಯನ್ನು ರೂಪಿಸುವಲ್ಲಿ ಇದು ಸಹಾಯಕವಾಗುತ್ತದೆ. ಈಗ ಸಾಮಾಜಿಕ ಶಾಸ್ತ್ರಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳಿಗೂ ಸರ್ಕಾರದ ನೀತಿಯನ್ನು ರೂಪಿಸುವುದಕ್ಕೂ ಅರ್ಥಾತ್ ಸಂಬಂಧವೇ ಇಲ್ಲದಂತಾಗಿದೆ. ಕನ್ನಡದಲ್ಲಿ ನಡೆಯುತ್ತಿರುವ ಚರ್ಚೆ ಎಂ. ಚಿದಾನಂದಮೂರ್ತಿ, ಎಂ.ಎಂ. ಕಲ್ಬುರ್ಗಿಯವರು ನಡೆಸುತ್ತಿರುವ ಸಂಶೋಧನೆಗಷ್ಟೇ ಮೀಸಲಾಗಿದೆ. ಅವರನ್ನು ಉದಾಹರಿಸುತ್ತಿರುವುದು ಅವರ ಸಂಶೋಧನೆಯನ್ನು ಹೀಗಳೆಯುವುದಕ್ಕಲ್ಲ. ಜನರಿಗೆ ಉಪಯೋಗವಾಗುವಂತಹ ಜನರ ತಕ್ಷಣದ ಬದುಕಿಗೆ ಸಂಬಂಧಿಸಿದಂತಹ ವಿಷಯಗಳ ಬಗ್ಗೆ ಸಂಶೋಧನೆ ಚರ್ಚೆ ನಡೆದರೆ, ನಾವು ಯಾವ ಉದ್ದೇಶಕ್ಕಾಗಿ (ಸಾಮಾನ್ಯ ಜನರ ಒಳಿತು) ಕನ್ನಡ ಬೇಕು ಎಂದು ಹೇಳುತ್ತೇವೆಯೋ ಅದನ್ನು ಈಡೇರಿಸುವುದಕ್ಕೆ. ಇದಕ್ಕೆ ಮೊಟ್ಟಮೊದಲು ಸರ್ಕಾರ ಮಾಡಬೇಕಾದ ಕೆಲಸವೆಂದರೆ, ಕನ್ನಡ ಎಂದರೆ ಸಾಹಿತಿಗಳು, ಅದರ ಉದ್ಧಾರ ಎಂದರೆ ಸಾಹಿತಿಗಳಿಗೆ ವಿವಿಧ ಹುದ್ದೆಗಳನ್ನು ನೀಡುವುದು ಎನ್ನುವ ತಿಳುವಳಿಕೆಯಿಂದ ಹೊರಬರುವುದು. ಹಾಗೆ ಮಾಡದಿದ್ದಲ್ಲಿ ಕನ್ನಡವನ್ನು ಉದ್ಧಾರ ಮಾಡಹೊರಟ ಸಾಹಿತಿಗಳ ಪಟ್ಟಭದ್ರ ಹಿತಾಸಕ್ತಿಗಳ ಗುಂಪೇ ಬೆಳೆಯುತ್ತದೆ. ಈಗಾಗುತ್ತಿರುವುದೂ ಅದೇ.



## ವೃತ್ತಿಶಿಕ್ಷಣದಲ್ಲಿ ಇಂಗ್ಲಿಶಿನ ಹಿಂಸೆ

● ಎಸ್ ಸುಂದರ್

ಕರ್ನಾಟಕದ ತಾಂತ್ರಿಕ ಶಿಕ್ಷಣದಲ್ಲಿ ನಾಲ್ಕು ಬಗ್ಗೆಯ ವೃತ್ತಿಪರ ಸಂಬಂಧ ಕೋರ್ಸುಗಳಿವೆ. ಅವೆಂದರೆ- ಐಟಿ, ಜೆಓಸಿ, ಪಾಲಿಟೆಕ್ನಿಕ್ ಮತ್ತು ಇಂಜಿನಿಯರಿಂಗ್. ಮೊದಲ ಮೂರು ಕೋರ್ಸುಗಳಿಗೆ ಎಸ್ಸೆಸ್ಸೆಲ್ಸಿಯ ಅಂಶಗಳ ಆಧಾರದ ಮೇಲೆ ನೇರ ಪ್ರವೇಶವಿದ್ದರೆ,

ಇಂಜಿನಿಯರಿಂಗ್‌ಗೆ ವಿಜ್ಞಾನ ವಿಷಯದಲ್ಲಿ ಪಿಯುಸಿ ನಂತರದ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾದವರಿಗೆ ಪ್ರವೇಶ. ಎಸ್ಸೆಸೆಲ್ಸಿಯಲ್ಲಿ ಕಡಿಮೆ ಅಂಕಗಳನ್ನು ಪಡೆದ ಅಥವಾ ಹೆಚ್ಚು ಅಂಕ ಪಡೆದಿದ್ದರೂ ವಿದ್ಯಾಭ್ಯಾಸದಲ್ಲಿ ಮುಂದುವರೆಸಲಾಗದ ವಿದ್ಯಾರ್ಥಿಗಳು, ಸಾಮಾನ್ಯವಾಗಿ ೨ ವರ್ಷದ ಅವಧಿಯ ಐಟಿ ಮತ್ತು ಜೆಓಸಿ ಕೋರ್ಸುಗಳಿಗೆ ಸೇರುತ್ತಾರೆ. ಇವರಿಗೆ ಓದಿನ ನಂತರ ಕೆಲಸ ಸಿಗುವುದು ಮತ್ತು ಓದು ಅಲ್ಪಕಾಲಾವಧಿಯಲ್ಲೇ ಮುಗಿಯುವುದು ಬೇಕಿರುತ್ತದೆ. ಇವರಿಗೆ ಎಸ್ಸೆಸೆಲ್ಸಿಯ ನಂತರ ಏಳು ವರ್ಷಗಳಷ್ಟು ಓದಿ ಇಂಜಿನಿಯರಿಂಗ್ ಪದವಿ ಪಡೆಯುವಷ್ಟು ಆರ್ಥಿಕ ಚೈತನ್ಯವಿರುವುದಿಲ್ಲ. ಇದಕ್ಕೆ ಕಾರಣ, ಈ ಕೋರ್ಸುಗಳಿಗೆ ಬರುವ ವಿದ್ಯಾರ್ಥಿಗಳು ಬಹುಪಾಲು ಗ್ರಾಮೀಣ ಹಿನ್ನೆಲೆ ಅಥವಾ ನಗರದ ಕೆಳಮಧ್ಯಮ ವರ್ಗಕ್ಕೆ ಸೇರಿದವರಾಗಿರುವುದು. ಸರ್ಕಾರಿ ಶಾಲೆಗಳಲ್ಲಿ ಕಲಿತವರಾಗಿರುವುದು. ಅಪವಾದಕ್ಕೆಂಬಂತೆ ಎಲ್ಲೋ ಒಬ್ಬೊಬ್ಬರು ಇಂಗ್ಲಿಶ್ ಮಾಧ್ಯಮದಿಂದ ಬರುವವರೂ ಉಂಟು.

ಇಂಜಿನಿಯರಿಂಗ್ ಕೋರ್ಸುಗಳಿಗೆ ಸೇರುವವರು ಪಿಯುಸಿಯಲ್ಲಿ ಇಂಗ್ಲಿಶ್ ಮಾಧ್ಯಮದ ಅನುಭವ ಹೊಂದಿರುವುದರಿಂದ, ಇತರರಿಗೆ ಹೋಲಿಸಿದರೆ ಬೇಗನೇ ಇಂಗ್ಲಿಶ್ ಮಾಧ್ಯಮಕ್ಕೆ ಹೊಂದಿಕೊಳ್ಳುತ್ತಾರೆ ಎಂದು ಹೇಳಲಾಗುತ್ತದೆ. ಪಾಲಿಟೆಕ್ನಿಕ್ ಕಾಲೇಜುಗಳಿಗೆ ಸೇರುವ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಹೆಚ್ಚು ತೊಂದರೆಯಾಗುತ್ತಿರುವುದು ನಿಜವಾದರೂ, ಬಹುತೇಕ 'ಮೆರಿಟ್' ವಿದ್ಯಾರ್ಥಿಗಳೇ ಸೇರಿಕೊಳ್ಳುವುದರಿಂದ ಅಲ್ಲೂ ಸಹ ಇಂಗ್ಲಿಶಿನ ಸಮಸ್ಯೆ ತೀವ್ರವಾಗಿಲ್ಲ ಎಂದೇ ನಂಬಿಕೆ. ಆದರೆ ಐಟಿ ಮತ್ತು ಜೆಓಸಿ ಶಿಕ್ಷಣದಲ್ಲಿ ಮಾತ್ರ, ಕನ್ನಡ ಮಾಧ್ಯಮದಲ್ಲಿ ಓದಿ ಬಂದ ವಿದ್ಯಾರ್ಥಿಗಳು ಇಂಗ್ಲಿಶಿನ ಜತೆ ಹೆಣಗಾಡುವುದು ನಿಚ್ಚಳವಾಗಿ ಕಾಣುತ್ತದೆ.

ನನ್ನ ಉದ್ಯೋಗದ ಕಾರ್ಯವ್ಯಾಪ್ತಿ ಜೆಓಸಿ ವೃತ್ತಿಶಿಕ್ಷಣಕ್ಕೆ ಸಂಬಂಧ ಪಟ್ಟದ್ದರಿಂದ, ಆ ಮೂಲಕವೇ ವಿಷಯ ಪ್ರವೇಶ ಮಾಡೋಣ. ಪ್ರತೀ ವರ್ಷ ೫೦-೬೦ ಸಾವಿರ ವಿದ್ಯಾರ್ಥಿಗಳು ನಮ್ಮ ರಾಜ್ಯದಲ್ಲಿ ಈ ಪದವಿಪೂರ್ವ (+೨) ಹಂತದ ವೃತ್ತಿಶಿಕ್ಷಣ ತರಬೇತಿ ಪಡೆಯುತ್ತಿದ್ದಾರೆ. ಪದವಿ ತರಗತಿಗಳ ನಿರರ್ಥಕತೆಯನ್ನು ಮನಗಂಡ ಕರ್ನಾಟಕ ಸರ್ಕಾರ ಅನವಶ್ಯಕವಾಗಿ ಪದವಿ ಸೇರುವುದನ್ನು ತಪ್ಪಿಸುವ ಮತ್ತು +೨ ಹಂತದಲ್ಲಿ ಬದುಕಿಗೆ ಪೂರಕವಾದ ಶಿಕ್ಷಣವನ್ನು ನೀಡುವ ಉದ್ದೇಶದಿಂದ, ೧೯೭೭ರಿಂದ ವೃತ್ತಿಶಿಕ್ಷಣ ಕೋರ್ಸುಗಳನ್ನು ಆರಂಭಿಸಿತು. ರಾಜ್ಯದಲ್ಲಿರುವ ಎಲ್ಲ ತಾಂತ್ರಿಕ ಮತ್ತು ಇತರೆ ಔದ್ಯೋಗಿಕ ಕ್ಷೇತ್ರಗಳಿಗೆ ಸಂಬಂಧಪಟ್ಟ ಸುಮಾರು ೫೩ ವಿವಿಧ ವೃತ್ತಿ ವಿಷಯಗಳು ಈ ಕಲಿಕೆಯಲ್ಲಿವೆ. ಉದಾ: ಆಟೋಮೊಬೈಲ್ಸ್, ಎಲೆಕ್ಟ್ರಿಕಲ್, ಕಂಪ್ಯೂಟರ್, ಡೈರಿ ಸೈನ್ಸ್, ಸಿರಿಕಲ್ಚರ್, ಬ್ಯೂಟಿಕೇರ್, ಅಗ್ರಿಕಲ್ಚರ್, ಫೀಶ್‌ಫಾರ್ಮಿಂಗ್, ಹೊಲಿಗೆ ಮತ್ತು ಕಸೂತಿ ಇತ್ಯಾದಿ.

ಈ ಮೊದಲೇ ತಿಳಿಸಿದಂತೆ ವೃತ್ತಿಶಿಕ್ಷಣಕ್ಕೆ ಬರುವ ವಿದ್ಯಾರ್ಥಿಗಳಿಗೆ ತುರ್ತು ಉದ್ಯೋಗದ / ಜೀವನದ ದಾರಿಯನ್ನು ಕಂಡುಕೊಳ್ಳುವ ಒತ್ತಡವಿರುವುದರಿಂದ ಇವರ ಗುರಿ ವೃತ್ತಿ ನೈಪುಣ್ಯತೆಯೇ ಹೊರತು ವಿಷಯದ ಪಾಂಡಿತ್ಯವಲ್ಲ. ಆದರೆ ಪ್ರಸ್ತುತ

ಕೋರ್ಸುಗಳ ಶಿಕ್ಷಣ ಮಾಧ್ಯಮ ಇಂಗ್ಲಿಶ್ ಆಗಿದೆ. ಕರ್ನಾಟಕ ರಾಜ್ಯ ವೃತ್ತಿಶಿಕ್ಷಣ ಇಲಾಖೆಯು ಕನ್ನಡದಲ್ಲೂ ಬೋಧನೆ-ಬರಹ ಮಾಡಬಹುದೆಂದು ತನ್ನ ಸುತ್ತೋಲೆಯಲ್ಲಿ ತಿಳಿಸಿದೆ. ಆದರೂ ಇದುವರೆವಿಗೂ ಅಂತಹ ಯಾವ ಪ್ರಯತ್ನ ನಡೆದಿಲ್ಲ. ಕನ್ನಡದಲ್ಲಿ ಇದಕ್ಕೆ ಪೂರಕವಾದ ಬೋಧನಾ ಸಾಮಗ್ರಿಯಾಗಲೀ ಆ ಬಗ್ಗೆ ಯೋಚಿಸುವ ತಜ್ಞರಾಗಲೀ, ಕಾರ್ಯಕ್ರಮಗಳಾಗಲೀ ಯಾವುದೂ ಇಲ್ಲ. ಕಳೆದ ೨೪ ವರ್ಷಗಳಿಂದ ಇಲ್ಲಿ ಶಿಕ್ಷಣ ಮಾಧ್ಯಮದ ಈ ಸಮಸ್ಯೆ ಹಾಗೇ ಉಳಿದಿದೆ. ವಿದ್ಯಾರ್ಥಿಗಳ ಮೇಲೆ ಹಿಂಸೆಯಾಗಿ ಕೂತಿದೆ.

ನಾನೊಮ್ಮೆ ೧೯೯೮ರಲ್ಲಿ ಒಬ್ಬ ದಕ್ಷಿಣ ಕನ್ನಡ ಜಿಲ್ಲೆಯ ಪ್ರತಿಷ್ಠಿತ ಕಾಲೇಜೊಂದರ ಆಟೋಮೊಬೈಲ್ಸ್ ವೃತ್ತಿಶಿಕ್ಷಣ ವಿಭಾಗಕ್ಕೆ ಬಾಹ್ಯ ಪರೀಕ್ಷಕನಾಗಿ ಹೋಗಿದ್ದೆ. ಕುತೂಹಲ ಕ್ಕೆಂದು ವಿಭಾಗದ ಮುಖ್ಯಸ್ಥರಿಗೆ ಕೇಳಿದೆ: "ನಿಮ್ಮಲ್ಲಿ ಬರುವ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಹೇಗಿದೆ?" "ನಮ್ಮಲ್ಲಿ ಅದೆಲ್ಲಾ ಸಮಸ್ಯೆಯೇ ಇಲ್ಲಿ ಮಾರಾಯರೆ, ಎಲ್ಲ ಸ್ಟಾಂಡರ್ಡ್" ಎಂದರು. ದಕ್ಷಿಣ ಕನ್ನಡ ಜಿಲ್ಲೆ ರಾಜ್ಯದಲ್ಲೇ ಹೆಚ್ಚು ಅಕ್ಷರಸ್ಥರ ನಾಡಾಗಿರುವುದರಿಂದ ಇರಬಹುದೇನೋ ಎಂದು ಸುಮ್ಮನಾದೆ. ಆದರೆ ಪ್ರಾಕ್ಟಿಕಲ್ ಪರೀಕ್ಷೆಯ ಹೊತ್ತಲ್ಲಿ ವಿಷಯದ ರೆಕಾರ್ಡ್‌ಗಳನ್ನು ಪರಿಶೀಲಿಸುವಾಗ ೩೦, ವಿದ್ಯಾರ್ಥಿಗಳಲ್ಲಿ ಸುಮಾರು ೨೦ ವಿದ್ಯಾರ್ಥಿಗಳು ಪುಟವೊಂದಕ್ಕೆ ೧೫ಕ್ಕಿಂತಲೂ ಹೆಚ್ಚು ಕಾಗುಣಿತ ದೋಷ ಮಾಡಿ ಬರೆದಿ ದ್ದರು. ಕೆಲವರಲ್ಲಿ ಪುಟಕ್ಕೆ ೩೦-೪೦ ತಪ್ಪುಗಳು. ೪ ವಿದ್ಯಾರ್ಥಿಗಳು ಮಾತ್ರ ತಪ್ಪಿಲ್ಲದೆ ರೆಕಾರ್ಡ್ ಬರೆದಿದ್ದರು. ಆ ಮೂವತ್ತು ಜನರಲ್ಲಿ ೧೩ ಜನ ಫಸ್ಟ್‌ಕ್ಲಾಸಿನಲ್ಲಿ ೧೫ ಜನ ಸೆಕೆಂಡ್ ಕ್ಲಾಸಿನಲ್ಲಿ ಮತ್ತು ೨ ಮಾತ್ರ ತೃತೀಯ ದರ್ಜೆಯಲ್ಲಿ ಎಸ್ಸೆಸೆಲ್ಸಿ ಪಾಸಾದವರು. ಅನಂತರ ಮುಖ್ಯಸ್ಥರಲ್ಲಿ ಪ್ರಸ್ತಾಪಿಸಿದೆ. ಅವರು ನಿಜ ಬಾಯ್ಬಿಟ್ಟರು: "ನೋಡಿ ಸಾರ್, ನಾವು ಮಾಡುವುದು ಮಾಡ್ತೇವೆ. ಕಲಿಯುವುದು ಅವರಿಗೆ ಬಿಟ್ಟಿದ್ದು. ಅವರು ಎಸ್ಸೆಸೆಲ್ಸಿ ಪಾಸ್ ಮಾಡಿ ಬಂದಿಲ್ಲವಾ? ಅವರಿಗೆ ನಾವು ಇಲ್ಲಿ ಆಟೋಮೊಬೈಲ್ ಬಗ್ಗೆ ಹೇಳುವುದು ಬಿಟ್ಟು ಇಂಗ್ಲಿಶ್ ಕಲಿಸಲಿಕಾಗುತ್ತಾ? ಜನಕ್ಕೆ ಈಗ ಇಂಗ್ಲಿಶಿನ ಹುಚ್ಚು ಹಿಡಿದಿದೆ. ಸಾರ್, ಎಂತಾ ಮಾಡುಕಾತಿಲ್ಲೆ"

ರಾಜ್ಯದ ಯಾವುದೇ ಕಾಲೇಜಿಗೆ ಹೋಗಿ ವಿಜ್ಞಾನ ಅಥವಾ ತಾಂತ್ರಿಕಜ್ಞಾನದ ಅಧ್ಯಾಪಕ ರನ್ನು ಭಾಷಾ ಸಮಸ್ಯೆಯ ಬಗ್ಗೆ ಕೇಳಿ ನೋಡಿ. ಎದೆಯುಬ್ಬಿಸಿಕೊಂಡು 'ನಮ್ಮ ವಿದ್ಯಾರ್ಥಿ ಗಳಿಗೆ ಸಮಸ್ಯೆಯೇ ಇಲ್ಲ' ಎಂದು ಹೇಳುವ ಆತ್ಮವಂಚಕ ಉತ್ತರ ನೀಡುತ್ತಾರೆ. ವೈಯಕ್ತಿಕ ಖಾಸಗಿಯಾಗಿ ಆಪ್ತವಾಗಿ ಪ್ರಾಮಾಣಿಕವಾಗಿ ಉತ್ತರಿಸುವಂತೆ ಮಾಡಿದರೆ, ನಿಜ ಬಾಯ್ಬಿಡು ತ್ತಾರೆ.

ನಮ್ಮ ವಿದ್ಯಾರ್ಥಿಗಳಿಗೆ ವೃತ್ತಿಶಿಕ್ಷಣದ ಮೊದಲ ಆರು ತಿಂಗಳು ನರಕಯಾತನೆ. ಇಂಗ್ಲಿಶಿ ನಲ್ಲಿ ಪಾಠ ಮಾಡಿದರೆ ಎಲ್ಲರ ಮುಖಗಳು ಕಳಾಹೀನವಾಗಿ ತರಗತಿಯಲ್ಲಿ ನೀರವ ಮೌನ ಆವರಿಸುತ್ತದೆ. ನಾವು ನೋಟ್ಸ್‌ಗಳನ್ನು ಇಂಗ್ಲಿಶಿನಲ್ಲೇ ಕೊಟ್ಟರೂ, ಪಾಠ ಮಾಡುವಾಗ ಕನ್ನಡಕ್ಕೇ ಒತ್ತು ಕೊಡುತ್ತೇವೆ. ಅವರಿಗೆ ತಾಂತ್ರಿಕ ಶಿಕ್ಷಣದ ಪರಿಕಲ್ಪನೆ ಹೊಸದು. ಭಾಷೆಯೂ ಹೊಸದಾದಾಗ ಗಲಿಬಲಿಗೆ ಒಳಗಾಗುತ್ತಾರೆ. ಉದಾ:ಗೆ ಒಂದು ವಾಹನದ

ಇಂಜಿನ್ ಬಗ್ಗೆ ಅಭ್ಯಾಸ ಮಾಡಬೇಕೆಂದಿಟ್ಟುಕೊಳ್ಳಿ. ಅದರಲ್ಲಿ ಬರುವ ನೂರಾರು ಸಂಕೀರ್ಣವಾದ ಬಿಡಿಭಾಗಗಳನ್ನೂ ಅದರ ಕಾರ್ಯ ವಿಧಾನಗಳನ್ನು ಅವರು ನೆನಪಿಟ್ಟುಕೊಳ್ಳಬೇಕು. ಹೀಗೆ ಮನಸ್ಸು ಹೊಸ ವಿಷಯವೊಂದಕ್ಕೆ ಹೊಸ ಪರಿಕಲ್ಪನೆಯೊಂದಕ್ಕೆ ಕರೆದುಕೊಳ್ಳಬೇಕಾದ ಇಂಗ್ಲಿಶಿನ ಗೋಡೆ ಎದುರಾಗುತ್ತದೆ. ತರಗತಿಯಲ್ಲಿ ಎಷ್ಟು ಹೇಳುತ್ತೇವೋ ಅಷ್ಟೇ. ಮನೆಯಲ್ಲಿ ಓದುವ ಗೋಜಿಗೇ ಹೋಗುವುದಿಲ್ಲ ಅಥವಾ ಕಡಿಮೆ ಹೊತ್ತು ಓದುತ್ತಾರೆ. ಇದುವರೆಗೂ ಒಂದು ಒಳ್ಳೆಯ ಪುಸ್ತಕ ಆಟೋಮೊಬೈಲ್ ಬಗ್ಗೆ ಕನ್ನಡದಲ್ಲಿ ಲಭ್ಯವಿಲ್ಲ. ಹೀಗಾಗಿ ಅವರಲ್ಲಿ ಒಂದು ರೀತಿಯ ಅನ್ಯತನ ಬೆಳೆಯಲಾರಂಭವಾಗುತ್ತದೆ. ಒಂದು ಹೊಸ ವಿಷಯದ ಬಗ್ಗೆ ನಾಳೆ ತಮ್ಮ ಬದುಕಿಗೆ ಆಧಾರವಾಗಬಲ್ಲ ಕ್ಷೇತ್ರದ ಬಗ್ಗೆ ನಿಜವಾಗಿಯೂ ಮಾಡಬೇಕಾದಷ್ಟು ಆಸಕ್ತಿ ಕುತೂಹಲಗಳು ಬೆಳೆಯುವುದಿಲ್ಲ. ಇದಕ್ಕೆ ಒಟ್ಟಾರೆಯಾಗಿ ನಮ್ಮ ಶಿಕ್ಷಣ ವ್ಯವಸ್ಥೆಯ ಲೋಪದೋಷಗಳು ಕಾರಣವೆಂಬುದು ನಿಜವಾದರೂ, ಇದರಲ್ಲಿ ಭಾಷೆಯ ಪಾತ್ರ ಬಹಳ ಮುಖ್ಯವಾದದು. ಹೀಗಾಗಿಯೇ ತರಗತಿಯಲ್ಲಿ ಓದುವುದರಲ್ಲಿ ಬಹಳ ಆಸಕ್ತಿಯಿರುವ ವಿದ್ಯಾರ್ಥಿಗಳೂ ಕೂಡ ಹೆಚ್ಚಿನ ಓದಿಗೆ ಇಂಗ್ಲಿಶನ್ನೇ ನೆಚ್ಚಬೇಕಾದ್ದರಿಂದ, general readingಗೆ ಹೋಗುವುದಿಲ್ಲ. ವಿದ್ಯಾರ್ಥಿಗಳು ಮಾತ್ರವಲ್ಲ ಶಿಕ್ಷಕರೂ ಸಹ. ಈ ಶಿಕ್ಷಣವು ನಮ್ಮ ಇತರೆ ಶಿಕ್ಷಣದಂತಲ್ಲದೆ ಬದುಕಿಗೆ ನೇರವಾಗಿ ಸಂಬಂಧಿಸಿದ್ದಾದರೂ ತರಗತಿಗೆ ಈ ಬಗೆಗಿನ ಪ್ರಶ್ನೆಗಳು ಬರುವುದು ಬಹಳ ಬಹಳ ಕಡಿಮೆ. ನಾವಾಗಿಯೇ ಕೆದಕಿ ಕೇಳಿದಾಗ ಅದ್ಭುತವಾದ ಉತ್ತರ ನೀಡುವ ಎಷ್ಟೋ ಪ್ರಸಂಗಗಳಿವೆ. ಥಿಯರಿ ಕ್ಲಾಸ್‌ಗಳಲ್ಲಿ ಬೆಪ್ಪಾಗಿ ಕುಳಿತಿರುವ ಎಷ್ಟೋ ವಿದ್ಯಾರ್ಥಿಗಳು, ಪ್ರಾಯೋಗಿಕ ತರಗತಿಗಳಲ್ಲಿ ಲವಲವಿಕೆಯಿಂದ ಕೆಲಸ ಮಾಡುವುದನ್ನು ಕಾಣಬಹುದು. ನಮ್ಮ ವಿದ್ಯಾರ್ಥಿಗಳಿಗೆ ಒಂದು ಇಂಜಿನನ್ನು ಬಿಚ್ಚಿ ರಿಪೇರಿ ಮಾಡುವುದು ಸುಲಭ. ಅದರ ಬಗ್ಗೆ ಬರೆಯುವುದು ಮಾತನಾಡುವುದು ಕಷ್ಟ.

ನಮ್ಮ ಕಾಲೇಜಿನ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ವಸ್ತು ಪ್ರದರ್ಶನವೊಂದನ್ನು ಏರ್ಪಡಿಸಲಾಗಿತ್ತು. ನಮ್ಮ ವಿದ್ಯಾರ್ಥಿಗಳ ಒಂದು ತಂಡ ಅಂಬಾಸಿಡರ್ ಕಾರ್ ಇಂಜಿನನಲ್ಲಿ ಪೂರ್ತಿಯಾಗಿ ಸ್ವತಃ ತಾವೇ ಎರಡು ವಾರಗಳ ಕಾಲ ಶ್ರಮವಹಿಸಿ ವರ್ಕಿಂಗ್ ಸೆಕ್ಷನ್ ಮಾಡೆಲ್ ಮಾಡಿ ಪ್ರದರ್ಶನ ಕಿಟ್ಟರು. ಅವರ ಪಕ್ಕದಲ್ಲೇ ಇಂಗ್ಲಿಶ್ ಮಾಧ್ಯಮದ ಪಿಯುಸಿ ವಿಜ್ಞಾನದ ವಿದ್ಯಾರ್ಥಿಗಳು ತಮ್ಮ ಸಣ್ಣಪುಟ್ಟ ಪ್ರಯೋಗಗಳನ್ನೇ ಇಂಗ್ಲಿಶಿನಲ್ಲಿ ಅರಳು ಮರಿದಂತೆ ವಿವರಿಸುತ್ತಿದ್ದರು. ತೀರ್ಪುಗಾರರು ಬಂದಾಗ ಬಹ ಅಂಜಿಕೆಯಿಂದ ಕನ್ನಡದಲ್ಲೇ ತಮ್ಮ ಇಂಜಿನ್ ಮಾಡೆಲ್ ಬಗ್ಗೆ ವಿವರಿಸಿದರು. ಅವರಿಗೆ ಮೊದಲ ಬಹುಮಾನ ಬರಲಿಲ್ಲ. ಒಂದು ಇಂಜಿನ್ ಮಾಡೆಲ್ ಮಾಡುವುದು ಅಷ್ಟು ಸುಲಭದ ಕೆಲಸವಲ್ಲ ಎಂದೂ ಒಬ್ಬ ಸಾಧಾರಣ ಅಧ್ಯಾಪಕನಿಗೂ ಹೊಳೆಯುತ್ತದೆ. ಆದರೇನು ಮಾಡುವುದು? ಅವರಿಗೆ ಇಂಗ್ಲಿಶ್ ಇರಲಿಲ್ಲ ನಮ್ಮಲ್ಲಿ ಇಂಗ್ಲಿಶಿನ ನದಿ ದಾಟಲಾರದೆ ಅಧಿಕೃತವಾಗಿ ಆಟೋಮೊಬೈಲ್ ಡಿಪ್ಲೊಮಾ ಪ್ರಮಾಣ ಪತ್ರವನ್ನು ಪಡೆಯದ ವಿದ್ಯಾರ್ಥಿಗಳು ಫೀಲ್ಡ್‌ನಲ್ಲಿ ಬಹಳ ಹೆಸರು ಪಡೆದ ತಂತ್ರಜ್ಞರಾಗಿರುವ ಎಷ್ಟೋ ನಿದರ್ಶನಗಳಿವೆ.

ಉತ್ತರ ಪತ್ರಿಕೆಗಳನ್ನು ಪರಿಶೀಲಿಸಿದರೆ ಅರ್ಧಕ್ಕಿಂತ ಹೆಚ್ಚು ಜನರಿಗೆ ಕನಿಷ್ಠ ವಾಕ್ಯ ರಚನೆಯೇ ತಿಳಿದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ತಿಣುಕಾಡಿ ತಿಣುಕಾಡಿ ಒಂದಷ್ಟು ಪದ ಗಳನ್ನು ಗುಡ್ಡೆ ಹಾಕಿರುತ್ತಾರೆ. ರಾಶಿ ಬಿದ್ದ ಆ ಪದಗಳಲ್ಲಿ ನಮಗೆ ಬೇಕಾದ್ದನ್ನು ಆಯ್ದು ಅಂಕಗಳನ್ನು ನೀಡುತ್ತಾ ಹೋಗಬೇಕಾಗುತ್ತದೆ. ಆಗ ಕುವೆಂಪು ಹೇಳಿದ 'ಗ್ರೇಸ್' ಅಂಕಗಳ ದುರಂತ ನಾಟಕದ ನೆನಪಾಗುತ್ತದೆ. "ದಡದಲ್ಲಿ ನಿಂತು ನೋಡುವ ಹಿರಿಯರ ಇತ್ಯರ್ಥ ವೇನು? ಹುಡುಗರೆಲ್ಲ ಈಚೀಚೆಗೆ ದಡ್ಡರಾಗುತ್ತಿದ್ದಾರೆ! ಸ್ಟಾಂಡರ್ಡ್ ತುಂಬಾ ಇಳಿದು ಹೋಗಿದೆ! ಹಾಗಾದರೆ ಏನು ಮಾಡಬೇಕು? ಇನ್ನಷ್ಟು ಇಂಗ್ಲಿಶ್ ಪಠ್ಯಪುಸ್ತಕ ಹೆಚ್ಚಿಸಿ! ಗ್ರಾಮರ್ ಲೇಹ್ಯ ಇನ್ನೂ ಸ್ವಲ್ಪ ಹೆಚ್ಚಾಗಿ ತಿನ್ನಿಸಿ! ಪರಿಣಾಮ: ಪರೀಕ್ಷೆಯ ಫಲಿತಾಂಶ ಪ್ರಕಟನೆ ಸಮಯದಲ್ಲಿ ಮತ್ತೆ 'ಕೃಪೆ'ಯ ಕೈ ಹಿಡಿದು ಎತ್ತಬೇಕು. ಮುಂದಿನ ಮೆಟ್ಟಲಿಗೆ"

ಈ ನಾಟಕ - ದುರಂತ ನಾಟಕ - ಇನ್ನು ಸಾಕು ಎಂದು ಕುವೆಂಪುರವರು ೧೯೫೬ರಲ್ಲಿಯೇ ನಮ್ಮನ್ನು ಎಚ್ಚರಿಸಿದ್ದಾರೆ. ಆದರೆ ವಾಸ್ತವದಲ್ಲಿ ಆಗುತ್ತಿರುವುದೇನು? ಎಷ್ಟೋ ಬಾರಿ ಪ್ರಾಕ್ಟಿಕಲ್ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯ ಅಂಕ ಪಡೆದ ವಿದ್ಯಾರ್ಥಿಗಳು ಥಿಯರಿಯಲ್ಲಿ ಪ್ರಯಾಸದಿಂದ ಪಾಸಾಗುವುದಿದೆ. ಅಂದರೆ ಏನರ್ಥ? ಅವರಿಗೆ ವಿಷಯ ಮನದಟ್ಟಾಗಿಲ್ಲ ವೆಂದೇ ಅಥವಾ ಅಭಿವ್ಯಕ್ತಿಯ ತೊಡಕೇ? ಇನ್ನೂ ದುರಂತವೆಂದರೆ ಒಮ್ಮೆ ಒಂದು ಕಾಲೇಜಿನ ಎಲೆಕ್ಟ್ರಿಕಲ್ ವಿಭಾಗದ ವಿದ್ಯಾರ್ಥಿಗಳಲ್ಲಿ ಅರ್ಧ ಜನ ಐಚ್ಛಿಕ ವಿಷಯಗಳಲ್ಲಾ ತೇರ್ಗಡೆ ಹೊಂದಿದರು. ಇಂಗ್ಲಿಶ್ ಭಾಷಾ ವಿಷಯದಲ್ಲಿ ಫೇಲಾದರು. ತಮ್ಮ ಬದುಕಿಗೆ ಬೇಕಾದ ವೃತ್ತಿ ವಿಷಯದಲ್ಲಿ ನೈಪುಣ್ಯತೆ ಪಡೆದರೂ, ಇಂಗ್ಲಿಶ್ ಭಾಷೆ ಪಾಸಾಗಿಲ್ಲವೆಂಬ ಕಾರಣಕ್ಕೆ 'ಫೇಲ್' ಎಂಬ ಹಣೆಪಟ್ಟಿ ಹೊತ್ತು, ಅದನ್ನು ಪಾಸು ಮಾಡುವವರೆಗೂ ಕಾಯಬೇಕಾಗುತ್ತದೆ. ಪ್ರತಿಷ್ಠಿತ ಸಂಸ್ಥೆಗಳಲ್ಲಿ ಇಂಗ್ಲಿಶಿನಲ್ಲದ ಕಾರಣಕ್ಕೆ ನೌಕರಿ ಸಿಕ್ಕದೇ ಹೋಗಬಹುದು. ಅಗ್ರಿಕಲ್ಚರ್, ಹೊಲಿಗೆ ಕಸೂತಿಯಂತಹ ವಿಷಯಗಳನ್ನು ಸುಲಭವಾಗಿ ಕನ್ನಡದಲ್ಲಿ ಬರೆಯ ಬಹುದು. ಆದರೆ ಕನ್ನಡದಲ್ಲಿ ಬರೆದರೆ ಅಂಕಗಳು ಕಡಿಮೆ ಎಂಬುದು ವಿದ್ಯಾರ್ಥಿಗಳು ಕಂಡುಕೊಂಡ ಸತ್ಯ. ಅದು ನಿಜವೂ ಹೌದು. ಏಕೆಂದರೆ ಮೌಲ್ಯಮಾಪನ ಮಾಡುವಾಗ ನಮ್ಮ ಅಧ್ಯಾಪಕ ಮಿತ್ರರು ಕನ್ನಡ ಉತ್ತರ ಪತ್ರಿಕೆ ಕಂಡರೆ ಉದಾಸೀನದಿಂದಲೇ ಕೈಗೆತ್ತಿ ಕೊಂಡು ಸಾಗಹಾಕುತ್ತಾರೆ. ತಾಂತ್ರಿಕ ಕ್ಷೇತ್ರದಲ್ಲಿ ಕನ್ನಡ ಎಂದರೆ ಮಹಾ ಅಲರ್ಜಿಯಿದೆ.

ಬಿಸಿಲಿಗೆ ಊದಿಟ್ಟ ಒಂದು ಬಲೂನು ಶಾಖ ಹೆಚ್ಚಾದಾಗ ಒಡೆದು ಹೋಗುತ್ತದೆ ಎಂಬ ಪ್ರಯೋಗವನ್ನು ಪ್ರಾಥಮಿಕ ತರಗತಿಯಿಂದಲೇ ಎಲ್ಲರೂ ಓದಿರುತ್ತಾರೆ. ಆದರೆ ಅದರಿಂದ "ಯಾವುದೇ ಅನಿಲವನ್ನು ಕಾಯಿಸಿದಾಗ ಅದು ಹಿಗ್ಗುತ್ತದೆ" ಎಂಬ ಸೂತ್ರವನ್ನು (ಸಾರವನ್ನು) ವಿದ್ಯಾರ್ಥಿಗಳು ಗ್ರಹಿಸಿರುವುದಿಲ್ಲ. ಇದು ಆಟೋಮೊಬೈಲ್ಸ್ ನ ಮೂಲ ಸೂತ್ರ. ತಲೆಯಲ್ಲಿ ಯೋಚಿಸುವ ಭಾಷೆ ಬೇರೆ ಪಠ್ಯದಲ್ಲಿ ಓದುವ ಭಾಷೆ ಬೇರೆಯಾದಾಗ ಸಂವಹನಕ್ಕೆ ನಡುವೆ ಎಲ್ಲೋ ಕಂದಕವೇರ್ಪಡುತ್ತದೆ. ಹಾಗಾಗಿಯೇ ನಮ್ಮ ವಿದ್ಯಾರ್ಥಿಗಳಿಗೆ ಅಪ್ಲಿಕೇಶನ್ ಆಫ್ ನಾಲೆಜ್ ಇಲ್ಲ. ಇದು ಇಲ್ಲದಿದ್ದಲ್ಲಿ ತಾಂತ್ರಿಕ ಶಿಕ್ಷಣದಲ್ಲಿ ಬಾಯಿಪಾಠ ಮಾಡಿ ಪರೀಕ್ಷೆ ಪಾಸು ಮಾಡಬಹುದೇ ವಿನಃ, ಫೀಲ್ಡ್ ನಲ್ಲಿ ಯಶಸ್ಸು ಸಾಧ್ಯವಿಲ್ಲ.

ನಮ್ಮ ವಿದ್ಯಾರ್ಥಿಗಳು ಇಷ್ಟೊಂದು ಸಂಖ್ಯೆಯಲ್ಲಿ ಇಂಗ್ಲಿಶಿಲ್ಲದ ಕಾರಣಕ್ಕೆ ದಡ್ಡರೆನಿಸಿಕೊಳ್ಳುವುದನ್ನು ಕಂಡಾಗ ಅನಿಸುವುದಿದೆ- 'ಯಾವುದೇ ಒಂದು ಸಮಾಜದಲ್ಲಿ ಶೇಕಡ ೬೦% ಜನ ದಡ್ಡರಾಗಿರಲು ಸಾಧ್ಯವೇ?' ಈಗಲೂ ಎಸ್ಸೆಸೆಲ್ಸಿ ಫಲಿತಾಂಶ ಎಂದೂ ೫೦% ಮೀರುವುದಿಲ್ಲ. ಇಂಗ್ಲಿಶಿನಲ್ಲಿ ಏನಿದೆಯೋ ಅದನ್ನು ಕಲಿಯುವುದು ಬೇರೆ. ಎಲ್ಲವನ್ನೂ ಇಂಗ್ಲಿಶಿ ಮೂಲಕವೇ ಕಲಿಯಬೇಕು ಎನ್ನುವ ಒತ್ತಾಯ ಬೇರೆ. ಇದನ್ನು ಅರ್ಥಮಾಡಿಕೊಳ್ಳುವವರೆಗೂ ಈ ಯಾತನಾ ಶಿಬಿರದಿಂದ ಮುಕ್ತಿ ಸಾಧ್ಯವಿಲ್ಲ.

ಇಂಗ್ಲಿಶು ಉದ್ಯೋಗ ದೊರಕಿಸುತ್ತದೆ ಎಂಬ ವಾದವೊಂದಿದೆ. ಹಾಗಾದರೆ ಕಳೆದ ಎರಡು ಶತಮಾನಗಳಿಂದ ನಿರಂತರವಾಗಿ ಭಾರತದಂತೆಯೇ ಇಂಗ್ಲಿಶಿನ ಮೊರೆ ಹೋದ ಜಗತ್ತಿನಾದ್ಯಂತ ಇರುವ ೩೬ ದೇಶಗಳಲ್ಲಿ ನಿರುದ್ಯೋಗ ನಿವಾರಣೆಯಾಗಬೇಕಿತ್ತು. ಹಾಗೇನೂ ಆಗಿಲ್ಲ. ತಾಂತ್ರಿಕ ಶಿಕ್ಷಣ ಪಡೆದವರು ಹೊರ ರಾಜ್ಯಗಳಿಗೆ ಹೋಗಲು ಇಂಗ್ಲಿಶ್ ಅನಿವಾರ್ಯ ಎಂಬ ಮತ್ತೊಂದು ವಾದವಿದೆ. ಪ್ರತೀ ವರ್ಷ ಹೊರ ಹೋಗುವವರ ಸಂಖ್ಯೆ ೫%ವನ್ನು ಮೀರುವುದಿಲ್ಲ. ಈ ಕಾರಣಕ್ಕೆ ಉಳಿದ ೯೫% ವಿದ್ಯಾರ್ಥಿಗಳ ಮೇಲೆ ಇಂಗ್ಲಿಶ್ ಹೇರುವುದು ಎಷ್ಟು ಸರಿ?

ಇಂಗ್ಲಿಶ್ ಮಾತನಾಡಲು ಬರುವ ನಮ್ಮ ವಿದ್ಯಾರ್ಥಿಗಳು ಡಿಪ್ಲೊಮಾ ನಂತರ ಸೇಲ್ಸ್ ಲೈನ್‌ನಲ್ಲಿ ತೊಡಗಿಸಿಕೊಂಡು ಮಾರಾಟ ಪ್ರತಿನಿಧಿಗಳಾಗಿ ಉನ್ನತ ಹುದ್ದೆಯವರೆಗೂ ನುಗ್ಗಿ ಕೈತುಂಬ ಸಂಬಳ ಪಡೆಯುತ್ತಾರೆ. ಆದರೆ ಇಂಗ್ಲಿಶ್ ಬಾರದ ನತದೃಷ್ಟರು ಕೊನೆಯವರೆಗೂ ಯಾವುದೋ ಶೋ ರೂಂನಲ್ಲಿ ಜೀವಮಾನ ಪೂರ್ತಿ ಕೇವಲ ಮೆಕಾನಿಕ್ ಗಳಾಗಿ ಇರುವುದೂ ಉಂಟು. ಇಂಗ್ಲಿಶ್ ಬಾರದಿದ್ದರೆ ಅವರಿಗೆ ಯಾವುದೇ ಅಂಚೆ ತೆರಪಿನ ಶಿಕ್ಷಣದ ಮೂಲಕ ತಮ್ಮ ತಾಂತ್ರಿಕ ವ್ಯಾಸಂಗವನ್ನು ಮುಂದುವರಿಸುವ ಅವಕಾಶವೂ ಇಲ್ಲ. ಕೆಲವು ಗ್ಯಾರೇಜ್ ಮಾಲೀಕರ ಮಕ್ಕಳೇ ನಮ್ಮಲ್ಲಿ ಬಂದು ಡಿಪ್ಲೊಮಾ ಮಾಡುತ್ತಾರೆ. ಅವರಿಗೆ ಇಂಗ್ಲಿಶ್ ತಲೆಗೆ ಹತ್ತುವುದಿಲ್ಲ. ಚಿಕ್ಕಂದಿನಿಂದಲೂ ಅಪ್ಪನ ಸಹಾಯಕರಾಗಿ ಕೆಲಸ ಮಾಡಿದ ಅನುಭವವಿರುತ್ತದೆ. ಹಾಗಾಗಿ ಫೀಲ್ಡ್‌ನಲ್ಲಿ ಬಹಳ ಎಕ್ಸ್‌ಪರ್ಟ್‌ಗಳಾಗಿರುತ್ತಾರೆ. ಆದರೆ ಒಬ್ಬ ಇಂಜಿನಿಯರಿಂಗ್ ಓದಿದವನು ಫೀಲ್ಡ್ ಬಗ್ಗೆ ಇವರಷ್ಟು ತಿಳಿಯದಿದ್ದರೂ ಕೇವಲ ಇಂಗ್ಲಿಶ್ ಬರುವ ಕಾರಣಕ್ಕೆ ಸರ್ವೀಸ್ ಇಂಜಿನಿಯರ್ ಎನಿಸಿಕೊಂಡು ಕೈತುಂಬ ಸಂಬಳ ಪಡೆಯುತ್ತಾನೆ.

ಪುಷ್ಪಕ ವಿಮಾನವನ್ನು ನಾವು ಪುರಾಣದಲ್ಲಿ ಓದಿ ಹೆಮ್ಮೆ ಪಡುವುದಿದೆ. ಆದರೆ ಒಂದು ವಿಮಾನ ಕಂಡು ಹಿಡಿಯುವಲ್ಲಿ ಮೊದಲು ಎಷ್ಟೋ ಇತರ ಸಾರಿಗೆಗಳ ಆವಿಷ್ಕಾರವಾಗಿ ಅವರ ಅಂತಿಮ ಫಲಿತವೆಂಬಂತೆ ಒಂದು ವಿಮಾನ ರೂಪುಗೊಳ್ಳಬೇಕು ಎಂದು ಯಾರೂ ಯೋಚಿಸುವುದೇ ಇಲ್ಲ. ಬುದ್ಧಿಗೂ ಭಾವಕ್ಕೂ ದೊಡ್ಡ ಕಂದಕ ಹಾಗಾಗಿ ಇದುವರೆವಿಗೂ ಭಾರತದಲ್ಲಿ ತಯಾರಾಗುವ ಯಾವುದೇ ವಾಹನವೂ ಕೊಲ್ಯಾಬರೇಶನ್ ತಂತ್ರಜ್ಞಾನವಿಲ್ಲದೇ ತಯಾರಾಗಿದ್ದಿಲ್ಲ. ಇದು ತಾಂತ್ರಿಕ ಕ್ಷೇತ್ರದ ದಿವಾಳಿತನ. ಕನ್ನಡಿಗರಿಗೆ ತಾಂತ್ರಿಕ ಕೌಶಲ್ಯ ಇಲ್ಲದಾದಾಗ ಕನ್ನಡ ಭಾಷೆಗೂ ತಾಂತ್ರಿಕತೆಗೆ ಒಗ್ಗಿಕೊಳ್ಳಲು ಕಷ್ಟವಾಗುವುದು ಸಹಜವೇ.

ಭಾಷೆಯೆಂಬುದು ಮೂಲತಃವಾಗಿ ಉತ್ಪಾದನಾ ಚಟುವಟಿಕೆಯಿಂದಲೇ ರೂಪುಗೊಂಡ ಉದ್ಯಮವಾದ್ದರಿಂದ ನಮ್ಮ ಬದುಕಿನ ರೀತಿಗೂ ಭಾಷೆಯ ಬೆಳವಣಿಗೆಗೂ ನೇರ ಸಂಬಂಧವಿದೆ. ಇಂಗ್ಲಿಶಿನಲ್ಲಿ ಕಲಿಯುವುದೆಂದರೆ ಅದು ಕೇವಲ ಮಾಧ್ಯಮ/ಭಾಷೆಗೆ ಸಂಬಂಧಪಟ್ಟ ವಿಚಾರವಲ್ಲ. ಅದು ನಮ್ಮ ಬೌದ್ಧಿಕ ದಾಸ್ಯದ ಮುಂದುವರಿಕೆ. ಎರಡನೇ ಮಹಾಯುದ್ಧದಲ್ಲಿ ನಿರ್ನಾಮವಾದ ಜಪಾನ್ ಫೀನಿಕ್ಸ್ ಪಕ್ಷಿಯಂತೆ ಎದ್ದು ನಿಂತಿದ್ದು ಯಾವ ಬಲದಿಂದ? ಖಂಡಿತ ಇಂಗ್ಲಿಶ್ ಬಲದಿಂದಲ್ಲ. ಸ್ವಾತಂತ್ರ್ಯ ನಂತರದ ಈ ೫೪ ವರ್ಷಗಳ ನಂತರವೂ ಒಂದೇ ಒಂದು ದೇಶೀಯ ಉತ್ಪಾದನೆಯಿಲ್ಲದೆ, ಇಡೀ ಆಟೋಮೊಬೈಲ್ಸ್ ಕ್ಷೇತ್ರವನ್ನು ಬಹುರಾಷ್ಟ್ರೀಯ ಕಂಪೆನಿಗಳ ಕೈಗೊಪ್ಪಿಸಿ ಇಂಗ್ಲಿಶ್ ಭಜನೆ ಮಾಡುತ್ತಿರುವುದು ಯಾವ ಕಾರಣಕ್ಕಾಗಿ? ಪ್ರತೀ ಹಂತದಲ್ಲೂ ಬಹುರಾಷ್ಟ್ರೀಯ ಕಂಪೆನಿಗಳು ನಮಗೆ ಮಾರಾಟ ಮಾಡುವ ನಾವು ಔಟ್ ಡೇಟೆಡ್ ತಂತ್ರಜ್ಞಾನವನ್ನು ಪಡೆಯುತ್ತಾ ಇದ್ದೇವೆ. ಆಧುನಿಕ ವಿಜ್ಞಾನದ ಎಳೆಯ ಕೂಸಾದ ಆಟೋಮೊಬೈಲ್ ಕ್ಷೇತ್ರವು ಕೇವಲ ಎರಡು ಶತಮಾನಗಳಲ್ಲಿ ಬೆಳೆದ ರೀತಿ ದಿಗ್ಭ್ರಾಂತಿಯಾಗುವಂತಿದೆ. ಆದರೆ ಇದರಲ್ಲಿ ಕನ್ನಡಿಗರ ಪಾಲೇನು? ಈ ಪ್ರಶ್ನೆಗೆ ತಾಂತ್ರಿಕ ಕ್ಷೇತ್ರದ ನಮ್ಮ ಎಲ್ಲ ತಜ್ಞರೂ ಉತ್ತರಸಬೇಕಿದೆ. ಭಾಷೆ ನಮ್ಮ ಒಟ್ಟು ಬದುಕಿನ ಪ್ರತಿಬಿಂಬವಾದ್ದರಿಂದ ಅದನ್ನು ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳಿಂದ ಭಿನ್ನವಾಗಿ ಪ್ರತ್ಯೇಕವಾಗಿ ನೋಡಲು ಬರುವುದಿಲ್ಲ. ಭಾಷೆಯನ್ನು ಕಳೆದುಕೊಳ್ಳುವುದೆಂದರೆ ನಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವುದೆಂದೇ ಅರ್ಥ. ಕನ್ನಡ ಭಾಷೆಗೆ ಮಾನ್ಯತೆ ಇಲ್ಲವೆಂದರೆ, ಕನ್ನಡಿಗರಿಗೂ ಕನ್ನಡ ನಾಡಿಗೂ ಭವಿಷ್ಯವಿಲ್ಲವೆಂದೇ ಅರ್ಥ.

ಇಷ್ಟೆಲ್ಲಾ ಅವಗಢಗಳ ನಡುವೆಯೂ ಅಧ್ಯಾಪಕ ವರ್ಗ ಗಟ್ಟಿ ನಿರ್ಧಾರ ಮಾಡಿದಲ್ಲಿ ಬದಲಾವಣೆಯ ಸಣ್ಣ ಸಂಚಲನೆಯಾದರೂ ಖಂಡಿತಾ ಸಾಧ್ಯ. ಭಾಷಾ ಮಡಿವಂತಿಕೆಯನ್ನು ಬಿಟ್ಟು ಕೆಲವು ಜನಪ್ರಿಯ ಪರಿಭಾಷೆಗಳನ್ನು ಇಂಗ್ಲಿಶಿನಲ್ಲಿ ಇದ್ದಂತೆಯೇ ಕನ್ನಡದ ಜೊತೆ ಜೊತೆಗೆ ಬಳಸಬೇಕು. ಈಗಾಗಲೇ ಆಡು ನುಡಿಯಲ್ಲಿ ಚಾಲ್ತಿಯಲ್ಲಿರುವ ಪದಗಳನ್ನು ಗ್ರಂಥಸ್ಥವಾಗಿಸಬೇಕು. ಇದರಿಂದ ಶಬ್ದದ ಅಭಾವ ಕಡಿಮೆಯಾಗುತ್ತಾ ಹೋಗುತ್ತದೆ. ಕನ್ನಡ ಅನುವಾದ ಎಂದಾಕ್ಷಣ ಆ ಜಾಗಕ್ಕೆ ಸಂಸ್ಕೃತ ಭೂಯಿಷ್ಠ ಪದಗಳನ್ನು ಹಾಕಿ ಇಂಗ್ಲಿಶಿಗಿಂತ ಕ್ಲಿಷ್ಟವಾಗಿಸುವ ಕ್ರಮವಿದೆ. ಉದಾ: ಬಸ್ಸನ್ನು "ಷಡ್ಚಕ್ರವಾಹನ" ಎಂದು ಪಿಸ್ಟನ್ ಅನ್ನು "ತಿರುಗು ಬುರುಡೆ" ಎಂದು ಕರೆಯುವುದು. ಬಸ್ಸು, ಇಂಜಿನ್ ಪಿಸ್ಟನ್ ಇವೆಲ್ಲ ಜನರ ಆಡುನುಡಿಗಳಲ್ಲಿ ಸೇರಿ ಹೋಗಿರುವಾಗ ಅದನ್ನು ಹಾಗೇ ಬಳಸುವುದೇ ಹೆಚ್ಚು ಸೂಕ್ತ. ಇಂಗ್ಲಿಶಿನಲ್ಲಿರುವ ಬಹುಪಾಲು ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಪದಗಳು ಮೂಲತಃ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಯ ಪದಗಳಾಗಿವೆ. ಹಾಗೆಯೇ ಕನ್ನಡ ಕೂಡ ಬೇರೆ ಬೇರೆ ಕ್ಷೇತ್ರಗಳಿಂದ ಪದಗಳನ್ನು ಪಡೆದು ಪುಷ್ಟವಾಗಿ ಬೆಳೆಯ ಬೇಕಿದೆ. ಸರ್ಕಾರವು ರಾಜ್ಯ ಮಟ್ಟದಲ್ಲಿ ಒಂದು ಸಮಿತಿಯನ್ನು ರಚಿಸಿ ಅದರಲ್ಲಿ ಕನ್ನಡದ ಬಗ್ಗೆ ನೈಜ ಕಾಳಜಿಯನ್ನು ತಾಂತ್ರಿಕ ಶಿಕ್ಷಣದ ಬೋಧನೆ ಮತ್ತು ವಿವಿಧ ಬಗೆಯ ಔದ್ಯೋಗಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿರುವ ಅನುಭವೀ ತಜ್ಞರನ್ನು ಒಳಗೊಂಡು, ತಾಂತ್ರಿಕ ಶಿಕ್ಷಣ

ಪದಕೋಶಗಳನ್ನು ತಾಂತ್ರಿಕ ಶಿಕ್ಷಣದ ಪ್ರತಿಯೊಂದು ಶಾಖೆಗೂ ಪ್ರತ್ಯೇಕ ಪ್ರತ್ಯೇಕವಾಗಿ ರಚಿಸಬೇಕು. ವಿವಿಧ ಕೋರ್ಸುಗಳಿಗೆ ಬೋಧನೆಯಲ್ಲಿ ತೊಡಗಿರುವ ಅಧ್ಯಾಪಕರನ್ನು ಆಗಾಗ ಸೇರಿಸಿ, ವಿಚಾರ ವಿನಿಮಯ ನಡೆಸಿ, ಕನ್ನಡದ ಸಮರ್ಥ ಬಳಕೆಯ ಬಗ್ಗೆ ಹೆಚ್ಚು ಹೆಚ್ಚು ಕಾರ್ಯಕ್ರಮ ಹಾಕಿಕೊಳ್ಳುವಂತಾಗಬೇಕು. ರಾಜ್ಯದ ಎಲ್ಲ ವಿವಿಗಳೂ ಮತ್ತು ತಾಂತ್ರಿಕ ಶಿಕ್ಷಣ ಮಂಡಳಿಗಳೂ ಪ್ರತ್ಯೇಕವಾಗಿ ತಮ್ಮ ತಮ್ಮ ಇಲಾಖೆಗೆ ಸಂಬಂಧಪಟ್ಟ ಕೋರ್ಸು ಗಳಿಗೆ, ಕನ್ನಡ ಪಠ್ಯಗಳನ್ನು ರಚಿಸಬೇಕು. ಸೋವಿಯತ್ ಒಕ್ಕೂಟದಲ್ಲಿ ಅನೇಕ ರಾಷ್ಟ್ರೀಯ ಭಾಷೆಗಳನ್ನು ಈ ರೀತಿಯಾಗಿ ಬೆಳೆಸಿದ ಉದಾಹರಣೆಗಳು ನಮ್ಮ ಮುಂದಿವೆ.

ಏಕಮುಖೀ ಸಂಸ್ಕೃತಿಯತ್ತ ಜಗತ್ತಿನ ಚೈತನ್ಯ ಸಮಸ್ತವನ್ನು ಬಲಾತ್ಕರಿಸುತ್ತಿರುವ ಜಾಗತೀಕರಣದ ಈ ಸಂದರ್ಭದಲ್ಲಿ, ನಾವು ಎಚ್ಚೆತ್ತುಕೊಂಡು ವಾಸ್ತವಕ್ಕೆ ಸ್ಪಂದಿಸದಿದ್ದರೆ ನಮ್ಮ ವಿದ್ಯಾರ್ಥಿಗಳ ಬುದ್ಧಿ ಪ್ರತಿಭೆ ಹೀಗೇ ವೃಥಾ ಪೋಲಾಗುವುದಲ್ಲದೇ ದೇಶವೂ ಅಧೋಗತಿಯತ್ತ ಸಾಗುತ್ತದೆ. ಶಿಕ್ಷಣದಲ್ಲಿ ನಮ್ಮ ಭಾಷೆಯನ್ನು ಅಳವಡಿಸಿಕೊಳ್ಳುವ ಹೋರಾಟವೆಂದರೆ, ನಮ್ಮ ನಿಜವಾದ ರಾಜಕೀಯ ಆರ್ಥಿಕ ಸ್ವಾತಂತ್ರ್ಯವನ್ನು ಮರಳಿ ಪಡೆಯುವುದೆಂದೇ ಅರ್ಥ.

ಜಗದೀಶಚಂದ್ರ ಬೋಸರಿಗೆ ಸಸ್ಯ ಶಾಸ್ತ್ರದ ಅಧ್ಯಯನಕ್ಕೆ ನೊಬೆಲ್ ಪ್ರಶಸ್ತಿ ಬಂದ ಸಂದರ್ಭ ಅವರನ್ನು ಸಂದರ್ಶನ ನಡೆಸುತ್ತಿದ್ದ ಸಂದರ್ಶನಕಾರ ಒಂದು ಪ್ರಶ್ನೆ ಕೇಳಿದ. "ಬೋಸ್‌ಜೀ, ಸಸ್ಯಶಾಸ್ತ್ರವನ್ನು ಬಂಗಾಳಿಯಲ್ಲಿ ಬೋಧಿಸುವುದು ಕಷ್ಟ ಎನ್ನುತ್ತಾರಲ್ಲ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?" ಬೋಸ್ ಉತ್ತರಿಸಿದರು. "ನಿಜ ಹೇಳಬೇಕೆಂದರೆ ಯಾರೂ ಈ ಮಾತನ್ನು ಹೇಳುತ್ತಾರೋ ಅವರಿಗೆ ಸಸ್ಯಶಾಸ್ತ್ರವೂ ತಿಳಿದಿಲ್ಲ, ಬಂಗಾಳಿಯೂ ತಿಳಿದಿಲ್ಲ" - ಬೋಸರ ಈ ಉತ್ತರ ಈಗಲಾದರೂ ನಮ್ಮ ಕಣ್ಣು ತೆರೆಸುವಂತಾಗಲಿ.

●

## ಕನ್ನಡದಲ್ಲಿ ವೈದ್ಯಕೀಯ ವಿಜ್ಞಾನ ಮೊದಲು ಬರುವದು

● ಎಸ್ ಜೆ ನಾಗಲೋಟಿಮಠ

ನಾನು ಅವಿಭಾಜ್ಯ ವಿಜಾಪುರ ಜಿಲ್ಲೆಯ ಜಮಖಂಡಿ ತಾಲೂಕಿನ ಬನಹಟ್ಟಿ ಗ್ರಾಮದಲ್ಲಿ ಪ್ರಾಥಮಿಕ ಶಾಲೆ ಕಲಿತವನು. ನಮ್ಮದು ಕನ್ನಡ ಗಂಡು ಮಕ್ಕಳ ಶಾಲೆ. ಒಂದು ಗ್ರಾಮದ ಗಂಡುಮಕ್ಕಳ ಶಾಲೆಯ ಕನ್ನಡ ನನ್ನ ಭಾಷೆ. ಈ ಭಾಷೆಗೆ ಇರಬೇಕಾದ ಬೈಗಳು ಬಿರುಸುಶಬ್ದ ಒರಟು ಪದಗಳೆಲ್ಲವೂ ನನ್ನಲ್ಲಿ ತುಂಬಿದ್ದವು. ಇಂದಿಗೂ ನನ್ನ ಸಂಗಡ ಯಾರಾದರೂ ಎಲ್ಲಿಯಾದರೂ ಮಾತಾಡಿದರೆ ಅರೆಪೂರ್ಣದಲ್ಲಿ "ನೀವು ಬಿಜಾಪುರದವರೇನು?" ಎಂಬ ಮಾತು ಹೊರಬೀಳುತ್ತದೆ. ಅಂಥ ಜವಾರಿ ಭಾಷೆ ನನ್ನದು. ಅನೇಕರು ನನ್ನ

ಉಪನ್ಯಾಸಗಳಿಗಿಂತ ಜಾಸ್ತಿ ಪ್ರೀತಿಸುವುದು ನನ್ನ ಜವಾರಿ ಭಾಷೆಯನ್ನೇ. ಒಂದು ರೀತಿಯಿಂದ ನನ್ನಂಥವರಿಗೆ ಎರಡು ಕನ್ನಡ ಭಾಷೆಗಳು. ಒಂದು ಮಾತಾಡುವ- ಬಳಸುವ ಕನ್ನಡ. ಇನ್ನೊಂದು ಲಿಖಿತ ಕನ್ನಡ. ಬಳಸುವ ಭಾಷೆ ಸಾದಾ ಬಂಗಾರ. ಲಿಖಿತ ಭಾಷೆ ಉಜ್ಜಿಹೊಳಪಿಸಿದ ಬಂಗಾರ. ಸುಧಾರಿಸಿದ ಪ್ರದೇಶಗಳವರಿಗೆ ಕನ್ನಡ ಒಂದೇ ಭಾಷೆ. ಅವರು ಮಾತಾಡಿದಂತೆ ಬರೆಯುವರು. ಅಲ್ಲದೆ ಬರೆದಂತೆ ಮಾತಾಡಬಲ್ಲರು. ನಮಗೆ ಬಳಕೆಯ ಭಾಷೆಯೇ ಬೇರೆ. ಬರೆಯುವ ಭಾಷೆಯೇ ಬೇರೆ. 'ರಾಮನು ಹೋಗುತ್ತಾನೆ' ಎನ್ನುವದು ಬರೆಯುವ ಭಾಷೆ. 'ರಾಮ ಹೊಕ್ಕಾನು' ಬಳಕೆಯ ಭಾಷೆ. ಇಷ್ಟು ಅಂತರವಿದೆ ಇವೆರಡರಲ್ಲಿ. ಇಂತಹ ಹಿನ್ನೆಲೆಯಿಂದ ಬಂದವನು ನಾನು. ಎಸ್ ಎಸ್ ಎಲ್ ಸಿವರೆಗೆ ಕನ್ನಡ ಮಾಧ್ಯಮದಲ್ಲಿ ಓದಿದ ನಮಗೆ, ನಂತರ ಇಂಗ್ಲಿಶ ಮಾಧ್ಯಮದಲ್ಲಿ ಮುಳುಗಬೇಕಾಯಿತು. ಎಂಬಿಬಿಎಸ್ ಪಾಸಾಗಿ ನಂತರ ಎಂ ಡಿ ಮುಗಿವವರೆಗೆ ಇಂಗ್ಲಿಶ ಮಾಧ್ಯಮದಲ್ಲಿ ಈಜಾಡುವುದನ್ನು ಕಲಿತೆವು. ಒಂದೊಂದು ಸಲ ಇಂಗ್ಲಿಶ ಮಾತಾಡದೆ ಹೋದರೆ,ಬಳಸದಿದ್ದರೆ ಉಂಡ ಅನ್ನ ಪಚನವಾಗಲಿಕ್ಕಿಲ್ಲ ಎನ್ನುವಂತಾಗುತ್ತಿತ್ತು. ಇದೇ ಹೊತ್ತಿಗೆ ಚೆನ್ನವೀರ ಕಣವಿಯವರ ಸಂಪರ್ಕ ಬಂತು. ಅವರು ಆಗ ಕರ್ನಾಟಕದ ವಿಶ್ವವಿದ್ಯಾಲಯದ ಪ್ರಸಾರಾಂಗದ ಮುಖ್ಯಸ್ಥರಾಗಿದ್ದರು. ನೋಡಲು ಕಣವಿಯವರು ತೆಳ್ಳನೆಯ ವ್ಯಕ್ತಿ. ಆದರೆ ಅವರ ಶಕ್ತಿ ಇದ್ದದ್ದು ಅವರ ಸ್ನೇಹಮಯ ನಗುವಿನಲ್ಲಿ ಹಾಗು ಮಾತಿನಲ್ಲಿ. ನಾವು ಎಲ್ಲಿಯಾದರೂ ಕಂಡರೆ ಮುಗಿಯಿತು ಸಿಕ್ಕುಕೊಂಡ ಹಾಗೇ.ಮಾತಾಡಿಸಿ ನಗಿಸಿ ಇಂಥ ವಿಷಯದ ಮೇಲೆ ಒಂದು ಉಪನ್ಯಾಸ ಕೊಡಲು ಒಪ್ಪಿಸಿಯೇ ಬಿಡುತ್ತಿದ್ದರು. ಉಪನ್ಯಾಸ ಕೊಡುವ ದಿನ ಎಲ್ಲಿಯಾದರೂ ಓಡಿಹೋಗುವದು ಒಳ್ಳೆಯದು ಎನಿಸುತ್ತಿತ್ತು. ಕಣವಿಯವರ ಕಣಿವೆಯಲ್ಲಿ ಒಂದು ಸಲ ಸಿಕ್ಕರಾಯಿತು. ಹೊರಬರಲು ಆಸ್ಪದವೇ ಇರುತ್ತಿರಲಿಲ್ಲ. ನಮ್ಮನ್ನು ಪ್ರೋತ್ಸಾಹಿಸಿ ಒಳ್ಳೆಯ ಮಾತುಗಳನ್ನು ಹೇಳಿ, ಉಪನ್ಯಾಸ ಕೊಡಿಸುತ್ತಿದ್ದರು. ಪ್ರಸಾರಾಂಗದ ಉಪನ್ಯಾಸ ಮಾಲೆಗಳಲ್ಲಿ ಮಾತನಾಡುತ್ತಲೇ ವೈದ್ಯಕೀಯ ವಿಷಯಗಳನ್ನು ಕನ್ನಡಿಸುವ ಸಾಹಸಕ್ಕೆ ಇಳಿದೆವು. ಮೊದಮೊದಲು ಆ ಶಬ್ದ ಈ ಪದ ಎಂಬ ಗೊಂದಲದಲ್ಲಿರುತ್ತಿದ್ದೆ. ಬರಬರುತ್ತಾ ಎಲ್ಲವೂ ಮಾಯವಾಗಿ ವೈದ್ಯಕೀಯ ವಿಷಯವನ್ನು ಕನ್ನಡದಲ್ಲಿ ಹೇಳುವದು ಬರೆಯುವದು ಸುಲಭವೆನಿಸತೊಡಗಿತು. ಒಂದೊಂದು ಸಲವಂತೂ ಕನ್ನಡದಲ್ಲಿ ಹೇಳಿದ ವೈದ್ಯಕೀಯ ವಿಷಯಗಳು ಹೆಚ್ಚು ಸ್ವಾರಸ್ಯಕರ ಎನಿಸುತ್ತವೆ. ಆಂಗ್ಲಭಾಷೆಗೆ ಅದನ್ನೇ ಭಾಷಾಂತರಿಸಿದರೆ ಮೊದಲಿನ ರುಚಿ ಬರುವದು ಕಠಿಣ ಎನಿಸತೊಡಗಿತು. ನಾನು ಭಾಷಾಂತರ ಮಾಡುವಾಗ ತೊಂದರೆಗಳು ಬಂದರೆ, ಆಗ ಕೆಲವು ಹಿರಿಯರು ದಾರಿತೋರಿಸುತ್ತಿದ್ದರು. ಅಂತಹವರಲ್ಲಿ ಡಾ. ಡಿ ಆರ್ ಕುಲಕರ್ಣಿ, ಡಾ. ಪಿ ಎಸ್ ಶಂಕರ, ಡಾ.ರೇಣುಕಾರ್ಯ, ಡಾ. ಡಿ ಎಸ್ ಶಿವಪ್ಪನವರು ಪ್ರಮುಖರು. ಚೆನ್ನವೀರಕಣವಿಯವರ ನಂತರ ಶ್ರೀ ಗುಡ್ಡಿನರು ಭಾಷಾಂತರ ಕಾರ್ಯದಲ್ಲಿ ಬೆಂಬಲಿಸುತ್ತಿದ್ದರು. ಇಲ್ಲಿ ಡಾ. ವೃಷಭೇಂದ್ರಸ್ವಾಮಿಯವರನ್ನು ನೆನೆಯಲೇಬೇಕು. ಬೆನ್ನುಹತ್ತಿ ಬೆನ್ನುಬಾರಿಸಿ ಕೆಲಸಮಾಡಿಸಿದವರು ಅವರು. ಅವರ ವಿಭಾಗ ಮುಂದುವರೆದಿದ್ದರೆ

ಕರ್ನಾಟಕ ವಿಶ್ವವಿದ್ಯಾಲಯ ಅಗಾಧವಾದ ಸೇವೆಯನ್ನು ಮಾಡಬಹುದಿತ್ತು. ವೈದ್ಯಕೀಯ ವಿಜ್ಞಾನವು ಕನ್ನಡದಲ್ಲಿ ಬರಲು ಉಳಿದ ವಿಶ್ವವಿದ್ಯಾಲಯಗಳೂ ಸಾಕಷ್ಟು ಶ್ರಮವಹಿಸಿವೆ. ಬೆಂಗಳೂರು, ಮೈಸೂರು ವಿಶ್ವವಿದ್ಯಾಲಯಗಳು ಪ್ರೋತ್ಸಾಹಿಸಿ, ವೈದ್ಯಕೀಯ ವಿಜ್ಞಾನವು ಕನ್ನಡದಲ್ಲಿ ದೊರೆಯುವಂತೆ ಮಾಡಿದವು. ಬೆಂಗಳೂರಿನ ಪಶುವೈದ್ಯ ವಿಜ್ಞಾನ ಕಾಲೇಜಿನವರೂ ಈ ದಿಶೆಯಲ್ಲಿ ಶ್ರಮಿಸಿದ್ದಾರೆ. ಕಳೆದ ಐದು ವರ್ಷಗಳಿಂದ ನನ್ನ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿರುವ 'ಜೀವನಾಡಿ' ಮಾಸಿಕವು ಕೊಟ್ಟಕೊಡುಗೆ ಸಾಮಾನ್ಯವೇನಲ್ಲ. ಕನ್ನಡದಲ್ಲಿ ಪ್ರಕಟಗೊಳ್ಳುತ್ತಿರುವ ವೈದ್ಯಕೀಯ ಲೇಖನಗಳನ್ನು ಕೇವಲ ಜನಸಾಮಾನ್ಯರಲ್ಲ, ವೈದ್ಯರೇ ಓದುತ್ತಿರುವರು. ಅದರ ರುಚಿಯನ್ನು ಆನಂದಿಸುತ್ತಿರುವರು. 'ಜೀವನಾಡಿ' ಯಂಥ ಮಾಸಿಕಗಳು ಯಶಸ್ವಿ ಆಗುವದರಲ್ಲಿ ಯಾವ ಸಂಶಯಗಳೂ ಇಲ್ಲ. ಅವುಗಳಿಗೆ ಪ್ರೋತ್ಸಾಹ ಜನಸಾಮಾನ್ಯರು ಕೊಡುತ್ತಿರುವರು. ಇದರೊಡನೆ ಸಂಘ ಸಂಸ್ಥೆಗಳು ಹಾಗು ವಿಶ್ವವಿದ್ಯಾಲಯಗಳು ಬೆಂಬಲ ಕೊಟ್ಟರೆ, ಕನ್ನಡದಲ್ಲಿ ವೈದ್ಯವಿಜ್ಞಾನ ಹುಲುಸಾಗಿ ಬೆಳೆಯುವುದರಲ್ಲಿ ಸಂಶಯವಿಲ್ಲ.

ವೈದ್ಯವಿಜ್ಞಾನವು ಕನ್ನಡದಲ್ಲಿ ಬೆಳೆಯಲು ವೈದ್ಯರು ತಮ್ಮ ವಿವಿಧ ವಿಚಾರಗಳನ್ನು ನೇರವಾಗಿ ಕನ್ನಡದಲ್ಲಿ ಬರೆಯಲು ಪ್ರಾರಂಭಿಸಬೇಕು. ಇಂದಿನವರೆಗೆ ಕನ್ನಡ ಜನಸಾಮಾನ್ಯರಿಗೆ ಪರಿಚಯವಾಗಲಿ ಎಂಬ ಉದ್ದೇಶದಿಂದ ಬರೆಯುವದಾಗಿದೆ. ಎರಡನೆಯ ಹೆಜ್ಜೆಯೆಂದರೆ ವೈದ್ಯರು ತಮಗನಿಸಿದ ವಿಷಯಗಳನ್ನು ಕನ್ನಡದಲ್ಲಿ ವ್ಯಕ್ತಪಡಿಸುವದು. ಅದು ಅಷ್ಟಿಷ್ಟು ಪ್ರಾರಂಭವಾಗಿದೆ. ರಾಜೀವಗಾಂಧಿ ವೈದ್ಯಕೀಯ ವಿಶ್ವವಿದ್ಯಾಲಯದವರು ಈ ದಿಶೆಯಲ್ಲಿ ದಿಟ್ಟ ಹೆಜ್ಜೆ ಇಡಬೇಕೆಂದು ನಿರ್ಧರಿಸಿರುವರು. ಚಿಕ್ಕಚಿಕ್ಕ ಪುಸ್ತಕಗಳನ್ನು ತರಲು ಪ್ರಯತ್ನಿಸುತ್ತಿರುವರು. ನೇರವಾಗಿ ಇಡೀ ಎಂಬಿಬಿಎಸ್ ಕೋರ್ಸನ್ನೇ ಕನ್ನಡದಲ್ಲಿ ತರುವೆವೆಂಬುದು ಅಸಾಧ್ಯ. ಮೊದಲು ಉಪವೈದ್ಯಕೀಯ ವಿಷಯಗಳು ಕನ್ನಡದಲ್ಲಿ ಬರುವದು ಸೂಕ್ತ. ಪ್ರಯೋಗಾಲಯದ ಟೆಕ್ನಿಶಿಯನ್ನರಿಗೆ ಬೇಕಾದ ಸಾಹಿತ್ಯ, ದಾದಿಯರು ಕಲಿಯುವ ಸಾಹಿತ್ಯ, ಎಕ್ಸರೇ ಟೆಕ್ನಿಶಿಯನಗಳಿಗೆ ಬೇಕಾದ ವಿಷಯಗಳು ಕನ್ನಡದಲ್ಲಿ ಬರಬೇಕು. ಇದನ್ನು ಮಾಡುವ ಕೆಲಸ ವೈದ್ಯಕೀಯ ವಿಶ್ವವಿದ್ಯಾಲಯದವರಿಂದ ನೆರವೇರಬೇಕು. ಬೇಕಾದ ಸಾಹಿತ್ಯ ಚಿಕ್ಕಚಿಕ್ಕ ಪತ್ರಗಳ ರೂಪದಲ್ಲಿ ಬರಬೇಕು. ಇದೆಲ್ಲ ಸಿದ್ಧವಾದ ಮೇಲೆ ಮುಂದಿನ ಹೆಜ್ಜೆ. ಇಂದಿಲ್ಲ ನಾಳೆ ವಿಜ್ಞಾನದ ಎಲ್ಲ ವಿಷಯಗಳು ಕನ್ನಡದಲ್ಲಿ ಬಂದೇ ಬರುತ್ತವೆ. ಉಳಿದ ವಿಷಯಗಳಿಗಿಂತ ವೈದ್ಯಕೀಯ ವಿಜ್ಞಾನ ಮೊದಲು ಕನ್ನಡದಲ್ಲಿ ಬರುವದು ಎಂಬ ಧೈರ್ಯ ನನ್ನದು.

ಕರ್ನಾಟಕಕ್ಕೆ ಕೇರಳ ಮಹಾರಾಷ್ಟ್ರ ಆಂಧ್ರಪ್ರದೇಶ ಗೋವಾ ತಮಿಳುನಾಡು -ಹೀಗೆ ಐದು ಭಾಷಾವಾರು ರಾಜ್ಯಗಳ ಗಡಿಗಳಿವೆ. ಈ ಗಡಿಭಾಗಗಳಲ್ಲಿ ವಾಸಮಾಡುವುದು ಎಂದರೆ, ಅದೊಂದು ಇಬ್ಬಗೆಯ ಅನುಭವ. ಮೊದಲನೆಯದಾಗಿ- ಬಹುಭಾಷಿಕ ಪರಿಸರದ ಸಿರಿವಂತಿಕೆಯಲ್ಲಿ ಬದುಕುತ್ತ ಅಯತ್ನವಾಗಿ ಇನ್ನೊಂದು ಭಾಷೆಯನ್ನೂ ಆ ಭಾಷಿಕ ಸಂಸ್ಕೃತಿಯನ್ನೂ ಪಡೆದುಕೊಳ್ಳುವ ಸೌಭಾಗ್ಯದ ಸಂಗತಿ ; ಜತೆಗೆ ಅಲ್ಲಿ ತಮ್ಮ ಭಾಷೆ ಮತ್ತು ಸಂಸ್ಕೃತಿಗಳ ಜತೆ ಅದು ಬೆರೆತು ಮೂರನೆಯ ಮತ್ತೊಂದು ಹುಟ್ಟುವುದನ್ನೂ ಕಾಣಬಹುದು. ಎರಡನೆಯದಾಗಿ- ಭಾಷೆಯ ಹೆಸರಿನಲ್ಲಿ, ಗಡಿವಿವಾದಗಳ ಹೆಸರಿನಲ್ಲಿ, ನದಿನೀರಿನ ತಂಟೆಗಳಲ್ಲಿ, ಭಾಷಾ ಮೂಲಭೂತವಾದಿಗಳು ನಡೆಸುವ ಘರ್ಷಣೆಗಳು ಅನೀರೀಕ್ಷಿತವಾಗಿ ಎಬ್ಬಿಸಲಿರುವ ತಲ್ಲಣ ಅಭದ್ರತೆಗಳಲ್ಲಿ ಸದಾ ಬದುಕುವುದು. ಅದರಲ್ಲೂ ಭಾಷಾವಾರು ಪ್ರಾಂತ್ಯಗಳ ರಚನೆಯಾದ ಬಳಿಕ, ಗಡಿಭಾಗಗಳಲ್ಲಿ ಬದುಕುವುದು ಮಹಾಕಷ್ಟದ ಸಂಗತಿಯಾಗಿದೆ. ಈಗೀಗ ಘರ್ಷಣೆಗೆ ದೊಡ್ಡ ಕಾರಣವೇ ಬೇಕಿಲ್ಲ. ಒಂದು ಭಾಷೆಯ ನಟನನ್ನು ಇನ್ನೊಂದು ಭಾಷೆಗೆ ಸೇರಿದ ಪುಂಡನೊಬ್ಬ ಅಪಹರಿಸುವ ಘಟನೆಯೇ ಸಾಕು. ಇಂತಹ ಸಂವೇದನಶೀಲ ಪರಿಸ್ಥಿತಿಯಲ್ಲಿ ಸಾಂಸ್ಕೃತಿಕ ಸಿರಿಯುಳ್ಳ ಈ ಸ್ವರ್ಗಗಳು, ತಟ್ಟನೆ ದ್ವೇಷದ ಲಾವಾರಸವನ್ನು ಕಾರುವ ನರಕಗಳಾಗುತ್ತವೆ. ಹಲ್ಲೆ ಕೊಲೆ ಆಸ್ತಿನಾಶ ಅತ್ಯಾಚಾರದಂತಹ ಪ್ರಕರಣಗಳು 'ಅನ್ಯಾಯಕ್ಕೊಳಗಾದವರು' ಮುಯ್ಯಿ ತೀರಿಸಿಕೊಳ್ಳಲು ನಡೆಸುವ ನ್ಯಾಯಬದ್ಧ ಚಟುವಟಿಕೆಗಳಾಗುತ್ತವೆ. ಸಾಮಾನ್ಯವಾಗಿ ಇಂಥಹ ಸಂಘರ್ಷಗಳು ತಮಿಳುನಾಡು ಗಡಿಯಲ್ಲಿ ಸಂಭವಿಸುತ್ತಿವೆ.

ಇಲ್ಲಿನ ಲೇಖನಗಳು ಇನ್ನೊಂದು ಭಾಷಿಕ ಸಮುದಾಯದ ಜತೆ ಇರುವುದರ ಲಾಭಗಳನ್ನು ಖಂಡಿತವಾಗಿ ಹೇಳುತ್ತಿವೆ. ಇಂತಹ ಸಮನ್ವಯದ ಅನುಭವವು ಕೇರಳದ ಗಡಿಯ ಲೇಖಕರಿಂದ ಬಂದಿದೆ. ಆದರೆ ಮಹಾರಾಷ್ಟ್ರ ಗಡಿಯ ಲೇಖಕರು ಬರೆದಿರುವ ಲೇಖನಗಳಲ್ಲಿ ಹೆಚ್ಚಾಗಿ ಅಪಮಾನದ ಹಿಂಸೆಯ ಅನುಭವಗಳೇ ತುಂಬಿವೆ. ಈ ಅಪಮಾನ ಹಿಂಸೆಗಳ ಅನುಭವಗಳಿಗೆ ದೀರ್ಘವಾದ ಇತಿಹಾಸವೇ ಇದೆ. ಆಲೂರು ವೆಂಕಟರಾವ್, ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪಿಸಿದ ರಾ ಹ ದೇಶಪಾಂಡೆ ಅವರ ಜೀವನ ಚರಿತ್ರೆಗಳಲ್ಲಿ ಇದರ ಪ್ರಸ್ತಾಪವಿದೆ. ಇದು ಸ್ವತಂತ್ರ ಕರ್ನಾಟಕವು ಉದಯವಾದ ಬಳಿಕವೂ ಮುಂದುವರೆದಿದೆ. ಮರಾಠಿಗರ ದರ್ಪಿಷ್ಟ ಧೋರಣೆಯಿಂದ ತಮ್ಮ ಮನೆಮಾತುನ್ನೂ ಮುಕ್ತವಾಗಿ ಸಾರ್ವಜನಿಕವಾಗಿ ಆಡಲಾರದ ಉಸಿರುಗಟ್ಟುವ ವಾತಾವರಣವು, ಸ್ವತಂತ್ರ ಭಾರತದ ವೈಚಿತ್ರಗಳಲ್ಲಿ ಒಂದಾಗಿದೆ.

ಆದರೆ ಈ ಸಂಗತಿ ನಿರ್ದಿಷ್ಟ ಭಾಷಿಕರು ದುರಭಿಮಾನಿಗಳು, ಕನ್ನಡಿಗರು ನಿರಭಿಮಾನಿಗಳು ಎಂಬ ಕ್ಷೀಪೆಯ ಸರಳಸೂತ್ರಕ್ಕೆ ಕರೆದೊಯ್ಯುವ ಅಪಾಯವಿದೆ. ಇದು ಆಳದಲ್ಲಿ

ಕೋಮುವಾದಿ ಚಿಂತನೆಯ ತರ್ಕವಾಗಿದೆ. ಇಲ್ಲಿನ ಲೇಖಕರು ಗಡಿಯಲ್ಲಿರುವ ಸಂಕಟ ಗಳಿಗೆ ಸಮಸ್ತ ಕಾರಣಗಳನ್ನು 'ಅನ್ಯಭಾಷಿಕರ' ಮೇಲೆ ಹಾಕುತ್ತಿಲ್ಲ. ಇದು ಬಹಳ ಮುಖ್ಯ. ತಾವು ಎರಡನೆ ದರ್ಜೆಯ ಪ್ರಜೆಗಳಾಗಿರುವುದಕ್ಕೆ ತಮ್ಮ ಆರ್ಥಿಕದೈನ್ಯವೂ ಕಾರಣ ಎಂದು ಸೂಚಿಸುತ್ತಿದ್ದಾರೆ. ತಮ್ಮ ಸರಕಾರ ಹಾಗೂ ನಾಡವರ ನಿರ್ಲಕ್ಷ್ಯಕ್ಕೊಳಗಾಗಿರುವ ಗಡಿವಾಸಿ ಗಳು ಒಂದರ್ಥದಲ್ಲಿ ಅನಾಥರು. ಅವರು ಇತ್ತಲೂ ಅಲ್ಲ ಅತ್ತಲೂ ಅಲ್ಲ. ಹೀಗಾಗಿ ಅವರಲ್ಲಿ ಕೆಲವರು 'ಮಹಾರಾಷ್ಟ್ರಕ್ಕಾದರೂ ಸೇರುತ್ತೇವೆ' ಎಂದು ಆಲೋಚಿಸಿರುವುದು ಆಶ್ಚರ್ಯವಾಗಿ ಕಾಣುವುದಿಲ್ಲ. ಅಸ್ತಿತ್ವದ ಪ್ರಶ್ನೆ ಬಂದಾಗ ಜನ ಭಾವನಾತ್ಮಕವಾಗಿ ಎಂದೂ 'ನಮ್ಮ ಭಾಷೆ ನಮ್ಮ ಸಂಸ್ಕೃತಿ' ಎಂಬ ಹಂಗಿನಲ್ಲಿ ಇರುವುದಿಲ್ಲ ಎಂಬ ಕಟು ಸತ್ಯವನ್ನು ಈ ಸಂಗತಿ ಹೇಳುತ್ತಿದೆ. ಇದು, ನಮ್ಮ ಸರಕಾರಗಳು ತಮ್ಮದೇ ಜನರನ್ನು ಐವತ್ತು ವರುಷಗಳಿಂದ ಯಾವ ರೀತಿಯ ಅಭಿವೃದ್ಧಿಪಥದಲ್ಲಿ ಸಾಗಿಸಿವೆ, ಎಂಬುದರ ಮೇಲೆ ಮಾಡಿದ ರಾಜಕೀಯ ಕಾಮೆಂಟ್ ಕೂಡ ಆಗಿದೆ.

ಗಡಿ ಅನುಭವಗಳಿಗೆ ಕೇವಲ ನೊಂದ ಮುಖವಿಲ್ಲ. ನೋಯಿಸಿದ ಮುಖವೂ ಇದೆ. ಇದು ಇಲ್ಲಿನ ಲೇಖನಗಳಲ್ಲಿ ಆತ್ಮವಿಮರ್ಶೆ ಪರಿತಾಪಗಳಲ್ಲಿ ವ್ಯಕ್ತವಾಗಿದೆ. ಕನ್ನಡಿಗರು ತಮ್ಮ ಭಾಷೆ ಸಂಸ್ಕೃತಿ ಬಗ್ಗೆ ತಮಿಳರಂತೆ ಮರಾಠಿಗರಂತೆ ಅಭಿಮಾನಿಗಳಲ್ಲ ಎಂಬುದಕ್ಕೆ ಪ್ರತಿಯಾಗಿ ಸಿಗುವ ಕೆಟ್ಟ ಉತ್ತರವಾಗಿದೆ. ತಮಿಳರ ಮೇಲೆ ಕನ್ನಡಿಗರು ಮಾಡಿದ ಹಲ್ಲೆ ಯನ್ನು ಅಥವಾ ಕೋಲಾರ ಸೀಮೆಯಲ್ಲಿ ಕನ್ನಡವು ತೆಲುಗನ್ನು ದಮನಿಸಿರುವುದನ್ನು ಬಣ್ಣಿಸುವ ಲೇಖನಗಳಲ್ಲಿ ಇದರ ಪ್ರಸ್ತಾಪವಿದೆ. ಮಹಾರಾಷ್ಟ್ರ ಗಡಿಯಲ್ಲಿ ಕನ್ನಡ ಮಾತಾ ಡುವುದಕ್ಕೆ ಹೆದರುವ ಒಬ್ಬ ಹುಡುಗಿಯ ವೇದನೆಗಿಂತ ಯಾವ ರೀತಿಯಲ್ಲೂ ಇದು ಕಡಿಮೆಯಲ್ಲ.

ಹೀಗೆ ಗಡಿಯಲ್ಲಿ ಬದುಕುವ ತಮ್ಮ ಅನುಭವಗಳನ್ನು ಹಂಚಿಕೊಂಡಿರುವ ಲೇಖಕರು ಅಚ್ಚರಿಯೆನಿಸುವ ಸಂಗತಿಗಳನ್ನು ತಿಳಿಸಿದ್ದಾರೆ. ನಾವು ಲಜ್ಜೆಪಡುವ ಹಾಗೂ ಆತ್ಮವಿಮರ್ಶೆ ಮಾಡಿಕೊಳ್ಳುವ ಸತ್ಯಗಳನ್ನೂ ಬೆರಳಿಟ್ಟು ತೋರಿಸಿದ್ದಾರೆ. ಮುಖ್ಯವಾಗಿ ಜನರನ್ನು ಬೇರೆಮಾಡುವ ಈ ಭಾಷಿಕ ದ್ವೇಷಗಳು, ನಮ್ಮ ಪ್ರತಿನಿಧಿ ಸರ್ಕಾರಗಳ ಅರಾಜಕೀಯವಾದ ನಿರ್ವಹಣೆಯಿಂದ ಹಾಗೂ ಭಾಷಾ ಮೂಲಭೂತವಾದಿ ಚಿಂತನೆಗಳಿಂದ ಬಂದವು. ಅವು ತಾತ್ಕಾಲಿಕವಾದವು. ಅಂತಿಮವಾಗಿ ಇದರ ಆಚೆ ಮನುಷ್ಯರಾಗಿ ಬದುಕುವ ಹಾಗೂ ಸಂಪ ತ್ತನ್ನು ಹಂಚಿಕೊಂಡು ಬದುಕುವ ಒಂದು ಸಹನಶೀಲಪರಿಸರದ ಅಗತ್ಯವಿದೆ ಎಂಬುದನ್ನು ಎಲ್ಲ ಲೇಖನಗಳು ಧ್ವನಿಸಿವೆ. ಇವು ರಾಜಧಾನಿಯಲ್ಲಿದ್ದು ಭಾಷಾ ಚಳುವಳಿಗಳನ್ನು ಮಾಡುವ, ಸರಿಯಾದ ಮಾಹಿತಿಯಿಲ್ಲದೆ ಸಂಶೋಧನೆ ಮಾಡುವ ಅಥವಾ ವಾಸ್ತವಗಳನ್ನು ಕೆಲವು ಭಾವನಾತ್ಮಕವಾಗಿ ಗ್ರಹಿಸಿ ಕಾರ್ಯಕ್ರಮ ರೂಪಿಸುವ ಆಡಳಿತಗಾರರ ಕಣ್ತೆರೆಸು ವಂತಿವೆ.

**- ಸಂಪಾದಕ**

# ದೂಧಗಂಗೆಯನ್ನು ಕೃಷ್ಣೆನುಂಗಿ ನೀರು ಕುಡಿದೀತೇ?

● ಅನಿಲ ಕಮತಿ

ಹಿಂದೊಮ್ಮೆ ನಾನು ದೂಧಗಂಗಾ ಮತ್ತು ಕೃಷ್ಣ ನದಿಗಳು ಸೇರುವ ಸಂಗಮ ತಾಣದ ಮಧ್ಯೆಯ ದಿಬ್ಬವೊಂದರ ಮೇಲೆ ನಿಂತಿದ್ದೆ. ಎರಡೂ ಬದಿಯಿಂದ ಹರಿದು ಬರುತ್ತಿದ್ದ ಎರಡು ನದಿಗಳು, ಸುತ್ತಲಿನ ಹಚ್ಚಹಸಿರು ಹೊದ್ದ ಕಬ್ಬು-ಹುಲ್ಲುಗಡ್ಡೆಗಳು, 'ಗಿಡಗಂಟಿಗಳ ಕೊರಳೊಳಗಿಂದ ಹೊರಹೊಮ್ಮುತ್ತಿದ್ದ ಹಕ್ಕಿಗಳ ನಾದ', ಇದಕ್ಕೆ ಸವಾಲೆಸೆಯುವಂತಿದ್ದ ರೈತರ ಕೂಗು-ಕೇಕೆ ಈ ಎಲ್ಲ ಮನಮುಗ್ಧಗೊಳಿಸುವ ನಿಸರ್ಗ ಸೌಂದರ್ಯದ ಮಧ್ಯೆಯೂ ನನ್ನ ಮನಸ್ಸನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿದ್ದದು, ನನ್ನ ನೇರ ಕಣ್ಣೆದುರಿಗಿನ ದೃಶ್ಯ. ನನ್ನ ಬಲಬದಿಯಿಂದ ದೂಧಗಂಗೆ ತಿಳಿನೀರು ಹೊತ್ತು ಮೈತುಂಬಿ ಬರುತ್ತಿದ್ದರೆ, ಎಡಬದಿಯಿಂದ ಒಂದೆರಡು ದಿನಗಳ ಹಿಂದಷ್ಟೇ ಮೇಲ್ಪ್ರದೇಶದಲ್ಲೆಲ್ಲೋ ಅಕಾಲಿಕ ಮಳೆಯಾದುದರಿಂದ ಚಾಕಲೇಟ ಬಣ್ಣದ ರಾಡಿನೀರಿನೊಂದಿಗೆ ಭೋರ್ಗರೆಯುತ್ತ ಬರುತ್ತಿದ್ದಾಳೆ ಕೃಷ್ಣೆ. ನನ್ನೆದುರಿಗೆ ಇವೆರಡೂ ಸೇರಿದಾಗ ದೂಧಗಂಗೆಯ ನಿರ್ವರ್ಣ, ನಿರ್ಮಲ ನೀರಿಗೆ ಹರಿದು ಹೋಗಲು ನಾಲ್ಕಾರು ಅಡಿಗಳವರೆಗೂ ಎಡೆಮಾಡಿಕೊಡದೇ, ತನ್ನ ಕೆಂಬಣ್ಣದ ನೀರಿನೊಡಲೊಳಗೆ ದೂಧಗಂಗೆಯನ್ನು ಸೆಳೆದು, ಅಡಗಿಸಿಕೊಂಡು ಅದೇ ಕೆಂಭೂತದಂತೆ ನರ್ತಿಸುತ್ತ ಮುನ್ನುಗ್ಗುತ್ತಿದ್ದಾಳೆ ಕೃಷ್ಣೆ! ಈ ಎರಡು ಜೀವನದಿಗಳು ಸೇರಿ ಚಲ್ಲುವರಿಯುತ್ತಾ ಮುಂದೆ ಸಾಗುತ್ತಿದ್ದರೂ ಇನ್ನು ಮುಂದೆ ಅವಳ ಹೆಸರು - 'ಕೃಷ್ಣೆ' ಎಂದು ಮಾತ್ರ.

ನಾನು ನನ್ನ ಬದುಕಿನ ಒಂದೆರಡು ವರುಷಗಳನ್ನು ಹೊರತುಪಡಿಸಿದರೆ ಜೀವಮಾನದ ನಾಲ್ಕೂವರೆ ದಶಕಗಳನ್ನೆಲ್ಲ ಕಳೆದದ್ದು ಎರಡು ನಾಡು-ನುಡಿಗಳು ಸೇರುವ ಈ ಗಡಿಭಾಗದಲ್ಲಿಯೇ. ನಾಲ್ಕಾರು ವರ್ಷ ಭಾಷೆಗಾಗಿ 'ಹೊಡಿ-ಬಡಿ' ಸಂಸ್ಕೃತಿಯನ್ನು ಅಂದು ಮೈಗೂಡಿಸಿಕೊಂಡಿದ್ದ, ಉಚ್ಚ ನಾಗರಿಕತೆಯ, ಸುಶಿಕ್ಷಿತ, ಸುಸಂಸ್ಕೃತ ಬೆಳಗಾವಿ ನಗರಿಯಲ್ಲಿದ್ದೆ. ಇನ್ನುಳಿದಂತೆ ಪಾತಳಿಯ ಮೇಲೆಲ್ಲ ಶಾಂತವಾಗಿದ್ದರೂ ಅಂತರಗಂಗೆಯಲ್ಲಿ ಸದಾ ಸ್ಫುಟವಾಗಿ ಎರಡು ಸಂಸ್ಕೃತಿಗಳು ಪ್ರವಹಿಸುವ ಕರ್ನಾಟಕದ ಉತ್ತರ ಗಡಿಯ ಗ್ರಾಮೀಣ ಪ್ರದೇಶದಲ್ಲಿದ್ದೆ.

ಗಡಿ ಪ್ರದೇಶದ ಬದುಕೇ ಒಂದು ವಿಶಿಷ್ಟ ಅನುಭವ ಅದರಲ್ಲೂ ಕರ್ನಾಟಕ-ಮಹಾರಾಷ್ಟ್ರದ ಗಡಿ ಎಂದರೆ, ಎರಡು ತೀರ ಭಿನ್ನ ಹಿನ್ನೆಲೆಯಿಂದ ಬಂದ ಭಾಷೆಗಳು ಸೇರಿ, ಪಲ್ಲವಿಸಿ ಇಲ್ಲಿಯೇ ಅನುರಣಿಸಿ ಸ್ಥಳೀಯವಾಗಿ ರೂಪುಗೊಂಡ ಫಿಫ್ಟಿ-ಫಿಫ್ಟಿ ಭಾಷೆ; ಎರಡು

ಭಾಷೆಗಳ ಜಾನಪದಗಳು ಸೇರಿ ರೂಪಗೊಂಡ 'ಶಾಹೀರಕಿ', 'ಪೋವಾಡಾ', ಲಾವಣಿ, ಗೀಗೀಪದ ಮುಂತಾದ ಜಾನಪದ ಕಲೆಗಳು, ಒಂದರಮೇಲೊಂದು ಅಳಿಸಲಾಗದ ಅಚ್ಚೊತ್ತಿರುವ ರಂಗಭೂಮಿ, ಊಟ-ಉಡಿಗೆ, ವೇಷ-ಭೂಷಣಗಳ ಕಲಸು ಮೇಲೋಗರ, ಚರಿತ್ರೆ ಯುದ್ಧಕ್ಕೂ ಸೆಣಸಾಟವನ್ನ, ಹೋರಾಟವನ್ನ ಮೈಗೂಡಿಸಿಕೊಂಡ ಒಂದು ಜನಾಂಗದೊಂದಿಗೆ, ಸಹನೆ ಸಹಚರ್ಯೆಗಳೇ ಮೈವೆತ್ತಂತಿರುವ ಇನ್ನೊಂದು ಭಾಷಿಕ ಜನಾಂಗದ ಸಹಬಾಳ್ವೆ, ಮುಂತಾದವುಗಳನ್ನೆಲ್ಲ ಗಮನಿಸುತ್ತ ಅನುಭವಿಸುತ್ತ ಸಾಗುವವರಿಗೆ ಇದು ನಿಶ್ಚಿತಕ್ಕೂ ಶ್ರೀಮಂತ ಅನುಭವ.

ಈ ಅನುಭವ ತುಂಬ ಸಂಕೀರ್ಣವಾದುದೂ ಹೌದು. ಈ ಸಭ್ಯತೆ, ಸಾಹಿತ್ಯ, ಸಂಪನ್ನತೆಯಲ್ಲಿಯ ವೈವಿಧ್ಯವನ್ನು, ಗುಟುಕರಿಸುತ್ತ, ಆಸ್ವಾದಿಸುವ ಹೃದಯ ವೈಶಾಲ್ಯವುಳ್ಳ ಸಜ್ಜನರಿಗೆ ಇದು ಸಿರಿವಂತಿಕೆಯ ಸಿಹಿ ಅನುಭವ; ಆದರೆ, ತನ್ನ ಭಾಷೆಯನ್ನು ತನ್ಮಯತೆಯಿಂದ ಎದೆಗವುಚಿಕೊಂಡು ಪ್ರೀತಿಸುತ್ತ, ನೆರೆಯ ಭಾಷೆಯನ್ನ ದ್ವೇಷಿಸದಿದ್ದರೂ, ತನ್ನ ಭಾಷೆ-ಸಂಸ್ಕೃತಿಗಳ ಮೇಲಾಗುವ ಆಕ್ರಮಣವನ್ನು ಕಂಡು ಭವಿತವ್ಯದಲ್ಲಿ ಇದು ಈ ನಾಡಿನ ಸಂಸ್ಕೃತಿಯ ಹಿನ್ನಡೆಯಾದೀತು ಎಂದು ಲೆಕ್ಕಹಾಕಿ ಭಾವಿಸುವ, ಭಾವಜೀವಿಗಳಿಗೆ, ಇಲ್ಲಿ ಹೆಜ್ಜೆಹೆಜ್ಜೆಗೂ ಸಂಕಷ್ಟಗಳ ಸರಮಾಲೆಯೇ ಎದುರಾಗುತ್ತವೆ.

ಈ ಗಡಿಭಾಗದ ಬಳಕೆಯ ಭಾಷೆ ತುಂಬ ವಿಶಿಷ್ಟವಾದುದು. ಇದಕ್ಕೆ ತನ್ನದೇ ಆದ ಲಯವಿದೆ, ವಿಶಿಷ್ಟ ಧಾಟಿಯಿದೆ, ಸ್ವಂತ ಪದಸಂಪತ್ತಿದೆ. ಯಾವುದೇ ಒಂದು ಭಾಷೆ ಪ್ರತಿ ನೂರು ಕಿಮಿಗೊಮ್ಮೆ ತನ್ನ ಉಚ್ಚಾರಣೆಯ ಧಾಟಿಯನ್ನು ಬದಲಿಸುತ್ತ ಸಾಗುತ್ತದೆ ಎಂಬುದು ಭಾಷಾತಜ್ಞರ ಅಭಿಮತವಾದರೆ, ಈ ಗಡಿಭಾಗದ ಭಾಷೆ ಪ್ರತಿ ಹತ್ತು ಮೈಲಿಗೊಮ್ಮೆ ತನ್ನ ಆಕ್ಸೆಂಟನ್ನು ಬದಲಿಸುತ್ತ ಸಾಗುವುದನ್ನು ಕಾಣಬಹುದು.

ಇಲ್ಲಿಯ ಭಾಷೆ ಎಷ್ಟೊಂದು ಅನನ್ಯವಾಗಿದೆ ಎಂದರೆ, ಒಳನಾಡ ಕನ್ನಡಿಗರಿಗೆ ಇದೊಂದು ಹೊಸಭಾಷೆ ಎನ್ನಿಸಿದರೆ ಆಶ್ಚರ್ಯವಿಲ್ಲ. ನಾವು ಐದು ಜನ ಗೆಳೆಯರೊಮ್ಮೆ ಕರ್ನಾಟಕದ ಪ್ರವಾಸಕ್ಕೆ ಹೋಗಿದ್ದೆವು. ಐವರೂ ಇದೇ ಗಡಿಭಾಗದಲ್ಲಿ ಕನ್ನಡ ಮಾಧ್ಯಮದಲ್ಲಿಯೇ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಮುಗಿಸಿ, ಬೆಳಗಾವಿಯ ಒಂದೇ ಕಾಲೇಜಿನಿಂದ ಎಮ್.ಬಿ.ಬಿ.ಎಸ್. ಪಡೆದು, ಮತ್ತು ಇದೇ ಗಡಿಭಾಗದ ವಿಭಿನ್ನ ಹಳ್ಳಿಗಳಲ್ಲಿ ವೃತ್ತಿನಿರತರಾದವರು. ಇವರಲ್ಲಿ ಒಬ್ಬಿಬ್ಬರು ಈ ಪ್ರಾಂತಬಿಟ್ಟು ಬೇರೆ ಪ್ರಪಂಚಕ್ಕೆ ಅಷ್ಟೊಂದು ತೆರೆದುಕೊಳ್ಳದವರು. ಮೈಸೂರು, ಬೆಳಗೊಳ, ಬೇಲೂರು, ಹಳೇಬೀಡು ಮುಗಿಸಿ ಧರ್ಮಸ್ಥಳ ಬಿಡುವಾಗ, ಇವರಲ್ಲೊಬ್ಬಾತ ಇಲ್ಲಿಂದ ಆಗುಂಬೆಗೆ ಹೋಗುವುದೆಂದು ರಾಗವೆಳೆದ. ಉಳಿದವರಿಗೆ ಉಡುಪಿಗೆ ಹೋಗಿ ಮರವಂತೆ, ಮುರಡೇಶ್ವರ, ಗೋಕರ್ಣ ಮುಖಾಂತರ ಊರು ಸೇರುವತ್ತ ಒಲವು. ಆದರೆ ಆತ ಆಗುಂಬೆಗೆ ಹೋಗುವ ಪಟ್ಟು ಸಡಲಿಸದಾದಾಗ- 'ಆಯ್ತುಪ್ಪ, ಈಗಾಗಲೇ ಹೊತ್ತು ಮಾರುದ್ದ ಉಳಿದಿದೆ. ಕತ್ತಲಲ್ಲಿ ಆಗುಂಬೆಯ ದಾರಿ ಪ್ರಶಸ್ತವೇ. ಇಲ್ಲಿಂದ ಅದು ಎಷ್ಟು ದೂರ? ಅಲ್ಲಿ ಅವೇಳೆಯಲ್ಲಿ

ಹೋದರೆ ರಾತ್ರಿ ಉಳಿದುಕೊಳ್ಳಲು ಅನುಕೂಲಗಳುಂಟೇ? ಎಂದು ಯಾರನ್ನಾದರೂ ಕೇಳಿ ಬಾ' ಎಂದು ಎಲ್ಲರೂ ಸೇರಿ ಆತನನ್ನು ಅಟ್ಟಿದೆವು. ಆತ ಉಪಾಯವಿಲ್ಲದೇ ನಮ್ಮ ಟ್ಯಾಕ್ಸಿಯಿಂದ ಅಷ್ಟು ದೂರದಲ್ಲಿ ನಿಂತಿದ್ದ ಬಸ್ ಡ್ರೈವರ್‌ನಿಗೆ ವಿವರ ಕೇಳಲೆಂದು ಹೋದ. ಹತ್ತು ನಿಮಿಷಗಳವರೆಗೆ ಅವರ ಚರ್ಚೆ ಸಾಗಿಯೇ ಇದ್ದುದ್ದನ್ನು ನಾವು ಕಣ್ಣಾರೆ ನೋಡುತ್ತಿದ್ದೆವಾದರೂ ಕಿವಿಗೆ ಕೇಳುತ್ತಿರಲಿಲ್ಲ. ಕೊನೆಗೆ ಗೆಳೆಯ ನನ್ನನ್ನು ಕೈಬೀಸಿ ಕರೆದ. ನಾನು ಹೋಗಿ ಒಂದೆರಡು ಮಾತುಗಳಲ್ಲಿ ವಿವರ ಪಡೆದು ಮರುಳುತ್ತಿರಬೇಕಾದರೆ, ಆ ಡ್ರೈವರ್ ನನ್ನ ಹೆಗಲುತಟ್ಟಿ ಕೇಳಿದ್ದೇನೆಂದರೆ-'ಸಾರ್, ಅವರು ಮಾತನಾಡುತ್ತಿದ್ದದು ಯಾವ ಭಾಷೆ?' ಯಾವ ಭಾಷೆ ಎಂದೇ ಅರಿವೆಗೆ ಬಾರದಾತ, ಈತನ ಪ್ರಶ್ನೆಗಳಿಗೆ ಅದೆಂತು ಉತ್ತರಿಸಿಯಾನು!.

ಇಲ್ಲಿಯ ಭಾಷೆಗೆ ತನ್ನದೇ ಆದ ವಿಶಿಷ್ಟ ಪದಸಂಪತ್ತಿದೆ ಎಂದೆನಲ್ಲವೇ? ನನ್ನ ವೃತ್ತಿಯಲ್ಲಿ ದಿನಾಲೂ ಹತ್ತಾರು ಸಾರಿ ಎದುರಾಗುವ ಕೆಲಶಬ್ದಗಳ ಮರ್ಮ ಬಿಡಿಸಲು, ಅದೆಷ್ಟೋ ಸಲ ಪ್ರಯತ್ನಿಸಿದ್ದಿದೆ. 'ಫ್ಲೂ'ಗೆ ಇಲ್ಲಿ ಶ್ರೀಸಾಮಾನ್ಯ ಬಳಸುವ ಪದ 'ಕಣಕಣಿ'. 'ಯಾಕೋ ಸ್ವಲ್ಪ ಕಣಕಣಿ ಬಂದೈತ್ರೀ ಡಾಕ್ಟರ್ ' ಇದು ನಾನು ದಿನಂಪ್ರತಿ ಕೇಳುವ ವಾಕ್ಯ. ಹತ್ತಾರು ವರ್ಷಗಳವರೆಗೂ ಇದರ ತಳಬುಡ ಒಂದೂ ಅರ್ಥವಾಗಿರಲಿಲ್ಲ. ಮೊನ್ನೆ ಒಮ್ಮಲೆ ತಲೆಯಲ್ಲಿ ಮಿಂಚೊಂದು ಹೊಳೆಯಿತು. 'ಫ್ಲೂ'ದ ಮುಖ್ಯಲಕ್ಷಣ ಮೈಕೈ ಎಲ್ಲಾ ವಿಪರೀತ ನೋವು. ಮೈಯ 'ಕಣ-ಕಣ'ಗಳಲ್ಲೂ ನೋವು ಕಾಣಿಸಿಕೊಳ್ಳುವುದರಿಂದ ಈ ಶಬ್ದ ಬಳಕೆಗೆ ಬಂದಿರಬಹುದೇ? ಆಶ್ಚರ್ಯದ ಸಂಗತಿ ಎಂದರೆ 'ಕಣ-ಕಣ' ಎಂಬ ಕನ್ನಡದ ಶುದ್ಧಾಂತರಂಗದಿಂದ ಬಂದಂಥ ಶಬ್ದದಿಂದುದಿಸಿರಬಹುದಾದ ಈ ಕಣಕಣಿ, ಇಲ್ಲಿಯ ಮರಾಠಿ ಭಾಷೆಯಲ್ಲೂ ಅಷ್ಟೇ ಸಾಮಾನ್ಯವಾಗಿ ಬಳಕೆಯಲ್ಲಿದೆ! 'ಅಜ್ಜಾ ನಿಮ್ಮ ವಯಸ್ಸೆಷ್ಟು?' ಎಂದರೆ, 'ಯಾರಿಗ್ಗೊತ್ರಿ ಯಪ್ಪಾ, ಸಾತಿ ಬ್ಯಾನ್ಯಾಗ ನಾ ಅದು ಐದಾರ ವರ್ಷದಾವ ಇರಬೇಕು, ಪ್ಲೇಗ್ ಬಂದ ಮರುವರ್ಷ ಮದ್ವಿ ಆತ್ರೀ, ಎಷ್ಟಿರಬೇಕು ನೀವs ಲೆಕ್ಕಾ ಹಾಕ್ಕೊಳ್ರೀ.' ಸ್ವಲ್ಪ ಹೆಚ್ಚು ಕಡಿಮೆ ಈ ಸಂಭಾಷಣೆ ವಾರಕ್ಕೊಂದೆರಡಾವರ್ತಿಯಾದರೂ ಬೇರೆ ಬೇರೆ ಅಜ್ಜಂದಿರೊಂದಿಗೆ ಪುನರಾವರ್ತನೆಯಾಗುತ್ತೆ. 'ಪ್ಲೇಗೂ ಅಲ್ಲದ, ಮೈಲಿ ಕಾಲರಾ ಸಹ ಅಲ್ಲದ ಈ ಸಾತಿ ಬೇನೆ ಯಾವುದಿರಬೇಕು?' ಇದು ವರ್ಷಾನುಗಟ್ಟಲೆ ನನ್ನ ತಲೆ ತಿನ್ನುತ್ತಿದ್ದ ಪ್ರಶ್ನೆ. 'ಸದ್ಯಾ ಫ್ಲೂದ ಸಾತ ಐತೇನ್ರೀ? "ಹ್ವಾದ ತಿಂಗಳದಾಗ ಡೀಸೆಂಟ್ರಿ ಸಾತ ಊರಾಗ ಇತ್ತೇನ್ರಿ"' ಇದೂ ಸದಾ ನನಗೆ ಎದುರಾಗುವ ಪ್ರಶ್ನೆಯೇ. 'ಸಾತ' ಇದು ಈ ಪ್ರದೇಶದ ಮರಾಠಿಯಲ್ಲಿ 'ಸಾಂಕ್ರಾಮಿಕತೆ'ಗೆ ಸಮಾನಾರ್ಥದಲ್ಲಿ ಬಳಸಲ್ಪಡುತ್ತದೆ. ಇಪ್ಪತ್ತನೆಯ ಶತಮಾನದ ಇಪ್ಪತ್ತರ ದಶಕದ ಪ್ರಥಮಾರ್ಧದಲ್ಲಿ ಇನ್‌ಫ್ಲೂಯೆಂಝಾ ಸಾಂಕ್ರಾಮಿಕತೆಯಿಂದ ಇಡೀ ವಿಶ್ವವೇ ತಲ್ಲಣಿಸಿತ್ತು. ಇದಕ್ಕೆ ಭಾರತವೇನೂ ಹೊರತಾಗಿರಲಿಲ್ಲ. ಹಾಗಿದ್ದರೆ ಈ ಇನ್‌ಫ್ಲೂಯೆಂಝಾನೇ ಸಾತಿ ಬೇನೆಯಾಗಿರಬಹುದೇ? ರೋಗಲಕ್ಷಣಗಳೂ ಈ ಸಂದೇಹವನ್ನು ಬಲಪಡಿಸುತ್ತವೆ. ಇವೆರಡು ಕೇವಲ ಹೊಳಹುಗಳು ಮಾತ್ರ.

ಇಲ್ಲಿಯ ಮಣ್ಣಿನ ವಿಶಿಷ್ಟ ಛಾಪು ಹೊಂದಿದ ಈ ಭಾಷೆಯನ್ನು ಸಾಹಿತ್ಯದಲ್ಲಿ

ದುಡಿಸಿಕೊಳ್ಳುವ ಪ್ರಯತ್ನಗಳು ಇನ್ನೂ ಹೆಚ್ಚಬೇಕು. ಈ ಭಾಷೆಯನ್ನೇ ಸಂಪೂರ್ಣವಾಗಿ ಬಳಸಿಕೊಂಡ ಸಾಹಿತ್ಯ ಕೃತಿಗಳು ಹೊರಬಂದರೆ, ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಹೊಸ ಆಯಾಮ ವೊಂದು ದೊರಕಿಸಿದಂತಾಗುತ್ತದೆ. ಈ ಭಾಷೆಯನ್ನು ಸಂಭಾಷಣೆಗಳಲ್ಲಿ ಬಳಸಿಕೊಂಡು ಹುಟ್ಟಿದ ಇಲ್ಲಿಯ ಶೇಡಬಾಳದ ಮಿರ್ಜಿ ಅಣ್ಣಾರಾಯರ- 'ಅಶೋಕ ಚಕ್ರ' ನನಗೆ ಪಿ.ಯು.ದಲ್ಲಿ ಪಠ್ಯವಾಗಿತ್ತು. ಆಗ ನಾನು ಅಭ್ಯಸಿಸುತ್ತಿದ್ದುದು ಇಲ್ಲಿಂದ ಕೇವಲ ಐವತ್ತು ಅರವತ್ತು ಮೈಲಿಗಳಾಚೆಯ ಬೈಲಹೊಂಗಲದಲ್ಲಿ. ಅಲ್ಲಿ ಈ ಕಾದಂಬರಿಯನ್ನು ವಿವರಿಸಿ ಹೇಳಬೇಕಾದ ಅಲ್ಲಿಯವರೇ ಆದ ಮೇಷ್ಟರು ಪ್ರತಿ ಕ್ಲಾಸಿನಲ್ಲಿ ಒಂದೆರಡು ಶಬ್ದಾರ್ಥಗಳನ್ನು ತಪ್ಪಾಗಿ ಹೇಳತೊಡಗಿದಾಗ, ಕ್ಲಾಸು ಮುಗಿದ ನಂತರ ಪ್ರತ್ಯೇಕವಾಗಿ ಭೆಟ್ಟಿಯಾಗಿ ನಾನದನ್ನು ಅವರ ಗಮನಕ್ಕೆ ತಂದೆ. ತದನಂತರ ವಿಶಾಲ ಹೃದಯಿಗಳಾದ ಅವರು ಪ್ರತಿಕ್ಲಾಸಿಗೆ ಬರುವುದಕ್ಕೆ ಮುಂಚೆಯೇ ಕೆಲ ಶಬ್ದಗಳನ್ನು ಗುರುತು ಹಾಕಿಕೊಂಡು ಬಂದು, ಸ್ಟಾಫು ರೂಂಗೆ ನನ್ನನ್ನು ಕರೆಸಿ, ಆ ಶಬ್ದಗಳ ಅರ್ಥ ಪಡೆಯುವ ಪರಿಪಾಠವನ್ನು ಹಾಕಿಕೊಂಡರು. ಅರವತ್ತು ಮೈಲಿ ಫಾಸಲೆಯಲ್ಲಿಯೇ ಇಷ್ಟೊಂದು ಸಮಸ್ಯೆಗಳೇಳಬಹುದಾದರೆ ಶಿವಮೊಗ್ಗೆ ಯವರೆಗೆ, ಕನ್ನಡಕ್ಕೆ ತನ್ನದೇಆದ ಕಟ್ಟು-ತಿಟ್ಟುಗಳನ್ನಿಟ್ಟುಕೊಂಡಿರುವ ದ.ಕ.ದವರಿಗೆ, ಕಾಸ್ಮೋಪಾಲಿಟಿನ ಕನ್ನಡ ಬಳಸುವ ಬೆಂಗಳೂರಿಗರಿಗೆ ಇದು ತಿಳಿಯುವ ಪರಿ ಅದೆಂತು? ಅಥವಾ ಇದನ್ನು ಇದುವರೆಗೆ ಸಾಹಿತ್ಯದಲ್ಲಿ ಅಷ್ಟಾಗಿ ಬಳಸದೇ ಹಾಗೆಯೇ ಮುಚ್ಚಟೆಯಾಗಿ ಪರಭಾರೆ ಮಾಡಿರುವುದರಿಂದಲೇ ಈ ಪರಿಸ್ಥಿತಿ ನಿರ್ಮಾಣವಾಗಿರಬಹುದೇ!

ಎಪ್ಪತ್ತರ ದಶಕದಲ್ಲಿ ನಾನು ವಿದ್ಯಾರ್ಜನೆಗೆಂದು ಬೆಳಗಾವಿ ನಿವಾಸಿಯಾಗಿದ್ದೆ. ಅದು ಕನ್ನಡ-ಮರಾಠಿ ಪ್ರಾಬಲ್ಯಗಳು ಸಮಸಮವಾಗಿ ಮುಂದೆ ಸಾಗುತ್ತಿದ್ದ ಕಾಲ. ಅದುವರೆಗೆ ಮರಾಠಿಗರೇ ಪ್ರಬಲರಾಗಿದ್ದು, ಪ್ರತಿ ಕ್ಷೇತ್ರದಲ್ಲೂ ತಮ್ಮ ಹೆಚ್ಚುಗಾರಿಕೆಯನ್ನು ಮೆರೆದಿದ್ದವ ರಾದುದರಿಂದ, ಸಹಜವಾಗಿಯೇ ಈ ಸಂಧಿಕಾಲದಲ್ಲಿ ಅವರು ಹೆಚ್ಚು ರೊಚ್ಚಿಗೆದ್ದರು. ಯಾವುದೋ ಒಬ್ಬ ಅಮಾಯಕ ಹುಡುಗ ಗಲ್ಲಿಗುಂಟ ಹೊರತಾದ, ಆತನನ್ನು ಕನ್ನಡ ದಲ್ಲಿಯೇ ಮಾತನಾಡಿಸಿ, 'ಈಗ ಟೈಂ ಎಷ್ಟು' ಎಂದು ಕೇಳುವುದು. ಆತ ಕನ್ನಡದಲ್ಲಿ ಉತ್ತರಿಸಿದನೋ ಮರುಕ್ಷಣದಲ್ಲಿ ಆತನ ಸೈಕಲ್ಲ, ವಾಚ್, ಚೈನುಗಳೆಲ್ಲ ಮಂಗಮಾಯ. ಆತ ಇನ್ನೂ ಪ್ರತಿರೋಧ ತೋರಿದರೆ ದೊಣ್ಣೆಯೇಟಿನಿಂದ ಮೈಯೆಲ್ಲ ನಜ್ಜುಗುಜ್ಜು. ಪ್ರತಿರೋಧದ ಶಕ್ತಿ ಕೈಗೂಡಿಸಿಕೊಳ್ಳದ ಕನ್ನಡ ಆಗ ನೆಚ್ಚಿದ್ದುದು ಪೋಲೀಸರನ್ನು ಮಾತ್ರ. ಆದರೆ ಪೋಲೀಸರ ಮೂಗಿನಡಿಯಲ್ಲಿಯೇ, ಪೋಲೀಸ್ ಸ್ಟೇಶನ್ ನೆರಳಲ್ಲಿಯೇ ಇಂಥ ಘಟನೆಗಳು ಆಗಾಗ ಘಟಿಸುತ್ತಿದ್ದವು.

ನಾನೀಗ ನೆಲೆಸಿರುವ ಉತ್ತರದ ಗಡಿಗುಂಟ ಆವರಿಸಿರುವ ಗ್ರಾಮೀಣ ಪ್ರದೇಶದಲ್ಲೆಂದೂ ಇಂಥ ಪರಿಸ್ಥಿತಿ ಕಾಣಸಿಗದು. ಇದರರ್ಥ ಇಲ್ಲಿಯ ಮರಾಠಿ ಭಾಷಿಕರಲ್ಲಿ ಭಾಷಾಭಿಮಾನದ ಕೊರತೆ ಎಂದೇನೂ ಎನಿಸಬೇಕಾಗಿಲ್ಲ. ಇಲ್ಲಿ ನನ್ನೊಂದಿಗೆ ಕನ್ನಡಕೆಲಸದಲ್ಲಿ ಹೆಗಲೆಣೆಯಾಗಿ ದುಡಿದಿದ್ದ ಕನ್ಯೆಯೊಬ್ಬಳ ಲಗ್ನ. ನೆರೆಯ ಹಳ್ಳಿಯ ಯುವಕನೊಂದಿಗೆ ಏರ್ಪಟ್ಟಿತು. ತವರಿಗೆ

ಬಂದಾಗಲೆಲ್ಲ ನನ್ನ ರೋಗಿಯಾಗಿ ನನ್ನೆಡೆಗೆ ಬರುತ್ತಿದ್ದ ಈ ಹುಡುಗಿ ಅವರಿವರ ಕುರಿತು ಅರಳು ಹುರಿದಂತೆ ಮಾತನಾಡುತ್ತಿದ್ದಳಾದರೂ, ಕನ್ನಡದ ಮಾತು ಬಂದಾಗಲೆಲ್ಲ ಮ್ಲಾನವದನಳಾಗಿ ಮೌನಕ್ಕೆ ಶರಣಾಗುತ್ತಿದ್ದಳು. ನಂತರ ಇವಳಿಗೊಂದು ಮಗುವಾಗಿ, ಈ ಮಗುವಿನ ಅನಾರೋಗ್ಯಕ್ಕೆಂದು ಆಸ್ಪತ್ರೆಗೆ ಬಂದಾಗ, ಮಗುವಿನೊಂದಿಗೆ ಇವಳು ಮರಾಠಿಯಲ್ಲಿಯೇ ಮಾತನಾಡುತ್ತಿದ್ದುದನ್ನು ಕಂಡು 'ಏನಮ್ಮ, ಇದೇನು ನಿನ್ನ ಕನ್ನಡ ಪ್ರೇಮ' ಎಂದು ಛೇಡಿಸಿದ್ದೇ ತಡ, ಅವಳ ಕಣ್ಣುಗಳಿಂದ ಗಂಗೆಯಮುನೆಯರು ಧಾರಾಕಾರ ವಾಗಿ ಹರಿಯತೊಡಗಿದರು. ಬಿಕ್ಕುತ್ತಲೇ ಅವಳು ಬಿತ್ತರಿಸಿದ ವೃತ್ತಾಂತವಿದು: 'ಮದುವೆ ಯಾದ ಹೊಸತರಲ್ಲಿ ಮನೆ-ಹಾದಿ-ಬೀದಿಗಳ ವಾತಾವರಣವೆಲ್ಲ ಮರಾಠಿಯದೇ ಆಗಿದ್ದರೂ, ಇವಳು ಕನ್ನಡವನ್ನು ಜತನದಿಂದ ತನ್ನ ಹೃದಯಕ್ಕೆ ಸಮೀಪದಲ್ಲಿರಿಸಿಕೊಂಡು ಕನ್ನಡ ದಲ್ಲಿಯೇ ಮಾತನಾಡಿದಾಗ-ಬಂದದ್ದು ತಣ್ಣನೆಯ ಪ್ರತಿಕ್ರಿಯೆ. ಇವಳು ಕನ್ನಡ ಮಾತನಾಡು ವುದಕ್ಕೆ ಯಾರೂ ತಕರಾರು ತೆಗೆಯಲಿಲ್ಲವಾದರೂ, ಒಂದು ರೀತಿಯ ತಾತ್ಸಾರದ ವರ್ತನೆ. ದಿನಗಳೆದಂತೆ ಇವಳೇ ಅಷ್ಟಿಷ್ಟು ಹೊಂದಾಣಿಕೆ ಮಾಡಿಕೊಂಡಳಾದರೂ ಕನ್ನಡವನ್ನೆಂದಿಗೂ ತೊರೆಯಲೇ ಇಲ್ಲ. ಮಗು ಹುಟ್ಟಿದಾಗ ಮಾತ್ರ ಮನೆಮಂದಿಯೆಲ್ಲಾ ಸೇರಿ ಇವಳಿಗೆ ಸಕ್ತ ತಾಕೀತು ಮಾಡಿದ್ದಿಷ್ಟು- ಮಗುವನ್ನು ನಾವು ಮರಾಠಿ ಶಾಲೆಗೆ ಹಾಕಬೇಕಾದುದರಿಂದ, ಅದರೊಂದಿಗೆ ನೀನು ಕನ್ನಡದಲ್ಲಿ ಮಾತನಾಡಿದರೆ, ಎರಡೂ ಭಾಷೆಗಳ ಗೊಂದಲದಿಂದಾಗಿ ಆತನ ಮರಾಠಿ 'ವೀಕ್' ಆಗುತ್ತದೆ. ಆದ್ದರಿಂದ ನೀನು ಮಗುವಿನೊಂದಿಗೆ ಮರಾಠಿಯಲ್ಲಿ ಮಾತ್ರ ಮಾತನಾಡಬೇಕು'. ಅಲ್ಲಿಗೆ ಮುಗಿಯಿತು ಅವಳ ಕನ್ನಡದ ಹೋರಾಟ! ಚೋದ್ಯದ ಸಂಗತಿ ಎಂದರೆ, ಇವಳನ್ನು ಹಡೆದ ಊರು ಮತ್ತು ಪಡೆದ ಊರುಗಳೆರಡೂ ಕರ್ನಾಟಕದೊಳ ಗಣ ಗಡಿಹಳ್ಳಿಗಳೇ!

ಚುನಾವಣೆಗಳ ಸಮಯದಲ್ಲಿ ಈ ಗಡಿರೇಖೆಯ ಅಚೀಚೆ ಸ್ವಲ್ಪ ತೆರೆದ ಮನಸ್ಸ ನ್ನಿರಿಸಿಕೊಂಡು ಅಲೆಯಬೇಕು. ಅಲ್ಲಿ ಕನ್ನಡ ಹೋರಾಟವನ್ನೇ ಗುರಿಯಾಗಿರಿಸಿಕೊಂಡ ಯಾವೊಂದು ಪ್ರಾಂತೀಯ ಯಾ ಸ್ಥಳೀಯ ರಾಜಕೀಯ ಪಕ್ಷವೂ ಇಲ್ಲ. ಇಲ್ಲಿ ತಳವೂರಿರುವ ಮಹಾರಾಷ್ಟ್ರ ಏಕೀಕರಣ ಸಮಿತಿಯನ್ನೊಳಗೊಂಡು 'ಝಾಲಾಚ ಪಾಹೇಜೆ' ಎಂದು ಮುಗಿಲು ಮುಟ್ಟುವಂತೆ ಕೇಕೆ ಹಾಕುವ ಅನೇಕ ಪಕ್ಷಗಳಿವೆ. ಶಿವಸೇನೆ ಈಚಿನ ದಿನಗಳಲ್ಲಿ ಚಂಚು ಪ್ರವೇಶ ಮಾಡುತ್ತಿದೆ. ಮರಾಠಿಪರ ಘೋಷಣೆ ಕೂಗುತ್ತಲೇ ವಿಧಾನಸಭೆಗೆ ಆಯ್ಕೆಯಾಗುವ ಅನೇಕ ಜನ ರಾಷ್ಟ್ರೀಯ ಪಕ್ಷಗಳ ಅಭ್ಯರ್ಥಿಗಳೂ ನಮ್ಮಲ್ಲಿರುವರಾದರೆ, ಅಲ್ಲಿ ಅಂಥವರನ್ನು ಕಲ್ಪಿಸಿಕೊಳ್ಳಲೂ ಆಗದು. ಇಲ್ಲಿ ಕನ್ನಡವನ್ನು ಹೀಗಳೆಯುವುದೇ ಕೆಲವರ ಬಂಡವಾಳವಾದರೆ, ಅಲ್ಲಿ ಒಬ್ಬಾತ ಚುನಾವಣೆಗೆ ನಾಮಪತ್ರ ಸಲ್ಲಿಸಿದ ಕ್ಷಣ ಮಾಡಬೇಕಾದ ಮೊದಲ ಕೆಲಸ- 'ಮರಾಠಿಗೆ ತನ್ನ ನಿಷ್ಠೆಯನ್ನು ಸಂಶಯಕ್ಕೆಡೆಯಿಲ್ಲದಂತೆ ಸಾಬೀತುಗೊಳಿಸುವುದು'. ಗಡಿ ಯಾಚೆ ನೆಲೆಸಿರುವ ಅನೇಕ ಜನ ಸಹಕಾರಿ ಅರಾಜಕೀಯ ರಂಗದ ಧುರೀಣರ ಮನೆಮಾತು ಕನ್ನಡ. ಇವರ ಮನೆಯಲ್ಲೆಲ್ಲಾ ಕನ್ನಡದ್ದೇ ಸಾಮ್ರಾಜ್ಯ. ಆದರಿವರು ವೇದಿಕೆ ಏರಿದರೆ

ಸಾಕು ಈ ವೇದಿಕೆ ಗಡಿಯಾಚೆಗಿರಲಿ-ಗಡಿಯೀಚೆಗಿರಲಿ- ಮರಾಠಿಯಲ್ಲಿಯೇ ಭೋರ್ಗರೆಯುತ್ತಾರೆ ಮತ್ತು ಏತನ್ಮಧ್ಯ ಕನ್ನಡದ ಒಂದು ಶಬ್ದ ನುಸುಳದಂತೆ ಜಾಗೃತೆ ವಹಿಸುತ್ತಾರೆ.

ಆದರಿಲ್ಲಿ? ಕನ್ನಡದಲ್ಲಿ ತಮ್ಮ ಜೀವಮಾನವಿಡೀ ಒಮ್ಮೆಯೂ ತುಟಿ ಎರಡು ಮಾಡದವರದೆಷ್ಟೋ ಜನ ಶಾಸಕರಾಗಿದ್ದಾರೆ; ಸಚಿವ ಪದವಿಯನ್ನಲಂಕರಿಸಿದ್ದಾರೆ. 'ನನಗೆ ಕನ್ನಡ ಬಾರದು' ಎಂದು ವಿಧಾನಸಭೆಯಲ್ಲೂ ಎದೆತಟ್ಟಿ ಹೂಂಕರಿಸುವುದೇ ಹಲವರಿಗೆ ಹೆಮ್ಮೆಯ ಚಟವಾಗಿದ್ದರೆ, ಅಲ್ಲಿ ಸಾರ್ವಜನಿಕ ಜೀವನದಲ್ಲಿ ಪಾದಾರ್ಪಣೆ ಮಾಡಿದಾಗಿನಿಂದ ಚಟ್ಟವೇರುವವರೆಗೂ ಮರಾಠಿಗೆ ಶರಣಾಗತಿಯೇ ಗತಿ, ಅನ್ಯಥಾ ನಾಸ್ತಿ.

ಯಾಕೆ ಹೀಗೆ? ಚುನಾವಣಾ ಸಮಯದಲ್ಲಿ ಸ್ವಲ್ಪ ಕಣ್ತೆರೆದು, ಕಿವಿದೆರೆದು ನಿರೀಕ್ಷಿಸಿದರೆ ಕಾರಣ ಗೊತ್ತಾದೀತು. ನಮ್ಮಲ್ಲಿ ಎಲ್ಲಾ ರಾಜಕೀಯ ಪಕ್ಷಗಳವರೂ ಕನ್ನಡ, ಮರಾಠಿ, ಇಂಗ್ಲಿಶ್, ಹಿಂದಿ ಅಷ್ಟೇ ಏಕೆ ಉರ್ದುವಿನಲ್ಲೂ ಸಹ ಆಯಾಯಾ ಭಾಷಿಕ ಜನಾಂಗದ ಪ್ರೀತ್ಯರ್ಥವಾಗಿ ಗೋಡೆಬರಹ, ವಾಲ್‌ಪೋಸ್ಟರ್, ಬಟ್ಟೆ ಬ್ಯಾನರಗಳನ್ನು ಹಾಕಿದರೆ, ಗಡಿಯಾಚೆ ಕಾಣಸಿಗುವುದು- ಮರಾಠಿ ಮತ್ತು ಮರಾಠಿ ಮಾತ್ರ. ಇಲ್ಲಿಯ ಲೌಡ್‌ಸ್ಪೀಕರ್‌ಗಳು ಮೇಲೆ ಹೇಳಿದ ಎಲ್ಲಾ ಭಾಷೆಗಳಲ್ಲೂ ಮುಗಿಲು ಹರಿಯುವಂತೆ ಅರಚುತ್ತವಾದರೆ, ಅಲ್ಲಿ ಮರಾಠಿಯಲ್ಲಿ ಮಾತ್ರ ಮಾನ್ಯತೆ. ಅಲ್ಲಿ ಒಬ್ಬರ ಮನೆಮಾತು ಕನ್ನಡ, ತೆಲುಗು, ತಮಿಳು, ಉರ್ದು ಹೀಗೆ ಯಾವುದೇ ಆಗಿದ್ದರೂ ಬೀದಿಮಾತು, ಸಾರ್ವಜನಿಕ ಮಾತು ಮಾತ್ರ ಮರಾಠಿ ಎಂಬುದು ಅಲಿಖಿತ ಕಾನೂನೆಂಬಂತಾಗಿದ್ದರೆ, ಇಲ್ಲಿ ಕನ್ನಡ ಬಾರದವರ ಪ್ರತಿ ಸಂಖ್ಯೆ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಲೇ ಸಾಗಿದೆ. ಜನರೇ ಇಲ್ಲಿ ಇಷ್ಟೊಂದು ಜಾಗೃತವಾಗಿರುವಾಗ ಯಾವ ರಾಜಕಾರಣಿಯಾದರೂ ಬಾಲಬಿಚ್ಚುವ ಪ್ರಮೇಯವೇ ಉದ್ಭವಿಸುವುದಿಲ್ಲ ತಾನೇ.

ಕೊನೆಗೊಂದು ದೃಷ್ಟಾಂತ. ನಾನು ನೆಲೆಸಿರುವ ಈ ಹಳ್ಳಿಯಲ್ಲಿ ಪ್ರತಿಶತ ೭೦ ರಷ್ಟು ಜನ ಕನ್ನಡಿಗರೇ. ಇಲ್ಲಿ ವೈದ್ಯವೃತ್ತಿಯಲ್ಲಿರುವ ನಾನೊಂದು ಪ್ರಯೋಗಕ್ಕೆಳಸಿದೆ. ಒಂದು ಇಡೀ ವಾರ- ಸೋಮವಾರದಿಂದ ಶನಿವಾರದವರೆಗೆ ನನ್ನೆಡೆಗೆ ಬಂದ ಎಲ್ಲಾ ರೋಗಿ ಅಥವಾ ಅವರೊಂದಿಗಿರುವ ಪರಿಚಾರಕರನ್ನು ಕನ್ನಡದಲ್ಲಿಯೇ ಮಾತನಾಡಿಸುವುದೆಂದು ನಿರ್ಧರಿಸಿ, ಕೆಲ ಅಂಕಿ-ಅಂಶಗಳನ್ನು ಕಲೆಹಾಕತೊಡಗಿದೆ. ನಾನಂದು ಸಂಗ್ರಹಿಸಿದ ಅಂಕಿ ಅಂಶಗಳಿವು:

ಒಂದು ವಾರದ ಅವಧಿಯಲ್ಲಿ ನಾನು ಕಂಡ ಒಟ್ಟು ರೋಗಿಗಳು-೨೬೭, ಈ ಪೈಕಿ ಕನ್ನಡ ಭಾಷಿಕರು -೧೯೪ (ಶೆ. ೭೪), ಮರಾಠಿ ಭಾಷಿಕರು -೦೬೯ (ಶೇ. ೨೬), ಈ ಮರಾಠಿ ಭಾಷಿಕರ ಪೈಕಿ - ಕನ್ನಡದಲ್ಲಿ ಮಾತನಾಡಿಸಿದಾಗ, ಕನ್ನಡದಲ್ಲಿಯೇ ಉತ್ತರಿಸಿದವರು-೦೦೭ (ಶೇ. ೧೦), ಕನ್ನಡದಲ್ಲಿ ಪ್ರಶ್ನಿಸಿದಾಗಲೂ ಮರಾಠಿಯಲ್ಲಿ ಉತ್ತರಿಸಿದವರು-೦೧೧ (ಶೇ. ೧೬) - ಕನ್ನಡದಲ್ಲಿ ಪ್ರಶ್ನಿಸಿದಾಗ ಏನೊಂದೂ ತಿಳಿಯದಂತೆ ವರ್ತಿಸಿದವರು- ೦೫೧ (ಶೇ. ೭೪).

ಬಹುಶಃ ನನ್ನ ಕನ್ನಡದ ರೋಗಿಗಳನ್ನು ಮರಾಠಿಯಲ್ಲಿಯೇ ಮಾತನಾಡಿದ್ದರೆ, ಬಹುತೇಕ

ಜನ ನನ್ನೊಂದಿಗೆ -ನನ್ನ ಕನ್ನಡದ ಅತಿರೇಕಿ ನಿಲುವು ಅರಿವಿದ್ದು ಸಹ ಮರಾಠಿಯಲ್ಲಿಯೇ ಮಾತನಾಡುತ್ತಿದ್ದರೇನೋ. ಈ ಮರಾಠಿ ಭಾಷಿಕರ ಪೈಕಿ ಶೇ. ೯೦ ಕ್ಕಿಂತಲೂ ಹೆಚ್ಚು ಜನರಿಗೆ ಕನ್ನಡದ ವ್ಯಾವಹಾರಿಕ ಜ್ಞಾನವಿದೆಯಾದರೂ, ಈ ಬಾಂಧವರು ತಮಗರಿವಿಲ್ಲದಂತೆಯೇ ತಮ್ಮ ಭಾಷೆಗೆ ತೋರಿದ ನಿಷ್ಠೆ ಒಲವು ಇದು. ಇದೊಂದು ಕರ್ನಾಟಕದಲ್ಲಾದ ಸರ್ವೇ ಎಂಬುದು ಗಮನಿಸಬೇಕಾದ ಸಂಗತಿ.

ಮೇಲಿನ ಕೆಲ ಸಂಗತಿಗಳು, ಒಂದು ಭಾಷಿಕ ಜನಾಂಗ ತನ್ನ ಭಾಷೆಯ ಬಗೆಗೆ ತಳೆದಿರುವ ನಿಲುವಿಗೆ ಹಿಡಿದ ನಿಲುವುಗನ್ನಡಿ. ಈ ಎರಡು ಭಾಷಿಕ ಜನಾಂಗದ ಮನೋಭೂಮಿಕೆಯಲ್ಲಿ ಇಂಥ ಭೂಮ್ಯಾಕಾಶಗಳ ಅಂತರವಿರುವಾಗ, ಇಲ್ಲಿಯ ಭಾಷೆ-ಸಂಸ್ಕೃತಿಗಳ ಭವಿಷ್ಯವೇನು? ಲೇಖನದ ಮೊದಲಲ್ಲಿ ಹೇಳಿದ ದೂದಗಂಗೆ ಕೃಷ್ಣೆಯರ ದೃಷ್ಟಾಂತದಂತೆ ಪ್ರಬಲ ಸಂಸ್ಕೃತಿಯ ಕೃಷ್ಣೆ ಕನ್ನಡದ ದೂದಗಂಗೆಯನ್ನು ನುಂಗಿ ನೀರು ಕುಡಿದೀತೇ! ನನ್ನ ಮನದ ಅಳುಕು ಹುಸಿಯಾಗಲೆಂದೇ ಅಭಿಲಾಷೆ.

●

## ಕೇರಳದ ಕೂಡೆ ನಾ ಕಾದುವೆನು ಹೇಗೆ?

● ಕಯ್ಯಾರ ಕಿಞ್ಞಣ್ಣರೈ

ಸ್ವಾತಂತ್ರ್ಯ ಲಭಿಸಿದ ನಂತರ ಜನಸಾಮಾನ್ಯರಿಗೆ ಆಡಳಿತದ ಪ್ರತ್ಯಕ್ಷ ಜ್ಞಾನ ಆಗುವಂತೆ, ಅವರು ಆಡುವ ಮಾತೃ ಭಾಷೆಗಳಲ್ಲಿ ಸರಕಾರದ ಕಾನೂನು ವಿಷಯ ವಿಚಾರಗಳು ಬರಲಿ ಎಂದೇ ಪೂರ್ಣ ನ್ಯಾಯವೂ, ಸ್ವಾತಂತ್ರ್ಯ ಪ್ರಾಪ್ತಿಯ ಲಾಭವೂ ಎಂದು, ಬಿಡುಗಡೆಗಾಗಿ ಹೋರಾಡಿದ ಕಾಂಗ್ರೆಸ್ ಪಕ್ಷ ಮಹಾತ್ಮಾಗಾಂಧಿಯವರ ನೇತೃತ್ವದಲ್ಲಿ, ಸ್ವಾತಂತ್ರ್ಯ ಪ್ರಾಪ್ತಿಯ ನಂತರ, ಭಾಷಾ ರಾಜ್ಯದ ರಚನೆಗೆ ತನ್ನ ಬದ್ಧತೆಯನ್ನೇ ಸಾರಿತು. ಆದರೆ, ಸ್ವಾತಂತ್ರ್ಯ ಪ್ರಾಪ್ತಿಯಾಗಿ ಕೆಲಕಾಲ ಸಂದರೂ, ಕೇಂದ್ರ ಸರಕಾರ, ಈ ಕಡೆಗೆ ನೀಡಬೇಕಾದ ಗಮನ ಹರಿಸಲಿಲ್ಲವೆಂದು ಅತೃಪ್ತಿಯಿಂದ ಆಂಧ್ರದ ಪೊಟ್ಟಿ ಸೀತಾರಾಮುಲು, ಆಂಧ್ರಪ್ರಾಂತ ರಚನೆಗಾಗಿ ಆತ್ಮಾಹುತಿ ಮಾಡಿಕೊಂಡಾಗ ಕೇಂದ್ರ ಧುರೀಣರು ಎಚ್ಚೆತ್ತು ಕೂಡಲೇ ಆಂಧ್ರ ರಾಜ್ಯ ರಚನೆ ಕೈಕೊಂಡರು. ಅದೇ ಉದ್ವೇಗದ ವಾತಾವರಣದ ಸಂದರ್ಭ, ಕಾಸರಗೋಡಿನಲ್ಲಿ ೧೯೪೭-೪೮ ರ ಕಾಲದಲ್ಲಿ, ಸ್ವಾತಂತ್ರ್ಯಯೋಧ ಖ್ಯಾತಪತ್ರಿಕಾಕರ್ತ ಹಾಗೂ ಸಾಹಿತಿ ಕೀ.ಶೇ. ತಿ.ತಾ. ಶರ್ಮರ ಅಧ್ಯಕ್ಷತೆಯಲ್ಲಿ ಸೇರಿದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಜರುಗಿದ ಏಕೀಕರಣ ಗೋಷ್ಠಿಯ ಅಧ್ಯಕ್ಷತೆಯಿಂದ ಕರ್ನಾಟಕದ ನೇತಾರರಾದ ಕೀ.ಶೇ.ದಿವಾಕರ, ನಿಜಲಿಂಗಪ್ಪ ಮುಂತಾದ ಪ್ರಖ್ಯಾತ ಧುರೀಣರು, "ಊಟಕ್ಕೆ ಕೂತುಕೊಳ್ಳಿಸಿ,

ಎಲೆ ಹಾಕಿ, ಅನ್ನಮೇಲೋಗರ ಬಡಸಿ-ತುಪ್ಪ ಎರೆದ ಮೇಲೂ ಊಟ ಮಾಡಬೇಡವೆಂದರೆ ಯಾರು ಕೇಳುತ್ತಾರೆ'' ಎಂದು ರಾಜ್ಯ ಪುನಾರಚನೆಯ ಶೀಘ್ರ ನಿರ್ಧಾರದ ಬಗೆಗೆ ಗುಡುಗಿದರು; ಕೇಂದ್ರ ಎಚ್ಚರಗೊಂಡಿತು; ತತ್ಫಲವಾಗಿಯೇ, ರಾಜ್ಯ ಪುನರ್ವಿಭಜನೆಯ ಬಗೆಗೆ ರಚಿಸಲಾದ ಫಜುಲಾಲಿ ಕಮಿಶನ್ ದೇಶಾದ್ಯಂತ ಸಂಚರಿಸಿ; ಅಭಿಪ್ರಾಯ ಸಂಗ್ರಹಿಸಿ, ಭಾಷಾ ಮೂಲವಾದ ರಾಜ್ಯಗಳ ಪುನಾರಚನೆಯ ಸ್ಪಷ್ಟ ನಿರ್ದೇಶನ ನೀಡಿತು. ಅದರಂತೆ ರಾಷ್ಟ್ರಾದ್ಯಂತ ಭಾಷಾ ಮೂಲ ರಾಜ್ಯಗಳು ನಿರ್ಮಾಣಗೊಂಡವು. ಮದ್ರಾಸು ಸಂಸ್ಥಾನಕ್ಕೆ ಸೇರಿದ ಬಳ್ಳಾರಿ ಜಿಲ್ಲೆ, ಹೊಸಪೇಟೆ, ಹಂಪಿ- ಇವೆಲ್ಲವೂ ಸಹಜವಾಗಿ ಕರ್ನಾಟಕ ಪ್ರಾಂತ್ಯಕ್ಕೆ ಸೇರಿಸಲ್ಪಟ್ಟವು.

ಎಂಟು ನೂರು ಚದರು ಮೈಲಿಗಳಷ್ಟು ವಿಸ್ತೀರ್ಣವಿರುವ, ನೀಲೇಶ್ವರದ ಕವಾಯಿ ಹೊಳೆಯವರೆಗೂ ಹಬ್ಬಿದ್ದ ಕಾಸರಗೋಡು ಪ್ರದೇಶದ ಐನೂರು ಚದುರ ಮೈಲು ಪ್ರದೇಶ ವನ್ನು ಕೇರಳಕ್ಕೆ ಬಿಟ್ಟುಕೊಟ್ಟು, ಚಂದ್ರಗಿರಿ ನದಿಯ ಉತ್ತರಭಾಗದ ಮುನ್ನೂರು ಚದುರ ಮೈಲಿ ಪ್ರದೇಶ ಮಾತ್ರ ಕರ್ನಾಟಕಕ್ಕೆ ಬಿಟ್ಟುಕೊಟ್ಟರೆ ಸಾಕಾದೀತೆಂದು ವಿಶಾಲನುಡಿಗಳಾದ ಕನ್ನಡಿಗರು ಒಪ್ಪುವಂತೆ ಮಾಡಿ, ಆ ಮುನ್ನೂರು ಚದುರ ಮೈಲು ಪ್ರದೇಶ ಕರ್ನಾಟಕದ್ದೆಂದೇ ಕೇರಳೀಯ ಮುಖಂಡರೆಲ್ಲರೂ ಅಲ್ಲಿನ ಸರ್ವಪಕ್ಷಗಳ ಧುರೀಣರು ಫಜಲ್ ಲಾಲಿ ಆಯೋಗದ ಸದಸ್ಯರಲ್ಲೊಬ್ಬರಾದ ಕೇರಳೀಯರೇ ಆದ ಸರ್ದಾರ್ ಫಣಿಕ್ಕರರೇ ಒಪ್ಪಿದ್ದರೂ ಮುಂದೆ ವರದಿ ಬರೆವಾಗ, ಇಡೀ ಕಾಸರಗೋಡ ಪ್ರದೇಶವನ್ನು ಚಂದ್ರಗಿರಿ ನದಿಯ ಉತ್ತರ ಭಾಗವನ್ನೂ ಸೇರಿಸಿದ್ದು ಕೊಟ್ಟ ಮಾತಿಗೆ ತಪ್ಪಿದ ದೊಡ್ಡ ಕೃತಘ್ನತೆಯಾಗಿದೆಯೆಂದು ಕನ್ನಡಿಗರು ಚಳವಳಿ ಹೂಡಿದರು. ನಿಮಿತ್ತ, ಅತ್ತ ಬೆಳಗಾವಿ ಗಡಿಗಾಗಿ ಮಹಾರಾಷ್ಟ್ರದವರೂ ಚಳುವಳಿ ಕೇಳಿದಂತೆ ಕೇಂದ್ರವು ಗಡಿವಿವಾದ ತೀರ್ಮಾನಕ್ಕೆ ಸುಪ್ರೀಂಕೋರ್ಟ್‌ನ ನ್ಯಾಯಮೂರ್ತಿ ಮೆಹರ್ ಚಂದ್ ಮಹಾಜನರ ಆಯೋಗ ನೇಮಿಸಿದಂತೆ, ಅವರು ವಿವಾದಿತ ಪ್ರದೇಶಗಳಿಗೆ ಭೇಟಿಯಿತ್ತು, ಸಾಕ್ಷಿ ದಾಖಲೆಗಳನ್ನು ಸಂಗ್ರಹಿಸಿ ತೀರ್ಮಾನ ನೀಡಿದ್ದಾರೆ. ಆ ಮಹತ್ವದ ತೀರ್ಮಾನ ಜಾರಿಯಾಗಲು ಮಾತ್ರ ಬಾಕಿಯಿದೆ. ಆ ಮಹತ್ವದ ತೀರ್ಮಾನ ಜಾರಿಯಾದಲ್ಲಿ ಗಡಿ ಪ್ರಶ್ನೆ ಸಂಪೂರ್ಣ ಪರಿಹಾರವಾಗುತ್ತದೆ. ನಾಡಿನ ಸಾಮಾನ್ಯ ಜನತೆ ತಮ್ಮ ತಮ್ಮ ತಾಯ್ನಾಡಿಯಲ್ಲಿಯೇ ಆಡಳಿತದ ಸೂತ್ರವನ್ನು ಅರ್ಥಮಾಡಿಕೊಂಡು ಉತ್ತಮ ನಾಗರಿಕರಾಗಿ ಬಾಳುವೆಯನ್ನು ಬೆಳಗಿಸುವ ಗಡಿವಿವಾದ ಪ್ರದೇಶಗಳಲ್ಲೂ ಆಗುತ್ತದೆ-ಆಗಲೇಬೇಕೆಂದು ವಿಚಾರವಂತರು ಸಮ್ಮತಿಸುತ್ತಾರೆ.

ಹೀಗೆ ಒಂದು ಉತ್ತಮ ಧ್ಯೇಯ ಸಾಧನೆಗಾಗಿ, ಸಾಮಾನ್ಯಜನರೂ ತಮ್ಮ ತಾಯ್ನುಡಿ ಯಲ್ಲಿ ಆಡಳಿತದ ಅನುಭವ ಪಡೆದು ಅದರ ಫಲವನ್ನು ಸದುಪಯೋಗಿಸಿಕೊಳ್ಳುವಲ್ಲಿ ಸ್ವಾತಂತ್ರ್ಯದ ಅಮೃತಫಲವನ್ನು ನಾವು ಉಣ್ಣುವಂತಾಗುವುದು. ಅಮೃತ ಪಡೆಯಲು ಕ್ಷೀರಸಾಗರವನ್ನು ಮಥಿಸಿದಾಗಲೂ ಮೊದಲಿಗೆ ಅದರಲ್ಲಿ ವಿಷವೇ ಉತ್ಪನ್ನವಾಯಿತು. ಘರ್ಷಣೆ ಮೊದಲಿಗೆ ವಿಷವನ್ನೇ ಉಂಟು ಮಾಡಿದರೂ-ಮುಂದೆ ಅಮರತ್ವವನ್ನು ನೀಡಿದ ಅಮೃತ ದೊರೆತು ಅದರಿಂದ ಎಲ್ಲರೂ ಅಮರರಾದುದು ಎಂಬೀ ಪ್ರಾರಂಭಿಕ ಕಥೆಯೂ,

ಚೇತನದ, ಸಮಾಜದ, ರಾಜಕೀಯದ, ದೇಶದ ಆಡಳಿತದ ವಿಷಮತೆಯ ಸಾಮರಸ್ಯ, ಸಾಹಿತ್ಯ ಸಂಸ್ಕೃತಿಗಳ ದ್ಯೋತಕವಾಗಿ ನೀವು ತಿಳಿದುಕೊಳ್ಳಬೇಕು.

ಮೇಲಿನ ಒಳ್ಳೆಯ ನೀತಿಯ ತಿಳುವಳಿಕೆ ಹಾಗೂ ನಡತೆಗಳಿಗೆ, ಗಡಿಭಾಗದಲ್ಲಿರುವ ನಮ್ಮಂತವರ ಜೀವನವೇ ಸಾಕ್ಷಿಯಾಗಿದೆ. ಕಾಸರಗೋಡಿನ ಈ ಪ್ರದೇಶದಲ್ಲಿ ಅಂದಿನಿಂದ ಇಂದಿನವರೆಗೂ, ಕನ್ನಡಿಗರೆಂಬವರ ಮನೆಮಾತು ಬೇರೆಯೇ; ಯಕ್ಷಗಾನ ಆಚಾರ್ಯಪುರುಷ ಪಾಳಸುಬ್ಬ ಪೌಳವ್; ಕನ್ನಡದ ಪ್ರಥಮರಾಷ್ಟ್ರ ಕವಿ ಗೋವಿಂದ ಪೈ ಮನೆಮಾತು ಕೊಂಕಣಿ; ಮಹಾ ಯಕ್ಷಗಾನ ಭಾಗವತ ಬಲಿಪರ ತಾಯ್ನುಡಿ ಕರಾಡ. ನನ್ನ ಮನೆಮಾತು ಕೂಡೆ ತುಳು! ಎನ್ನಪ್ಪೆ-ತುಳುವಪ್ಪೇ (ನನ್ನತಾಯಿ-ತುಳುತಾಯಿ) ಎಂಬತುಳು ಕವನ ಸಂಗ್ರಹವನ್ನೇ ನಾನು ಪ್ರಕಟಿಸಿದ್ದರೂ, ಕನ್ನಡದ ಜನತೆ ನನ್ನನ್ನು ಕನ್ನಡಕವಿಯೆಂದೇ ಆಶೀರ್ವದಿಸುತ್ತಾರೆ; ಕಾಸರಗೋಡನ್ನು ಕನ್ನಡರಾಜ್ಯಕ್ಕೆ ಸೇರಿಸುವ ಹೋರಾಟದಲ್ಲಿ ಅಂದಿನಿಂದ ಇಲ್ಲಿಯತನಕ ಮಾತ್ರವಲ್ಲ ಮುಂದಕ್ಕೂ ನನ್ನ ದುಡಿಮೆ ಕಡಿಮೆಯಾಗದೆ ಸಾಗುತ್ತಿದೆ. ಆದರೂ ನನಗೆ ಮಲೆಯಾಳ ಭಾಷೆ ಸಾಹಿತ್ಯ ಹಾಗೂ ಕೇರಳಿಯರ ಕುರಿತು, ಕೇರಳ ರಾಜ್ಯದ ಕುರಿತು ಕನ್ನಡಕ್ಕಿಂತ, ತುಳವಿಗಿಂತ ಕಡಿಮೆಯೇನಿಲ್ಲ. ೧೯೪೩ರಲ್ಲಿ ಬರೆದ ನನ್ನ 'ಸ್ವಗತ' ಕವನದಲ್ಲಿ "ಕನ್ನಡದ ಗಡಿನಾಡಿನಲ್ಲಿ ನಾ ಹುಟ್ಟಿರಲು, ಹೇಡಿಯೆನಿಸದೆ ಯೋಧನಾಗಬೇಕು-ಮಲೆಯಾಳ ಗಳೊಳೆನಿತೊ ಮಿತ್ರರೆನಗಿಹರಿಂದು-ಕೇರಳದ ಕೂಡೆ ನಾ ಕಾದುವೆನೆ ಹೇಗೆ? ನೆನವೆನ್ನಯ ಗೆಳೆಯ ನಂಬೂದಿರಿಯ. ಒಂದೇ ಕನ್ನಡನಾಡು-ಒಂದೇ ಕೇರಳನಾಡು-ಒಂದೇ ಭಾರತಮಾತೆ ಕಂದರಾವ್ ಕಡೆಗೆ" ಎಂಬ ಪಂಕ್ತಿಗಳನ್ನು ಆತ್ಮೀಯತೆಯಿಂದ ಉಲ್ಲೇಖಿಸಿರುವೆನು; ಕೇರಳದ ಮಹಾಕವಿ ಕುಮಾರನ್ ಆಶಾನ್ ಅವರ ಮೇರುಖಂಡಕಾವ್ಯಗಳನ್ನು 'ಸೀಸೆ' ಚಂಡಾಲಭಿಕ್ಷುಕಿ- 'ಕರುಣೆ' ಎಂಬವನ್ನು ಪದ್ಯರೂಪದಲ್ಲಿಯೇ ಕನ್ನಡಕ್ಕೆ ತಂದಿದ್ದೇನೆ. ಕೇರಳ ಸಾಹಿತ್ಯ ಚರಿತೆ ಯೆಂಬ ಬೃಹತ್ ಗದ್ಯ ಸಂಪುಟವನ್ನು ಕನ್ನಡದಲ್ಲಿ ಗದ್ಯರೂಪದಲ್ಲಿ ಭಾಷಾಂತರಿಸಿರುವೆನು; ಕಾಸರಗೋಡಿನಲ್ಲಿ ಕನ್ನಡ ಉಳಿದು ಬೆಳೆಯಬೇಕು. ಅದಕ್ಕಾಗಿ ಕರ್ನಾಟಕಕ್ಕೆ ಸೇರಬೇಕೆಂದಿರು ವುದು, ತುಳು ತಾಯ್ನೆಲವು ನನಗೆ ಪ್ರಕೃತಿಮಾತೆ ನೀಡಿದ ವರ. ಅದರಂತೆ, ತುಳುವಿರಲಿ, ಮಲೆಯಾಳವಿರಲಿ, ಕನ್ನಡವಿರಲಿ, ಸಂಸ್ಕೃತವಿರಲಿ, ಇಂಗ್ಲಿಶ್ ಇರಲಿ- ಈಯೆಲ್ಲಾ ಭಾಷೆಗಳು ಹೆತ್ತ ಜನನಿ ಮಾತೆಯಂತೆ ಹೊತ್ತ ಧರಣಿಮಾತೆಯ ವರನೆಂದು ಭಾವಿಸಿದ್ದೇನೆ; ಈ ಸಾಮರಸ್ಯ, ಈ ಸೌಹಾರ್ದ ಸದಾ ಹೃದಯವನ್ನು ಅರಳಿಸುತ್ತಿದೆ.

ನಾವು ಒಂದೇ ತಾಯಿ ತಂದೆಯ ಮಕ್ಕಳು, ಒಂದೇ ಮನೆಯವರು, ಸಮಾಜದವರು ಎಲ್ಲರೂ ಒಂದೇ ಕುಟುಂಬಕ್ಕೆ ಸಮಾಜಕ್ಕೆ ಸೇರಿದ ಬಂಧುಭಗಿನಿಯರು ಎಂದು ಹೇಳುತ್ತೇವೆ; ಹಾಗೆ ಬಾಳುವೆ ಸಾಗಿಸುತ್ತೇವೆ. ನಮ್ಮ ಕುಟುಂಬದ ಸೋದರಿ ಸೋದರರೆಲ್ಲರೂ ಒಂದೇ ದಂಪತಿಗಳ ಮಕ್ಕಳಾದರೂ, ಸರಿಯಾಗಿ ಪರೀಕ್ಷಿಸಿದರೆ ಪ್ರತಿಯೊಬ್ಬರ ಬಣ್ಣ ಆಕಾರ ಸ್ವರ ವಿಚಾರ ವರ್ತನೆಗಳಲ್ಲಿ ವ್ಯತ್ಯಾಸಗಳು ಇದ್ದೇ ಇರುತ್ತವೆ. ಆದರೆ ಅವರೆಲ್ಲರೂ ಒಂದೇ ತಾಯ್ತಂದೆಯರ ಮಕ್ಕಳು, ಸೋದರಿ ಸೋದರರು; ಅನ್ಯೋನ್ಯವಾಗಿ ಹೊಂದಿಕೊಂಡು,

ಸಾಮರಸ್ಯದಿಂದ ಸಂಘರ್ಷವಿಲ್ಲದೆ ಬಾಳುವುದೇ ಜೀವನದ ಸನ್ಮಾರ್ಗ; ಮನೆತನ ಅದರಿಂದ ನಡೆಯುತ್ತದೆ. ಈ ಸಾಮರಸ್ಯ, ಹೊಂದಾಣಿಕೆ-ಮನೆಮನೆಗಳಲ್ಲಿರುವಂತೆ, ಗ್ರಾಮ ಗ್ರಾಮಗಳಲ್ಲಿ ಸಮಾಜ ಸಮಾಜಗಳಲ್ಲಿ, ನಗರ ನಗರಗಳಲ್ಲಿ, ರಾಜ್ಯ ರಾಜ್ಯಗಳಲ್ಲಿ ಮತ್ತೆ ಇಡೀ ರಾಷ್ಟ್ರದಲ್ಲಿ ಕೊನೆಗೆ ವಿಶಾಲ ವಿಶ್ವದಲ್ಲಿಯೇ ವಿಸ್ತಾರದಲ್ಲಿ ವಿಶಾಲತೆಯಲ್ಲಿ ಹರಡ ಬೇಕು; ಅದೇ ಮಾನವೀಯತೆ; ಅದೇ ಜೀವನ ಸಂತುಷ್ಟೀ; ಅದುಬಿಟ್ಟು ಘರ್ಷಣೆಗೆ ಇಳಿದರೆ, ಸೋದರಿಸೋದರರೊಳಗೂ, ನಮ್ಮ ಜನಮನವೇ ಜಗದೊಳಗೂ, ಗ್ರಾಮ ನಗರ ರಾಜ್ಯ ರಾಷ್ಟ್ರ ವಿಶ್ವ ಎಲ್ಲೆಲ್ಲೂ ಸದಾ ಸಂಘರ್ಷವೇ ನೆಲೆನಿಲ್ಲುವುದು. ಬದುಕು ಅಸಹನೀಯವಾಗು ವುದು. ಹಾಗೆ ಆಗದೆ ಪಾಲಿಗೆ ಬಂದದ್ದು ಪಂಚಾಮೃತವೆಂಬಂತೆ, ತನ್ನ ಒಡಹುಟ್ಟುಗಳ ಸ್ವಭಾವಗಳು ಎಂದೇ ಇರಲಿ-ಅವರೊಂದಿಗೆ, ತನ್ನ ಸಮಾಜ ಗ್ರಾಮ ರಾಷ್ಟ್ರೀಯರೆಲ್ಲ ರೊಡನೆಯೂ ಅನ್ಯೋನ್ಯತೆಯಿಂದ ಸೌಹಾರ್ದ ಸಾಮರಸ್ಯದಿಂದ ಬದುಕಿ ಪೂರ್ಣಮಾನವ ನಾಗುವುದೇ ಜೀವಿತದ ಧ್ಯೇಯವಿರಬೇಕು. ಹೀಗೆ ಹೇಳಿದ್ದರಿಂದ ತಾನು ನಂಬಿದ ತತ್ವ ಸಿದ್ಧಾಂತಗಳನ್ನು ಇನ್ನೊಬ್ಬನ ತುಷ್ಟಿಗಾಗಿ ಬಲಿ ಕೊಡಬೇಕೆಂಬುದು ಅರ್ಥವಲ್ಲ; ತನ್ನ ನಂಬುಗೆಯಷ್ಟೇ ಆತ್ಮಸಾಕ್ಷಿಯಿಂದ ಆತನೂ ಅವನ ತತ್ವವನ್ನು ನಂಬಿರುತ್ತಾನೆ ಎಂದು ಹೇಳಿದರೆ, ಪರಸ್ಪರ ನಂಬುಗೆಗಳ ಬಗ್ಗೆ ಪರಸ್ಪರರು ಸಮಾಧಾನಗೊಂಡು ಬಾಳಬಹುದಾಗಿದೆ. ಗಡಿಭಾಗದ ಕನ್ನಡಿಗರೋ ತೆಲುಗರೋ ಮಹಾರಾಷ್ಟ್ರೀಯರೋ ಕೇರಳೀಯರೋ ತಮಿಳರೋ, ಯಾರೇ ಇರಲಿ, ನಾವು ನಮ್ಮ ಕನ್ನಡವನ್ನು ಪ್ರೀತಿಸುತ್ತೇವೆಂದು ಅವರವರು ತಮ್ಮ ತಾಯ್ನುಡಿಯನ್ನು ತಾಯ್ನಾಡನ್ನು ಪ್ರೀತಿಸುತ್ತಾರೆ. ಈ ಸಹಜ ಸಿದ್ಧಾಂತ ಲೋಕ ಶಾಂತಿಗೆ ಸಾಧನವಾಗಿದೆ.

●

## ನಾನು ಮುಟ್ಟಿರುವುದು ಎಳ್ಳುಕಾಳಿನಷ್ಟು ಮಾತ್ರ

● ಕುಂವೀ

ಇಂಥದೊಂದು ಪ್ರಪಂಚ ಈಗಲೂ ಜೀವಂತವಿದೆ ಎಂಬ ಸಂಗತಿ ನನ್ನ ಅರಿವಿಗೆ ಬಂದದ್ದು ನಾನಿಲ್ಲಿಗೆ ಬಂದು ಜೀವಿಸತೊಡಗಿದಾಗಲೆ. ಆಧುನಿಕ ಮನಸ್ಸು ರೇಜಿಗೆ ಪಟ್ಟುಕೊಳ್ಳುವಂಥ ಪ್ರಪಂಚವಿದು. ಆಧುನಿಕತೆ, ಸುಸಂಸ್ಕೃತತೆ ಅಲ್ಲಿ ಎಳ್ಳುಕಾಳಷ್ಟು ಚಲಾವಣೆಯಾಗುವುದಿಲ್ಲ. ಅಲ್ಲಿ ಧೋತರ, ಅರೆ ಬೆತ್ತಲೆಗೆ ಸಿಗುವಷ್ಟು ಬೆಲೆ, ಪ್ಯಾಂಟಿಗೆ ಸಿಗುವುದಿಲ್ಲ. ಅಲ್ಲಿ ಕಟಗು ರೊಟ್ಟಿ ಕಟಂಬಲಿ, ನವಣಕ್ಕಿ ಬಾನಕ್ಕಿಗೆ ಸಿಗುವಷ್ಟು ಬೆಲೆ ಬ್ರೆಡ್ಡಿನ ತುಂಡಿಗೆ ಸಿಗುವುದಿಲ್ಲ. ಅಲ್ಲಿ ಅಸಮಾನತೆಗೆ ಸಿಗುವಷ್ಟು ಬೆಲೆ, ಸಮಾನತೆಗಾಗಲೀ ಸಾಮಾಜಿಕ ಕಳಕಳಿಗಾಗಲೀ ಸಿಗುವುದಿಲ್ಲ. ಆ ಪ್ರದೇಶದ್ದೇನಿದ್ದರೂ ಏಕ್ ಮಾರ್ ದೋ ತುಕುಡಾದಂಥ ಸಾಮಾಜಿಕ

ಶೈಲಿ. ಅಲ್ಲಿ ಹೂವು ಮುಳ್ಳಿನಂತೆ, ಬೆಕ್ಕು ಹುಲಿಯಂತೆ, ನಾಯಿ ಸಿಂಹದಂತೆ ವರ್ತಿಸುವುದು ಸಾಮಾನ್ಯ. ಇನ್ನು ಸಂವಿಧಾನ,ಕಾನೂನು, ದಂಡಸಂಹಿತೆ, ದೇಶ ಗೀಶ ಎಲ್ಲ ನಾಮಕಾವಸ್ತೆ. ಜಿಸ್ ಕಾ ಲಾಠಿ ವುಸ್ ಕೀ ಬೈಂಸ್‌ಯೆಂಬ ಜಾಯಮಾನದ ಆ ಪ್ರದೇಶ ಅಷ್ಟು ಸುಲಭವಾಗಿ ಪಂಚೇಂದ್ರಿಯಗಳಿಗೆ ಎಟುಕುವಂಥಾದ್ದಲ್ಲ. ಅದರ ಅಂತರಂಗ, ಅಂತಃಕರಣ ಅರ್ಥವಾಗ ಬೇಕಾದರೆ ಮನುಷ್ಯ ಕೇವಲ ಸೃಜನಶೀಲನಾಗಿದ್ದರಷ್ಟೇ ಸಾಲದು, ಸಮಾಜಶಾಸ್ತ್ರ, ಮಾನವ ಶಾಸ್ತ್ರ, ಮನಸ್‌ಶಾಸ್ತ್ರ ಮುಂತಾದುವೆಲ್ಲ ಅವನಿಗೆ ರವಷ್ಟಾದರೂ ಗೊತ್ತಿರಬೇಕು. ಜೊತೆಗೆ ನೋಡುವ ಕ್ರಮ ನಿಶಿತವಾಗಿರಬೇಕು. ಮುಖ್ಯವಾಗಿ ಭಂಡಧೈರ್ಯ, ಹುಂಬತನ ಇರಬೇಕು. ಇವೆಲ್ಲ ಸಾಮಗ್ರಿ ಇದ್ದಾಗ ಮಾತ್ರ ಆ ಪ್ರದೇಶದ ಸಾಮಾಜಿಕತೆಯ ವಿರಾಟ್ ಸ್ವರೂಪ ದಿಗ್ಭ್ರಮೆಗೊಳಿಸಲಿಕ್ಕೆ ಸಾಧ್ಯ. ಕೊಟ್ಟೂರು ಎಂಬ ಬಾಣಲೆಯಿಂದ ಆ ಪ್ರದೇಶ (ಹಗರಿಸಾಲು) ಎಂಬ ಬೆಂಕಿಗೆ ನಾನು ನನ್ನ ಯೌನವದ ದಿನಗಳಲ್ಲಿ ಬಿದ್ದದ್ದು ತೀರ ಆಕಸ್ಮಿಕವೇನಲ್ಲ. ಅಭಿವ್ಯಕ್ತಿಯ ತಹತಹಿಕೆಯಿಂದಾಗಿ, ಬಡತನದಿಂದಾಗಿ, ಸಾಹಿತ್ಯಿಕ ಸಾಮಾಜಿಕ ಮತ್ತು ರಾಜಕೀಯ ಚಳುವಳಿಗಳಿಂದಾಗಿ, ಯೌವನ ರೂಪ ಅಟಾಟೋಪಗಳನ್ನು ನಾನು, ನನ್ನಂಥ ವರು ಅನುಭವಿಸಲಾಗಲೇ ಇಲ್ಲ. ಕಣ್ಣೆವೆಗಳನ್ನು ಕಿರಿದುಗೊಳಿಸಿ ಕುರೂಪಗೊಂಡಿದ್ದುದನ್ನೆಲ್ಲ ನೋಡುತ್ತಿದ್ದದೂ ಒಂದು ಕಾರಣ. ತುರ್ತುಪರಿಸ್ಥಿತಿಯಿರದಿದ್ದಲ್ಲಿ ನನಗೆ ಆ ಪ್ರದೇಶ ಕೇವಲ ಸ್ಮೃತಿ ಹಂತದಲ್ಲಿ ಇರುತ್ತಿತ್ತೋ ಏನೋ! ನನ್ನ ತಂದೆ ಆ ಪ್ರದೇಶದ ತನ್ನ ಪೂರ್ವಾ ಶ್ರಮದ ನೆನಪುಗಳನ್ನು ಹೇಳಿ ನನ್ನಲ್ಲಿ ಕೌತುಕವನ್ನು ಜೀವಂತವಾಗಿರಿಸಿದ್ದ. ಅಲ್ಲದೆ ಆತನಿಂದ ಬಳುವಳಿರೂಪದಲ್ಲಿ ಭಂಡಧೈರ್ಯ, ಹುಂಬತನ ಬಂದಿತ್ತಲ್ಲ, ಅದನ್ನು ಬಂಡವಾಳವಾಗಿರಿಸಿ ಕೊಂಡು ಆ ಪ್ರದೇಶವನ್ನು ನನ್ನ ಬದುಕಿನ ಉಡಾವಣ ನೆಲೆಯನ್ನಾಗಿ ಆಯ್ಕೆ ಮಾಡಿಕೊಂಡೆ. ಆಗ ಇದು ನನಗೆ ಅನಿವಾರ್ಯವೂ ಆಗಿತ್ತು, ಜೊತೆಗೆ ಯಾರೂ ಅನುಭವಿಸದ ಅನುಭವ ಗಳಿಗೆ ತುತ್ತಾಗಿ ಮುಳುಗಬೇಕು ಇಲ್ಲವೆ ತೇಲಬೇಕೆಂಬ ವಯೋಸಹಜ ಮಹತ್ವಾಕಾಂಕ್ಷೆ ನನ್ನಲ್ಲಿತ್ತು. ಆಗ ನನ್ನ ಮಟ್ಟಿಗೆ ಹೇಳುವುದಾದರೆ, ಅನುಕಂಪ ಸಾಂತ್ವನದ ಸವಲತ್ತೂ ಇರಲಿಲ್ಲ. ಎಲ್ಲೋ ಒಂದು ಕಡೆ ಬದುಕಲೇ ಬೇಕಾಗಿದ್ದುದೂ ಒಂದು ಕಾರಣ. ತಲೆಯಲ್ಲಿ ತರಾವರಿ ಎಡಪಂಥೀಯ ಇಜಂಗಳನ್ನು ತುಂಬಿಕೊಂಡಿದ್ದ ನಾನು, ತರಗೆಲೆಗಿಂತ ರವ್ವಷ್ಟು ಹೆಚ್ಚು ತೂಕ ಇದ್ದೆನಷ್ಟೆ. ಮುಖ್ಯರಸ್ತೆಗೆ ವಂದೂವರೆ ಗಾವುದ ದೂರದ ಬಂಡಿಜಾಡಿನಾಚೆ ಯಿದ್ದೆ ಆ ವೂರನ್ನು ನಾನು ಐತಿಹಾಸಿಕವಾಗಿ ಪ್ರವೇಶಿಸಿದ್ದು ಕ್ರಿ.ಶ. ೧೯೭೫ ಸೆಪ್ಟೆಂಬರ್ ೨೪ರಂದು. ಎಲ್ಲ ಸಾಮಾಜಿಕ ಅನಿಷ್ಟಗಳ ಸಾಕಾರ ಪಡೆದಂತಿದ್ದ ಆ ಊರ ಹೆಸರು ವಂದವಾಗಿಲಿ. ಖ್ಯಾತ ಕರ್ಣಾಟಕಂಗಳ ವೃತ್ತದೊಳಗಿದ್ದ ನನ್ನನ್ನು ಆಧುನಿಕವಾಗಿ ಎತ್ತಿ ನಿಲ್ಲಿಸಿದ ಆ ವೂರು ನನಗೆ ಸದಾ ಪ್ರಾತಃಸ್ಮರಣೀಯ.

ಭಾರತವೆಂಬ ಮಜ್ಜಿಗೆ ಗುಡಾಣದೊಳಗೆ ಬೆಣ್ಣೆಯುಂಡೆಯಂತೆ ಶೋಭಾಯಮಾನವಾಗಿ ತೇಲಾಡುತ್ತಿರುವ ವಂದವಾಗಿಲಿ, ಹಗರಿಸಾಲು ಗ್ರಾಮಗಳಿಗೆ ರಾಜಮುಕುಟವಿದ್ದಂತೆ. ಬಾಬಾಬುಡನಗಿರಿ ತುಟ್ಟತುದಿಯಲ್ಲಿ ಉದ್ಭವಿಸಿ, ಚಿತ್ರದುರ್ಗ ಜಿಲ್ಲೆ ಪ್ರವೇಶಿಸುವ ಹೊತ್ತಿಗೆ

ವೇದಾವತಿ ಎಂಬ ಸುಂದರವಾದ ನಾಮಾಂಕಿತ ಧರಿಸಿ, ಆಂಧ್ರಪ್ರದೇಶದ ಸರಹದ್ದು ಪ್ರವೇಶಿಸುವ ಹೊತ್ತಿಗೆ ಹಗರಿ, ಚಿನ್ನಹಗರಿ ಎಂಬ ಎರಡು ಮೂರು ನಾಮೋಪನಾಮಗಳನ್ನು ಧರಿಸಿಬಿಡುತ್ತದೆ. 'ಕುಮಾರರಾಮ ಸಾಂಗತ್ಯ'ದ ಕವಿಯಿಂದ ಸಾಕಷ್ಟು ವರ್ಣಿಸಿಕೊಂಡಿರುವ ಈ ನದಿಯ ಯಿಕ್ಕೆಲದ ನುಂಕೆಮಲೆ ಬೆಟ್ಟಗಳ ಸಾಲೊಳಗೆ, ಅಶೋಕನ ಶಿಲಾ ಶಾಸನಗಳಿರುವ ಜಟ್ಟಂಗಿ ರಾಮೇಶ್ವರ, ಬ್ರಹ್ಮಗಿರಿ, ಅಶೋಕ ಸಿದ್ಧಾಪುರಗಳಿವೆ, ಏಳೆಂಟು ಚಿಕ್ಕಪುಟ್ಟ ಪಾಳೆ ಪಟ್ಟುಗಳಿವೆ. ಸ್ವಾತಂತ್ರ್ಯಪೂರ್ವದಲ್ಲಿ ಹೊಸಪೇಟೆಯ ನಾಗನಗೌಡರು ಅಮೇರಿಕಾದಿಂದ ತಂದರೆನ್ನಲಾದ ರಿಜಿರುಜಾಲಿ (ಕುರುಬ ಜನಾಂಗಕ್ಕೆ ಸೇರಿದ ಅವರು ಕುರಿಮಂದೆಗಳನ್ನು ತೋಳಗಳಿಂದ ರಕ್ಷಿಸುವ ಸಲುವಾಗಿ ರಿಜರುಜಾಲಿಯ ಬೀಜಗಳನ್ನು ಕರ್ನಾಟಕಕ್ಕೆ ತಂದರು. ಈಗದು ಬರಗಾಲದಲ್ಲಿ ಹಸಿರುಕ್ರಾಂತಿ ಮಾಡುತ್ತಾ ಎಲ್ಲಿಬೇಕೆಂದರಲ್ಲಿ ಬೆಳೆದು ನಿಂತಿದೆ.) ದಟ್ಟವಾಗಿ ಬೆಳೆದು ನಿಂತಿರುವುದು ಅದರ ಇಕ್ಕೆಲದಲ್ಲಿಯೇ. ಚಳ್ಳಕೆರೆ ಸಮೀಪದಲ್ಲಿ ಆಂಧ್ರ ಪ್ರವೇಶಿಸುವ ಹಗರಿ ಸಿರುಗುಪ್ಪ ಸಮೀಪದಲ್ಲಿ ತುಂಗಭದ್ರೆಯೊಳಗೆ ಅಂತರ್ಧಾನವಾಗುತ್ತದೆ. ಈ ಇಕ್ಕೆಲದ ಪ್ರದೇಶವನ್ನೇ ಹಗರಿ ಪ್ರಾಂತವೆಂದು ಗುರುತಿಸಬಹುದು. ಇದು ಆಂಧ್ರ ಮತ್ತು ಕರ್ನಾಟಕದ ಗಡಿ ರೇಖೆ ಆಗಿರುವುದರ ಜೊತೆಗೆ ಸಹಸ್ರ ವರ್ಷಗಳಷ್ಟು ಹಿಂದಿನ ಸಾಮಾಜಿಕ ಸ್ಥಿತಿಗತಿಯನ್ನು ಸ್ವಾತಂತ್ರ್ಯೋತ್ತರವಾಗಿ ಅದ್ಭುತ ರೀತಿಯಲ್ಲಿ ಪೋಷಿಸಿಕೊಂಡು ಬಂದಿರುವುದನ್ನು ಕಾಣಬಹುದು. ಮ್ಯಾಸಬೇಡರ ಕೃಷ್ಣಗೊಲ್ಲರ ಸಾಂಸ್ಕೃತಿಕ ನೆಲೆಗಳಿರುವ ಅನೇಕ ಹಟ್ಟಿಗಳಿರುವುದು ಈ ಭಾಗದಲ್ಲಿಯೇ. ಭಾಷಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕ ವಾಗಿ ಅನೇಕ ವೈಪರೀತ್ಯಗಳ ವಿರೋಧಾಭಾಸಗಳ ಮುಖ್ಯ ನೆಲೆವೀಡಾಗಿರುವ ಈ ಪ್ರದೇಶ ವನ್ನು ಸೇರಿಸಲು ಆಧುನಿಕತೆ ಹಿಂಜರಿಯುತ್ತಿದೆ, ಇದರ ಒಂದುಮುಖ ಅರ್ಥವಾಗಬೇಕಾದರೆ ಸೂಕ್ಷ್ಮಸಂವೇದನಾಶೀಲ ವ್ಯಕ್ತಿ, ಬೇಸಿಗೆಯ ಒಂದು ದಿನ ಮಟಮಟ ಮಧ್ಯಾಹ್ನದಲ್ಲಿ ಬಳ್ಳಾರಿನಗರದಿಂದ ಸರ್ಕಾರಿ ಬಸ್ಸಿನಲ್ಲಿ, ಹಡ್ಲಗಿ ಎಂಬ ಗ್ರಾಮದವರೆಗೆ ಪ್ರಯಾಣ ಮಾಡಬೇಕು. ಹಾಗೆ ಪ್ರಯಾಣ ಮಾಡಿದಲ್ಲಿ ಒಂದೋ ಆತನು ಒಳ್ಳೆಯ ಲೇಖಕನಾಗುತ್ತಾನೆ, ಇಲ್ಲವೆ ಹುಚ್ಚನಾಗುತ್ತಾನೆ. ದರೋಡೆಕೋರರ, ಕೊಲೆಗಡುಗರ ಕಾಶಿ ಎನಿಸಿರುವ ಮಾಸ ನೂರು, ಬಾಡಿಗೆ ಕೊಲೆಗಡುಕರ ನೆಲೆ ಎನಿಸಿರುವ ಮೀನಪಲ್ಲಿ, ಅರಿಭಯಂಕರ ಬಂಗಾರಿಗನ ಊಳೂರು, ಹತ್ತಾರು ಮಾರಣ ಹೋಮಗಳಿಗೆ ಕಾರಣಕರ್ತನಾದ ವಕೀಲ ಮರಿಗೌಡನ ಕಾಡೂರು, ಇಂಥ ಹತ್ತಾರು ಕುಗ್ರಾಮಗಳಿರುವುದು ಈ ಪ್ರದೇಶದಲ್ಲಿಯೇ. ಇದರ ಸ್ಪಷ್ಟ ಚಿತ್ರಣ ದೊರಕಬೇಕೆಂದರೆ ವರ್ಷಗಟ್ಟಲೆ ಆ ಊರುಗಳಲ್ಲಿ ಕಚ್ಚೆ ಬಿಗಿದು, ಅವುಡುಗಚ್ಚಿ ಬದುಕಬೇಕು, ಈ ದಿಸೆಯಲ್ಲಿ ನಾನು ತಕ್ಕಮಟ್ಟಿಗಾದರೂ ಬದುಕಿದೆ ಎನ್ನುವುದೇ ಸಂತೋಷದ ಸಂಗತಿ.

ಈಗ ನನ್ನ ಕಾರ್ಯಕ್ಷೇತ್ರವಾಗಿದ್ದ ವಂದವಾಗಿಲಿ ಎಂಬ ಅಮರಾವತಿಗೆ ಬರೋಣ. ಇಲ್ಲಿ ನಾನು ಶಾಲಾಮಾಸ್ತರನಾಗಿ ಎಂಟೊಂಬತ್ತು ವರ್ಷಗಳ ಪರ್ಯಂತ ಇದ್ದೆ ಎಂಬುದೇ ಸೌಭಾಗ್ಯದ ಸಂಗತಿ. ಸೃಜನಶೀಲತೆ, ಹತ್ತು ಹಲವು ಆಸಕ್ತಿಗಳಿಗೆ ಅಕ್ಷಯಪಾತ್ರೆಯಂತಿರುವ

ಈ ಗ್ರಾಮ ವೈರುಧ್ಯ ವಿಪರ್ಯಾಸಗಳ ಆಗರ. ಕಟಿಬದ್ಧರಾಗಿ, ಬದ್ಧಭ್ರುಕುಟಿಗಳಾಗಿ ಜಾತಿ ವ್ಯವಸ್ಥೆ, ಸಾಮಾಜಿಕ ಅಸಮಾನತೆಗಳನ್ನು ನಿರ್ವಿರಾಮವಾಗಿ ಪೋಷಿಸಿಕೊಂಡು ಬರುತ್ತಿರುವ ಐದಾರು ಮಂದಿ ಜಮೀನ್ದಾರರು. ಬಹುಸಂಖ್ಯಾತ ಭೂಹೀನರಿರುವ ಈ ಊರನ್ನು ಮಹಾಭಾರತಕಾಲದ ಚಕ್ರಬಿಂಬಕೋಟೆಗೆ ಹೋಲಿಸಬಹುದು, ಶ್ರಮಜೀವಿಗಳು ಈ ಬಸ್ಸಿನಂಥ ವಾಹನಗಳಲ್ಲಿ ಪ್ರಯಾಣಿಸಿದರೆ, ನಗರಪ್ರದೇಶಗಳಿಗೆ ಹೋಗಿಬಂದರೆ, ಕೆಡುತ್ತಾರೆಂದೋ; ತಮ್ಮ ಗ್ರಾಮದ ಶಿಲಾಯುಗೀಯ ವ್ಯವಸ್ಥೆಯ ಬುಡಕ್ಕೆ ಕೊಡಲಿ ಪೆಟ್ಟು ಹಾಕುತ್ತಾರೆಂದೋ, ವಂದು ರಸ್ತೆ ಆಗದಂತೆ ನೋಡಿಕೊಂಡಿರುವ ಶ್ರೇಯಸ್ಸು ಇಲ್ಲಿನ ಜಮೀನ್ದಾರರಿಗೆ ಸಲ್ಲಬೇಕು. ಸಮಾಜದ ನಿಮ್ನಸ್ತರದ ಮಕ್ಕಳು ಎಲ್ಲಿ ಅಕ್ಷರಕ್ಕೆ ಹಲ್ಲು ಹತ್ತುವರೋ ಎಂಬ ಭಯದಿಂದ ಸರ್ಕಾರಿ ಶಾಲೆಯನ್ನು ವೀರಭದ್ರದೇವರ ಗುಡಿಯಲ್ಲೇ ನಡೆಸಲಾಗುತ್ತಿತ್ತು. ದಲಿತ ಕೋಮಿನ ಶಿಕ್ಷಕರೇನಾದರೂ ಬಂದಲ್ಲಿ ಅಂಥವರನ್ನು ಗ್ರಾಮದ ಹೊರ ವಲಯದಲ್ಲಿಯೇ ತರುಬಿ, ಅಲ್ಲಿಂದ ಆ ಕೂಡಲೇ ವರ್ಗ ಮಾಡಿಸಲಾಗುತ್ತಿತ್ತು. ಆದ್ದರಿಂದ ಸವರ್ಣೀಯರ ಮಕ್ಕಳಿಗೆ ಸವರ್ಣೀಯ ಬಡಿಪಂತಲುಗಳಿಂದ ಓನಾಮ ಕಲಿಸುವ ಶೈಕ್ಷಣಿಕ ವ್ಯವಸ್ಥೆಯನ್ನು ರೂಪಿಸಿದ್ದರು. ಇದು ಗ್ರಾಮಭಾರತದ ಹಣೆಬರಹ. ಒಬ್ಬ ಶಿಕ್ಷಕನ, ಒಬ್ಬ ಬಂಡಾಯಮನೋಭಾವದ ಲೇಖಕನ, ಒಬ್ಬ ಸಮಾಜಶಾಸ್ತ್ರದ ವಿದ್ಯಾರ್ಥಿ ಹೀಗೆ ಬಹುಮುಖಿಯಾಗಿ ಕೆಲಸ ಮಾಡಬೇಕಾಗಿ ಬಂದುದು ನನ್ನ ಅದೃಷ್ಟವೇ ಸರಿ. ಪಂಚತಂತ್ರದ ಕಥೆಯೊಂದರಲ್ಲಿ ಬಡಕಲು ಎತ್ತು ವೃಷಭವಾಗಿ ಅಲ್ಲಿನ ಸಿಂಹವನ್ನು ಹೆದರಿಸುತ್ತದಲ್ಲ.. ಅಂಥದೇ ಕಥೆ ನನ್ನದೂ ಆಗಿತ್ತು. ಆ ಜಮೀನ್ದಾರಿ ವ್ಯವಸ್ಥೆಗೆ; ಅಲ್ಲಿನ ಸಾಮಾಜಿಕ ವ್ಯವಸ್ಥೆಗೆ ಪೂರಕವಾಗಿ ನಾನು ದೈಹಿಕ ಹಾಗೂ ಮಾನಸಿಕವಾಗಿ ಸದೃಢಗೊಳ್ಳುವುದು ಅನಿವಾರ್ಯವಾಯಿತ್ತು. ಅಲ್ಲದೆ ನನ್ನ ಯೋಗಕ್ಷೇಮ ವಹಾಹ್ಯಮಂ ಎಂದು ಯೋಚಿಸುವವರೂ ಹಿಂದೆಮುಂದೆ ಇರಲಿಲ್ಲ. ಬಹುಪಾಲು ಮಂದಿ ನನ್ನ ಚಟುವಟಿಕೆಗಳ ಬಗ್ಗೆ ರೋಸಿಕೊಂಡಿದ್ದುದೂ ಇದಕ್ಕೆ ಕಾರಣವಾಗಿತ್ತು. ನಾನು ಅರೆಬರೆ ಸವರ್ಣೀಯನಾಗಿದುದ್ದರಿಂದ ನನಗೆ ಸದರಿಗ್ರಾಮಗಳಿಂದ ಒಳಗೊಳಗೆ ಬೇಸರಪಟ್ಟುಕೊಂಡು ಕೆಲ ಭೂಸ್ವಾಮಿಗಳು ಚುಟ್ಟ, ಬೀಡಿ, ಚಹಗಳಂಥ ಲಂಚರುಷುವತ್ತು ಅಮಿಷಗಳನ್ನು ತೋರಿಸಿ ನನ್ನನ್ನು ಕುಂಬಾರ ಎಂದೇ ಛೇಡಿಸಲು ಕೆಲವರನ್ನು ಛೂ ಬಿಟ್ಟಿದ್ದರು. ಅದು ಬೇರೆ ವಿಷಯ. ಉಳ್ಳವರು ನನ್ನ ಬಗ್ಗೆ ಬೇಸರ ತಾಳುವಂಥ ವಿಷಯಗಳು ಯಾವುವು ಎಂಬುದುರ ಬಗ್ಗೆ ಸಂಕ್ಷಿಪ್ತವಾಗಿ ಇಲ್ಲಿ ಪ್ರಸ್ತಾಪಿಸಬಯಸುವೆ.

ಅವುಗಳ ಪೈಕಿ ಮುಖ್ಯವಾದುವೆಂದರೆ ಎರಡು ಸಂಗತಿಗಳು. ನಿಮ್ನಜಾತಿಯ ಮಕ್ಕಳಿಗೆ ಅಕ್ಷರ ಸೌಲಭ್ಯವನ್ನು ಕಲ್ಪಿಸಲು ಯತ್ನಿಸಿದ್ದು ಮತ್ತು ಸಾಮಾನ್ಯ ಜನರಿಗೆ ಜಮೀನುದಾರರ ಬಗೆಗಿದ್ದ ಸ್ವಾಮಿನಿಷ್ಠೆಯನ್ನು ಕಳಚಲೆತ್ನಿಸಿದ್ದು. ಕುರುಬ,ಬೇಡರ ಕೇರಿಗಳ ಮಕ್ಕಳನ್ನು ಶಾಲೆಗೆ ಸೇರಿಸಿಕೊಂಡಾಗ ಸವರ್ಣೀಯರು ತಂತಮ್ಮ ಕಣ್ಣಾಲಿಗಳನ್ನು ಕಿರಿದುಗೊಳಿಸಿಕೊಂಡರು. ನಿಜವಾಗಿ ಅವರು ಹುಬ್ಬು ಏರಿಸಿದ್ದು ದಲಿತರ ಮಕ್ಕಳನ್ನು ಶಾಲೆಗೆ ಸೇರಿಸಿಕೊಳ್ಳಲು ಪ್ರಯತ್ನಿಸಿದಾಗ. ನೂರಿಪ್ಪತ್ತು ಕೇಜಿ ತೂಕವನ್ನು ಎತ್ತಿ ಇಳಿಸುವಷ್ಟು ಸದೃಢನಾಗಿದ್ದ, ಅವರ

ಯಾವುದೇ ಹಂಗಿನಲ್ಲಿರದಿದ್ದ ಮತ್ತು ಅತ್ಯಂತ ಪ್ರಾಮಾಣಿಕನಾಗಿದ್ದ ನನ್ನನ್ನು ತಾತ್ವಿಕವಾಗಿ ಅಥವಾ ದೈಹಿಕವಾಗಿ ಎದುರಿಸುವ ಶಕ್ತಿ ಅವರಾರಿಗೂ ಇರಲಿಲ್ಲ. ಆದ್ದರಿಂದ ಅವರು ದಲಿತ ಮಕ್ಕಳನ್ನು ಅವರವರ ಕೇರಿಯಲ್ಲಿಯೇ ತಡೆಯುವಂಥ ಸಮವಸ್ತ್ರರಹಿತ ಸ್ವಯಂ ಸೇವಕರನ್ನು ನಿಲ್ಲಿಸಿದ್ದರು. ಆದರೂ ಭಟ್ಟವಿಕ್ರಮಾರ್ಕರಂಥ ಕೆಲವು ದಲಿತರು ತಮ್ಮ ಮಕ್ಕಳನ್ನು ನಮ್ಮ ಶಾಲೆಗೆ ಸೇರಿಸಲು ಹಿಂಜರಿಯಲಿಲ್ಲ. ಆಗಲೆ ನಿಜವಾದ ಸಮಸ್ಯೆ ಉಲ್ಬಣ ಗೊಂಡಿದ್ದು. ಮರಣ ಕೈಫಿಯತ್ ಬರೆದುಕೊಟ್ಟಿದ್ದ ನಾನು ಆಗಿನ ತುರ್ತುಪರಿಸ್ಥಿತಿಯ ಕೆಲವು ಸವಲತ್ತುಗಳನ್ನು ಉಪಯೋಗಿಸಿಕೊಂಡು ಸರ್ಕಾರಿ ಶಾಲೆಯನ್ನು ಸವರ್ಣೀಯರ ವೋಣಿಯ ವೀರಭದ್ರ ದೇವರ ಮೂರುಗೋಡೆಗಳ ದೇವಾಲಯದಿಂದ, ದಲಿತರ ಕೇರಿಯ ಎರಡುಗೋಡೆಯ (ಮೂರನೇಗೋಡೆ?) ಕಂದಾರೆಮ್ಮನಗುಡಿಗೆ ವರ್ಗಾಯಿಸಿದೆ. ಸವರ್ಣೀಯರು ನನ್ನನ್ನೂ ನನ್ನ ಶಾಲೆಯನ್ನೂ ಕೆಲವು ತಿಂಗಳುಗಳ ಕಾಲ ಬಹಿಷ್ಕರಿಸಿದರೂ, ನನಗಾ ಹೊಲಗೇರಿ ಆ ಕಂದಾರೆಮ್ಮನಗುಡಿ ಸ್ವರ್ಗಸದೃಶವಾಗಿತ್ತು. ನನ್ನ ಸತತ ಪರಿಶ್ರಮದಿಂದ ವಿದ್ಯಾವಂತರಾದ ದಲಿತರು ಈಗಲೂ ಸರಕಾರಿ ಸೇವೆಯಲ್ಲಿರುವರೆಂಬುದೇ ಸಾರ್ಥಕ್ಯದ ಸಂಗತಿ. ಅಲ್ಲಿ ನಾನು ಕೇವಲ ಅಕ್ಷರ ಕಲಿಸುವುದಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅಂತರ್ ಯುದ್ಧದ ಅವಿಶ್ರಾಂತ ಸೇನಾನಿಯಾಗಿದ್ದ ನಾನು ದಲಿತರಿಗೆ ಅಂಗಿ ತೊಡುವುದನ್ನು ಕಲಿಸಿದೆ. ಕಾರಣ ದಲಿತರು ಮೈಮುಚ್ಚುವಂತೆ ಬಟ್ಟೆ ಧರಿಸುವುದನ್ನು ಜಮೀನ್ದಾರಿ ವ್ಯವಸ್ಥೆ ನಿಷೇಧಿಸಿತ್ತು. ಕ್ರಾಪು ಬಿಡುವುದನ್ನು ಕಲಿಸಿದೆ. ಕೂಲಿಗಾಗಿ ಕಾಸು ಪಡೆಯುವುದನ್ನು ಕಲಿಸಿದೆ (ಕೂಲಿಗೆ ಸೇರು, ಮೂರುಪಾವು ದವಸಧಾನ್ಯ ಕೊಡುತ್ತಿದ್ದರು). ಎದೆಸೆಟೆಸಿ ಅಡ್ಡಾಡುವುದನ್ನು ಕಲಿಸಿದೆ. ಜೊತೆಗೆ ಅಡುಗೆಮಾಡಿಕೊಂಡು ಉಂಬಬೇಕೆಂದು ಹೇಳಿಕೊಟ್ಟೆ (ಎಷ್ಟೋಮಂದಿ ದಲಿತರು ಗೌಡರ ಮನೆಯ ತಂಗಳುಂಡು ಹೊಟ್ಟೆ ಹೊರೆಯುತ್ತಿದ್ದರೇ ವಿನಃ ಅಡುಗೆ ಮಾಡಿಕೊಳ್ಳುತ್ತಿರಲಿಲ್ಲ). ಇನ್ನೊಂದು ಮುಖ್ಯ ಸಂಗತಿ ಎಂದರೆ, ಎಷ್ಟೋ ಮಂದಿ ದಲಿತ ಮಕ್ಕಳಿಗೆ ನಾನೇ ಸುರೇಶ, ರಮೇಶ, ಪದ್ಮ ಎಂದು ಮುಂತಾಗಿ ನಾಮಕರಣ ಮಾಡಿದ್ದು (ಕಾರಣ ಮಕ್ಕಳ ದೇಹಾಕೃತಿ, ಬಣ್ಣದ ಆಧಾರದ ಮೇಲೆ ಸವರ್ಣೀಯರೇ ಡುಮ್ಮ, ದೊಕ್ಕ, ಕರಿಯ ಗಿಡ್ಡ ಎಂದು ಹೆಸರಿಟ್ಟು ಕರೆಯುತ್ತಿದ್ದರು).

ಆ ದಲಿತ ಕೇರಿಯ ನನ್ನ ಎರಡು ವರ್ಷಗಳ ಅನುಭವ ಕುರಿತು ಸುದೀರ್ಘವಾಗಿ ಬರೆದಲ್ಲಿ ಸಹಸ್ರ ಸಹಸ್ರ ಪುಟಗಳ ಗ್ರಂಥವಾಗುತ್ತದೆ. ವಾಂತಿ ಭೇದಿ, ನೆಗಡಿ ಜಡ್ಡು ಮುಂತಾದ ಸಾಂಕ್ರಾಮಿಕ ರೋಗಗಳು ವರ್ಷಕ್ಕೊಂದೆರಡು ಬಾರಿ ಕೇರಿ ಪ್ರವೇಶಿಸಿ ಹಲವಾರು ಮಂದಿಯನ್ನು ಹಲೋ ಹಲೋ ಎಂದು ಮಾತಾಡಿಸಿ ಹೇಳದೆ ಕೇಳದೆ ಹೋಗಿಬಿಡುತ್ತಿದ್ದವು. ಕೆಲವು ರೋಗಗಳಂತೂ ದೇವರುಗಳ ರೂಪದಲ್ಲಿ ಪಕ್ಕೀರವ್ವರಂಥ ಮಹಿಳೆಯರ ಶರೀರ ಗಳನ್ನು ಹೊಕ್ಕು ಹೇಳಿಕೆ ಕಾರಣಿಕಗಳನ್ನು ನುಡಿಯುತ್ತಿದ್ದವು. ಕೆಲವು ಮಹಿಳೆಯರಂತೂ ಸವರ್ಣೀಯರ ದೆವ್ವಗಳನ್ನು ತಮ್ಮ ದೇಹದೊಳಗೆ ಆವಾಹಿಸಿಕೊಂಡು ಗೌಡರ ಮನೇ ಪ್ರವೇಶಿಸುವ ಪ್ರಯತ್ನ ಮಾಡುತ್ತಿದ್ದದು ಕುತೂಹಲದ ಸಂಗತಿ. ಅಕ್ಷರ ಗೊತ್ತಿರದಿದ್ದ

ಅವರನ್ನು ನಾನು ಅವಿದ್ಯಾವಂತರೆಂದು ಭಾವಿಸುವೆ. ಸಾವಿರ ಸಾವಿರ ಕಥೆಗಳನ್ನು ಹೇಳುತ್ತಿದ್ದಂಥ ಕುರುಕುಂದಿನಾಗ; ಬೆಳ್ಳಂಬೆಳಗು ಜಾನಪದ ಹಾಡುಗಳನ್ನು ಹಾಡುತ್ತಿದ್ದ ಮೂಲಿ ಸವಾರೆಕ್ಕರಂಥ ಪ್ರತಿಭಾವಂತರಿಗಲ್ಲಿ ಬರವಿರಲಿಲ್ಲ. ಅಲ್ಲಿ ನಡೆಯುತ್ತಿದ್ದ ಜಗಳಗಳು ಸಹ ಕಾವ್ಯಮಯವಾಗಿರುತ್ತಿದ್ದವು. ಬಸ್ಯರಂಥವರು ಬಯ್ಯುವುದರಲ್ಲಿ ಪ್ರಾವಿಣ್ಯತೆಯನ್ನು ಸಂಪಾದಿಸಿದ್ದರು. ಇದೆಲ್ಲಾ ಒತ್ತಟ್ಟಿಗಿರಲಿ.

ಒಂದೆರಡು ವರ್ಷಗಳ ನಂತರ ನಮ್ಮ ಶಾಲೆ ಮತ್ತೆ ಸವರ್ಣೀಯರ ದೇವರಿಲ್ಲದ ಕಟ್ಟಡಕ್ಕೆ ವರ್ಗವಾಯಿತು. ಯಿನ್ನು ನಿಮ್ನವರ್ಗದವರ ಮತ್ತು ಜಮೀನ್ದಾರರ ನಡುವಿನ ಸಂಬಂಧಕ್ಕೆ ಬರೋಣ. ಗೌಡರು, ರೆಡ್ಡಿಗಳು ನಿಮ್ನ ಜಾತಿಯವರ ಕಣ್ಣಿಗೆ ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಎಂಬಂತೆ ಇದ್ದರು. ಅವರ ಬಗೆಗಿನ ಭ್ರಮೆ ಕಳಚಲು ರಾಮದೇವರ ಗುಡಿ ಮುಂದುಗಡೆ ಅನಾಥವಾಗಿ ಬಿದ್ದಿದ್ದ ಕಲ್ಲುಗುಂಡು ಕಾರಣವಾಗಬಹುದೆಂದು ನಾನು ಕನಸು ಮನಸಿನಲ್ಲು ಯೋಚಿಸಿರಲಿಲ್ಲ. ಅದೊಂದು ಹದಿಮೂರು ಹದಿನಾಲ್ಕು ಮಣ ತೂಕದ ನುಣುಪನೆ ಮೈಯ ಕಲ್ಲು ಗುಂಡು. ಬೇಡರ ಕೋಮಿಗೆ ಸೇರಿದ್ದ ಚಪ್ಪರ ಚನ್ನಪ್ಪನೆಂಬ ಭೀಮ ಬಲದ ವ್ಯಕ್ತಿ ಅದನ್ನು ಎತ್ತಿ ಇಳಿಸಿ ಅಂಗಸಾಧನೆ ಮಾಡುತ್ತಿದ್ದನಂತೆ. ಕಾರಣಾಂತರ ದಿಂದ ತಾನು ಊರುಬಿಡಬೇಕಾಗಿ ಬಂದಾಗ ಸೇರೂವರೆ ತೂಕದ ಬೆಳ್ಳಿಕಡಗವನ್ನು ಭಾಣಾಪುರದ ಬಸನವನಗೌಡರ ಕೈಗೆ ಕೊಡುತ್ತ "ಈ ಗುಂಡನ್ನು ಎತ್ತಿದೋರಿಗೆ ಕೊಡಿರಪ್ಪಾ ಗೋಡಾ" ಎಂದು ಹೇಳಿಕೊಟ್ಟು ಊರು ಬಿಟ್ಟನಂತೆ. ತದನಂತರ ಅನೇಕರು ಬೆಳ್ಳಿಕಡಗದ ಆಸೆಯಿಂದ ಆ ಗುಂಡನ್ನು ಎತ್ತಲು ಪ್ರಯತ್ನಿಸಿ ವಿಫಲರಾದರಂತೆ. ಈ ಕುರಿತು ಗಾದೆಗುರು ಬಸಪ್ಪನಂಥೋರು ನನಗೆ ಹೇಳುತ್ತಿದ್ದರು. ಒಮ್ಮೆ ಆದವಾನಿಗೆ ಹೋಗಿದ್ದಾಗ ನನಗೆ ಮಾಟಗಾರ ಬ್ಯಾಡರ ಉರುಕುಂದೆಪ್ಪ ಮತ್ತಾತನ ಸಹೋದರರ ಪರಿಚಯವಾಯಿತು. ಅವರು ಹಾಲರವಿ ಸಿದ್ಧರಾಮಪ್ಪನ (ಮುಂದೊಂದು ದಿನ ಈತನ ಕೊಲೆಯಾಯಿತು) ಅಂಗರಕ್ಷಕ ರಾಗಿದ್ದವರು, ಹತ್ತತ್ತು ಮಣ ತೂಕಯಿದ್ದ ಈ ಕಲಿಯುಗದ ಭೀಮರಿಗೆ ಚಪ್ಪರಚೆನ್ನಪ್ಪನ ಕಲ್ಲು ಗುಂಡು ಮತ್ತು ಬೆಳ್ಳಿ ಕಡಗದ ವಿಷಯ ಹೇಳಿ ವಂದವಾಗಿಲಿಗೆ ಕರೆದುಕೊಂಡು ಬಂದೆ. ಸಾವಿರಾರು ಜನರ ಸಮಕ್ಷಮದಲ್ಲಿ ಅನೇಕ ಕಸರತ್ತುಗಳನ್ನು ಮಾಡಿ ರಂಜಿಸಿದ್ದಲ್ಲದೆ ಗುಂಡನ್ನು ಲೀಲಾಜಾಲವಾಗಿ ಎತ್ತಿ ಇಳಿಸಿದರು. ಐದುನೂರು ಎಕರೆ, ಎರಡು ಮಣ ಬಂಗಾರ ವುಳ್ಳಂಥ ಶ್ರೀಮಂತ ಜಮೀನ್ದಾರನಾದ ಬಸವನಗೌಡ, ತನಗೆ ಚಪ್ಪರ ಚೆನ್ನಪ್ಪನ್ನಾಗಲೀ ಆತನ ಬೆಳ್ಳಿ ಕಡಗವಾಗಲೀ ಗೊತ್ತೇ ಇಲ್ಲವೆಂದು ಸಾರ್ವಜನಿಕವಾಗಿ ಸುಳ್ಳು ಹೇಳಿದ. ಆತ ಸುಳ್ಳು ಹೇಳುವುದೇ ನನಗೆ ಬೇಕಾಗಿತ್ತು. ಗೌಡರ ಬಗ್ಗೆ ಜನರಿಗೆ ಭ್ರಮೆ ನಿರಸನವಾಗುವುದೇ ನನಗೆ ಬೇಕಾಗಿತ್ತು. ಆ ಕ್ಷಣ ಎಲ್ಲರೂ ಪಟ್ಟಿ ಹಾಕಿ ಬೆಳ್ಳಿ ಕಡಗ ಮಾಡಿಸಿ ಉರುಕುಂದೆಪ್ಪಗೆ ಕೊಟ್ಟು ಕಳಿಸಿಕೊಟ್ಟೆವು. ಈ ಘಟನೆಯಿಂದಾಗಿ ಕೆಳಜಾತಿಯ ಜನ ಜಮೀನ್ದಾರಿ ವ್ಯವಸ್ಥೆಯ ವಿರುದ್ಧ ಅದ್ಭುತ ರೀತಿಯಲ್ಲಿ ಸುಸಂಘಟಿತರಾದರು. ಮುಂದಿನ ಚುನಾವಣೆಯಲ್ಲಿ ಗೌಡರ ವಿರುದ್ಧ ಸ್ಪರ್ಧಿಸಿ ಗೆದ್ದು ಗ್ರಾಮಪಂಚಾಯ್ತಿಯ ಅಧ್ಯಕ್ಷರಾದರು. ಇದು ನನ್ನಿಂದಾದ ಪವಾಡ

ಸದೃಶ ಘಟನೆಗಳಲ್ಲಿ ಒಂದು ಎಂದು ನಮ್ರತೆಯಿಂದ ಹೇಳಬಯಸುವೆ. ಇಂಥ ಘಟನೆಗಳಿಂದ ನನ್ನ ಮೇಲೆ ಹಲ್ಲು ಮಸೆಯುತ್ತಿದ್ದ ಗೌಡರು ನನ್ನ ವಿರುದ್ಧ ಸಾಮೂಹಿಕವಾಗಿ ತಿರುಗಿ ಬಿದ್ದದ್ದು, ನನ್ನ ಪ್ರಪ್ರಥಮ ಕಾದಂಬರಿ 'ಕಪ್ಪು' ಪ್ರಕಟವಾದ ಮೇಲೆ. ಕಾದಂಬರಿ ಎಂಬ ಶಬ್ದ ಕೇಳಿರಿದ, ಅಕ್ಷರವೇ ಗೊತ್ತಿರದ ಅನೇಕರನ್ನು ನನ್ನ ವಿರುದ್ಧ ಎತ್ತಿ ಕಟ್ಟಲು ಅದ್ಭುತರೀತಿಯಲ್ಲಿ ನನ್ನ ಕೃತಿಯನ್ನು ಒಂದು ಪ್ರಬಲ ಅಸ್ತ್ರದಂತೆ ಬಳಸಿಕೊಂಡರು. ಈ ಮೂಲಕ ನನ್ನನ್ನು ಕೊಲೆ ಮಾಡಿಸುವ ಪ್ರಯತ್ನವೂ ನಡೆಯಿತು. ಕೊಕ್ಕ, ಬುಕ್ಕ, ಬಸ್ಲಿಂಗ, ನಾರಾಣಿಯರಂಥ ಐದಾರು ಮಂದಿ ವೃತ್ತಿಪರ ಕೊಲೆಗಡುಕರ ಸ್ನೇಹ ಹೊಂದಿದ್ದ ನನ್ನ ಮೈಕೂದಲು ಕೊಂಕಿಸಲಾಗಲಿಲ್ಲ ಅವರಿಗೆ. ಕೊಲೆ ಗಿಲೆ ಮಾಡಿ ನಾನೂ ಜೈಲು ಪಾಲಾಗುವ ಸಾಧ್ಯತೆ ಇತ್ತು. ಆದರೆ ಕೆಲವು ಹಿತೈಷಿಗಳ ಸಲಹೆಮೇರೆಗೆ ನಾನು ಆ ಊರನ್ನು ರಾತ್ರೋರಾತ್ರಿ ಬಿಟ್ಟೆ. ಬದುಕಿನ, ಸಾಹಿತ್ಯದ ಅನೇಕ ಮೊದಲ ಪಾಠಗಳನ್ನು ಕಲಿಸಿ ನನ್ನನ್ನು ನಿಜವಾದ ಅರ್ಥದಲ್ಲಿ ವಿದ್ಯಾವಂತನನ್ನಾಗಿ ಮಾಡಿದ ವಂದವಾಗಿಲಿ ಗ್ರಾಮ ನನಗೆ ಸದಾ ಸ್ಮರಣೀಯ.

ಅನಂತರ ಅಲ್ಲಿಂದ ಬಂದು ಗೂಳ್ಯಂ ಎಂಬ ಸುಧಾರಿತ ಗ್ರಾಮದಲ್ಲಿ ಹದಿನಾಲ್ಕು ವರ್ಷಕಾಲ ಶಿಕ್ಷಕನಾಗಿ ಕೆಲಸಮಾಡಿದ್ದು ಕೂಡ ಒಂದು ದೊಡ್ಡ ಕಥೆ. ಇದು ಕುಡಿದು ಕೇಕೆ ಹಾಕುವವರ ನೆಲೆವೀಡು. ಕೆರಳುವವರ ಕಾಶಿ. ಇಲ್ಲಿ ನಲ್ಲಿಯಲ್ಲಿ ಕುಡಿಯುವ ನೀರು ಬರುತ್ತಿದ್ದದ್ದೂ ಒಂದು ಐತಿಹಾಸಿಕ ಘಟನೆ. ಇಲ್ಲಿ ಒಂದು ಕೊಡ ನೀರಿಗೆ ಹೊಡೆದಾಡುವಷ್ಟು ಸಮುದ್ರಮಂಥನದ ಸಂದರ್ಭದಲ್ಲಿ ಅಮೃತದ ವಿಷಯದಲ್ಲಿ ಸುರಾಸುರರೂ ಅಷ್ಟು ಹೊಡೆದಾಡಿರಲಿಕ್ಕಿಲ್ಲ. ಸೀರೆ, ಕುಬುಸ, ಹರಿದುಕೊಳ್ಳದೆ, ಒಂದು ಹಿಡಿ ತಲೆಗೂದಲು ಕಿತ್ತುಕೊಳ್ಳದೆ, ಮೈ ಮೇಲೊಂದಿಷ್ಟು ಗಾಯ ಮಾಡಿಕೊಳ್ಳದೆ ಒಂದು ಕೊಡ ಸಿಹಿನೀರು ಹಿಡಿದು ತಂದವರಿಗೆ ಅಶೋಕಚಕ್ರ ನೀಡಿ ಸತ್ಕರಿಸಬೇಕು ಹಣ ಎಣಿಸಲು ಬಾರದವರು, ಕನಿಷ್ಠ ಎಂದರೂ ಎರಡುಮೂರು ಲಕ್ಷ ರೂಪಾಯಿ ಮೌಲ್ಯದ ಬೆಳೆ ಬೆಳೆಯುವಂಥವರಿಗಿಲ್ಲಿ ಬರವಿಲ್ಲ. ಇಲ್ಲಿ ಕೂಡ ಜಿಸ್ ಕೀ ಲಾಠಿ ಉಸ್ ಕೀ ಬೈಂಸ್ ಸಂಸ್ಕೃತಿಯೇ. ಇಲ್ಲಿ ಕೂಡ ನಿಮ್ನವರ್ಗದವರಲ್ಲಿ ಸಾಮಾಜಿಕ ಎಚ್ಚರ ಮೂಡಿಸುವ ಸತತ ಪ್ರಯತ್ನ ಮಾಡಿ ನಾಯಿ ಬಾಲ ಡೊಂಕು ಎನ್ನಿಸಿಕೊಂಡೆ. ಕದ್ದು ಕಾಫಿ ಕುಡಿದು, ತಲೆ ಬಾಚಿಕೊಂಡು ಹೂವು ಮುಡಿದು, ರವಿಕೆ ಒಳಗಡೆ ಬ್ರಾ ಸೀರೆ ವಳಗಡೆ ಕಾಚಾ ತೊಟ್ಟು, ತಮ್ಮ ತಮ್ಮ ಅತ್ತೆಯಂದಿರ ಲಕ್ಷ್ಮಣ ರೇಖೆಗಳನ್ನು ಉಲ್ಲಂಘಿಸಿದ ಘನ ಸೊಸೆಯಂದಿರಗೀ ಗ್ರಾಮದಲ್ಲಿ ಬರವಿಲ್ಲ. ತಂಬಿಗೆಯೊಳಗೆ ನೀರಿಗೆ ಬದಲಾಗಿ ಕಡ್ಲೆಬೆಲ್ಲ ಉಂಡೆ ಕರ್ಜಿಕಾಯಿ ತುಂಬಿಕೊಂಡು ದೊಡ್ಡಿಗೆ (ಕಕ್ಕಸಿಗೆ) ಹೋಗಿ ತಿಂದು ಬರುವಂಥ ಗೃಹಲಕ್ಷ್ಮಿಯರಿಗೀ ಗ್ರಾಮದಲ್ಲಿ ಬರವಿಲ್ಲ. ತಮ್ಮ ಮಗುವನ್ನು ಹಾವು ಎಲ್ಲಿ ಕಚ್ಚಿ ಬಿಟ್ರೋ ಅಂತ, ಕೋಣ ಎಲ್ಲಿ ತಿವಿದು ಬಿಟ್ರೋ ಅಂತ, ಬಚ್ಚಲಿಂದ ಬೆತ್ತಲಾಗಿ ಬೀದಿಗೆ ಓಡಿಬಂದ ವಾತ್ಸಲ್ಯಮಯಿ ಮಾತೃ ಮೂರ್ತಿಗಳಿಗೀ ಊರಲ್ಲಿ ಬರವಿಲ್ಲ. ಇಂಥ ಎಷ್ಟೋ ಕಾರಣಗಳಿಂದಾಗಿ ಅದ್ಭುತವಾಗಿದ್ದಂಥ ಊರು ನನ್ನ ಗೂಳ್ಯಂ. ಹಗರಿ ಸಾಲಿನ ರಾಯಲಸೀಮೆಯ ಘನ ಗೌರವ ಪ್ರತಿಷ್ಠೆ ಉಳಿಯಬೇಕೆಂದರೆ, ಕೊಲೆಸುಲಿಗೆ

ನಡೆಯುತ್ತಲೇ ಇರಬೇಕು. ನನ್ನ ಪ್ರೀತಿಯಲ್ಲಿ ಈ ಊರು ಸಹ ಇದಕ್ಕೆ ಹೊರತಾಗಲಿಲ್ಲ. ನಾನು ಹೋದ ಹೊಸತರದಲ್ಲಿ ವೀರೇಶಪ್ಪ ಎಂಬಾತನ ಕೊಲೆ; ತದನಂತರ ಕೆಂಜೆಡೆಪ್ಪ ಎಂಬಾತನ ಕೊಲೆ, ತದನಂತರ ಮಟಮಟ ಮಧ್ಯಾಹ್ನ ಪ್ರತೀಕಾರದ ರೂಪದಲ್ಲಿ ಏಳೆಂಟು ಮಂದಿಯ ಮಾರಣಹೋಮ. ಕೊಲೆಗಡುಕರ ಪೈಕಿ ಕೆಲವರು, ಕೊಲೆಯಾದವರ ಪೈಕಿ ಕೆಲವರು, ನನ್ನ ಮಾಜಿ ವಿದ್ಯಾರ್ಥಿಗಳು ಎಂಬುದು ವಿಷಾದದ ಸಂಗತಿ. ಇಂಥ ಕಾರಣಗಳಿಂದ ನನ್ನ ಟೆಂಟನ್ನು ಪ್ರಸ್ತುತ ಹಿರೇಹಾಳಿಗೆ ವರ್ಗಾಯಿಸಬೇಕಾಗಿ ಬಂತು.

ಈ ಭಾಗದ ಜನ ಯಾಕೆ ಮಾತುಮಾತಿಗೆ ಕೊಡಲಿ ಕುಡುಗೋಲು; ನಾಡಬಾಂಬುಗಳ ಮೊರೆ ಹೋಗುವರೆಂಬುದೇ ನಿಗೂಢ. ನಾನು ಕಂಡ ಒಂದೊಂದು ಕೊಲೆಯೂ ಒಂದೊಂದು ದುಃಸ್ವಪ್ನವೇ ಸರಿ. ನನ್ನ ಕಣ್ಣೆದುರಿಗೇ ಆಲೂರಿನಲ್ಲಿ ಹಲಗೇರಿ ವೀರಾರೆಡ್ಡಿಯ ಕೊಲೆ ನಡೆಯಿತು. ಕೋರ್ಟ್ ಮತ್ತು ಪೋಲೀಸ್ ಠಾಣೆಯ ಪಕ್ಕದಲ್ಲಿದ್ದ ಹೋಟೆಲ್ ಒಳಗಡೆ ಪ್ರಾಣಭಯದಿಂದ ಪ್ರವೇಶಿಸಿದ ಒಬ್ಬ (ಆತನೂ ಜಮೀನ್ದಾರ) ಕಾದಿದ್ದ ದೋಸೆ ಹಂಚಿನ ಮೇಲೆ ತುಸು ಹೊತ್ತಿನವರೆಗೆ ನಿಂತಿದ್ದು ಕೊಲೆಯಾದ ದೃಶ್ಯ ಕಣ್ಣಿಗೆ ಕಟ್ಟಿದಂತಿದೆ. ಇಲ್ಲಿ ಪ್ರತಿಯೊಂದು ಅಧ್ಯಾಯ ರಕ್ತದಿಂದ ಆರಂಭವಾಗಿ ರಕ್ತದಿಂದ ಮುಕ್ತಾಯವಾಗುತ್ತದೆ. ಕೊಲೆ, ಕ್ರೌರ್ಯದ ಸಂಸ್ಕೃತಿ ಹಗರಿ ಸಾಲಿನಿಂದ ಹಿಡಿದು ಕಡಪ, ಕರ್ನೂಲು, ಅನಂತಪುರ, ಚಿತ್ತೂರುಗಳನ್ನೊಳಗೊಂಡ ರಾಯಲಸೀಮೆಯಾದ್ಯಂತ ಹರಡಿದೆ. ಗಂಗುಲ ಪ್ರತಾಪರೆಡ್ಡಿ, ಚಲ್ಲಾ ರಾಮಕೃಷ್ಣಾರೆಡ್ಡಿ, ಭೈರೆಡ್ಡಿ, ರಾಜಶೇಖರರೆಡ್ಡಿ, ಜೆ.ಸಿ. ದಿವಾಕರ ರೆಡ್ಡಿ, ಪೆರಿಟಾಲ ರವಿ, ವೈ.ಎಸ್. ರಾಜಶೇಖರರೆಡ್ಡಿ ಇವರೇ ಮೊದಲಾದವರು ಇಲ್ಲಿ ತಮ್ಮವೇ ಆದ ಸರಕಾರ, ಕಾನೂನು, ದಂಡ ಸಂಹಿತೆ ರಚಿಸಿಕೊಂಡು, ತಮ್ಮ ತಮ್ಮ ಭೂಭಾಗಗಳನ್ನೇ ನಿರ್ವಿರಾಮವಾಗಿ ಆಳುತ್ತಿದ್ದಾರೆ, ಕ್ರಿ.ಶ. ೧೮೩೦-೪೦ ರ ನಡುವೆ ಈ ದತ್ತಮಂಡಲಕ್ಕೆ ಕಲೆಕ್ಟರನಾಗಿ ಬಂದ ಥಾಮಸ್ ಮನ್ರೋ ಈ ಭಾಗದ ಅನೇಕ ಮಂದಿ ನಿರಂಕುಶ ಪ್ರಭುಗಳ ಹುಟ್ಟಡಗಿಸಿರದಿದ್ದಲ್ಲಿ, ಜಮೀನ್ದಾರೀ ವ್ಯವಸ್ಥೆ ಇನ್ನೆಷ್ಟು ಭಯಂಕರವಾಗಿರುತ್ತಿತ್ತೋ! ಪ್ರತಿದಿನ ಹುಟ್ಟಿದ ಹಬ್ಬಗಳನ್ನು ಆಚರಿಸಿಕೊಳ್ಳುತ್ತಿರುವ ಇಲ್ಲಿನ ಜಮೀನ್ದಾರರು ಎದುರಾಳಿ ಜಮೀನ್ದಾರನನ್ನು ಮುಗಿಸಲು ವ್ಯೂಹ ರಚಿಸುತ್ತಲೇ ಇರುತ್ತಾರೆ. ಅಲ್ಲದೆ ಇವರಿಗೆ ನಕ್ಸಲೈಟರ ಉಪಟಳ ಬೇರೆ. ವೆಂಕಪ್ಪನಾಯ್ಡು ಇರುವ ಕಪ್ಪಟ್ರಾಳ್‌ಗೆ ಹೊಸಬರು ಹೋಗಿ ಬರುವಂತಿಲ್ಲ. ವೆಲಪನೂರಿಗೆ ಕಲೆಕ್ಟರ್, ಎಸ್‌ಪಿ ಯಾರೇ ಹೋದರೂ ಬುಡ್ಡಾ ವೆಂಗಳರೆಡ್ಡಿ (ವರ್ಷದ ಹಿಂದೆ ನಕ್ಸಲೈಟರು ಪೋಲೀಸ್ ವೇಷದಲ್ಲಿ ಹೋಗಿ ಈತನನ್ನು ಕೊಲೆ ಮಾಡಿದರು) ಅವರ ಮನೆಯಲ್ಲಿ ಸುಗ್ರಾಸ ಭೋಜನ ಮಾಡುವ, ಮೂಲಕ ಜಮೀನ್ದಾರೀ ವ್ಯವಸ್ಥೆಯನ್ನು ಗೌರವಿಸಬೇಕು. ವಕೀಲ ಮರೇಗೌಡ (ಕಳೆದ ವರ್ಷ ಈತನ ಕೊಲೆಯೂ ಆಯಿತು)ನಿಂದ ಕೊಲೆಯಾದ (೧೯೭೫) ಕೋಸಿಗಿ ನಾರಾಯಣ ದೊರೆಯ ಕಾಮತೃಷೆಯಂತೂ ಕುಪ್ರಸಿದ್ಧ (ಶಾಂ ಬೆನಗಲ್‌ರವರ ಪ್ರಸಿದ್ಧ ಚಲನಚಿತ್ರ ಕೃತಿ 'ನಿಶಾಂತ್'ಗೆ ಕಥಾವಸ್ತುವಾದ ದೊರೆ ಈತ) ಹೀಗೆ ಎಷ್ಟೋ ಜ್ವಲಂತ ಉದಾಹರಣೆಗಳು ಈ ಭಾಗದ ಎಲ್ಲ ಕಡೆ ಸಿಕ್ಕುತ್ತವೆ. ಪ್ರಜಾಪ್ರಭುತ್ವ

ಮುಸುಗಿನೊಳಗಿರುವ ಸದ್ಯದ ರಾಜಕೀಯ ವ್ಯವಸ್ಥೆಯೂ ಇದನ್ನು ಪೋಷಿಸಿಕೊಂಡು ಬರುತ್ತಿದೆ.

ಇದಕ್ಕೆ ಅನೇಕರು ಅನೇಕ ರೀತಿಯಲ್ಲಿ ಉತ್ತರ ಕೊಡುತ್ತಾರೆ. ಉರುಕುಂದಿ, ಪೆನ್ನೋಬಿಳಂ, ಚಿನ್ನೋಬಿಳಂ, ಕದಿರಿಯಲ್ಲಿರುವ ನರಸಿಂಹದೇವರುಗಳು (ಸಾಲಿಗ್ರಾಮಗಳು) ನೆಲೆಗೊಂಡಿರುವ ಪ್ರದೇಶದಲ್ಲಿ ಈ ರೀತಿಯ ಕ್ರೌರ್ಯ ಸಾಮಾನ್ಯವೆಂದು ಕೆಲವರು ಸಮರ್ಥನೆ ನೀಡಿದರೆ, ಇನ್ನು ಕೆಲವರು ನಮ್ಮ ಸಮಾಜ ಗುಟ್ಟಾಗಿ ಪಾಳೇಗಾರಿಕೆ ವ್ಯವಸ್ಥೆಯನ್ನು ಆರಾಧಿಸಿಕೊಂಡು ಬರುತ್ತಿದೆ ಎಂದು ಹೇಳುತ್ತಾರೆ. ಭಾಷಾವಾರು ವಿಂಗಡಣಾ ಪೂರ್ವದಲ್ಲಿ ಕರ್ನಾಟಕದೊಂದಿಗೆ ನಿಕಟವಿರಿಸಿಕೊಂಡಿದ್ದ ಮತ್ತು ಕರ್ನಾಟಕದ ಒಂದು ಭಾಗವೇ ಆಗಿದ್ದ ಈ ಪ್ರದೇಶದ ದೈನಂದಿನ ವಿದ್ಯಮಾನಗಳನ್ನು ಅಷ್ಟು ಸುಲಭವಾಗಿ ಅಲಕ್ಷಿಸುವುದು ಸಾಧುವಲ್ಲ. ಭಾಷಾವಿಜ್ಞಾನಿಗಳ ಅಧ್ಯಯನಕ್ಕೆ ಸವಾಲಾಗುವಂಥ ವಿಲಕ್ಷಣ ಕನ್ನಡ ಭಾಷೆಯಿಲ್ಲಿ ಜೀವಂತವಿದೆ. ಹಾಗೆಯೇ ಎಲ್ಲರ ಅಧ್ಯಯನ ಕುತೂಹಲ ಕೆರಳಿಸುವಂಥ ಬದುಕು ಇಲ್ಲಿದೆ.

ನಾನಿಲ್ಲಿ ಪ್ರಸ್ತಾಪಿಸಿರುವುದು ಎಳ್ಳುಕಾಳಷ್ಟು ಮಾತ್ರ.

●

## ಮಹಾರಾಷ್ಟ್ರಕ್ಕೆ ಸೇರಲು ಕಾತರರಾಗಿರುವ ಕನ್ನಡಿಗರು!

● ಡಿ ಎಸ್ ಚೌಗಲೆ

ದಕ್ಷಿಣ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದ ಪ್ರದೇಶದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆ ಒಂದೇ ಬಗೆಯದು ಎಂದು ಹೇಳಬಹುದು. ಈ ಭಾಗದ ಜನರ ಬದುಕು, ಉಡುಗೆ-ತೊಡುಗೆ, ಆಚರಣೆ-ನಂಬಿಕೆ, ಊಟೋಪಚಾರಗಳಲ್ಲಿ ಹೆಚ್ಚಿನ ಭಿನ್ನತೆಯಿಲ್ಲ. ಭಾಷೆ, ಸಂಸ್ಕೃತಿಗಳ ಆದಾನ ಪ್ರದಾನದ ಒಟ್ಟಿಗೆ, ರಕ್ತ ಸಂಬಂಧಗಳೂ ದಟ್ಟವಾಗಿವೆ. ಕನ್ನಡದ ಹುಡುಗಿಯನ್ನು ನೆರೆಯ ಮಹಾರಾಷ್ಟ್ರದವರು ಸ್ವೀಕರಿಸುವುದು ಅತ್ಯಂತ ಸಂತೋಷದಿಂದಲೇ. ಅದಕ್ಕೆ ಕಾರಣವೂ ಇದೆ. ಈ ಮಣ್ಣಿನಲ್ಲಿರುವ ಸಹಿಷ್ಣುತನ, ತಾಳ್ಮೆ, ಕುಟುಂಬ ಪ್ರೀತಿ; ಮೇಲಾಗಿ ಆಕೆ ಬಹುಬೇಗ ಮರಾಠಿ ಭಾಷೆ ಕಲಿತು ಮರಾಠಿ ಸಂಸ್ಕೃತಿಯನ್ನು ತನ್ನದಾಗಿಸಿಕೊಳ್ಳುತ್ತಾಳೆನ್ನುವುದು. ಅದೇ ತದ್ವಿರುದ್ಧವಾಗಿ ಮರಾಠಿ ಕನ್ಯೆಯನ್ನು ಮದುವೆಯಾದ ಕನ್ನಡ ಹುಡುಗ ಮರಾಠಿ ಕಲಿತು ಆಕೆಯ ಜತೆ ಮರಾಠಿಯಲ್ಲಿ ಸಂವಹನ ನಡೆಸುತ್ತಾನೆಯೆ ಹೊರತು, ಅವಳಿಗೆ ಕನ್ನಡ ಕಲಿಸುವ ಪ್ರಯತ್ನ ಮಾಡುವುದೇ ಇಲ್ಲ. ಮರಾಠಿ ಹುಡುಗಿ ಖಡಾಖಂಡಿತವಾಗಿ ನನಗೆ 'ಕನ್ನಡ ಮಾತಾಡಲು ಬರುವುದೇ ಇಲ್ಲ' ಎಂದು ಕಡ್ಡಿ

ಮುರಿದ ಹಾಗೆ ಹೇಳಿಬಿಡುತ್ತಾಳೆ. ಈ ಎರಡು ಉದಾಹರಣೆಗಳು ಎರಡು ಭಾಷೆ, ಸಂಸ್ಕೃತಿಯಲ್ಲಿ ಬದುಕುವವರ ಮನೋಧೋರಣೆಯನ್ನು ಹೇಳಿಕೊಡುತ್ತವೆ. ಇದಕ್ಕೆ ಅಪವಾದಗಳೂ ಇರಬಹುದು.

ಸಹಕಾರಿ ಕ್ಷೇತ್ರದಲ್ಲಿ ಉನ್ನತ ಸಾಧನೆ ತೋರಿದ ಮಹಾರಾಷ್ಟ್ರ, ಗಡಿ ಕನ್ನಡಿಗರನ್ನು ಸಹಜವಾಗಿಯೇ ಆಕರ್ಷಿಸಿದೆ. ಕೊಲ್ಹಾಪುರ, ಸಾಂಗಲಿ, ಇಚಲಕರಂಜಿ, ಮಿರಜಗಳಲ್ಲಿ ಬಹುಸಂಖ್ಯೆಯ ಕನ್ನಡಿಗರು ಉದ್ಯೋಗ ಹುಡುಕುತ್ತ ಬಂದು ಅಲ್ಲಿಯೇ ನೆಲೆಯೂರಿದ್ದಾರೆ. ವಿಜಾಪುರ ಬಾಗಲಕೋಟೆ ಜಿಲ್ಲೆಯ ನೇಕಾರ ಸಮೂಹ, 'ಮಹಾರಾಷ್ಟ್ರದ ಮೆಂಚೆಸ್ಟರ್' ಎಂದು ಕರೆಯಿಸಿಕೊಳ್ಳುವ ಇಚಲಕರಂಜಿಯಲ್ಲಿದೆ. ಸಹಕಾರಿ ನೆಲೆಯ ಸಕ್ಕರೆ ಕಾರಖಾನೆ, ಸ್ಪಿನ್ನಿಂಗ್ ಮಿಲ್ಲುಗಳು ಸ್ಪರ್ಧಾತ್ಮಕ ರೀತಿಯಲ್ಲಿ ಬೆಳೆದು ಜನರಿಗೆ ಉದ್ಯೋಗವನ್ನು ನೀಡಿ ತಮ್ಮ ಉತ್ಪಾದನೆಯನ್ನೂ ಹೆಚ್ಚಿಸಿವೆ. ಒಂದು ಪಕ್ಷದ ಧುರೀಣ ಒಂದು ಕಾರಖಾನೆ ಶುರು ಮಾಡಿದರೆ, ವಿರೋಧಿ ರಾಜಕಾರಣಿ ತಾನೂ ಒಂದನ್ನು ಹುಟ್ಟಿಹಾಕುತ್ತಾನೆ. ಇಂಥ ಆರೋಗ್ಯಕರ ಸ್ಪರ್ಧೆಯನ್ನು ಕರ್ನಾಟಕದಲ್ಲಿ ಕನಸಿನಲ್ಲೂ ನೆನೆಯಲು ಸಾಧ್ಯವಿಲ್ಲ.

ನೆರೆಯ ಗಡಿಯ ಶಹರುಗಳಲ್ಲಿ ದುಡಿಮೆಗೆ ಬಂದ ಕನ್ನಡಿಗರಿಗಾಗಿ ಮತ್ತು ಅಲ್ಲಿಯೇ ಉಳಿದ ಜೈನ, ಲಿಂಗಾಯತ ಕನ್ನಡ ಮನೆಮಾತನ್ನಾಗಿಸಿಕೊಂಡ ಅಲ್ಪಸಂಖ್ಯಾತರಿಗಾಗಿ ಕನ್ನಡ ಶಾಲೆಗಳು ಇರದಿರುವುದು ಮಾತ್ರ, ಆ ಸರಕಾರದ ಮಲತಾಯಿ ಧೋರಣೆಯನ್ನು ಎತ್ತಿ ತೋರಿಸುತ್ತದೆ. ಹಾಗೆಯೇ ನಮ್ಮವರು ಅಸಂಘಟಿತವಾಗಿರುವ ವಿಚಾರವೂ ಕಾರಣವಾಗಿದೆ. ಮಹಾರಾಷ್ಟ್ರದ ಮುಖ್ಯವಾಹಿನಿಯಲ್ಲಿ ಬೆರೆತು ಹೋದ ಕನ್ನಡ ಮೂಲದವರು, ಗುರುತಿಸಲಾರದಷ್ಟು ಬದಲಾಗಿದ್ದಾರೆ. ಕೆಲವರು ಅಲ್ಲಿ ಸುಖದ ಬದುಕನ್ನು, ಸಿರಿವಂತಿಕೆಯನ್ನು ಅನುಭವಿಸುತ್ತಿದ್ದರೂ ಅವರಿಗೆ ಭಾಷೆ, ಅಸ್ಮಿತೆಗಳ ತೊಡಕಾಗಿಲ್ಲ ಅಥವಾ ಅವರಿಗೆಲ್ಲ ಭಾಷೆ ಮುಖ್ಯವೆನಿಸುವುದೂ ಇಲ್ಲ. ಉದ್ಯೋಗ ದಂಧೆಯಲ್ಲಿ ತೊಡಗಿಸಿಕೊಂಡು ಗಳಿಕೆಗೆ ಪ್ರಾಧಾನ್ಯತೆ ನೀಡಿದ ಈ ಕನ್ನಡಿಗರು ಅಲ್ಲಿಯವರೇ ಆಗಿ ಹೋದಂತೆ, ಶ್ರಮಿಕ ವರ್ಗವಾದ ಕನ್ನಡ ಅಲ್ಪಸಂಖ್ಯಾತರು ತಮ್ಮ ಹೊಟ್ಟೆಬಟ್ಟೆಗಾಗಿ ದುಡಿಯುತ್ತ, ಮಹಾರಾಷ್ಟ್ರವನ್ನೂ ಅಲ್ಲಿಯ ಭಾಷೆಯನ್ನೂ ತೆಕ್ಕೆಗೆ ತೆಗೆದುಕೊಂಡು ಅಲ್ಲಿಯವರೇ ಆಗಿದ್ದಾರೆ ಕೂಡ.

ಸ್ವಾತಂತ್ರ್ಯಾನಂತರ ಹಾಗೂ ಭಾಷಾವಾರು ಪ್ರಾಂತಗಳ ರಚನೆಯ ನಂತರ ಹಿಂದಿದ್ದ ಕನ್ನಡ ಮಾತಾಡುವವರ ಸಂಖ್ಯೆ ಇಂದು ಮಹಾರಾಷ್ಟ್ರದ ಗಡಿಭಾಗದಲ್ಲಿ ಕಡಿಮೆಯಾಗುತ್ತಿದೆ. ಕನ್ನಡಿಗರ ಸಹಿಷ್ಣುಧೋರಣೆ, ಹೊಂದಿಕೊಳ್ಳುವ ಸ್ವಭಾವದಿಂದ, ಇಲ್ಲಿ ಯಾವುದೇ ಬಗೆಯ ಭಾಷಾ ಆಂದೋಲನ, ಸಂಘರ್ಷ ಇಲ್ಲವೇ ಇಲ್ಲ. ಮಹಾರಾಷ್ಟ್ರದಲ್ಲಿರುವ ಜನಜಾಗೃತಿ, ಫುಲೆ-ಅಂಬೇಡ್ಕರರ ವಿಚಾರಧಾರೆಯ ಚಳುವಳಿಯಿಂದ, ಲಂಚಗುಳಿತನ ಭ್ರಷ್ಟಾಚಾರದ ಪ್ರಮಾಣ ಕಡಿಮೆ. ಹೀಗಾಗಿ ಸಾರ್ವಜನಿಕ ಯೋಜನೆ ರಸ್ತೆ, ವಿದ್ಯುತ್, ಶಾಲೆ, ಕುಡಿಯುವ ನೀರಿನ ಯೋಜನೆಗಳು ಹೆಚ್ಚುಕಮ್ಮಿ ಪೂರ್ಣ ಪ್ರಮಾಣದಲ್ಲಿ ತಲುಪಿವೆ. ಕೃಷಿ, ನೀರಾವರಿಗಳಿಂದ ಮಹಾರಾಷ್ಟ್ರಕ್ಕೆ ಅದರ ಗಡಿಯ ಭಾಗದಿಂದ ಸಾಕಷ್ಟು ಪ್ರಮಾಣದಲ್ಲಿ ಸಂಪನ್ಮೂಲ

ಸಿಗುತ್ತದೆ. ಈ ಉತ್ಪಾದನೆ ಹಿಂದೆ ಗಡಿಕನ್ನಡಿಗರ ಶ್ರಮ, ಶ್ರದ್ಧೆಯನ್ನು ಅಲ್ಲಗಳೆಯುವಂತಿಲ್ಲ. ಕರ್ನಾಟಕ ಗಡಿಭಾಗದ ಸಾಕಷ್ಟು ಪ್ರಮಾಣದ ಕಬ್ಬು ಇಚಲಕರಂಜಿ, ಕೊಲ್ಹಾಪುರ, ಶಿರೋಳ, ರಾಧಾನಗರಿಗಳಿಗೆ ಹೋಗುತ್ತದೆ. ದವಸ ಧಾನ್ಯಗಳ ವ್ಯಾಪಾರ ವಹಿವಾಟು ಬೆಳಗಾವಿಗಿಂತ, ಸಾಂಗಲಿ ಕೊಲ್ಹಾಪುರ ಮತ್ತು ಗಡಹಿಂಗ್ಲಜಗಳಂಥ ಶಹರುಗಳಲ್ಲಿ ಜಾಸ್ತಿ. ಮಹಾರಾಷ್ಟ್ರದ ನಗರಗಳಲ್ಲಿ ನಮ್ಮ ವ್ಯಾಪಾರಸ್ಥರು ಸಾಕಷ್ಟು ದೊಡ್ಡಕುಳಗಳಾಗಿದ್ದಾರೆ. ಚಿಕ್ಕೋಡಿ, ಅಥಣಿ, ರಾಯಬಾಗ ತಾಲೂಕಿನ ಕಬ್ಬು ಮಹಾರಾಷ್ಟ್ರಕ್ಕೆ ಹೋದಂತೆ, ಈ ಭಾಗದ ತಂಬಾಕು ಸಾಂಗಲಿ ಜಿಲ್ಲೆಯ ಜಯಸಿಂಗಪುರ ಸೇರುತ್ತದೆ. ಅಥಣಿ ಪರಿಸರದ ದ್ರಾಕ್ಷಿ, ಮಿರಜ, ಸಾಂಗಲಿ ಪೇಟೆ ಸೇರಿ ಮಹಾರಾಷ್ಟ್ರದೊಂದಿಗಿನ ವ್ಯವಹಾರವನ್ನು ಗಟ್ಟಿಗೊಳಿಸಿದೆ. ಮಿರಜನಲ್ಲಿ ವೈದ್ಯಕೀಯ ಸೇವೆ ಒಂದು ಉದ್ಯಮದಂತೆ ಬೆಳೆದಿದೆ.

ಇವೆಲ್ಲವನ್ನು ಗಮನಿಸಿದಾಗ ಮಹಾರಾಷ್ಟ್ರದ ಗಡಿ ಪರಿಸರ ಸಮೃದ್ಧಿಯಿಂದ ಕೂಡಿ ಅಲ್ಲಿಯ ಜನ (ಕನ್ನಡಿಗರೂ ಸೇರಿ) ಸುಖದ ಬದುಕನ್ನು ಬದುಕುತ್ತಿದ್ದಾರೆ ಎಂದು ಹೇಳ ಬಹುದು. ಆದರೆ ಸಾಕಷ್ಟು ಜನರು ಶಿಕ್ಷಣ, ಸಾಹಿತ್ಯ, ಕಲೆಗಳಂತಹ ಪ್ರಕಾರಗಳಿಂದ ದೂರ ಉಳಿದಿದ್ದಾರೆ. ಅಲ್ಲಿಯ ಬಹುಪಾಲು ಕನ್ನಡಿಗರೂ ಅದೇ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಅವರಿಗೆಲ್ಲ ಬದುಕು, ಸಂಪತ್ತು ಮುಖ್ಯವೇ ವಿನಃ ಭಾಷೆ, ಸಂಸ್ಕೃತಿ ಎನ್ನುವುದಲ್ಲ!

ನಮ್ಮ ಕನ್ನಡ ನೆಲದ ಗಡಿಯ ವಿಚಾರಕ್ಕೆ ಬಂದಾಗ ಇದರ ತದ್ವಿರುದ್ಧವಾದ ಪರಿಸ್ಥಿತಿ ಯಿದೆ. ಚಿಕ್ಕೋಡಿ, ರಾಯಬಾಗ, ಅಥಣಿ ತಾಲೂಕಿನ ಗಡಿ ಜನರ ಬದುಕು ಮಹಾರಾಷ್ಟ್ರಕ್ಕೆ ಹೋಲಿಸುವ ಹಾಗೆಯೇ ಇಲ್ಲ. ಅದೇ ಬಡತನ, ಉದ್ಯೋಗ ದಂಧೆಗಳ ಕೊರತೆ, ರಸ್ತೆ, ಶಾಲೆಗಳಂತಹ ಪ್ರಾಥಮಿಕ ಹಂತದ ಸೌಲಭ್ಯಗಳ ಕೊರತೆ. ನೆರೆ ರಾಜ್ಯ ಕೃಷಿ, ಸಹಕಾರ, ಸಾರ್ವಜನಿಕ ಸೌಲಭ್ಯಗಳಿಂದ ಕಂಗೊಳಿಸುತ್ತಿದ್ದರೆ, ನಮ್ಮ ಗಡಿಯ ನೆಲೆ ಬರಡು ಆಫಘಾನಿ ಸ್ಥಾನವನ್ನು ನೆನಪಿಸುತ್ತದೆ. ಇಲ್ಲಿಯ ಜನಪ್ರತಿನಿಧಿಗಳ ಉದಾಸೀನ ಧೋರಣೆ, ಜನರ ಹೋರಾಟ ಮನೋಭಾವದ ಕೊರತೆ, ಅಧಿಕಾರಿಗಳ ನಿರ್ಲಕ್ಷ್ಯ, ಭ್ರಷ್ಟಾಚಾರಗಳಂಥ ಪಿಡುಗಿ ನಿಂದ ಗಡಿ ಕನ್ನಡಿಗರು ಬೇಸತ್ತು ಬೆಂದು ಹೋಗಿದ್ದಾರೆ. ಒಂದು ಸಲ ಅಥಣಿ ತಾಲೂಕಿನ ಕೆಲ ಹಳ್ಳಿಗಳ ಮುಖಂಡರು ಸೇರಿ 'ನಮ್ಮನ್ನೆಲ್ಲ ಮಹಾರಾಷ್ಟ್ರಕ್ಕೆ ಸೇರಿಸಿರಿ' ಎಂದು ಚಳುವಳಿ ನಡೆಸಿದ್ದನ್ನು ಇಲ್ಲಿ ನೆನೆಯಬಹುದು. ಗಾಯದ ಮೇಲೆ ಬರೆ ಎಳೆದಂತೆ ಯಾವ ಪ್ರಮುಖ ಮುಖಂಡರು ಆ ಹಳ್ಳಿಗಳತ್ತ ಸುಳಿಯಲಿಲ್ಲ.

ಈ ಭಾಗದಲ್ಲಿ ಒಂದು ಜೋಕಿದೆ. ಬಸ್ಸಿನಲ್ಲಿ ಕುಳಿತು ಮಹಾರಾಷ್ಟ್ರದಿಂದ ಕರ್ನಾಟಕದ ಕಡೆಗೆ ಪ್ರಯಾಣ ಬೆಳೆಸಿದರೆ, ನಿದ್ದೆ ಹೋದ ಪ್ರಯಾಣಿಕ ಒಮ್ಮೆಲೆ ಬಸ್ಸಿನ ಧಡಧಡ ಸದ್ದಿಗೆ ಎಚ್ಚೆತ್ತು 'ಓಹ್! ಕರ್ನಾಟಕ ಬಂತು!' ಎಂದು ನಿಟ್ಟುಸಿರು ಬಿಡುತ್ತಾನೆ. ಇದು ಕರ್ನಾಟಕದ ಸ್ವಾಗತ ಗಂಟೆ! ಅಥಣಿ, ಹಾರೂಗೇರಿ ಊರುಗಳಿಗೆ ಬೆಳಗಾವಿಯಿಂದ ಬಾಡಿಗೆ ಕಾರಿನವನು, ಹಣದ ಆಮಿಷ ತೋರಿಸಿದರೂ ಬರಲು ಒಪ್ಪುವುದಿಲ್ಲ. ಇಷ್ಟೆಲ್ಲ ಆಗಿದ್ದರೂ ಜನರು ಏನೂ ಆಗಿಲ್ಲವೆಂಬಂತೆ ಓಡಾಡುತ್ತಿರುತ್ತಾರೆ. ಆಗಾಗ ಶಪಿಸುತ್ತಾರೆ,

ಜನಪ್ರತಿನಿಧಿಗಳನ್ನ ಮನಸಾರೆ ಬಯ್ಯುತ್ತಾರೆ. ಬಡವನ ಕೋಪದಂತೆ ಹಲ್ಲು ಕಡಿದು ಸುಮ್ಮನಾಗುತ್ತಾರೆ.

ಬೆಳಗಾವಿ ಹೊರತು ಪಡಿಸಿದರೆ ಇಲ್ಲಿಯ ಜನಕ್ಕೆ ಭಾಷೆ ಎಂಬುದೊಂದು ಆಂದೋಲನ, ಚಳವಳಿಯ ಪ್ರಶ್ನೆಯೆ ಅಲ್ಲ. (ಬೆಳಗಾವಿ ಜನಸಾಮಾನ್ಯರಿಗೂ ಅಷ್ಟೆ) ಗಡಿ ಭಾಗದ ಮರಾಠಿಗರಿಗೆ ಕನ್ನಡ ಬರುತ್ತದೆ, ಕನ್ನಡಿಗರಿಗೆ ಮರಾಠಿ ಬರುತ್ತದೆ. ಈ ಎರಡೂ ಸಮುದಾಯ ಅದೊಂದು ಸಂವಹನ ಕ್ರಿಯೆ ಎಂದಷ್ಟೆ ಭಾವಿಸಿ ಅದರ ತಂಟೆಗಿಳಿದಿಲ್ಲ. ದೂಧಗಂಗಾ, ವೇದಗಂಗಾ, ಕೃಷ್ಣಾ, ಮಲಪ್ರಭೆ, ಘಟಪ್ರಭೆಯರು ಹರಿದಿರುವ ಭಾಗವೆಲ್ಲ ತುಸು ನೆಮ್ಮದಿ ಕಂಡಿದೆ. ನೀರಾವರಿ ಮೂಲಕ ರೈತರ ಬದುಕು ಹಸಿರಾಗಿದೆ. ಕೆಲವೆಡೆ ಕಾಲುವೆಗಳು ಹರಿದು ಆ ಪರಿಸರವೂ ಸಮೃದ್ಧಿ ಬೆಳೆ ಕಾಣುತ್ತಿದೆ. ಕಬ್ಬು, ತಂಬಾಕು ಮುಖ್ಯ ಪೀಕು. ಆದರೆ ತಂಬಾಕು ಬೆಳೆಗಾರರ, ಅಂಥ ರೈತ ಕೂಲಿಯ ಬವಣೆ ಇನ್ನೂ ತಪ್ಪಿಲ್ಲ. ವ್ಯಾಪಾರಸ್ಥರ ಒಗ್ಗಟ್ಟು ರೈತರಿಗೆ ಮಾರಕ. ತಂಬಾಕು ನ್ಯಾಯಯುತ ಬೆಲೆಗೆ ಮಾರಾಟವಾಗದಂತೆ ಅವರು ವ್ಯವಸ್ಥಿತವಾಗಿ ನೋಡಿಕೊಳ್ಳುತ್ತಾರೆ. ಹೀಗಾಗಿ ಸಣ್ಣಪುಟ್ಟ ರೈತರು ಹಾಗೂ ನೀರಾವರಿಯನ್ನಷ್ಟೇ ನಂಬದೇ ಇರುವ ಪ್ರದೇಶದವರು ಹಾನಿಗೊಳಗಾಗುತ್ತಾರೆ. ನಿಪ್ಪಾಣಿಯಲ್ಲಿ ತಂಬಾಕು ಆಂದೋಲನವಾಗಿ ಗೋಳಿಬಾರಿನ ಕಹಿ ಅನುಭವ ಉಂಡರೂ, ಸಮಸ್ಯೆಯಲ್ಲಿ ಯಾವ ಬದಲಾವಣೆಗಳಿಲ್ಲ. ನಿಪ್ಪಾಣಿ ಪರಿಸರದಲ್ಲಿ ತಂಬಾಕು ವಖಾರಿಗಳಲ್ಲಿ ಕೆಲಸ ಮಾಡುವವರಿಗೆ, ಬೀಡಿ ಕಾರ್ಮಿಕರಿಗೆ, ವಿಶೇಷವಾಗಿ ಮಹಿಳೆಯರಿಗೆ ಇನ್ನೂ ನ್ಯಾಯ ದೊರೆತಿಲ್ಲ. ಬಡತನ, ದಾರಿದ್ರ್ಯ ಮತ್ತು ಶೋಷಣೆಯ ವಿಷದ ವರ್ತುಲದಲ್ಲಿ ಜೀವನ ಸಾಗಿಸುತ್ತಿದ್ದಾರೆ.

ಗಡಿಪ್ರದೇಶದಲ್ಲಿ ಶ್ರೀಮಂತರು ಮತ್ತು ಬಡವರು ಎಂದು ಎರಡು ಪ್ರಮುಖ ವರ್ಗಗಳ ಪ್ರಾಬಲ್ಯವೇ ಜಾಸ್ತಿ. ಮಧ್ಯಮ ವರ್ಗ ಅತ್ತೂ ಇಲ್ಲ, ಇತ್ತೂ ಹೋಗದ ತ್ರಿಶಂಕು ಸ್ಥಿತಿಯಲ್ಲಿದೆ. ಗ್ರಾಮೀಣ ಪ್ರದೇಶದ ಬಡಜನ ಮೂಢನಂಬಿಕೆಗಳಲ್ಲಿ ತಮ್ಮ ದೇವರು ದಿಂಡಿರುಗಳ ನೆರಳಲ್ಲಿ ತಮ್ಮಷ್ಟಕ್ಕೆ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳುತ್ತಾರೆ. ಸಮಾಧಾನ, ಸ್ವಾಂತನ ತಂದುಕೊಳ್ಳುತ್ತ ಬದುಕುತ್ತಿದ್ದಾರೆ. ಇದಕ್ಕೆ ಶಿಕ್ಷಣ ಪಡೆಯುವವರ ಸಂಖ್ಯೆಯ ಕೊರತೆ ಕಾರಣವಾಗಬಹುದು. ಶಿಕ್ಷಣ ಅಂದರೆ ಅಕ್ಷರಗಳ ಓದು ಬರಹವೆಂದು ಭಾವಿಸಿರುವ ಈ ಭಾಗದಲ್ಲಿ, ಸಾಹಿತ್ಯ-ಕಲೆಗಳಂತಹ ಸಾಂಸ್ಕೃತಿಕ ಜಗತ್ತು ಇಲ್ಲವೇ ಇಲ್ಲವೆನ್ನುವಷ್ಟಿದೆ. ಮನಸ್ಸನ್ನು ಅರಳಿಸುವ, ನೆಮ್ಮದಿ ಸುಖದ ಜೀವನಕ್ಕೆ ಚಾಲನೆ ತರುವ ಯಾವ ಚಟುವಟಿಕೆಗಳು ಇಲ್ಲಿಲ್ಲ. ಒಂದು- ಹಣ, ರಾಜಕಾರಣ, ಅಧಿಕಾರ ಗದ್ದುಗೆ. ಇನ್ನೊಂದು- ದಾರಿದ್ರ್ಯ, ಕಷ್ಟಕೋಟಲೆಗಳ ಕ್ರಮದ ಬದುಕು ಹಾಗೂ ಜೀವನದಲ್ಲಿ ಅಪಾರ ನಷ್ಟ. ಈ ಎರಡನೆಯ ಆಲೋಚನೆ ಸಾಕಷ್ಟು ಜನರನ್ನು ಖಿನ್ನವಾಗಿಸಿಬಿಟ್ಟಿದೆ. ತಿಕ ಹೊಸೆಯುತ್ತ ಸಾಗುವ ಬದುಕಿಗೆ ಬೇಸತ್ತುಕೊಂಡೇ ನೆರೆಯ ಮಹಾರಾಷ್ಟ್ರಕ್ಕೆ ಉದ್ಯೋಗ ದಂಧೆ ಹುಡುಕಿಕೊಂಡು ಹೋಗುವವರು ಈಗಲೂ ಇದ್ದಾರೆ. ನೆರೆಯ ಮಹಾರಾಷ್ಟ್ರದ ಗಡಿಯಲ್ಲಿ ಇರುವ ಪ್ರಮಾಣದಲ್ಲಿ ಇದ್ದಂತೆ ಇಲ್ಲಿ ಯಾವ ಉದ್ದಿಮೆಗಳಿಲ್ಲ. ಕೆಲಸಗಳ ಅವಕಾಶಗಳೂ ಇಲ್ಲ.

ಆದ್ದರಿಂದ ಗಡಿಭಾಗದ ಬಡಜನತೆ ಯಾರನ್ನು ನಂಬಿಕೊಂಡು ಬದುಕಬೇಕು? ಎಂಬ ಜಿಜ್ಞಾಸೆಯಲ್ಲಿ ತಮ್ಮ ಎಡಬಿಡಂಗಿ ಸ್ಥಿತಿಗೆ ಮರುಗುತ್ತಾರೆ.

ಸರಕಾರ ಮತ್ತು ಸರಕಾರಿ ಯಂತ್ರಗಳು, ಜನಪ್ರತಿನಿಧಿಗಳು ಮನಸ್ಸು ಮಾಡಿದ್ದರೆ, ಗಡಿಭಾಗವನ್ನು ಮತ್ತು ಆ ಜನರನ್ನು ಸುಭಿಕ್ಷ ಸ್ಥಿತಿಯಲ್ಲಿ ಇಡಬಹುದಿತ್ತು. ಅವರಿಗೆ ಬದುಕಲು, ಕೈಗೊಂದು ಕೆಲಸ ಕೊಡಲು, ನಾಡಿಗೆ ಸಂಪನ್ಮೂಲ ಕ್ರೋಢೀಕರಿಸಿ ನೀಡಲು ಸ್ಪರ್ಧಾತ್ಮಕ ನೆಲೆಯಲ್ಲಿ ಉದ್ಯಮಗಳನ್ನು ಸೃಷ್ಟಿಸಿ ಗಡಿ ಪ್ರದೇಶದ ಅಭಿವೃದ್ಧಿಗೆ ಶ್ರಮಿಸಬಹುದಿತ್ತು. ಆದರೆ ಅಂಥ ಮಾನಸಿಕ ಸಿದ್ಧತೆಗಳು ಅವರಿಗಿಲ್ಲ. ಹಾಗಾಗಿ ಅಭಿವೃದ್ಧಿ ಕುಂಠಿತ. ಪ್ರಾಥಮಿಕ ಸೌಕರ್ಯ, ಸವಲತ್ತುಗಳು ಕೆಲವರಿಗೆ ಮರೀಚಿಕೆ. ರಸ್ತೆ, ಕುಡಿಯುವ ನೀರಿನ ಸೌಲಭ್ಯಗಳ ಬೇಡಿಕೆಗಳ ಈಡೇರಿಕೆ, ರೈತ ಬೆಳೆಯುವ ತಂಬಾಕಿನಂಥ ಬೆಲೆಗೆ ಸರಕಾರ ನಿಗದಿತ ಬೆಲೆ ನೀಡುವುದು, ಈ ಬಗೆಯ ಹಲವಾರು ಕೆಲಸ ಕಾರ್ಯಗಳು ಭರದಿಂದ ಹಮ್ಮಿಕೊಳ್ಳುವುದಾಗಬೇಕು. ಗಡಿಪ್ರದೇಶದ ಅಭಿವೃದ್ಧಿಯಲ್ಲಿ ಸರಕಾರಗಳು ಹೆಚ್ಚು ತೊಡಗಿಸಿಕೊಳ್ಳಬೇಕು. 'ಮಹಾರಾಷ್ಟ್ರಕ್ಕೆ ಸೇರಬೇಕು' ಎಂದು ಹೋರಾಟ ನಡೆಸುವವರ ಜತೆ ಕನಿಷ್ಠ ಪಕ್ಷ ಮಾತುಕತೆಗಳನ್ನಾದರೂ ನಡೆಸಬೇಕು. ಕನ್ನಡ ನೆಲದಿಂದ ಇವು ಹರಿದು ಹೋಗದಂತೆ ಆಗಬೇಕಾದ ಕರ್ತವ್ಯಕ್ಕೆ ಆದ್ಯತೆ ನೀಡಬೇಕು. ಇಂಥ ಅನೇಕ 'ಬೇಕು'ಗಳ ಕುರಿತು ಚಿಂತನೆ ನಡೆಸಿ ಒಂದು ಕಾರ್ಯಸೂಚಿ ಸಿದ್ಧಪಡಿಸಿ ಯೋಜನೆಗಳನ್ನು ಅನುಷ್ಠಾನಗೊಳಿಸಿದಾಗ ಮಾತ್ರ ಗಡಿಭಾಗದ ಜನರ ಕಷ್ಟ ದೂರವಾಗಲು ಸಾಧ್ಯ. ಇಲ್ಲದಿದ್ದರೆ 'ಬಡಕೊಳ್ಳೋನಿಗೆ ಬಡಿಗಿ, ಕೂತ್ಕೊಳ್ಳೋನಿಗೆ ಕುರ್ಚಿ' ಎಂಬಂತೆ ಸಿರಿವಂತ ಹೆಚ್ಚೆಚ್ಚು ಶ್ರೀಮಂತನಾಗುತ್ತಾನೆ. ಬಡವ ಬಡವನಾಗಿಯೇ ದಾರಿದ್ರ್ಯದಲ್ಲಿ ಸಾಯುತ್ತಾನೆ.

●

## ಎತ್ತಣ ಕನ್ನಡ, ಎತ್ತಣ ಮರಾಠಿ...!

● ಚಂದ್ರಕಾಂತ ಪೋಕಳೆ

"ಭಾಷೆ ಹಾಗೂ ಶಬ್ದದ ರೂಪದಲ್ಲಿ ತಾಯ್ನೆಲ ಚಿರಂತನವಾಗಿ ಉಳಿಯುತ್ತದೆ" -

ಸೀಮಸ್ ಹನಿ.

ಇತ್ತೀಚಿನ ಜಾಗತಿಕ ವಿದ್ಯಮಾನಗಳನ್ನು ಗಮನಿಸಿದರೆ ಪ್ರತಿಯೊಂದು ದೇಶದಲ್ಲಿ ಉಗ್ರವಾದಿ ಚಟುವಟಿಕೆಗಳು ತೀವ್ರಗೊಂಡಂತೆ ಕಾಣುತ್ತಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ-ಮಹಾರಾಷ್ಟ್ರದ ಗಡಿ ಪ್ರದೇಶದ ವಿದ್ಯಮಾನಗಳನ್ನು ಗುರುತಿಸುವುದು, ಅನುಭವಗಳನ್ನು ಹಂಚಿಕೊಳ್ಳುವದು,ಸಾಧ್ಯವಾದರೆ ಆತ್ಮಾವಲೋಕನ ಮಾಡಿಕೊಳ್ಳುವುದು ಆಗಬೇಕಾಗಿದೆ.

ಈ ಲೇಖನ ಬರೆಯುವ ಸಂದರ್ಭದಲ್ಲಿ ಅಮೆರಿಕಾದ ಯುದ್ಧದ ಸಿದ್ಧತೆ, ಕಾಶ್ಮೀರದಲ್ಲಿ ಉಗ್ರರಿಗೆ ಆಹುತಿಯಾಗುವ ಅಮಾಯಕ ಜೀವಗಳು, ಹುಬ್ಬಳ್ಳಿ-ಬೆಳಗಾವಿಯಲ್ಲಿ ಸಿಂಘಾಲರ ಅಮೃತ ಮಹೋತ್ಸವದ ಕಾರ್ಯಕ್ರಮದಿಂದ ಭುಗಿಲೆದ್ದ ಹಿಂದೂ-ಮುಸ್ಲಿಂ ದಂಗೆ, ಹಾಗೂ ಗಡಿಪ್ರದೇಶದಲ್ಲಿ ಚುರುಕುಗೊಂಡ ಶಿವಸೇನೆಯ ಸಂಘಟನೆ-ಇದೆಲ್ಲವೂ ಕಿರಿಕಿರಿಯನ್ನುಂಟು ಮಾಡುವದರ, ಜೊತೆಗೆ ಒಂದು ರೀತಿಯಲ್ಲಿ ಹೃದಯವನ್ನು, ಮಿದುಳನ್ನು ಹಿಡಿದು ಅಲ್ಲಾಡಿ ಸುತ್ತಿವೆ. ಈ ಹಿಂಸೆಯ ಹಿಂದಿನ ಕಾರಣಗಳಾದರೂ ಏನು? ಜಾತಿ-ಜಮಾತಿಯ ಅಸ್ತಿತ್ವಕ್ಕೆ ಧಕ್ಕೆಯಾಗುತ್ತಿರುವ, ನೆಲೆಯನ್ನು ಕಳಕೊಳ್ಳುತ್ತಿರುವ ಆತಂಕವೇ? ಜನಾಂಗೀಯ ದ್ವೇಷವೆ? ಭಾಷೆ, ಸಂಸ್ಕೃತಿಯ ವೈಷಮ್ಯವೇ? ನಿಜವಾದ ಕಾರಣ ಕೆದಕುತ್ತ ಹೋದರೆ, ಎದುರಿಗೆ ಬರುವ ಕಟುಸತ್ಯ ಒಪ್ಪಿಕೊಳ್ಳುವ ನೈತಿಕ ಧೈರ್ಯ ನಮ್ಮಲ್ಲಿಲ್ಲ. ಈ ಸಂದರ್ಭದಲ್ಲಿ ದೇಶದ ಆಂತರಿಕ ಗಡಿಗಳಲ್ಲಿಯ ಸಂದಿಗ್ಧ ಬದುಕಿನ ಗತಿಯೇನು? ಬಾಹ್ಯ ಒತ್ತಡಗಳೇ ತಲ್ಲಣಗೊಳಿಸುತ್ತಿರುವಾಗ ಆಂತರಿಕ ಕಲಹಕ್ಕೆ, ಭಾಷಾ ವೈಷಮ್ಯಕ್ಕೆ ಬೆಲೆಯಿದೆಯೇ? ಯೋಚಿಸಬೇಕಾದ ಸಂಗತಿ.

ಮಲೆನಾಡಿನ ಮೂಲೆಯಿಂದ ಈ ಗಡಿ ಪ್ರದೇಶಕ್ಕೆ ಅಧ್ಯಾಪಕನಾಗಿ ಬಂದ ನಾನು, ಕಳೆದ ಮೂವತ್ತು ವರ್ಷಗಳ ಕಾಲಾವಧಿಯಲ್ಲಿ ಗಮನಿಸಿದ, ನನ್ನ ಅನುಭವಕ್ಕೆ ಸಿಕ್ಕ ಕೆಲವು ಸಂಗತಿಗಳನ್ನು ಇಲ್ಲಿ ದಾಖಲಿಸುವ ಪ್ರಯತ್ನ ಮಾಡುತ್ತೇನೆ. ರೈತರು, ಕಾರ್ಮಿಕರು, ಕೂಲಿಕಾರರು, ದುಡಿವ ಜನ ಎಂದೂ ಗಡಿ ಸಮಸ್ಯೆಯ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ಇದೆಲ್ಲ ರಾಜಕೀಯ ಕುಚೋದ್ಯ. ಚುನಾವಣೆ ಸಮೀಪಿಸಿದಾಗ, ನವ್ಹೆಂಬರ ಒಂದು ಕಾರ್ಯಕ್ರಮ ನಡೆಯುವಾಗ, ಎರಡೂ ಭಾಷೆಯ ಜನಕ್ಕೆ ಇದೊಂದು ಬಂಡವಾಳ. ಉಳಿದ ಕಾಲದಲ್ಲಿ ಇಲ್ಲೊಂದು ಗಡಿಸಮಸ್ಯೆಯಿದೆ ಎಂಬ ಅರಿವೂ ಬರದಷ್ಟು ತಣ್ಣಗಿನ ವಾತಾವರಣ. ಬೆಳಗಾವಿ, ನಿಪ್ಪಾಣಿ, ಖಾನಾಪುರದಲ್ಲಿ -ಅಲ್ಲಿಯ ರಾಜಕೀಯ ಪ್ರಾಬಲ್ಯದಿಂದಾಗಿ ಅಲ್ಲಿ ಇದರ ಚಟುವಟಿಕೆ ತೀವ್ರ. ಹಳ್ಳಿಗಳಲ್ಲಿ, ಒಳ ಪ್ರದೇಶಗಳಲ್ಲಿ - ಈ ಸಮಸ್ಯೆ ಅಷ್ಟೊಂದು ಗಂಭೀರವಲ್ಲ. ಹಿಂದಿನ ತಲೆಮಾರಿನವರಲ್ಲಿ, ಏಕೀಕರಣದ ಜನ, ಅವರ ಹೋರಾಟ, ನಿಷ್ಠೆ, ಸಮರ್ಪಣೆ- ಎಲ್ಲವೂ ವಿಸ್ಮೃತಿಯ ಕೋಶ ಸೇರಿ ಕಣ್ಮರೆಯಾಗುತ್ತಿದೆ. ಈಗ ಉಳಿದಿರುವುದು ಬರೇ ಅದರ ಪಳೆಯುಳಿಕೆ ಮಾತ್ರ!

ಗಡಿ ಪ್ರದೇಶದಲ್ಲಿ ಬದುಕುತ್ತಿರುವ ಜನ ಸಮುದಾಯಕ್ಕೆ ಭಾಷಾ ಬಂಧನವಿಲ್ಲ, ಇರಲೂ ಬಾರದು. ಬಂಧನವಿದ್ದರೆ ಲಾಭಕ್ಕಿಂತ ಹಾನಿಯೇ ಹೆಚ್ಚು. ಲಾಭ-ಹಾನಿಯ ಲೆಕ್ಕಾಚಾರ ಗಡಿಸಮಸ್ಯೆಯ ದೃಷ್ಟಿಯಲ್ಲಿ ಯೋಗ್ಯವಲ್ಲ ಎಂಬ ಮಾತೂ ಇದೆ. ಭಾವನಾತ್ಮಕವಾಗಿ ಇದು ಒಪ್ಪುವ ಮಾತಾದರೂ, ವ್ಯಾವಹಾರಿಕವಾಗಿ, ಬದುಕನ್ನೇ ನಂಬಿಕೊಂಡವರಿಗೆ ಹಾನಿಗಿಂತ ಲಾಭದ ಮೇಲೆಯೇ ಹೆಚ್ಚು ಕಣ್ಣು, ಅಂಥ ಕಾಲಕ್ಕೆ ಭಾಷೆ, ಧರ್ಮ, ಸಂಸ್ಕೃತಿ-ಎಲ್ಲವೂ ಗೌಣ. ಹೀಗಾಗಿ ನನ್ನ ಗಮನಕ್ಕೆ ಬಂದ ಎಲ್ಲ ಜನಗಳು ಎರಡೂ ಭಾಷೆ, ಸಂಸ್ಕೃತಿಯನ್ನು ಒಪ್ಪಿಕೊಂಡವರು, ಅಪ್ಪಿಕೊಂಡವರು. ಈ ಪ್ರದೇಶದ ಬ್ರಾಹ್ಮಣರು, ಮರಾಠರು

ಮರಾಠಿ ಭಾಷೆಯನ್ನು; ಲಿಂಗಾಯತರು, ಜೈನರು ಕನ್ನಡ ಸಂಸ್ಕೃತಿಯನ್ನು ನೆಚ್ಚಿಕೊಂಡವರು. ಇದು ಕನ್ನಡ ಮರಾಠಿಯ ಜಗಳವಲ್ಲ, ಬ್ರಾಹ್ಮಣ-ಲಿಂಗಾಯತ ಜಗಳ ಎಂದು ಶಾಂತಿನಾಥ ದೇಸಾಯಿ ಹೇಳುತ್ತಿದ್ದರು. ಇದು ನಿಜಕ್ಕೂ ಅರ್ಥಪೂರ್ಣವೆನಿಸುತ್ತದೆ. ಅಂದರೆ ಈ ಮಾತು ಪರೀಕ್ಷೆಗೊಳಪಡಬೇಕು.

ಏಕೀಕರಣಕ್ಕಿಂತ ಮೊದಲು ಪೇಶ್ವೆಯ ಆಡಳಿತದ ರಾಜಕೀಯ ಸತ್ತೆಯ ಪ್ರಭಾವ ಈ ಪ್ರದೇಶದ ಮೇಲೆ ಛಾಪು ಒಗೆದಿತ್ತು. ಹೀಗಾಗಿ ಪೇಶ್ವೆಯ ತನ್ಮೂಲಕ ಬ್ರಾಹ್ಮಣರ ಒತ್ತಡ, ದರ್ಪ, ಕುತಂತ್ರ, ಈ ಪ್ರದೇಶದ ಜನವನ್ನು ರೂಪಿಸಿತು. ಅವರ ಜೀವನ ಕ್ರಮಕ್ಕೆ ಸ್ಥಾನ-ಮಾನ ಗೌರವ-ಪ್ರತಿಷ್ಠೆ ಎಲ್ಲವೂ ಸಿಕ್ಕಿತು. ಉಳಿದ ಅಧಿಕಾರರಹಿತರು ಅವರ ಪ್ರಭಾವಕ್ಕೆ ಬಲಿಯಾದರು. ಪರಿಣಾಮ ಮರಾಠಿ ಭಾಷೆ, ಅಂಕಿ-ಅಂಶ, ನಡೆ-ನುಡಿ, ವೇಷ-ಭೂಷಣ ಎಲ್ಲವೂ ಅನುಕರಿಸಿದರು. ಏಕೀಕರಣದ ನಂತರ ಸಹ ಮರಾಠಿ ಜನ ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಗಡಿಯ ಉದ್ದಕ್ಕೂ ಅಭಿವೃದ್ಧಿಯ ಕಾರ್ಯ ಹಮ್ಮಿಕೊಂಡರು. ರಸ್ತೆ ನಿರ್ಮಾಣ, ಶಾಲೆ-ಕಾಲೇಜು ಸ್ಥಾಪನೆ, ಕಾರಖಾನೆ, ಉದ್ಯೋಗ ಕೇಂದ್ರ, ಸಾಂಸ್ಕೃತಿಕ ಸಂಘದ ಮೂಲಕ ಭಾಷಾಭಿವೃದ್ಧಿ ಜೊತೆಗೆ ಸಂಸ್ಕೃತಿಯ ಅಭಿವೃದ್ಧಿಯನ್ನು ತುಂಬಾ ಆಸ್ಥೆ, ನಿಷ್ಠೆಯಿಂದ ಕೈಕೊಂಡರು. ಅವರಿಗೆ ಜನಸಮುದಾಯದ, ಸರಕಾರದ ಮೇಲ್ವರ್ಗದ, ಹಣದ ಹಾಗೂ ರಾಜಕೀಯಗಳ ಬೆಂಬಲ ಸಿಕ್ಕಿತು.

ಇದರಿಂದ ಕನ್ನಡ ಜನ, ಅವರ ಭಾಷೆ, ಸಂಸ್ಕೃತಿ ಎಲ್ಲವೂ ಗೌಣಗೊಂಡಿತು. ಕನ್ನಡಿಗರಿಗೆ ಏಕೀಕರಣದ ದಾರುಣ ಚರಿತ್ರೆಯಷ್ಟೇ ಬೆನ್ನಿಗೆ ಉಳಿಯಿತು. ಆದರೆ ಕನ್ನಡದ ಸೊಂಟ ಮುರಿಯಿತು. ಕನ್ನಡಕ್ಕೆ ಗುಲಾಮಗಿರಿಯೇ ವಾರಸು ಆಗಿ ಬಂದಿತು. ಕನ್ನಡದ ಜನ ಬರೇ ರೈತರಾದರು; ಮರಾಠಿ ಜನ ಮಾಲೀಕರಾದರು. ಇವರು ಉಳುವವರು, ಅವರು ಆಳುವವರು. ಗಡಿಯಾಚೆಯ ಆಧುನಿಕ ಜಗತ್ತು, ಔದ್ಯೋಗಿಕ ಪ್ರಗತಿ, ಮಾರುಕಟ್ಟೆಯ ಸೌಲಭ್ಯ ಕಂಡು ಕನ್ನಡಿಗರು ಜೊಲ್ಲು ಸುರಿಸುವಂತಾಯಿತು. ಮುಗ್ಧ, ಅಮಾಯಕ, ಅಷ್ಟೇ ಮೂರ್ಖ(?) ಕನ್ನಡಿಗ ಗಡಿಯಾಚೆಯ ಥಳುಕಿನ, ಬೆರಗಿನ ಗಂಧರ್ವ ಲೋಕಕ್ಕೆ ಮಾರು ಹೋದ. ತತ್ಪರಿಣಾಮ ಕನ್ನಡ ಕ್ರಮೇಣ ಹ್ರಾಸಗೊಳ್ಳುತ್ತ ಹೋಯಿತು. ಮರಾಠಿ ಸಂಸ್ಕೃತಿ ಅನುಕರಣೆ ಮಾಡಿದರೆ ಮಾತ್ರ ಬದುಕುವುದು ಸಾಧ್ಯವೆಂದೆನಿಸಿತು. ಮರಾಠಿ ಕಲಿತರೆ ತನ್ನ ಫಸಲಿಗೆ ಮಾರುಕಟ್ಟೆ ಸಿಗುತ್ತದೆ, ಉದ್ಯೋಗ ಸಿಗುತ್ತದೆ, ಮಗಳಿಗೆ ಗಂಡ ಸಿಗುತ್ತಾನೆ, ಶ್ರೀಮಂತ ಅಳಿಯ ಸಿಗುತ್ತಾನೆ. ಅಷ್ಟೇ ಅಲ್ಲ ರಾಜಕೀಯ ಅಸ್ತಿತ್ವವೂ ಸಿಗುತ್ತದೆ -ಎಂದೆನಿಸಿ ಅದರ ಬೆನ್ನು ಹತ್ತಿದರು. ತನ್ನ ಮೂಲ ಬೇರು, ಮೂಲ ಸಂಸ್ಕೃತಿ, ಎಲ್ಲವನ್ನೂ ಕಳಕೊಂಡು, 'ಬೇವಾರ್ಸಿ'ಯಾದರು. ಕನ್ನಡಿಗ ಗ್ರಾಹಕ ಸಂಸ್ಕೃತಿಗೆ ಒಗ್ಗಿ ಕೊಂಡಿದ್ದರಿಂದ ಇಷ್ಟೆಲ್ಲ ಅಧ್ವಾನ.

ಇಂದು ಮಾರುಕಟ್ಟೆಯ, ವ್ಯಾಪಾರಿ ಕೇಂದ್ರದ ಸಕ್ಕರೆ-ನೂಲಿನ ಕಾರಖಾನೆಗಳ, ಸಂಪೂರ್ಣ ಹಿಡಿತ ಮರಾಠಿಗರ ಕೈಲಿದೆ. ಗಡಿಯಾಚೆಯ ಕನ್ನಡಿಗರಿಗೆ ಅಸ್ತಿತ್ವವೇ ಇಲ್ಲದಂತಾಗಿದೆ.

ಹಲವು ಹಳ್ಳಿಯ ಜನ ರಾಜ್ಯ ವಿಂಗಡನೆಯ ನಂತರ ಅನುಭವಿಸಿದ ನಾನಾ ರೀತಿಯ ಸಂಕಟ, ವೇದನೆಯಿಂದ 'ತಮ್ಮನ್ನು' ಮಹಾರಾಷ್ಟ್ರಕ್ಕೆ ಸೇರಿಸಿ ಬಿಡಿ ಎಂದು ಒತ್ತಾಯಿಸುತ್ತಿರುವದರ ಹಿಂದಿನ ಮರ್ಮ ಅರಿಯಬೇಕಾಗಿದೆ. ಗಡಿಯಲ್ಲಿ ಬದುಕುತ್ತಿರುವವರಿಗೆ ನೀರಿಲ್ಲ, ವಿದ್ಯುತ್ತಿಲ್ಲ, ಉದ್ಯೋಗವಿಲ್ಲ-ಅವರ ವರ್ತಮಾನಕ್ಕೆ ಬೆಲೆಯೇ ಇಲ್ಲ, ಭವಿಷ್ಯ ಅಂಧಃಕಾರ. ಹೀಗಾಗಿ ಇತ್ತೀಚಿನ ದಿನಗಳಲ್ಲಿ ಕರ್ನಾಟಕ ಸರಕಾರದ ಬಗ್ಗೆ ರೋಷ ಉಕ್ಕುತ್ತಿರುವುದು ಕಾಣಬಹುದು. 'ಸುಂದರ ಕರ್ನಾಟಕ'ದ ಬಗೆಗೆ ಭ್ರಮೆ ನಿರಸನಗೊಂಡಿದೆ. ಇದರಿಂದ ಕನ್ನಡದ ಹಾಗೂ ಸಂಸ್ಕೃತಿಯ ಬಗ್ಗೆಯೇ ಒಂದು ಬಗೆಯ ಸಿನಿಕತನ ಬೆಳೆಯುತ್ತಿದೆ. ಇದು ಅತ್ಯಂತ ಅಪಾಯಕಾರಿಯಾಗಿದೆ.

ಗಡಿ ಪ್ರದೇಶದ ವಾಸವೆಂದರೆ ಸಾಕಷ್ಟು ಲಾಭವಿದೆ ಎಂದು ನಾನು ಈ ಮೊದಲೇ ಹೇಳಿದ್ದೇನೆ. ಇಲ್ಲಿ ಎರಡೆರಡು ಭಾಷಾ ಪ್ರಬೇಧಗಳಿವೆ, ಎರಡೆರಡು ಸಂಸ್ಕೃತಿಗಳಿವೆ. ಎರಡೆರಡು ಸಂಪ್ರದಾಯಗಳಿವೆ, ರೀತಿ-ನೀತಿಗಳಿವೆ. ಇಲ್ಲಿಯ ಬದುಕಿನಲ್ಲಿ ಏಕತಾನತೆಯಲ್ಲಿ ವೈವಿಧ್ಯವಿದೆ. ಬದುಕಿನಲ್ಲಿ ಸಡಗರವಿದೆ, ಸಂಭ್ರಮವಿದೆ. ನನ್ನಂಥ ಬಹು-ಭಾಷಾ ಪ್ರೇಮಿಗೆ, ಸಂಸ್ಕೃತಿಯ ಆರಾಧಕನಿಗೆ ಇದೊಂದು ಸಂಪತ್ತಿನ ಖಣಿಯೇ ಆಗಿದೆ. ನಾನು ಈ ಗಡಿ ಪ್ರದೇಶಕ್ಕೆ ಬಂದ ಬಳಿಕ ಭಾಷೆಯ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಈ ಮೊದಲೇ ಬರುತ್ತಿದ್ದ ಅರೆ-ಬರೆ ಮರಾಠಿಯನ್ನು ಮತ್ತಷ್ಟು ಶ್ರೀಮಂತಗೊಳಿಸಿದೆ. ಮರಾಠಿ ಜನರೊಂದಿಗೆ ಒಡನಾಡಿ ಅವರ ಸಂಸ್ಕೃತಿ ಅರಿತುಕೊಳ್ಳುವ ಪ್ರಯತ್ನ ಮಾಡಿದೆ. ನನ್ನ ಸಾಂಸ್ಕೃತಿಕ ಅರಿವು ಹಿಗ್ಗಿತು. ಮರಾಠಿ ಜನರ ಜೀವನೋತ್ಸಾಹ, ಅದಮ್ಯ ಚೈತನ್ಯ, ಸಾಂಸ್ಕೃತಿಕ ಶ್ರೀಮಂತಿಕೆ ಕಂಡು ಬೆರಗಾಯಿತು. ತಮಾಶಾ, ಜಲಸಾ, ದಶಾವತಾರದಂತಹ ಜಾನಪದ ಕಲೆಯನ್ನು ನೋಡಿ ಸಂತೋಷ ಪಡುವಂತಾಯಿತು. ಅವರ ಹಬ್ಬ-ಹುಣ್ಣಿಮೆಗಳಲ್ಲಿ ರೀತಿ-ರಿವಾಜುಗಳಲ್ಲಿ ಪ್ರತ್ಯಕ್ಷ ಭಾಗವಹಿಸುವಂತಾಯಿತು. ಇಂದು ನನ್ನೊಳಗೆ ಈ ಎರಡೂ ಸಂಸ್ಕೃತಿ ಸೇರಿವೆ. ನನ್ನಂತಹ ದ್ವೈಭಾಷಿಕನು ಒಂದರ್ಥದಲ್ಲಿ ಸಾಂಸ್ಕೃತಿಕ ರಾಯಭಾರಿಯಿದ್ದಂತೆ. ಎರಡೂ ಭಾಷೆ, ಸಂಸ್ಕೃತಿಯನ್ನು ಒಗ್ಗೂಡಿಸುವ ಹೊಣೆಗಾರಿಕೆ ಇಲ್ಲಿ ಮಹತ್ವದ್ದು. ಕೆಲವೊಮ್ಮೆ ನನ್ನಂತಹ ಭಾಷಾ 'ದಳ್ಳಾಳಿ'ಯ ಮೇಲೆ, ಅನುವಾದಕ 'ಬ್ರೋಕರ್'ನ ಮೇಲೆ ಅವರಿಗೆ ಸಂಶಯ ಮೂಡುವುದು ಸ್ವಾಭಾವಿಕ. ಇದು ತಂತಿಯ ಮೇಲೆ ಕಸರತ್ತು ಮಾಡಿದ ಹಾಗೆ. ಎಚ್ಚರ ತಪ್ಪಿದರೆ ದುರಂತ. ಆದರೆ ಇಂಥ ಗಂಡಾಂತಕಾರಿ ಜೀವನ ಸದಾ ಕಾಲ ಎಚ್ಚರಿಕೆಯನ್ನು, ಪ್ರಜ್ಞಾವಂತಿಕೆಯನ್ನು ಜಾಗೃತವಾಗಿಡುತ್ತಿದೆ. ಇಂಥ 'ಸಾಂಸ್ಕೃತಿಕ ಸಂಗಮ'ದ ಕ್ಷೇತ್ರ ಕೆಲವೊಮ್ಮೆ ರಾಜಕೀಯ ಹಸ್ತಕ್ಷೇಪದಿಂದ ಹೊಲಸು ರಾಡಿಯನ್ನು ಎಬ್ಬಿಸಿ, ನಿರ್ಮಲ ಬದುಕು ಬಗ್ಗಡವಾಗುವದೂ ಉಂಟು. ಅದು ತಾತ್ಕಾಲಿಕ. ಸಾಂಸ್ಕೃತಿಕ ಶ್ರೀಮಂತಿಕೆಯೇ ಮಹತ್ವದ್ದು, ಶಾಶ್ವತವಾದದ್ದು.

ನನ್ನಂತಹ ಅನುವಾದಕನಿಗೆ ಗಡಿಪ್ರದೇಶದ ಸಿರಿವಂತಿಕೆಯನ್ನು ತಂದುಕೊಡುವಂತಹದು. ನಾನು ಈ ಗಡಿ ಪ್ರದೇಶದ ಕಬ್ಬು ಬೆಳೆಗಾರರು, ತಂಬಾಕು ರೈತರು, ಬೀಡಿ ಕಾರ್ಮಿಕರು,

ತಂಬಾಕು ವಖಾರಿಯಲ್ಲಿ ದುಡಿಯುವ ಹೆಂಗಳೆಯರು, ಕಾರಖಾನೆಯ ಕಾರ್ಮಿಕರು-ಇವರನ್ನು ಸನಿಹದಿಂದ ಕಾಣುವಂತಾಯಿತು. ಇಂಥ ಮರಾಠಿ ಸಾಹಿತ್ಯದ ಓದಿನಿಂದ ಆ ದಾರುಣ ಬದುಕನ್ನು ಪ್ರತ್ಯಕ್ಷ ಕಣ್ಣಾರೆ ಕಾಣುವಂತಾಯಿತು. ರೈತ ಆಂದೋಲನದಲ್ಲಿ ಭಾಗವಹಿಸು ವಂತಾಯಿತು. ಇಂಥಲ್ಲಿರುವ ಈ ಮಿಶ್ರ ಸಂಸ್ಕೃತಿಯು ಭಾಷಾಚೌಕಟ್ಟು ಮೀರಿ ನಿಲ್ಲುತ್ತದೆ, ಮೀರಿ ಬೆಳೆಯುತ್ತಿದೆ. ಇಲ್ಲಿಯ ಕನ್ನಡ-ಮರಾಠಿ ಮಿಶ್ರಭಾಷೆ (ಸ್ಥಳೀಯರಲ್ಲಿದು 'ಮೀಸಳ ಭಾಷೆ')ಯು ಭಾಷಾಶಾಸ್ತ್ರಕ್ಕೆ ಹೊಸ ಅಧ್ಯಾಯ ಸೇರ್ಪಡೆ ಮಾಡುತ್ತಿದೆ, ಭಾಷಾ ಸಂಶೋಧಕ ರಿಗೊಂದು ಹೊಸ ಬಗೆಯ ಆಹ್ವಾನ ನೀಡುತ್ತದೆ. ಸಂಸ್ಕೃತಿ ಹಾಗೂ ಭಾಷಾ ಶೋಧಕರಿಗೆ ಇಲ್ಲಿ ಹೇರಳವಾದ ಪರಿಸರವಿದೆ. ಸಂಸ್ಕೃತಿಯ ಪಳೆಯುಳಿಕೆಯನ್ನು ಕೆದಕುವ, ಬಗೆದು ಹೊರ ತರುವ 'ಎಂಟೆದೆ'ಯ ಸಂಶೋಧಕರು ಮುಂದೆ ಬರಬೇಕಷ್ಟೇ. ಮರಾಠಿ ಪದ, ಕನ್ನಡ ಪ್ರತ್ಯಯ ಜೋಡಿಸಿ ಮಾತನಾಡುವ ಇಲ್ಲಿಯ ರೀತಿ ಕಂಡು ಕೆಲ ಕನ್ನಡಿಗರು ಆತಂಕ ವ್ಯಕ್ತಪಡಿಸುತ್ತಾರೆ. ಇದರಿಂದ 'ಕನ್ನಡ ಕೆಡುತ್ತದೆ'ಂಬ ಮಡಿವಂತಿಕೆ ಅವರದ್ದು. ಭಾಷೆಗೆ ಅಂಥ ಯಾವ ಮಡಿವಂತಿಕೆಯೂ ಇರುವದಿಲ್ಲೆಂಬುದು ಭಾಷಾಶಾಸ್ತ್ರ ಅಧ್ಯಯನ ಮಾಡುವ ವರಿಗೆ ಗೊತ್ತಿದೆ. ಇಂಗ್ಲಿಶ್ ಇಂದು ಶ್ರೀಮಂತಗೊಂಡಿದ್ದೇ ಇಂಥ ಉದಾರ ಭಾಷಾ ಸ್ವೀಕರಣ ಧೋರಣೆಯಿಂದಲ್ಲವೇ? ಅಂದ ಮೇಲೆ ಕನ್ನಡಕ್ಕೇಕೆ ಮಡಿವಂತಿಕೆ?

ಅಮೆರಿಕಾದಂತಹ ಶ್ರೀಮಂತ ರಾಷ್ಟ್ರಗಳಿಗೆ ಹೋಗಿ ತಮ್ಮ ಆಧುನಿಕ ಬದುಕು ರೂಪಿಸಿ ಕೊಂಡವರು, ತಮ್ಮ ಮುದಿತನದಲ್ಲಿ ಮೂಲ ಬೇರನ್ನು, ಸಂಸ್ಕೃತಿಯನ್ನು ಹುಡುಕುತ್ತಾ ಭಾರತಕ್ಕೆ ಮರಳುತ್ತಿರುವ ಸಂಗತಿ ಎಲ್ಲರಿಗೆ ಗೊತ್ತಿದೆ. ಜೀವನದ ಕೊನೆಗಾಲಕ್ಕೆ, ರಕ್ತದ 'ಕಾವು' ಆರಿ ತಣ್ಣಗಾದಾಗ 'ಮೂಲ ಸಂಸ್ಕೃತಿ'ಯ, ನಾಸ್ಟಾಲ್ಜಿಯಾದ ಆಧಾರ ಮನುಷ್ಯನಿಗೆ ತೀರಾ ಅಗತ್ಯವೇನೋ. ಇವರು ವಿದೇಶದಲ್ಲಿ ತಮ್ಮ ಸಂಸ್ಕೃತಿಯನ್ನೇ ಕಳಕೊಂಡು 'ಪರದೇಶಿ'ಗಳಾಗಿರುತ್ತಾರೆ. ಇಂದಿನ ಉಗ್ರವಾದಿಗಳ ಹೋರಾಟದ ಹಿಂದೆ ಸಂಸ್ಕೃತಿಯ ಹುಡುಕಾಟ, ಮೂಲ ಬೇರಿನ ತಡಕಾಟದ ಚಡಪಡಿಕೆ ಇದ್ದಿರಬಹುದೇ? ಎಂಬ ಅನುಮಾನ ನನ್ನದು. ಆದರೆ ಆಂತರಿಕ ಗಡಿಯಲ್ಲಿ ವಾಸಿಸುವ ಕನ್ನಡಿಗರಿಗೆ ಈ ಸಮಸ್ಯೆಯಿರಬೇಕಾಗಿಲ್ಲ. ಮರಾಠಿ ಭಾಷೆ, ಸಂಸ್ಕೃತಿಯನ್ನು ಬೆಳೆಸಿಕೊಂಡು, ಕನ್ನಡ ಭಾಷೆ, ಸಂಸ್ಕೃತಿಯನ್ನು ಉಳಿಸಿ ಕೊಳ್ಳುವದು ಸಾಧ್ಯವಿದೆ. ಅಂಥ ಪರಿಸರ ಇಲ್ಲಿದೆ. ಅಂಥ ಚಾಣಾಕ್ಷತನ ನಮ್ಮಲ್ಲಿರಬೇಕಷ್ಟೇ. ನಾವು ಬಹುಭಾಷೆ, ಸಂಸ್ಕೃತಿಯ ಆರಾಧಕರಾಗಿರಬೇಕು.

ಗಡಿ ಪ್ರದೇಶದ ಮರಾಠಿ ಲೇಖಕರಾದ ಜಿ.ಎ.ಕುಲಕರ್ಣಿ, ಇಂದಿರಾಸುತ, ಮಹಾದೇವ ಮೋರೆಯಂತಹರು ಕನ್ನಡ ಪ್ರದೇಶ, ಜೀವನ ಕ್ರಮ, ರೀತಿ-ರಿವಾಜು, ಕನ್ನಡ ಸಂಸ್ಕೃತಿ, ಕೊನೆಗೆ ಕನ್ನಡದ ಹೆಸರೂ ಬಳಸಿ, ಸಾಹಿತ್ಯ ರಚಿಸಿ ಮಹಾರಾಷ್ಟ್ರದಲ್ಲಿ ಪ್ರಸಿದ್ಧರಾಗಿದ್ದಾರೆ. ಮುಂಬೈ ನಗರದ ಜೀವನಕ್ರಮವನ್ನು ಕನ್ನಡದ ವ್ಯಾಸರಾಯ ಬಲ್ಲಾಳ, ಜಯಂತ ಕಾಯ್ಕಿಣಿ, ಉಮರಾಜ್, ಬಳಸಿ ಕಥೆ, ಕಾದಂಬರಿ ರಚಿಸಲಿಲ್ಲವೇ? ಗಡಿ ಪ್ರದೇಶದ ದಟ್ಟವಾದ ಜೀವನವನ್ನು ಪರಿಸರವನ್ನು-ಒಟ್ಟು ಸಂಸ್ಕೃತಿಯನ್ನು ರಾವಬಹದ್ದೂರ್ 'ಗ್ರಾಮಾಯಣ',

ಮಿರ್ಜಿ ಅಣ್ಣಾರಾಯರ 'ನಿಸರ್ಗ'ಗಳಲ್ಲಿ ಎಷ್ಟು ಅರ್ಥಪೂರ್ಣವಾಗಿ ಚಿತ್ರಣಗೊಂಡಿದೆ ಎಂಬುದನ್ನು ಕನ್ನಡ ಸಾಹಿತ್ಯ ಗಮನಿಸಿದೆ. 'ದುನಿಂ ಬೆಳಗಲಿ', ಬಾಳಾಸಾಹೇಬ ಲೋಕಾಪುರ ಇದನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ತಲೆತಿರುಕ ಸಂಸ್ಕೃತಿ ಭಾಷೆ-ಭಾಷೆಗಳ ನಡುವೆ ಗೋಡೆ ಎಬ್ಬಿಸುತ್ತದೆ. ರಾಜಕೀಯ ಆರ್ಭಟದಲ್ಲಿ ಸಂಸ್ಕೃತಿಯ ನಾದ ಲಯ ಗುರುತಿಸಿದಷ್ಟು ನಾವು ಕಿವುಡರಾಗಿದ್ದೇವೆ.

ಮರಾಠಿ ಜನತೆ ಸಾಂಸ್ಕೃತಿಕ ಪರಂಪರೆಗೆ ಬೆಲೆ ಕೊಡುತ್ತದೆ. ಧರ್ಮ ಹಾಗೂ ರಾಜಕೀಯ ಇದಕ್ಕೆ ಬೆಂಗಾವಲಾಗಿ ನಿಂತಿದೆ. ಶಿವರಾಮ ಕಾರಂತ, ಎಸ್.ಎಲ್. ಭೈರಪ್ಪ, ಭೀಮಸೇನ ಜೋಶಿ, ಕುಮಾರ ಗಂಧರ್ವರನ್ನು ಸ್ವೀಕರಿಸುವ ಜನ, ಬೆಳಗಾವಿಯ ನೆಲದ ಪ್ರಶ್ನೆ ಬಂದಾಗ ಏಕೆ ದ್ವೇಷಿಸುತ್ತಾರೆ? ವ್ಯಕ್ತಿಗಿಂತ ಸಾಂಸ್ಕೃತಿಕ ಪ್ರಶ್ನೆ ಹೆಚ್ಚು ಮಹತ್ವದ್ದೇ? ಜಟಿಲವಾದದ್ದೇ? ನನ್ನ ದೃಷ್ಟಿಯಲ್ಲಿ ಇದು ಸಂಸ್ಕೃತಿಯ ಪ್ರಶ್ನೆಯಲ್ಲ; ನೆಲದ, ಮೂಲ ಬೇರಿನ, ತನ್ಮೂಲಕ ಅಸ್ತಿತ್ವದ ಪ್ರಶ್ನೆ. ಇಂಥದ್ದೇ 'ಉಗ್ರಗಾಮಿತನ' ಬಹಿರಂಗರೂಪ ಧಾರಣ ಮಾಡುತ್ತದೆ. ಈ ಸಂದರ್ಭದಲ್ಲಿ ಯಶವಂತ ಚಿತ್ತಾಲ ಹೇಳಿದ ಮಾತು ನೆನಪಾಗುತ್ತದೆ. 'ಇಲ್ಲಿ ನೆಲಕ್ಕೂ ಭಾಷೆಗೂ ಹಾಕಿಕೊಂಡಿರುವ ತಳಕು ಅತ್ಯಂತ ಜಟಿಲ. ಇಂಥಲ್ಲಿ ರಾಜಕೀಯಶಕ್ತಿ ಭಾಷೆಯನ್ನು ಖಡ್ಗವಾಗಿ ಬಳಸಿ ಸಾಂಸ್ಕೃತಿಕ ಅರಾಜಕತೆಗೆ ಕಾರಣವಾಗುತ್ತದೆ'.

'ಸಾಂಸ್ಕೃತಿಕ ಅರಾಜಕತೆ' ಮನುಕುಲದ ದುರಂತಕ್ಕೆ ಕಾರಣವಾಗುತ್ತದೆ ಎಂಬುದನ್ನು ಮರೆಯುವಂತಿಲ್ಲ. ಕನ್ನಡ ಏಕೀಕರಣದ್ದು ಸಾಂಸ್ಕೃತಿಕ ಚಳುವಳಿಯಲ್ಲ, ಭಾಷಿಕ ಚಳುವಳಿ. ಹೀಗಾಗಿ ಗಡಿ ಸಮಸ್ಯೆ ಕನ್ನಡಿಗರನ್ನು ಅಷ್ಟೊಂದು ಬಾಧಿಸಲಿಲ್ಲ. ಅವರ ಬದುಕಿನ ಬೇರು ಹಿಡಿದು ಅಲ್ಲಾಡಿಸುವುದಿಲ್ಲ. ಕನ್ನಡಿಗರಲ್ಲಿ ಒಂದು ಬಗೆಯ ಉದಾಸೀನತೆ ಬೆಳೆದು ಬರಲು ಇದೂ ಒಂದು ಕಾರಣವಿರಬೇಕು ಎಂದೆನಿಸುತ್ತದೆ. 'ಒಂದು ಭಾಷೆ ತನ್ನ ಸಾಂಸ್ಕೃತಿಕ ಪರಿಧಿಯನ್ನು ಆರ್ಥಿಕ ತಕ್ಕಡಿಯಲ್ಲಿ ತೂಗುವ ಅಧಿಕಾರ ಪಡೆದಾಗ, ಈ ಭಾಷೆ ಆಡುವ ಜನಾಂಗ ದೀರ್ಘಕಾಲೀನ ದುರಂತವೊಂದರಲ್ಲಿ ಒಪ್ಪಂದ ಮಾಡಿಕೊಳ್ಳುತ್ತದೆ' ಎನ್ನುವ ಕುಂದರನಾಡ ಪಾಟೀಲರ ಮಾತು ('ಉಲ್ಲಂಘನೆ' ಕಾದಂಬರಿಯಲ್ಲಿ) ನನ್ನಂತೆ ಇಲ್ಲಿಯೂ ಹಲವು ಪ್ರಜ್ಞಾವಂತರನ್ನು ಯೋಚಿಸುವಂತೆ ಮಾಡುತ್ತದೆ.

ಭಾಷೆ, ಸಂಸ್ಕೃತಿಯ ಬಗೆಗೆ ಮರಾಠಿಗರಿಗಿರುವ ತೀವ್ರ ನಿಷ್ಠೆ, ಕಾಳಜಿ, ಕನ್ನಡಿಗರಿಗಿರುವ ಅಪಾರ ಉದಾಸೀನತೆ, ಎರಡೂ ಘಾತುಕ ಪ್ರವೃತ್ತಿಗಳೇ. ಆಂಗ್ಲ ಹಾಗೂ ಸ್ಪೇನಿಷ ಭಾಷೆಯ ಆಕ್ರಮಣಕಾರಿ ಸ್ವಭಾವದಿಂದ ಲ್ಯಾಟಿನ್ ಅಮೆರಿಕೆಯ ಬುಡಕಟ್ಟು, ಸಂಸ್ಕೃತಿ ಹಾಗೂ ಭಾಷೆಯು ಸಂಪೂರ್ಣ ನಷ್ಟಗೊಂಡಂತೆ ಮರಾಠಿಯ ಹಠಮಾರಿ, ಉಗ್ರ ಸ್ವಭಾವದಿಂದಾಗಿ ಗಡಿಪ್ರದೇಶದ ಕನ್ನಡ ಹಾಳಾಗುತ್ತದೆ ಎಂಬ ಆತಂಕ ಏಕೀಕರಣದ ನಂತರದ ಕಾಲದಲ್ಲಿ ಮೂಡಿದ್ದು ಸತ್ಯ. ಭಾಷಾಶಾಸ್ತ್ರಜ್ಞರ ಪ್ರಕಾರ ಭಾಷೆಗೆ ಬಾಹ್ಯ ಹಾಗೂ ಆಂತರಿಕ ಎಂಬೆರಡು ಅಂಶಗಳಿವೆ. ಆಕ್ರಮಣ ಮಾಡುವ ಜನಾಂಗವೂ ಇನ್ನೊಂದು ಭಾಷೆಯ ವ್ಯಾಕರಣ ವ್ಯವಸ್ಥೆಯನ್ನಷ್ಟೇ ಅಲ್ಲ ಸಾಂಸ್ಕೃತಿಕ ಸ್ವರೂಪವನ್ನೇ ಬದಲಾಯಿಸುವ ತಾಕತ್ತು

ಹೊಂದಿರುತ್ತದೆ. ಬೆಳಗಾವಿಯ ಗಡಿ ಪ್ರದೇಶದಲ್ಲಿ ನಾವಿದನ್ನು ಇಂದು ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದೇವೆ. ಗಡಿ ಪ್ರದೇಶದ ಭಾಷೆಯನ್ನು ಭಾಷಾಶಾಸ್ತ್ರದ ಹಾಗೂ ಸಂಸ್ಕೃತಿಯನ್ನು ಮಾನವವಂಶ ಶಾಸ್ತ್ರದ ದೃಷ್ಟಿಯಿಂದ ಅಧ್ಯಯನ ಮಾಡಿದರೆ, ಹಲವಾರು ಆಂತರಿಕ ಬದಲಾವಣೆಯನ್ನು ಗಮನಿಸಬಹುದೇನೋ. ನಾನಿದನ್ನು 'ಕಿಚಡಿ' ಭಾಷೆಯೆಂದು ಹೆಸರಿಸಲು ಇಷ್ಟಪಡುತ್ತೇನೆ. ಕನ್ನಡದ ಖಾಸಾತನ, ಖಾಸಗಿತನ ಮರಾಠಿ ಭಾಷೆಯ ಆಕ್ರಮಣದಿಂದ ಕ್ಷೀಣಗೊಳ್ಳುತ್ತಿರುವ ಆತಂಕ ನನಗಿದೆ. ಮರಾಠಿಯು ದ್ರಾವಿಡ ಹಾಗೂ ಆರ್ಯ ಭಾಷೆಯಿಂದ ಸಂಕರಗೊಂಡಿದೆಯೆಂದು ತಜ್ಞರು ಭಾವಿಸುತ್ತಾರೆ. ಕನ್ನಡ-ಮರಾಠಿಗೆ ದ್ರಾವಿಡ ಸಂಬಂಧವಿದೆಯೆಂದು ಒಪ್ಪಿಕೊಂಡಂತಾಯಿತು. ಅರೆ ದ್ರಾವಿಡ ಭಾಷಿಕ ಸ್ವರೂಪ ಹೊಂದಿದ ಮರಾಠಿ ಇಡೀ ದ್ರಾವಿಡ ಭಾಷಿಕ ಕನ್ನಡದ ಮೇಲೆ ಸವಾರಿ ಮಾಡುತ್ತಿದೆ. ಪರಿಣಾಮ, ಗಡಿ ಪ್ರದೇಶದ ಕನ್ನಡದ ಭಾಷಾರಚನೆ, ವ್ಯಾಕರಣ, ಧ್ವನಿ ಇತ್ಯಾದಿ ಮೂಲ ಕನ್ನಡಕ್ಕಿಂತ ಭಿನ್ನವಾಗಿದೆ. ಇಲ್ಲಿ ಅತ್ಯಂತ ಗೋಜಲುಮಯ ಭಾಷೆ ನಿರ್ಮಾಣಗೊಳ್ಳುತ್ತಿದೆ. ಇಂಥ ಸಂಕರಿತ ಭಾಷೆಯ ಅಧ್ಯಯನ ಹಾಗೂ ಅದರಿಂದ ಮತ್ತೊಂದು ಸಂಸ್ಕೃತಿಯ ಮೇಲಾಗುವ ಭಯಾನಕ ಪರಿಣಾಮವನ್ನು ಅರ್ಥಮಾಡಿಕೊಳ್ಳುವದು ಒಂದು ಆಹ್ವಾನವೇ ಆಗಿದೆ. ಇಂಥ ಅಧ್ಯಯನ ಕೈಕೊಂಡರೆ ಮಾನವ ಸ್ವಭಾವದ ಹಲವು ಸ್ವಾರಸ್ಯಕರ ಸಂಗತಿಗಳು ಹೊರ ಬರಬಹುದೆಂದು ಅನಿಸುತ್ತದೆ. ಏಕೀಕರಣದ ಮೊದಲಿನ ಕಾಲದಿಂದಲೂ ಇಲ್ಲಿಯ ಮೌಖಿಕ ಪರಂಪರೆ ನಷ್ಟಗೊಂಡಿರುವಂತಿದೆ. ಚೋದ್ಯದ ಸಂಗತಿಯೆಂದರೆ ಕನ್ನಡ ಆಳರಸರು ಗೋದಾವರಿ-ನರ್ಮದಾ(?)ವರೆಗೆ ಆಳಿದರು ಎಂಬ ಚಾರಿತ್ರಿಕ ಸತ್ಯಾಂಶ ಒಪ್ಪಿಕೊಂಡರೂ, ಭಾಷಿಕವಾಗಿ ಸಾಂಸ್ಕೃತಿಕವಾಗಿ ಒಪ್ಪಿಕೊಳ್ಳುವದು ಸಾಧ್ಯವಾಗುತ್ತಿಲ್ಲ. ಆ ಆಳರಸರು ಕನ್ನಡ ಭಾಷೆಯನ್ನೇಕೆ ಈ ಪ್ರದೇಶದಲ್ಲಿ ಬೆಳೆಸಲಿಲ್ಲ ಅಥವಾ ಬೆಳೆಸಿದ್ದು ಪೇಶ್ವೆ ಕಾಲದಲ್ಲಿ ನಷ್ಟಗೊಂಡಿತೇ? ಇದಕ್ಕೆ ಪ್ರಾಜ್ಞರೇ ಉತ್ತರಿಸಬೇಕು. ಮರಾಠಿಯ ಜ್ಞಾನೇಶ್ವರ, ತುಕಾರಾಮ ನಂತಹ ಕವಿಗಳ ಪ್ರಭಾವದಿಂದ; ವಾರಕರಿ ಸಂಪ್ರದಾಯ, ವಿಠ್ಠಲ ಹಾಗೂ ಶಿವಾಜಿ ಮತ್ತು ರಾಮದಾಸರಂತಹ ಮುತ್ಸದ್ಧಿಗಳ ಸಾಂಸ್ಕೃತಿಕ ಆಕ್ರಮಣಕ್ಕೆ ಕನ್ನಡ ಭಾಷೆ, ಸಂಸ್ಕೃತಿ ತತ್ತರಿಸಿ, ತನ್ನನ್ನು ಮರಾಠಿಯೂ 'ಉಗ್ರಗರ್ಭ'ದಲ್ಲಿ ಸೇರಿಸಿಕೊಂಡಿರಬೇಕೆಂದು ನನಗನಿಸುತ್ತದೆ. ಇಲ್ಲಿ ವಚನಕಾರರ ಪ್ರಭಾವ ನಗಣ್ಯ, ಆದರೆ ವಿಠ್ಠಲ ಸಂಪ್ರದಾಯ ತೀರಾ ಪ್ರಬಲ. ಹೀಗಾಗಿ ಕನ್ನಡ ಸತ್ತು, ಮರಾಠಿ ಕೊಬ್ಬಿತು.

ಸ್ವಲ್ಪ ಗಡಿ ಪ್ರದೇಶದ ಕೌಟುಂಬಿಕ ವ್ಯವಸ್ಥೆಯ ಬಗೆಗೆ ಗಮನಿಸಿ. ಮರಾಠಿ ಮಹಿಳೆ ಕನ್ನಡದ ಮಹಿಳೆಗಿಂತ ಹೆಚ್ಚು ವ್ಯಗ್ರ ಹಾಗೂ ಉಗ್ರ. ಆಕೆ ಮದುವೆಯಾಗಿ ಕನ್ನಡ ಕುಟುಂಬ ಸೇರಿದರೆ ಇದೇ ಕುಟುಂಬದ ಭಾಷೆ, ತನ್ಮೂಲಕ ಸಂಸ್ಕೃತಿಯನ್ನೇ ಬದಲಾಯಿಸಬಲ್ಲಷ್ಟು ಸಶಕ್ತಳಾಗಿದ್ದಾಳೆ. ಅವಳು ತಾನು ಮರಾಠಿ ಮಾತಾಡುವದಷ್ಟೇ ಅಲ್ಲ, ತನ್ನ ಪರಿಸರದ ಜನರಿಗೂ ತನ್ನ ಭಾಷೆ ಕಲಿಸಿ ಛಾಪು ಬೀರುತ್ತಾಳೆ. ಮರಾಠಿ ಪತ್ರಿಕೆ ತರಿಸುತ್ತಾಳೆ, ವಿಠ್ಠಲ ಸಂಪ್ರದಾಯ ಆಚರಿಸುತ್ತಾಳೆ, 'ಜ್ಞಾನೇಶ್ವರಿ' ಪಠಣ ಮಾಡುತ್ತಾಳೆ. ಟಿಳಕ, ಸಾವರಕರ್,

ಶಿವಾಜಿಯ ಇತಿಹಾಸ ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಮರಾಠಿಗರಲ್ಲಿ 'ಶಹನೌಕುಳಿ' (ಶಿವಾಜಿ ವಂಶಸ್ಥರು) ಇವರಂತೂ ಯಾರಿಗೂ ಮಣಿಯುವುದಿಲ್ಲ. ಪಾಪ, ಕನ್ನಡದ ಮಹಿಳೆ 'ಅವರ' ಉಗ್ರ ಸಾಂಸ್ಕೃತಿಕ ಆಕ್ರಮಣಕ್ಕೆ ಸಿಕ್ಕು ತತ್ತರಿಸಿ ಹೋಗುತ್ತಾರೆ.

ಇಂಥ ಕೀಳರಿಮೆಯಲ್ಲಿ ಕನ್ನಡದ ಕುಟುಂಬ ಉಸಿರಾಡುತ್ತದೆ. ಒಂದೆಡೆ 'ಗೋವೆ' ಕೊಂಕಣಿಗರ ಒತ್ತಡ, ಮತ್ತೊಂದೆಡೆ ಪುಣೆಯಿಂದ ಬಂದ ವಲಸೆಗಾರ 'ಚಿತ್ಪಾವನ' ಬ್ರಾಹ್ಮಣರ ದರ್ಪ; ಕಾರವಾರದಿಂದ ಬೆಳಗಾವಿಗೆ ಆಗಮಿಸಿದ 'ಸೋನಾರ'ರ (ಅಕ್ಕಸಾಲಿಗರು) ಆರ್ಥಿಕ ವರ್ಚಸ್ಸು, ಎಂಇಎಸ್ ಅವರ ರಾಜಕೀಯ ದಬ್ಬಾಳಿಕೆ - ಈ ಎಲ್ಲ ಸಂಕಟಗಳ ನಡುವೆ 'ಕನ್ನಡ', 'ಕನ್ನಡಿಗ' ಇನ್ನು ಅಲ್ಪಮಟ್ಟಿಗಾದರೂ ಉಸಿರಾಡುತ್ತಿರುವದೇ ಅಚ್ಚರಿಯ ಸಂಗತಿ. ಶಾಲೆ-ಕಾಲೇಜಿನಲ್ಲಿ ಇಂಗ್ಲಿಷು, ವ್ಯವಹಾರದಲ್ಲಿ ಮರಾಠಿ, ಅಡುಗೆ ಮನೆಯಲ್ಲಷ್ಟೆ ಕನ್ನಡ. ಅಲ್ಲಲ್ಲ 'ಮರಾಠಿಗನ್ನಡ'. ಇದು ಇಲ್ಲಿಯ ತ್ರಿಶಂಕುಸ್ಥಿತಿ.

೧೯ನೇ ಶತಮಾನದಲ್ಲಿ ಸ್ಕಾಟಿಶ್, ಇಂಗ್ಲಿಶ್ ಹಾಗೂ ಅಮೆರಿಕನ್ ಮಿಶನರಿಗಳು ಮರಾಠಿಯಲ್ಲೇ ಶಿಕ್ಷಣ ನಡೆಯಬೇಕೆಂದು ಆಗ್ರಹ ಹಿಡಿದಿದ್ದರಂತೆ. ಅವರು ಹಠ ಹಿಡಿದು ಮರಾಠಿ ಭಾಷಾಂತರ ಸಿದ್ಧಪಡಿಸಿದರಂತೆ. ಪರಿಣಾಮ ಮರಾಠಿ ಸಮೃದ್ಧಗೊಂಡಿತು. ಕನ್ನಡಕ್ಕೆ ಇಂಥ ಹಿನ್ನೆಲೆ ಇದ್ದಂತಿಲ್ಲ. ಇಂಥ ವಿರೋಧದ ಪರಿಸರದಲ್ಲಿ ಕನ್ನಡದ ದೇಶಿಯತೆ, ಸೌಂದರ್ಯ, ಮೌಲ್ಯ, ಕಲೆ, ಭಾಷೆ, ಸಂಪ್ರದಾಯ ಉಳಿಯುವುದು ಸಾಧ್ಯವೇ? ಮರಾಠಿ ಸಂಪರ್ಕದಿಂದ ಕನ್ನಡ ಎಲ್ಲವನ್ನೂ ಕಳಕೊಂಡಿತು.

ಗಡಿ ಸಮಸ್ಯೆ ಎಂದಾಗ ಎಲ್ಲರ ಕಣ್ಣೆದುರಿಗೆ ಬರುವದು ಬರೇ ಬೆಳಗಾವಿ ಮಾತ್ರ. ನಿಜವಾದ ಗಡಿ ಸಮಸ್ಯೆ ದುರಂತ ಚಿತ್ರ ನೋಡಬೇಕಾದರೆ ನೀವು ಚಿಕ್ಕೋಡಿ ತಾಲೂಕಿನ ಉತ್ತರದ ಗಡಿಯುದ್ದಕ್ಕೂ ಸಂಚರಿಸಬೇಕಾಗುತ್ತದೆ. ಆಗ ಅಲ್ಲಿನ ಜನರ ದಾರುಣತೆ, ಹೃದಯ ವಿದ್ರಾವಕತೆ ಮುಖಕ್ಕೆ ರಾಚುತ್ತದೆ. ಬೆಳಗಾವಿಯಲ್ಲಿರುವದು ಬರೇ ರಾಜಕೀಯ ಡೊಂಬರಾಟ. ಅವರನ್ನು ಸಾಮಾಜಿಕ ಅಥವಾ ಆರ್ಥಿಕ ಸಮಸ್ಯೆ ಕಾಡಿದ್ದು ಈವರೆಗೆ ಕಂಡುಬಂದಿಲ್ಲ. ಬೆಳಗಾವಿಯ ಪಶ್ಚಿಮ ಭಾಗವಂತೂ ತೀರಾ ಸ್ತಬ್ದವಾಗಿದೆ. ಅಲ್ಲಿಂದ ಯಾವ ಸದ್ದೂ ಕೇಳಿ ಬರುತ್ತಿಲ್ಲ.

ಭೌಗೋಳಿಕವಾಗಿ ಗಡಿ ಪ್ರದೇಶದ ಸೀಮಾರೇಖೆ ಕಲಸುಮೇಲೋಗರವಾದರೂ, ಕೃಷ್ಣಾ ಧೂದಗಂಗಾ ನದಿಯ ಇಕ್ಕೆಲಗಳ ಪ್ರದೇಶವನ್ನು ಸ್ಥೂಲವಾಗಿ ಗಡಿ ಪ್ರದೇಶವೆಂದು ಒಪ್ಪಿಕೊಳ್ಳಬೇಕಾಗಿದೆ. ಇಲ್ಲಿ ಕಬ್ಬೇ ಪ್ರಮುಖ ಆರ್ಥಿಕ ಬೆಳೆ. ಮಹಾರಾಷ್ಟ್ರದ ಯೋಜನಾ ಬದ್ಧ ಕ್ರಮದಿಂದಾಗಿ ನದಿಯಲ್ಲಿ ವರ್ಷದುದ್ದಕ್ಕೂ ನೀರು ಹರಿಯುತ್ತಿರುತ್ತದೆ. ಆದರೆ ದಡದಾಚೆಯ ಜನ ನಿಯಮಿತವಾದ ವಿದ್ಯುತ್ ಪೂರೈಕೆಯಿಂದ ಹೊಲಗಳಿಗೆ ನೀರು ಉಣಿಸುತ್ತಾರೆ. ಹಚ್ಚ ಹಸಿರಾಗಿ ಬೆಳೆದು ನಿಂತ ಕಬ್ಬನ್ನು ಸಕಾಲಕ್ಕೆ ಕಟಾವು ಮಾಡಿಸಿ ಕಾರಖಾನೆಗಳಿಗೆ ರವಾನಿಸುತ್ತಾರೆ. ಆದರೆ ಕರ್ನಾಟಕದ ರೈತರು ನದಿಯಲ್ಲಿ ನೀರು ಹರಿಯುತ್ತಿದ್ದರೂ ವಿದ್ಯುತ್ ಕೊರತೆಯಿಂದಾಗಿ ಹತಾಶನಾಗಿ ಕಣ್ಣೆದುರಿಗೆ ಬೆಳೆ ಒಣಗುತ್ತಿದ್ದರೂ

ಏನೂ ಮಾಡಲಾಗದೇ ಕೈ-ಕೈ ಹೊಸಕಿ ಕೊಳ್ಳುತ್ತಾರೆ. ಹೊಟ್ಟೆ ಬಡಿದು ಕೊಳ್ಳುತ್ತ ಕರ್ನಾಟಕ ಸರಕಾರಕ್ಕೆ ಹಿಡಿಶಾಪ ಹಾಕುತ್ತಾರೆ. ಕಾರಖಾನೆಯು ನಿಗದಿತ ವೇಳೆಗೆ ಕಬ್ಬು ಸಾಗಿಸದೇ ಒಣಗಿ ನಿಂತಾಗ, ಕೆರಳಿ ಬೆಂಕಿ ಹಚ್ಚಿ ಕಾರಖಾನೆಯ ಗಮನ ಸೆಳೆಯಲು ಪ್ರಯತ್ನಿಸುತ್ತಾರೆ. ವಿಫಲನಾದರೆ ಒಣಗಿ ಬೆಂಡಾದ ಕಬ್ಬನ್ನೇ ಉರುವಲ ಕಟ್ಟಿಗೆಯಾಗಿ ಬಳಸುತ್ತಾರೆ.

ಸಾಂಗಲಿ ಈ ಪ್ರದೇಶದ ಅತ್ಯಂತ ಸುಪ್ರಸಿದ್ಧ ಮಾರುಕಟ್ಟೆ. ಇಲ್ಲಿಯ ರೈತ ತಾನು ಬೆಳೆದ ದವಸ-ಧಾನ್ಯ ಕಾಳು-ಕಡಿ ಸಾಂಗ್ಲಿಗೆ ಸಾಗಿಸಿ, ಮಹಾರಾಷ್ಟ್ರದ ಖಜಾನೆ ತುಂಬುತ್ತಾನೆ. ಕರ್ನಾಟಕದ ರೈತರನ್ನು ದಲಾಲಿಗಳು, ವ್ಯಾಪಾರಿಗಳು ಚಾಣಾಕ್ಷ ಮಾತಿನಿಂದ ಮಾರುಕಟ್ಟೆಯ ಪರಿಭಾಷೆಯಿಂದ ಶೋಷಣೆ ಮಾಡುವ ದೃಶ್ಯ ತೀರಾ ಸಾಮಾನ್ಯ. ಮಾರುಕಟ್ಟೆಯ ತಂತ್ರದ, ಲೇವಾದೇವಿಯ ಕಲ್ಪನೆಯೂ ಇಲ್ಲದ ಗಡಿ ಪ್ರದೇಶದ ಈ ಜನ ಕಟುಕನಿಗೆ ತಲೆಯೊಪ್ಪಿಸಿ ಬಲಿಪಶುಗಳಾಗುತ್ತಾರೆ. ಇದಕ್ಕೆ ಮಹಾರಾಷ್ಟ್ರದ ಬೃಹತ್ ವ್ಯಾಪಾರಿ ವಹಿವಾಟು, ಅಲ್ಲಿಯ ದೂಧಗಂಗಾ ನದಿಯಾಚೆ ಸದಾಕಾಲ ಝಗಝಗಿಸುವ ವಿದ್ಯುತ್ತು, ಹತ್ತಾರು ಸಕ್ಕರೆ ಕಾರಖಾನೆಗಳ ಆರ್ಭಟ, ಸದಾ ಗಿಜಿಗಿಡುವ ಮಾರುಕಟ್ಟೆ, ಥಳಕು ನಾಗರಿಕತೆ, ಭಾರಿ ಪ್ರಮಾಣದ ಕೈಗಾರಿಕೆ-ಇವನ್ನೆಲ್ಲ ನದಿಯ ಈಚೆಗೆ ನಿಂತು ನೋಡುವ ಕನ್ನಡರೈತ ಮೋಹಗೊಳ್ಳದಿರುವದು ಸಾಧ್ಯವೇ?

ಮಹಾರಾಷ್ಟ್ರದ ಗಡಿ ಆರಂಭಗೊಂಡಲ್ಲಿಂದ ಅಭಿವೃದ್ಧಿ ಕಾರ್ಯ ಆರಂಭಗೊಂಡಿರುವದನ್ನು ಸ್ಪಷ್ಟವಾಗಿ ಗುರುತಿಸಬಹುದು. ನಿಯಮಿತ ಸಾರಿಗೆ ವ್ಯವಸ್ಥೆ, ಸೊಗಸಾದ ಟಾರು ರಸ್ತೆ, ಗಡಿಯಲ್ಲೇ ಎದ್ದು ನಿಂತ ಸ್ಪಿನ್ನಿಂಗ್ ಮಿಲ್, ಸಕ್ಕರೆ ಕಾರಖಾನೆ; ಎಲ್ಲ ರೀತಿಯ ರಿಯಾಯಿತಿ ಸೌಲಭ್ಯ ಒದಗಿಸುವ ಶೈಕ್ಷಣಿಕ ಕೇಂದ್ರ, ತಕ್ಷಣ ಸಿಗುವ ನೌಕರಿ, ತೃಪ್ತಿಕರ ವರಮಾನ ಈ ಎಲ್ಲ ಕ್ಷೇತ್ರಗಳಲ್ಲಿ ಮರಾಠಿ ಛಾಪು ಮೂಡಿಸುವ ಭಾಷಾಭಿಮಾನ ಜನ. ಇವರ ಜತೆ ಓಡಾಡುವ, ಉಸಿರಾಡುವ, ಬದುಕುವ ಯಾರಿಗೆ ಹೊಟ್ಟೆ ಉರಿಯಲಿಕ್ಕಿಲ್ಲ?

ಈ ಪ್ರದೇಶದಲ್ಲಿ ಎಲ್ಲೇ ಸಂಚರಿಸಿ ನಿಮ್ಮ ಕಣ್ಣಿಗೆ ಬೀಳುವದು ಮಹಾರಾಷ್ಟ್ರದ ಭಾರೀ ಉದ್ಯಮ, ಆರ್ಥಿಕ ಪ್ರಪಂಚ! ಕಿವಿಗೆ ಬೀಳುವ ಮಾತೂ ಸಹ ಮರಾಠಿ ಸಂಸ್ಕೃತಿಗೆ ಸಂಬಂಧಿಸಿದ್ದು. ರಾಜಕೀಯ ವಿದ್ಯಮಾನ-ಚರ್ಚೆಯೂ ಸಹ ಆ ವಲಯದ್ದೇ. ಹೀಗಾಗಿ ಕನ್ನಡಿಗರಿಲ್ಲಿ ಕೀಳರಿಮೆ ಬದುಕು. ಮಾರುಕಟ್ಟೆ, ಬಸ್ ನಿಲ್ದಾಣ, ರೈತ ಸಂಘ, ಕಾರಖಾನೆ ಎಲ್ಲೇ ಓಡಾಡಿ ಮಹಾರಾಷ್ಟ್ರದ ಸಾಧನೆಯೇ. ಪ್ರತಿಯೊಂದು ಹಂತದಲ್ಲಿ ಕನ್ನಡ ಸಂಸ್ಕೃತಿ, ಸರಕಾರದ ಅವಹೇಳನ. ಇದಕ್ಕೆಲ್ಲ ಮಾನಸಿಕವಾಗಿ ಹೊಂದಿಕೊಂಡ ಸ್ವತಃ ಕನ್ನಡಿಗರು, ತಮ್ಮ ನೆಲ-ಪ್ರದೇಶ-ಭಾಷೆ-ಸಂಸ್ಕೃತಿ-ಅರಾಜಕತೆಗಳನ್ನು, ಲಂಗು-ಲಗಾಮಿಲ್ಲದ ಸರಕಾರಿ ಧೋರಣೆಯನ್ನು ಟೀಕಿಸುತ್ತಾರೆ.

ಗಡಿಭಾಗದ ಎರಡು ವಿಶಿಷ್ಟ ಹಳ್ಳಿಗಳನ್ನು ಗಮನಿಸಿ. ಮಾಣಕಾಪುರ ಕರ್ನಾಟಕದಲ್ಲಿದೆ. ದತ್ತವಾಡ ಮಹಾರಾಷ್ಟ್ರದಲ್ಲಿದೆ. ಮಾಣಕಾಪುರದ ಜೀವನ ಪದ್ಧತಿ, ಆಚಾರ-ವಿಚಾರ ಸಂಪೂರ್ಣ ಮರಾಠಿ ಸಂಸ್ಕೃತಿಗೆ ಸಂಬಂಧಿಸಿದ್ದು, ದತ್ತವಾಡದ ಮನೆ-ಮಾತು, ವಾತಾವರಣ

ಕನ್ನಡದ್ದು. ದತ್ತವಾಡ ಎಲ್ಲ ರೀತಿಯಿಂದಲೂ ಸಂತೃಪ್ತಿಯಿಂದ ಬದುಕುತ್ತಿರುವ ಪ್ರದೇಶ. ಆದರೆ ಮಾಣಕಾಪುರ ಎಲ್ಲ ಪ್ರಾಥಮಿಕ ಸವಲತ್ತುಗಳಿಂದ ವಂಚಿತ. ಪರಿಣಾಮ ಕನ್ನಡದ ಮೇಲೆ ಆಕ್ರೋಶ. ಇಂಥ ಶಾಪಗ್ರಸ್ತ ಕೊಂಪೆಗಳು ಇಲ್ಲಿ ಸಾಕಷ್ಟಿವೆ.

ಕೃಷ್ಣಾ-ಧೂದಗಂಗಾ ಪರಿಸರದಲ್ಲಿ ಅಲ್ಲಲ್ಲಿ ಕ್ಯಾನಲ್ ನಿರ್ಮಾಣಗೊಂಡಿದ್ದರೂ, ವ್ಯವಸ್ಥಿತವಾದ ನೀರು ಪೂರೈಕೆಯಿಲ್ಲ. ಎರೆಭೂಮಿಯ ನೆಲ ಫಲವತ್ತಾಗಿದ್ದರೂ ಬರಡು-ಬಂಜರಾಗಿ ಬಾಯ್ದೆರೆದು ಬಾಯಿ-ಬಾಯಿ ಬಿಡುತ್ತಿರುವ ಶೋಚನೀಯ ಸ್ಥಿತಿ. ಇಲ್ಲಿ ಪ್ರವಾಸ ಮಾಡುವರ ಎಲುಬಿನ ಕೀಲುಗಳು ಅಗಾಧ ಶಕ್ತಿಯನ್ನು ಸ್ಪ್ರಿಂಗಿನಂಥ ಗುಣವನ್ನು ಹೊಂದಿರ ಬೇಕಾಗುತ್ತದೆ. ಇಂಥಲ್ಲಿ ಹಾಸ್ಯಪ್ರವೃತ್ತಿ ಬೆಳೆಸಿಕೊಂಡರೆ ಮಾತ್ರ ಬದುಕುವದು ಸಾಧ್ಯ!

ಇದು ಸ್ಯಾಂಪಲ್ಲು ಮಾತ್ರ! ನಿಖರವಾದ ಅಂಕಿ-ಅಂಶ ನೀಡಿದರೆ ದುರ್ಬಲ (ಹೇಡಿ!) ಹೃದಯದ ಕನ್ನಡಿಗರಿಗೆ ಹಾರ್ಟ ಅಟ್ಯಾಕ್ ಆದೀತು. ನಾನಿಲ್ಲಿ ಮಹಾರಾಷ್ಟ್ರವನ್ನು ವೈಭವೀ ಕರಿಸಿಲ್ಲ. ಮೇಲು ನೋಟದ ಚಿತ್ರಣವನ್ನಷ್ಟೇ ನೀಡಿದ್ದೇನೆ. ತೌಲನಿಕವಾಗಿ ಅಭ್ಯಾಸ ಮಾಡಿದರೆ ಇಲ್ಲಿಯ ಸಾಧನೆ ಕಣ್ಣು ಕೋರೈಸಬಲ್ಲಷ್ಟು ಪ್ರಖರವಾಗಿದೆ. ಈ ದಿಶೆಯಲ್ಲಿ ನಮ್ಮ ಸರಕಾರ, ಜನತೆ ಯೋಚಿಸುವಂತಾದರೆ ಸಾಕು. ಗಡಿ, ಕನ್ನಡಿಗರ ಗೋಳನ್ನು ಯಾರ ಮುಂದೆ, ಹೇಗೆ ತೋಡಿಕೊಳ್ಳೋಣ? ಗಡಿ ಪ್ರದೇಶದ ಬಡ ಕನ್ನಡಿಗರ ಅಳಲನ್ನು ಕಿವಿಗೊಟ್ಟು ಆಲಿಸುವ ಒಬ್ಬ ಪ್ರಜ್ಞಾವಂತ ಪ್ರಜೆಯಾದರೂ ಸಿಕ್ಕಾನೇ!

ಕಿವಿಮಾತು: ಮೊದಲು ಹೊಟ್ಟೆ ಪ್ರಶ್ನೆ, ಅನಂತರ ಭಾಷೆ-ಸಂಸ್ಕೃತಿಯದ್ದು.



## ಗಲಭೆಗಳಲ್ಲಿ ನಾಶವಾಗುವ ಮಾನವೀಯತೆ

● ಮಹದೇವ ಶಂಕನಪುರ

ಚಾಮರಾಜನಗರ ಜಿಲ್ಲೆ ಕೊಳ್ಳೇಗಾಲ ತಾಲ್ಲೂಕು ಕರ್ನಾಟಕ-ತಮಿಳುನಾಡಿನ ಗಡಿಭಾಗದ ಊರುಗಳು. ಇವು ಹೆಚ್ಚುಕಡಿಮೆ ಕೇರಳದ ಗಡಿಗೂ ಹತ್ತಿರವಾಗುತ್ತವೆ. ಕೊಳ್ಳೇಗಾಲ ತಾಲ್ಲೂಕು ಭಾಷೆ, ಸಂಸ್ಕೃತಿ, ಧರ್ಮ, ಜನ ಸಮುದಾಯಗಳ ದೃಷ್ಟಿಯಲ್ಲಿ ಒಂದು ಬಗೆಯ ಸಂಕರ ರೂಪಿಯಾದದ್ದು. ಪಟ್ಟಣ ಮತ್ತು ತಾಲ್ಲೂಕಿನಾದ್ಯಂತ ಕನ್ನಡಿಗರು, ತಮಿಳರು, ತೆಲುಗರು, ಉರ್ದುಗಳು, ಲಂಬಾಣಿಗಳು, ಮಲೆಯಾಳಿಗಳು, ಟಿಬೇಟಿಯನ್ನರು ಹಿಂದೂ, ಮುಸ್ಲಿಂ, ಕ್ರೈಸ್ತ, ಬೌದ್ಧ ಮೊದಲಾದ ಮಿಶ್ರಭಾಷೆ, ಧರ್ಮ, ಸಂಸ್ಕೃತಿಯ ಜನರಿದ್ದಾರೆ. ಚಾರಿತ್ರಿಕವಾಗಿ ಕೂಡ ಕೊಳ್ಳೇಗಾಲ ತಾಲ್ಲೂಕು ಕನ್ನಡ, ತಮಿಳು, ತೆಲುಗು, ಉರ್ದು, ಮಲೆಯಾಳ ಭಾಷೆಮೂಲದ ರಾಜಮನೆತನಗಳಾದ ಗಂಗರು, ಚೋಳರು, ಚಾಳುಕ್ಯರು,

ಹೊಯ್ಸಳರು, ವಿಜಯನಗರ ಅರಸರು, ಸುಲ್ತಾನರು, ಕೊಂಗಾಳ್ವ ಚಂಗಾಳ್ವರುಗಳಿಂದ ಆಳಲ್ಪಟ್ಟ ಪ್ರದೇಶವಾಗಿದೆ. ೧೯೫೬ರಲ್ಲಿ ಭಾಷಾವಾರು ರಾಜ್ಯಗಳ ಪುನರ್‌ವಿಂಗಡನೆ ಆಗುವ ವರೆವಿಗೂ ಕೊಳ್ಳೇಗಾಲ ತಾಲ್ಲೂಕು ಮದ್ರಾಸ್ ರಾಜ್ಯದ ಕೊಯಮತ್ತೂರು ಜಿಲ್ಲೆಗೆ ಸೇರಿತ್ತು. ಮಂಟೇಸ್ವಾಮಿ ಮತ್ತು ಸಿದ್ಧಪ್ಪರ ನೆಲೆ ಎಂದು ಗುರುತಿಸಲ್ಪಡುವ ಈ ಪ್ರದೇಶವನ್ನು ಕವಿ ವೀರಸಂಗಯ್ಯನ 'ನಂದಿ ಆಗಮ ಲೀಲೆ' 'ದ್ರವಿಡ ದೇಶ'ವೆಂದೇ ಗುರುತಿಸುತ್ತದೆ. ಈ ತಾಲ್ಲೂಕಿನ ಪೂರ್ವದ ಗಡಿಭಾಗದಲ್ಲಿ ಇಂದಿಗೂ ತಮಿಳುಸಮುದಾಯಗಳು ಹೆಚ್ಚಾಗಿ ನೆಲೆಸಿದ್ದು ಅಲ್ಲಿನ ಜನ, ಭಾಷೆ, ಸಂಸ್ಕೃತಿ ನೋಡಿದರೆ ತಾಲ್ಲೂಕಿನೊಳಗೊಂದು ತಮಿಳು ನಾಡಿದೆ ಎನಿಸುತ್ತದೆ. ಇಂತಹ ಚಾರಿತ್ರಿಕ ಹಿನ್ನೆಲೆ ಹಾಗೂ ಕಾಲಾಂತರದ ಸಮುದಾಯಗಳ ನೆಲೆಸುವಿಕೆಯಿಂದಾಗಿ ಕೊಳ್ಳೇಗಾಲ ಪಟ್ಟಣ ಮತ್ತು ತಾಲ್ಲೂಕು ಬಹುಭಾಷಾ, ಬಹುಸಂಸ್ಕೃತಿ, ಬಹುಜನ ಸಮುದಾಯಗಳ ಸಂಕರ ರೂಪಿಯಾಗಿ ಕಾಣುತ್ತದೆ.

ಕೊಳ್ಳೇಗಾಲ ಪಟ್ಟಣದಲ್ಲಿ ಕನ್ನಡಿಗರ ಜೊತೆಗೆ ತಮಿಳು, ತೆಲುಗು, ಉರ್ದು, ಮಲೆಯಾಳ ಭಾಷೆ ಮಾತನಾಡುವ ಜನ ಸಮುದಾಯಗಳಿವೆ. ಬಹುತೇಕ ಪಟ್ಟಣದ ವ್ಯಾಪಾರ, ವಾಣಿಜ್ಯ, ಕೈಗಾರಿಕೆಗಳೆಲ್ಲ ಈ ಕನ್ನಡೇತರರ ಕೈಯ್ಯಲ್ಲೇ ಇದೆ. ಉಳಿದಂತೆ ತಾಲ್ಲೂಕಿನಾದ್ಯಂತ ಹೋಬಳಿ, ಗ್ರಾಮಮಟ್ಟದಲ್ಲಿ ಕನ್ನಡಿಗರ ಜೊತೆಗೆ ತಮಿಳು, ತೆಲುಗು, ಉರ್ದು ಭಾಷಾ ಜನ ಸಮುದಾಯಗಳು ಅಲ್ಲಲ್ಲಿ ನೆಲೆಸಿದ್ದಾರೆ. ತಾಲ್ಲೂಕಿನ ಮೂಡಲಸೀಮೆ ಕಡೆ ಹನೂರಿನಿಂದಾಚೆ ಮಾದೇಶ್ವರ ಬೆಟ್ಟದ ವರೆಗೆ ಈ ಕಡೆ ಸೇಲಂ-ಕೊಯಮತ್ತೂರು ಗಡಿವರೆಗೆ ತಮಿಳು ಸಮುದಾಯಗಳು ಹೆಚ್ಚು ನೆಲಸಿದ್ದಾರೆ. ಇದನ್ನು ನೋಡಿದರೆ ಇದು ಕರ್ನಾಟಕವೇ ಅಲ್ಲವೆನಿಸುತ್ತದೆ. ಈ ಭಾಗದ ಬಹುತೇಕ ತಮಿಳರು ಕೃಷಿ ನಿರತರಾದವರು. ಕನ್ನಡೇತರರು ಹಾಗೂ ತಮಿಳು, ತೆಲುಗು ದಲಿತೇತರ ಅನ್ಯ ಭಾಷಾ ಸಮುದಾಯಗಳು ಸಾಮಾಜಿಕ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ತಾವು ಶ್ರೇಷ್ಠರು, ಮೇಲ್ಜಾತಿಯವರು ಎಂದುಕೊಳ್ಳುತ್ತಾರೆ. ಕನ್ನಡೇತರ, ದಲಿತೇತರ ಅನ್ಯ ಭಾಷಿಕರು ಆರ್ಥಿಕವಾಗಿ, ರಾಜಕೀಯವಾಗಿ ಪ್ರಬಲರಾಗಿದ್ದು ನಿರ್ಣಾಯಕ ಪಾತ್ರವನ್ನೇ ವಹಿಸುತ್ತಾರೆಂದು ಹೇಳಬಹುದು. ಇವರ ಇಂತಹ ಪ್ರಾಬಲ್ಯ ಮತ್ತು ಪಾತ್ರ, ಸ್ಥಾನಮಾನಗಳೇ ಅನೇಕ ಬಾರಿ ಕನ್ನಡ ಮತ್ತು ಅನ್ಯ ಭಾಷಿಕರ ನಡುವಿನ ಘರ್ಷಣೆಗೆ ಕಾರಣಗಳೂ ಆಗುತ್ತವೆ.

ಕೊಳ್ಳೇಗಾಲ ಪಟ್ಟಣದ ಒಂದು ಕಿ.ಮಿ. ದೂರದಲ್ಲಿರುವ ನಮ್ಮೂರು ಶಂಕನಪುರದಲ್ಲಿ ನಾನು ಹುಡುಗನಾಗಿದ್ದಾಗಿನಿಂದಲೂ ಬೀದಿ, ಬಚ್ಚಲುಗಳನ್ನು ಕ್ಲೀನ್ ಮಾಡಲು ತಮಿಳು, ತೆಲುಗು ಭಾಷಿಕರಾದ ಸ್ವೀಪರ್ಸ್ ಬರುವುದಿದೆ. ಅವರನ್ನು ನಮ್ಮ ಜನ "ಕೊಂಗ್ರು" ಎಂದು ಕರೆಯುತ್ತಾರೆ. ಇಂದಿಗೂ ತಮಿಳರನ್ನು ಕೊಳ್ಳೇಗಾಲದ ಕಡೆ ಹಾಗೇ ಕರೆಯುವುದಿದೆ. ಸದಾ ಕುಡಿದವರಂತಿದ್ದು, ಎಲೆ ಅಡಿಕೆ ಅಗಿಯುತ್ತಾ, 'ಕೊಚಪಿಚನೆ' ಮಾತಾಡುತ್ತಾ ಬೀದಿ, ಬಚ್ಚಲು ಬಳಿಯುತ್ತಿದ್ದ ಆ ಜನರನ್ನು ದಲಿತರಾದ ನಾವು ಕೂಡ 'ಕೀಳುಜನ'ರೆಂದು ಅಂದುಕೊಳ್ಳುತ್ತಿದ್ದೆವು. ಅವರು ಯಾರಿಂದಲೂ ಮುಟ್ಟಲು ಯೋಗ್ಯರಲ್ಲದವರೆಂದು, ಈ

ಕೆಲಸಕ್ಕೆಂದೇ ಆ ದೇವರೇ ಅವರನ್ನು ಸೃಷ್ಟಿ ಮಾಡಿದ್ದಾನೆಂದು ಇಡೀ ಸಮಾಜವೇ ತಿಳಿದು ಕೊಂಡಿತ್ತು. ಎಲ್ಲಿಂದಲೋ ಬಂದು ನಮ್ಮ ನಗರಪಟ್ಟಣಗಳಲ್ಲಿ ರಸ್ತೆ, ಚಾನಲ್, ಅಣೆಕಟ್ಟೆ, ದೊಡ್ಡ ದೊಡ್ಡ ಕಟ್ಟಡ, ಟೆಲಿಫೋನ್ ಲೈನ್, ವಾಟರ್ ಲೈನ್‌ಗಳನ್ನು ನಿರ್ಮಿಸುವ ಕಠಿಣ ಪರಿಶ್ರಮದ ಕೆಲಸ ಮಾಡುವ ತಮಿಳು, ತೆಲುಗು ಭಾಷೆ ಮಾತನಾಡುವ ಜನರೆಲ್ಲ ನಮ್ಮ ಜನರ ಪ್ರಕಾರ 'ಕೊಂಗರು'. ತಾಲ್ಲೂಕಿನ ಪೂರ್ವಗಡಿಯಾದ ಮೂಡಲಸೀಮೆಯಲ್ಲಿ ಮೇಲುವರ್ಗ ವೆನಿಸಿದ ಜಮೀನುದಾರರ ಬಳಿ ತಮಿಳು ತೆಲುಗು ಭಾಷೆಯ ಜನ ತಮ್ಮ ಬದುಕನ್ನೇ ಮಾರಿಕೊಂಡು ಜೀತಗಾರರಾಗಿ, ಊಳಿಗದ ಆಳುಗಳಾಗಿ ಕೀಳೆನಿಸಿಕೊಂಡು ಬದುಕುವ ಅವರೂ ಸಹ 'ಕೊಂಗರೇ'. ಕೊಳ್ಳೇಗಾಲ ಸುತ್ತಮುತ್ತ ಗಡಿಭಾಗಗಳಲ್ಲಿ ಜಮೀನು ಹಿಡಿದು, ತೋಟದ ಮನೆ ಮಾಡಿಕೊಂಡು ಕೃಷಿ ಮತ್ತು ವ್ಯಾಪಾರದಲ್ಲಿ ಪ್ರಾಬಲ್ಯ ಸಾಧಿಸಿರುವ ತಮಿಳು ತೆಲುಗು ಭಾಷಿಕರೂ ಇದ್ದಾರೆ. ಕನ್ನಡಿಗರ ದೃಷ್ಟಿಯಲ್ಲಿ ಇವರೂ ಸಹ ಕೊಂಗರೆ. ಆದರೆ ಇವರು ಕೃಷಿ, ವ್ಯಾಪಾರ, ಸಮಾಜ, ಸಂಸ್ಕೃತಿ, ಧರ್ಮ ರಾಜಕೀಯ ರಂಗಗಳಲ್ಲಿ ಸಾಧಿಸಿರುವ ಪ್ರಾಬಲ್ಯದಿಂದಾಗಿ ಮೇಲ್ಜಾತಿಯವರು, ಜಮೀನ್‌ದಾರರೆನಿಸಿಕೊಳ್ಳುತ್ತಾರೆ. ತಾವು ಗೌಂಡರ್, ವಣ್ಣಿಮಾರ್, ಮೊದಲಿಯಾರ್, ಅಯ್ಯರ್, ನಾಯಿಡುಗಳು, ಶ್ರೇಷ್ಠರು ಎಂದುಕೊಳ್ಳುತ್ತಾರೆ. ಸಮಾಜ ಕೂಡ ಹಾಗೇ ಪರಿಗಣಿಸುತ್ತದೆ.

ನಮ್ಮೂರ ಬಾಗಿಲಲ್ಲೇ ಅಕ್ಕಪಕ್ಕದಲ್ಲಿ ನಾಲ್ಕೈದು ತಮಿಳರ ತೋಟಗಳಿವೆ. ಇವರು ಶ್ರೇಷ್ಠರು, ಮೇಲ್ಜಾತಿಯವರು, ಜಮೀನ್‌ದಾರರು ಎಂದುಕೊಂಡರೂ, ಸಮಾಜ ಒಪ್ಪಿ ಕೊಂಡಿದ್ದರೂ, ನಮ್ಮ ಜನರ ಒಳದೃಷ್ಟಿಯಲ್ಲಿ ಕೊಂಗರೆ. ಇವರು ತಮ್ಮ ಜಮೀನಿನ ಕೃಷಿ ಕೆಲಸಗಳಿಗೆಲ್ಲಾ ನಮ್ಮ ಆಳುಗಳನ್ನೇ ಅವಲಂಬಿಸಬೇಕಿದೆ. ಕೊಳ್ಳೇಗಾಲ ಪಟ್ಟಣದ ಸುತ್ತಮುತ್ತ ತಾಲ್ಲೂಕಿನ ಅನೇಕ ಕಡೆ ಚಿಕ್ಕಲ್ಲೂರು, ಹನೂರು ಸುತ್ತಮುತ್ತ ತಮಿಳರು ಜಮೀನು ಮಾಡಿ, ಅಲ್ಲೆ ತೋಟದ ಮನೆಮಾಡಿಕೊಂಡು ಕೃಷಿಯಲ್ಲಿ ತೊಡಗಿರುವ ಸೆಟಲ್ ಮೆಂಟ್‌ಗಳಿವೆ. ಈ ಜಮೀನ್‌ದಾರಿ ಕೃಷಿಕ ತಮಿಳರು ನಮ್ಮೂರ ಗೌಡ, ಪಟೇಲ, ಶಾನುಭೋಗರಂತೆ ನಡೆದುಕೊಳ್ಳುತ್ತಾರೆ. ಇವರ ಮನೆಯ ಅನ್ನ ಸಾರು, ಹಾಲು ಮಜ್ಜಿಗೆ ಮೊಸರು, ಕಾಫೀ ಟೀಗಳು ನಮ್ಮ ಜನರಿಗೆ ಶ್ರೇಷ್ಠವೂ, ಮೃಷ್ಟಾನ್ನವೂ ಅಹುದು. ಚಿಕ್ಕವರಿದ್ದಾಗ ಶಾಲೆಯ ರಜಾದಿನಗಳಲ್ಲಿ ತಮಿಳರ ತೋಟಗಳಿಗೆ ಕೂಲಿಗೆ ಹೋಗುತ್ತಿದ್ದ ಹುಡುಗರಾದ ನಾವು, ಎಷ್ಟೋ ಸಲ ಅವರ ಮನೆಯ ಅಡುಗೆಯ ಗಮಲಿಗೆ ಮೂಗರಳಿಸಿ ಬಾಯಲ್ಲಿ ನೀರೂರಿಸಿಕೊಳ್ಳುತ್ತಾ, ನಮ್ಮ ಮನೆಯ ಮುದ್ದೆ, ಚಟ್ನಿಯನ್ನು ನುಂಗಿ ನೀರು ಕುಡಿಯುತ್ತಿದ್ದೆವು. ನಮ್ಮ ಜೊತೆಯ ಅನೇಕ ಹೆಂಗಸರು ತೋಟದ ಯಾಜಮಾನನಿಗೂ, ಯಜಮಾನಿಗೊ ಅಥವ ತೋಟದ ಹುಡುಗರಿಗೊ, ಹುಡುಗಿಯರಿಗೊ ಏನಾದರೊಂದು ರೈಲು ಹತ್ತಿಸಿ ಅವರ ಮನೆಯ ವಿಶೇಷ ತಿನಿಸು, ಸಾಂಬಾರು, ಉಪ್ಪಿನಕಾಯಿಗಳನ್ನು ಗಿಟ್ಟಿಸಿಕೊಳ್ಳುತ್ತಿದ್ದರು. ಸ್ನಾನಮಾಡಿ, ನೀರು ಜಡೆಯಾಕಿಕೊಂಡು ಮುಖಕ್ಕೆ ಪೌಡಾರು ಪೂಸಿಕೊಂಡು, ಕಣ್ಣುಕಪ್ಪಿಕ್ಕಿ, ಹಣೆಯ ಮಧ್ಯೆ ಸಣ್ಣ-ಚಿಕ್ಕ ವಿಭೂತಿ ಗೆರೆಹಾಕಿ ಅದರ

ಮೇಲೊಂದು ಬೊಟ್ಟಿಟ್ಟುಕೊಂಡು, ಕಾಲುಗಳಿಗೆ ಗೆಜ್ಜೆಯ ಚೈನು, ಕೈಗೆ ಬಣ್ಣದ ಬಳೆತೊಟ್ಟು, ಮೀನುಖಂಡಗಳು ಕಾಣುವಂತಹ ಲಂಗ,ಬ್ಲೌಸ್ ಹಾಕಿ ಅಲ್ಲಲ್ಲಿ ಅಪರೂಪದ ಸೃಷ್ಟಿಗಳಂತೆ ನಮ್ಮೂರ ಹುಡುಗಿಯರಿಗಿಂತ ವಿಭಿನ್ನವಾಗಿ ಕಾಣಿಸಿಕೊಳ್ಳುತ್ತಿದ್ದ ತೋಟದ ತಮಿಳು ಹುಡುಗಿಯರಿಂದ ಹುಡುಗರಾದ ನಾವು ಆಕರ್ಷಿತರಾಗುತ್ತಿದ್ದೆವು. ನಮ್ಮೊಟ್ಟಿಗೆ ಶಾಲೆ, ಕಾಲೇಜು ಓದುತ್ತಿದ್ದ ಇಂತಹ ಅನೇಕ ಅನ್ಯಭಾಷಾ ಹುಡುಗಿಯರ ಆಕರ್ಷಣೆಗಳು, ಪ್ರೇಮಪತ್ರ ಪ್ರಕರಣಗಳು ಎಷ್ಟೋ ಕಡೆಯ ಭಾಷಾ, ಧಾರ್ಮಿಕ ಗಲಭೆಗಳಿಗೆ ಕಾರಣಗಳಾಗಿದ್ದೂ ಇದೆ.

ತೆಲುಗು ಭಾಷಿಕರಾದ ದೇವಾಂಗ ಮತ್ತು ಕೋಮಟಿಗ ಶೆಟ್ಟಿ ಜನ ಸಮುದಾಯಗಳು ಕೊಳ್ಳೇಗಾಲ ಪಟ್ಟಣದಲ್ಲಿ ಮಾತ್ರ ಹೆಚ್ಚು ನೆಲೆಸಿದ್ದಾರೆ. ಹೋಬಳಿ ಗ್ರಾಮ ಮಟ್ಟದಲ್ಲಿ ಕಡಿಮೆ. ಎಲ್ಲೋ ಒಂದು, ಎರಡು ಕುಟುಂಬಗಳು ಮಾತ್ರ. ಇವರು ಕೃಷಿರಂಗದಲ್ಲಿ ಕಡಿಮೆ. ವ್ಯಾಪಾರವೇ ಹೆಚ್ಚು. ಬಟ್ಟೆ ಅಂಗಡಿ ಮತ್ತು ನೇಯ್ಗೆ, ರೈಸ್‌ಮಿಲ್, ಚಿತ್ರಮಂದಿರ, ಕೈಗಾರಿಕೆಗಳು, ದಿನಸಿ ಅಂಗಡಿ, ಕಬ್ಬಿಣ ಸಿಮೆಂಟ್ ಅಂಗಡಿ ಹೀಗೆ ಬಹುತೇಕ ವ್ಯಾಪಾರ ವ್ಯವಹಾರ ಇವರ ಕೈಯ್ಯಲ್ಲಿದೆ. ಇಡೀ ತಾಲ್ಲೂಕಿನ ಹಣಕಾಸು ವಹಿವಾಟಿನಲ್ಲಿ ಇವರ ಪಾತ್ರ ಪ್ರಮುಖ. ಪಟ್ಟಣ ಪುರಸಭೆಯ ರಾಜಕೀಯದಲ್ಲಿ ದೇವಾಂಗ ಸಮುದಾಯ ನಿರ್ಣಾಯಕ. ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಪ್ರಬಲರಾದ ಇವರೂ ಸಹ ಗೌಡ, ಲಿಂಗಾಯಿತ, ಬ್ರಾಹ್ಮಣರಂತೆ ತಾವು ಶ್ರೇಷ್ಠರು, ಇತರರು ತಮಗೆ ಕೀಳಾದವರೆಂದು ಭಾವಿಸುತ್ತಾರೆ. ಭಾಷೆ ಮತ್ತು ಸಂಸ್ಕೃತಿ ವಿಷಯದಲ್ಲಿ ಇವರ ತಂತ್ರಗಾರಿಕೆ ಇದೆ. ತೆಲುಗು ಭಾಷಾಭಿಮಾನಿಗಳಾದರೂ ಹೊರಗೆ ಕನ್ನಡ ಪರ ಗುರುತಿಸಿಕೊಳ್ಳುತ್ತಾರೆ. ಕನ್ನಡ ಸಂಘ, ಕನ್ನಡಧ್ವಜ ಸ್ಥಾಪನೆ, ಕನ್ನಡ ರಾಜ್ಯೋತ್ಸವ ಆಚರಣೆ ಮಾಡುವವರೇ ಇವರು. ತೆಲುಗಿನ ಮುಖ್ಯ ಹಬ್ಬ ದಿನಗಳಂದು ತಮ್ಮದೇ ಚಿತ್ರಮಂದಿರಗಳಲ್ಲಿ ಕಡ್ಡಾಯವಾಗಿ ತೆಲುಗು ಚಿತ್ರಗಳನ್ನು ಹಾಕುವ ಮೂಲಕ ತಮ್ಮ ತೆಲುಗುಪ್ರೇಮವನ್ನೂ ಪ್ರಕಟಿಸುತ್ತಾರೆ. ಸಭೆ, ಸಮಾರಂಭ, ಸ್ನೇಹಿತರ ಗುಂಪು, ಸಂವಾದ ಸಂದರ್ಭದಲ್ಲಿ ಭೇಟಿಯಾಗುವ ತೆಲುಗುಭಾಷಿಕರು ಅಸಹಜ, ಅಭಾಸವೆನಿಸುವಂತೆ ತೆಲುಗು ಸಂಭಾಷಣೆ ಆರಂಭಿಸಿ ತಮ್ಮ ವಿಭಿನ್ನತೆಯನ್ನು ತೋರಿಸಿಕೊಳ್ಳುತ್ತಾರೆ. ತಾಲ್ಲೂಕಿನ ಸ್ಥಳೀಯ ಪ್ರಮುಖ ದೇವಸ್ಥಾನ, ಜಾತ್ರೆ, ದೇವರುಗಳ ಸಂಸ್ಕೃತಿ ವಿಷಯದಲ್ಲಿ ದಾನಿಗಳಾಗಿಯೋ, ಭಕ್ತರಾಗಿಯೋ, ಪೂಜಾರಿಗಳಾಗಿಯೇ ಪ್ರವೇಶಿಸಿ ಸಾಂಸ್ಕೃತಿಕ ಪ್ರಾಬಲ್ಯ ಪಡೆಯುತ್ತಾರೆ. ತಮ್ಮದೇ ಆದ ಕನ್ನಿಕಾಪರಮೇಶ್ವರಿ, ಚೌಡೇಶ್ವರಿ ಇತರೇ ದೇವಸ್ಥಾನಗಳನ್ನು ಸ್ಥಾಪಿಸಿ ಅನೇಕ ಕೆಳಜಾತಿಗಳಿಗೆ ಪ್ರವೇಶ ನಿಷೇಧಿಸುವ ಮೂಲಕ ತಾವು ಶ್ರೇಷ್ಠರೆಂದು ಗುರುತಿಸಿಕೊಳ್ಳುತ್ತಾರೆ. ೧೦ ವರ್ಷಕ್ಕೊಮ್ಮೆ ಮಾಡುವ "ಕತ್ತಿ ಹಬ್ಬ"ದ ಖಡ್ಗದಿಂದ ಒಡೆದುಕೊಳ್ಳುವ ಆಚರಣೆಯ ಮೂಲಕ ತಾವು ಇತರರಿಗಿಂತ ಯಾವುದರಲ್ಲೂ ಕಮ್ಮಿ ಇಲ್ಲವೆಂದು ತೋರಿಸುತ್ತಾರೆ. ಭಾಷಾ ಕಾರಣಕ್ಕಾಗಿ ಕನ್ನಡಿಗರ ಜೊತೆ ಇವರಿಗೆ ಜಗಳವಿಲ್ಲ. ಜಗಳವೇನಿದ್ದರೂ ಜಾತಿ, ಧರ್ಮ ಕಾರಣಕ್ಕಾಗಿ. ಅದು ದಲಿತರು, ಹಿಂದುಳಿದವರು, ಮುಸ್ಲಿಮರು ಅವರನ್ನು ಕಡೆಗಣಿಸಿ ನಡೆದಾಗ. ಅದು ಪಟ್ಟಣ ವ್ಯಾಪ್ತಿಯಲ್ಲಿ ಮಾತ್ರ.

ಮುಸ್ಲಿಮರು ಕೊಳ್ಳೇಗಾಲ ಪಟ್ಟಣ, ಹೋಬಳಿ, ಗ್ರಾಮ ಮಟ್ಟದಲ್ಲೂ ಇದ್ದು ತಮಿಳು, ತೆಲುಗು ಭಾಷಿಕರಂತೆ ಪಟ್ಟಣದ ವ್ಯಾಪಾರ ಮತ್ತು ತಾಲ್ಲೂಕಿನ ರಾಜಕಾರಣದಲ್ಲಿ ಸಾಕಷ್ಟು ಪ್ರಾಬಲ್ಯ ಸಾಧಿಸಿದ್ದಾರೆ. ಭಾಷೆ, ಸಂಸ್ಕೃತಿ ವಿಷಯದಲ್ಲಿ ಕನ್ನಡಿಗರ ಜೊತೆ ಮುಸ್ಲಿಮರ ಭಿನ್ನಾಭಿಪ್ರಾಯ ಕಡಿಮೆ. ಜಾತಿ, ಧರ್ಮ ಕಾರಣಕ್ಕೆ ಇತರೇ ಜಾತಿ, ಧರ್ಮಗಳ ಜನರ ಜೊತೆ ಜಗಳವಾಡಿದ್ದು ಉಂಟು. ತಾಲ್ಲೂಕಿನ ಕೌದಳ್ಳಿಯಂತಹ ದೂರದ ಊರಿನಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವ ಮುಸ್ಲಿಮರಿಗೆ ದಲಿತರು ಕೀಳುಜಾತಿ ಜನರಾಗಿದ್ದು ಯಾವುದೇ ಸ್ವಾತಂತ್ರ್ಯ, ಹಕ್ಕು ಅಧಿಕಾರಗಳಿಗೆ ಅರ್ಹರಲ್ಲ. ಪಟ್ಟಣದಲ್ಲಿ ಸೈತಾ ಒಂದು ಕಾಲದಲ್ಲಿ ಹಿಂದೂ-ಮುಸ್ಲಿಂ ಹೆಸರಿನಲ್ಲಿ ದಲಿತ-ಮುಸ್ಲಿಂ ಗಲಭೆಗಳಿಗೆ ಕೊಳ್ಳೇಗಾಲ ಹೆಸರಾಗಿತ್ತು. ಆರ್.ಎಸ್.ಎಸ್., ವಿ.ಹೆಚ್.ಪಿ. ಬ್ರಾಹ್ಮಣಶಾಹಿ ಪ್ರಾಬಲ್ಯದ ಫಲವಾಗಿ ಒಂದು ಕಾಲದವರೆಗೆ ಅದು ನಡೆಯಿತು. ಕಾಲಾಂತರದಲ್ಲಿ ಪಟ್ಟಣದ ದಲಿತ ಸಮುದಾಯದಲ್ಲುಂಟಾದ ಅಂಬೇಡ್ಕರ್ ವಿಚಾರದ ಅಧ್ಯಯನ, ಅರಿವು, ಜಾಗೃತಿಯ ಪರಿಣಾಮದಿಂದಾಗಿ ದಲಿತ ಮುಸ್ಲಿಂ ಸಮುದಾಯಗಳ ನಡುವೆ ಸ್ವಲ್ಪ ಮಟ್ಟಿನ ಸಾಮರಸ್ಯ ಸಾಧ್ಯವಾಯಿತು.

ಮಲೆಯಾಳಿಗಳು, ಲಂಬಾಣಿಗಳು, ಟಿಬೇಟಿಯನ್ನರದು ಅವರವರದೇ ಪ್ರಪಂಚಗಳಿವೆ. ಮಲೆಯಾಳಿಗಳು ಪಟ್ಟಣದಲ್ಲಿ ಮಾತ್ರ ಇದ್ದು, ಒಂದಷ್ಟು ವ್ಯಾಪಾರ ವ್ಯವಹಾರದಲ್ಲಿ ಕಾಣಿಸುತ್ತಾರೆ. ಲಂಬಾಣಿಗಳು ತಾಲ್ಲೂಕಿನ ಪೂರ್ವದ ಗಡೀ ಭಾಗದಲ್ಲಿ ತಮಿಳರ ನಡುವೆ ಇದ್ದು ತಮ್ಮದೇ ಆದ ವಿಶಿಷ್ಟ ಭಾಷೆ, ಸಂಸ್ಕೃತಿ, ಸಂಘಟನೆಯಿಂದ ಗಮನ ಸೆಳೆಯುತ್ತಾರೆ. ಭಾರತಕ್ಕೆ ನಿರಾಶ್ರಿತರಾಗಿ ಬಂದ ಟಿಬೇಟಿಯನ್ನರ "ಒಡೆಯರ ಪಾಳ್ಯ" ಸೆಟಲ್‌ಮೆಂಟ್ ಒಂದು ವಿಭಿನ್ನ ಪ್ರಪಂಚ. ನಮ್ಮ ನಡುವೆ ಬೌದ್ಧಸಂಸ್ಕೃತಿಯನ್ನು, ಪರಂಪರೆಯನ್ನು ಹುಟ್ಟಿಹಾಕಿರುವ ಈ ಅಲ್ಪಸಂಖ್ಯಾತ ಸಮುದಾಯಗಳು ಉಳಿದವರಂತೆ ಪ್ರಬಲರಲ್ಲ. ಭಾಷೆ, ಸಂಸ್ಕೃತಿ, ಜನಾಂಗದ ಕಾರಣಕ್ಕಾಗಿ ತಮ್ಮ ಅತ್ಯಂತ ಮುಖ್ಯವೆನಿಸುವ ಕೆಲಸಂದರ್ಭಗಳಲ್ಲಿ ಮಾತ್ರ ಪರದೆಯ ಮೇಲೆ ಇವರು ಕಾಣಿಸಿಕೊಳ್ಳುತ್ತಾರೆ. ಉಳಿದಂತೆ ಈ ಸಮುದಾಯಗಳು ನಿಗೂಢ.

ಕೊಳ್ಳೇಗಾಲ ತಾಲ್ಲೂಕಿನ ಮಲೆ ಮಾದೇಶ್ವರ ಬೆಟ್ಟಸಾಲು, ಕಾಡು ಮತ್ತು ಗುಂಡ್ಲುಪೇಟೆ ತಾಲ್ಲೂಕಿನ ಬಂಡೀಪುರ ರಾಷ್ಟ್ರೀಯ ಅಭಯಾರಣ್ಯಗಳು-ಎರಡೂ ಕಡೆ ಕರ್ನಾಟಕ-ತಮಿಳು ನಾಡಿನ ಗಡೀ ಪ್ರದೇಶಗಳಾಗಿವೆ. ಈ ಎರಡೂ ಗಡೀ ಪ್ರದೇಶಗಳ ಆಚೆ, ಈಚೆ ಕರ್ನಾಟಕ, ತಮಿಳುನಾಡಿನಲ್ಲಿ, ತಮಿಳರು, ಕನ್ನಡಿಗರು ನೆಲೆಸಿದ್ದಾರೆ. ಪರಸ್ಪರ ಎರಡೂ ನೆಲದೊಳಗೆ, ಎರಡೂ ಭಾಷೆಯ ತಮಿಳು-ಕನ್ನಡಿಗರು ಕೆಲವು ಸಂದರ್ಭಗಳಲ್ಲಿ ಪರಮ ಶತ್ರುಗಳೆಂಬಂತೆ ನಡೆದುಕೊಳ್ಳುವುದಿದೆ.

ಯಾವುದೇ ಭಾಷೆ, ಸಂಸ್ಕೃತಿಯ ಜನ ತನ್ನದಲ್ಲವೆನಿಸಿದ ನೆಲದಲ್ಲಿ ಅಲ್ಪಸಂಖ್ಯಾತರೆನಿಸಿದ್ದು ಕೆಲರಂಗಗಳಲ್ಲಿ ಪ್ರಾಬಲ್ಯ ಸಾಧಿಸುವುದನ್ನು, ನಿರ್ಣಾಯಕರಾಗುವುದನ್ನು ಸ್ಥಳೀಯರೆನಿಸುವವರು ಸಹಿಸುವುದಿಲ್ಲ. ಭಾಷಾ ಅಲ್ಪಸಂಖ್ಯಾತರು, ಸಂಸ್ಕೃತಿ, ಧಾರ್ಮಿಕ

ಅಲ್ಪಸಂಖ್ಯಾತರು ಕೂಡ ನಗರ, ಪಟ್ಟಣ, ಗ್ರಾಮೀಣ ಪ್ರದೇಶಗಳಲ್ಲಿ ಚದುರಿಹೋಗಿ, ಒಂಟೊಂಟಿಯಾಗಿ ನೆಲೆನಿಂತು ಬದುಕುತ್ತಾ ಗದ್ದೆ, ಮನೆ, ತೋಟ, ವ್ಯಾಪಾರ, ಅಂಗಡಿ, ಕೈಗಾರಿಕೆ ಮೊದಲಾದವುಗಳ ಒಡೆತನ ಸಾಧಿಸುವುದು ತಪ್ಪಲ್ಲ. ಆದರೆ ಇಂತಹ 'ಸ್ಥಿತಿಗಳು' ಕೆಲವು ಸಂದರ್ಭಗಳಲ್ಲಿ ಅಸಹಜವಾದ, ಅನಗತ್ಯವಾದ ಅಭದ್ರತೆ, ಅಸಹಾಯಕತೆ, ಅತಂತ್ರ ದಿಂದ ನರಳುವಂತೆ ಮಾಡುತ್ತವೆ. ಅಂತಹ ಸಂದರ್ಭಗಳು ಭಾಷೆ, ಧರ್ಮ, ಜಾತಿ, ಜನಾಂಗ ಗಳ ಹೆಸರಿನ ಘರ್ಷಣೆಯ ಘಟನೆಗಳಾಗಿರುತ್ತವೆ. ಗಡಿಭಾಗವಾದ ಕೊಳ್ಳೇಗಾಲ ತಾಲ್ಲೂಕು ಭಾಷೆ, ಧರ್ಮ, ಸಂಸ್ಕೃತಿ, ಜನಾಂಗದ ವಿಷಯಗಳಲ್ಲಿ ವಿಭಿನ್ನತೆ ಹೊಂದಿದ್ದು ಇಂತಹ ಅನೇಕ ಸಂಘರ್ಷವನ್ನು ಕಂಡಿದೆ. ಸ್ವರೂಪ ಮತ್ತು ಪರಿಣಾಮದ ದೃಷ್ಟಿಯಿಂದ ಭಾಷಾ ಹೆಸರಿನಲ್ಲಿ ಕನ್ನಡ ತಮಿಳರಿಗೆ ನಡೆದ ಸಂಘರ್ಷ ಅತ್ಯಂತ ಮುಖ್ಯವಾದ, ದೊಡ್ಡದಾದ, ಘಟನೆಗಳಲ್ಲೊಂದಾಗಿದೆ.

ನೆನಪಿರುವಂತೆ ಕಾವೇರಿ ನೀರಿನ ವಿಷಯಕ್ಕೆ ಕರ್ನಾಟಕ-ತಮಿಳುನಾಡು ರಾಜ್ಯಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯ, ವಿರೋಧ, ಪ್ರತಿಭಟನೆಗಳ ಫಲವಾಗಿ ಎರಡೂ ರಾಜ್ಯಗಳಲ್ಲಿ ಭಾಷಾ ಗಲಭೆಗಳು ನಡೆದವು. ಈ ಹಿನ್ನೆಲೆಯಲ್ಲಿ ಕಾವೇರಿ ನೀರಿನ ಕಾರಣಕ್ಕಾಗಿ ೧೩-೧೨-೯೧ ರಂದು ಕರ್ನಾಟಕ ಬಂದ್ ಆಚರಿಸಲಾಯಿತು. ಈ ಸಂದರ್ಭದಲ್ಲಿ ತಮಿಳರ ವಿರುದ್ಧ ರಾಜ್ಯದಾದ್ಯಂತ ಕನ್ನಡ-ತಮಿಳು ಭಾಷಾ ಗಲಭೆ ಆರಂಭವಾಯಿತು. ಈ ಭಾಷಾ ಗಲಭೆ ಗಡಿನಾಡಾದ ಕೊಳ್ಳೇಗಾಲ ತಾಲ್ಲೂಕಿಗೂ ಹರಡಿತು. ಆ ದಿನಗಳು ಒಂದಷ್ಟು ಜನ ಪ್ರಗತಿಪರ ಸ್ನೇಹಿತರಾದ ನಾವೆಲ್ಲಾ ಸೇರಿ ದಲಿತರು, ಶೂದ್ರರು, ಹಿಂದುಳಿದ ಜಾತಿಗಳು, ಮುಸ್ಲಿಮರು, ಮಹಿಳೆಯರೆಲ್ಲರೂ ಸಮಾನ ಶೋಷಿತರು, ಇವರ ನಡುವೆ ಪರಸ್ಪರ ಸೌಹಾರ್ದಯುತ ಸಂಬಂಧ ಬೆಳೆಸಲು ಸಂವಾದ ಹುಟ್ಟುಹಾಕಬೇಕೆಂದು ಬಯಸುತ್ತಿದ್ದ ಕಾಲ. ಅದಕ್ಕಾಗಿ ಅಭಿವ್ಯಕ್ತಿ ವೇದಿಕೆ, ಅಂಬೇಡ್ಕರ್ ಅಧ್ಯಯನ ಕೇಂದ್ರವೆಂಬ ಸಂಘಟನೆಗಳು ಮತ್ತು ಕಂಸಾಳೆ, ದಲಿತ್ ವಾಯ್ಸ್ ಎಂಬ ಪತ್ರಿಕೆಗಳನ್ನು ಮಾಡಿಕೊಂಡು ಆ ಮೂಲಕ ಪ್ರತಿಕ್ರಿಯಿಸುತ್ತಿದ್ದೆವು. ಇದೇ ಸಮುದಾಯಕ್ಕೆ ಕೊಳ್ಳೇಗಾಲ ತಾಲ್ಲೂಕಿನಲ್ಲಿ ಕನ್ನಡ-ತಮಿಳು ಭಾಷಾ ಗಲಭೆಯ ದಳ್ಳುರಿ ಹೊತ್ತಿಕೊಂಡಿತು.

ಪಟ್ಟಣ, ಹೋಬಳಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಚದುರಿ ಹೋಗಿ ಅಂಗಡಿ, ಜಮೀನು, ತೋಟ, ಮನೆ ಮಾಡಿ ವ್ಯಾಪಾರ, ಕೃಷಿ ಮಾಡಿಕೊಂಡಿದ್ದ ಅನೇಕ ತಮಿಳು ಕುಟುಂಬಗಳು ಇಷ್ಟೊತ್ತಿಗಾಗಲೇ ನಿಗೂಢವಾಗಿ ಕಣ್ಮರೆಯಾಗಿದ್ದವು. ಯಾವುದನ್ನು ಬಿಡಬಹುದು, ಯಾವುದನ್ನು ಹೇಗೆ, ಎಲ್ಲಿ ಜೋಪಾನ ಮಾಡಬಹುದೊ ಹಾಗೆ ರಕ್ಷಿಸಿ ಅಸಹಾಯಕರಾಗಿ, ಆತಂಕದಿಂದ ಜನ ಓಡಿಹೋಗಿದ್ದರು. ಈ ಅವಕಾಶವನ್ನು ಪಡೆದ ಕನ್ನಡಿಗರು ಮನೆ, ಅಂಗಡಿ, ತೋಟ, ಜಮೀನುಗಳನ್ನು ಲೂಟಿ ಮಾಡಿದರು. ಎಷ್ಟೋ ಕಡೆ ತೋಟದ ಮನೆ, ಅಂಗಡಿ, ಜಮೀನುಗಳಿಗೆ ಬೆಂಕಿ ಹಚ್ಚಲಾಯಿತು.

ಕೊಳ್ಳೇಗಾಲ ಪಟ್ಟಣದಲ್ಲಿ ನಾವಿದ್ದ ಒಂದು ಬೀದಿಯಲ್ಲಿ ಗಲಭೆಯ ಇಡೀ ದಿನ

ಹಗಲು ರಾತ್ರಿ ಅನೇಕ ತಮಿಳು ಗೆಳೆಯರು ಮತ್ತವರ ಕುಟುಂಬದವರನ್ನು ನಮ್ಮ ಗೆಳೆಯರ ಬಳಗ ಒಂದು ಕಾದು ಕುಳಿತಿತ್ತು. ಅಕ್ಕಪಕ್ಕದ ಬೀದಿಗಳಲ್ಲಿ ದಾಳಿ, ಲೂಟಿ ನಡೆಯುತ್ತಲೇ ಇತ್ತು. ಮನೆ, ಅಂಗಡಿ ಬಾಗಿಲುಗಳನ್ನು ಒಡೆದು ಕೈಗೆ ಸಿಕ್ಕಿದ್ದನ್ನು ಜನ ದೋಚುತ್ತಿದ್ದರು. ಟಿ.ವಿ. ಫ್ಯಾನು, ಚೇರು, ಟೇಬಲ್. ಅದೇ ಹೊತ್ತಲ್ಲಿ ನಮ್ಮೂರ ಬಾಗಿಲಲ್ಲೇ ಇದ್ದ ತಮಿಳರ ತೋಟದ ಮನೆಗಳು ದಾಳಿಗೊಳಗಾಗಿ ಜನ ಸಿಕ್ಕಿದ್ದನ್ನು ದೋಚಿಕೊಂಡು ಬೆಂಕಿ ಹಚ್ಚಿದರು ಎಂದು ಸುದ್ದಿ ತಿಳಿಯಿತು. ನಿರೀಕ್ಷಿತವಾಗಿದ್ದರೂ ದಿಢೀರನೆ ಸ್ಫೋಟಗೊಂಡು ತಾಲ್ಲೂಕಿನಾದ್ಯಂತ ಅಲ್ಲಲ್ಲಿ ಭುಗಿಲೆದ್ದ ಗಲಭೆ ಪೋಲೀಸರ ನಿಯಂತ್ರಣಕ್ಕೆ ಸಿಗಲಿಲ್ಲ. ಪೋಲೀಸರ ಆಗಮನಕ್ಕೆ ಮುಂಚೆ ಹಾಗೂ ಕಾರ್ಯಾಚರಣೆಯ ಕಣ್ಣುತಪ್ಪಿಸಿ ಎಲ್ಲಾ ನಡೆದೇ ಹೋಯಿತು.

ಹೀಗೆ ಒಂದು ವಾರ ಕಳೆಯುತ್ತಿದ್ದಂತೆ ಕರ್ನಾಟಕದಲ್ಲಿ ತಮಿಳರಿಗಾದಂತೆ, ತಮಿಳುನಾಡಿನಲ್ಲಿದ್ದ ಕನ್ನಡಿಗರಿಗೂ ಅದೇ ಗತಿ ಒದಗಿ ದೌಜನ್ಯಕ್ಕೊಳಗಾದ ಕನ್ನಡಿಗರು ತಮಿಳುನಾಡಿನಿಂದ ಬರಲಾರಂಭಿಸಿದರು. ಕೊಳ್ಳೇಗಾಲ ತಾಲ್ಲೂಕಿನಿಂದ ಕೂಲಿಯಾಳುಗಳಾಗಿ ಐವತ್ತು ಅರವತ್ತು ವರ್ಷಗಳ ಹಿಂದೆ ಊಟಿ (ನೀಲಗಿರಿ), ಗೂಡಲೂರುಗಳಲ್ಲಿ ಹೋಗಿ ನೆಲೆಸಿದ್ದ ಅನೇಕ ಕನ್ನಡಿಗರು ದೌಜನ್ಯಕ್ಕೊಳಗಾಗಿ ನಿರಾಶ್ರಿತರಾಗಿ ಬಂದರು. ತಮಿಳರು ಕನ್ನಡಿಗರ ಮೇಲೆ ಮಾಡಿದ ದೌರ್ಜನ್ಯ ಕೂಡ ಕಡಿಮೆಯಾಗಿರಲಿಲ್ಲ. ಮನೆಗಳಿಗೆ ಬೆಂಕಿಹಚ್ಚಿ, ಕೆಲವು ಮಹಿಳೆಯರಿಗೆ ತಲೆ ಬೋಳಿಸಿದ್ದರು. ಒಬ್ಬಾಕೆಗೆ ಎದೆಯನ್ನು ಕತ್ತರಿಸಿದುದಾಗಿ ೨೪-೧೨-೯೧ ರ ಆಂದೋಳನ ಪತ್ರಿಕೆ ವರದಿ ಮಾಡಿತ್ತು.

ಸಮೀಕ್ಷೆ ಮುಗಿಸುತ್ತಿದ್ದಂತೆ ಕೊಳ್ಳೇಗಾಲ ಮೂಲದ ೮ ಕುಟುಂಬಗಳ ೩೪ ಜನರ ತಂಡ ಒಂದು ಊಟಿಯ ಸಮೀಪದ ಗೂಡಲೂರಿನಿಂದ ದೌರ್ಜನ್ಯಕ್ಕೊಳಗಾಗಿ ತಮಿಳುನಾಡಿನಿಂದ ಕೊಳ್ಳೇಗಾಲಕ್ಕೆ ಬಂದು ತಲುಪಿದ್ದರು. ಇವರೆಲ್ಲರೂ ದಲಿತರಾಗಿದ್ದಾಗಿ ತಿಳಿಯಿತು. ಸರ್ಕಾರದ ಅಧಿಕಾರಿಗಳ ಜೊತೆಗೆ ನಮ್ಮ ಸಂಘದ ಗೆಳೆಯರು ಸೇರಿ ಅವರಿಗೆ ಕೃಷಿ ಮಾರುಕಟ್ಟೆ ಆವರಣದಲ್ಲಿ ತಾತ್ಕಾಲಿಕ ವಸತಿ, ಊಟದ ವ್ಯವಸ್ಥೆ ಕಲ್ಪಿಸಿದರು. ಈ ೩೪ ಜನ ನಿರಾಶ್ರಿತರಿಗೆ ದಿನಕ್ಕೆ ೧೦ ಕೆ.ಜಿ. ಅಕ್ಕಿ ಕೊಡುತ್ತಿದ್ದ ಸರ್ಕಾರ ಕ್ರಮೇಣ ನಿಲ್ಲಿಸಿತು. ಸಂಘದ ಸ್ನೇಹಿತರು ಅವರಿಗಾಗಿ ಪಾದಯಾತ್ರೆ ಮಾಡಿ ದವಸಧಾನ್ಯ, ಬಟ್ಟೆಬರೆ, ಹಣಕಾಸು, ಪಾತ್ರೆ ಪಗಡ ಸಂಗ್ರಹಿಸಿ ಕೊಟ್ಟರು. ಸೈಟು, ಮನೆ, ಉದ್ಯೋಗ ಕೊಡುವುದಾಗಿ ಹೇಳಿದ್ದ ಸರ್ಕಾರ ಮತ್ತು ಅಧಿಕಾರಿಗಳು ಎರಡು ತಿಂಗಳಾದರೂ ಏನನ್ನು ಕಲ್ಪಿಸಿಕೊಡಲಾಗಲಿಲ್ಲ.

ಈ ನಡುವೆ ಬೆಂಗಳೂರಿನ ರಾಜ್ಯ ತಮಿಳು ಸಂಘದ ಜೊತೆ ತಮಿಳು ಜನರ ಮೇಲಿನ ದೌರ್ಜನ್ಯ ಸಮೀಕ್ಷೆಗೆ ತಾಲ್ಲೂಕಿನ ಆಯ್ದು ಕೆಲವು ಸ್ಥಳಗಳ ಸಮೀಕ್ಷೆ ನಡೆಸಿದೆವು. ತಮಿಳರ ಮೇಲಿನ ದೌರ್ಜನ್ಯದ ನಿಜವಾದ ಮುಖದ ದರ್ಶನವಾಯಿತು. ತಾಲ್ಲೂಕಿನ ಜಕ್ಕಳ್ಳಿ, ಜಾಗೇರಿ, ಚಿಕ್ಕಲ್ಲೂರು ಏರಿಯಾದ ಕಡೆಯ ಸಮೀಕ್ಷೆಯಲ್ಲಿ ಎಲ್ಲ ಕಡೆ ಸುಟ್ಟು ಕರಕಲಾದ ಮನೆ, ದಾಳಿಗೊಳಗಾದ ತೋಟಗಳು, ಬೆಳೆನಾಶ, ಪಂಪ್‌ಸೆಟ್‌ಗಳ ಅವಶೇಷಗಳು ಕಂಡವು. ತೋಟದ ಮನೆಗಳಲ್ಲಿ ದವಸಧಾನ್ಯ, ಹಸು, ಕರು,ಕುರಿ, ಕೋಳಿ, ಮರ ಮುಟ್ಟುಗಳನ್ನು

ಬಿಡದಂತೆ 'ಕನ್ನಡಿಗ' ದಾಳಿಕೋರರು ದೋಚಿದ ವರದಿಗಳು ಸಿಕ್ಕಿದವು. ಸತ್ತೇಗಾಲದ ಸುತ್ತ ಮುತ್ತ ನಡೆದಿದ್ದ ದೌರ್ಜನ್ಯ ಭೀಕರವೆನಿಸಿತು. ರಾತ್ರಿ ಹೊತ್ತಲ್ಲಿ ಊರಿಗೆ ನುಗ್ಗಿದ ದಾಳಿಕೋರರು ಮನೆಗಳಿಗೆ ಬೆಂಕಿ ಇಟ್ಟು, ಸಿಕ್ಕಿದ್ದನ್ನು ದೋಚಿ, ಗಂಡನನ್ನು ಕಂಬಕ್ಕೆ ಕಟ್ಟಿ ಹಾಕಿ ಅವನ ಎದುರೆ ಹೆಂಡತಿಯನ್ನು ರೇಪ್ ಮಾಡಿದ ಘಟನೆ ನಡೆದುದಾಗಿ ತಿಳಿಯಿತು. ಮನೆಯ ಲೂಟಿ ಮತ್ತು ಬೆಳೆಯ ರಕ್ಷಣೆಗಾಗಿ ತಮಿಳನೊಬ್ಬ ಹಾರಿಸಿದ ಬಂದೂಕಿನ ಗುಂಡಿಗೆ ದಾಳಿಕೋರ ಹುಡುಗನೊಬ್ಬ ಬಲಿ ಬಿದ್ದಾಗ ಗಲಭೆಕೋರರು ಓಡಿದರು. ಗುಂಡೇಟು ಬಿದ್ದು ಉರುಳಿದ ಹುಡುಗನನ್ನು ಪಕ್ಕದಲ್ಲೇ ಹತ್ತಿ ಉರಿಯುತ್ತಿದ್ದ ಬಣವೆಯ ಬೆಂಕಿಗೆ ಎಸೆದು ಸುಟ್ಟು ಬಿಡಲಾಗಿದೆ ಎಂಬ ಘಟನೆ ಅತ್ಯಂತ ದಾರುಣವಾಗಿತ್ತು.

ಚಾಗೇರಿ, ಸಿಲುವೇಪುರದ ತಮಿಳರು ಇಲ್ಲಿಯ ಹಿಂಸೆ, ದೌರ್ಜನ್ಯಕ್ಕೆ ಅಂಜಿ ರಾತ್ರೋರಾತ್ರಿ ಪಕ್ಕದ ಕಾವೇರಿ ನದಿಯ ಜಾಡಿನಲ್ಲೇ ತಮ್ಮ ಸ್ವಂತ ಊರಿಗೆ ನಡೆದು ಹೋದರೆಂದು ಗೊತ್ತಾಯಿತು. ಈ ಜನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ, ಕೃಷ್ಣಗಿರಿ ತಾಲ್ಲೂಕಿನ, ಸೇಸುರಾಜಪುರಕ್ಕೆ ತಲುಪಲು ೬ ದಿನಗಳಕಾಲ, ೨೬೦ ಕಿ.ಮಿ. ನಡೆಯಬೇಕಾಯಿತಂತೆ. ಈ ಸುದೀರ್ಘ ಪ್ರಯಾಣದಲ್ಲಿ ಇದ್ದ ಮೂರು ಗರ್ಭಿಣಿಯರು ಮೂರು ಮಕ್ಕಳಿಗೆ ಜನ್ಮ ನೀಡಿದರೆ, ಇಬ್ಬರು ಮುದುಕಿಯರು ದಾರಿಯಲ್ಲಿ ಹಸಿವು, ಆಯಾಸದಿಂದ ಸತ್ತರಂತೆ. ಇಂತಹ ಭೀಕರವಾದ, ದಾರುಣವಾದ, ಅವಮಾನ, ಹಿಂಸೆ, ನಷ್ಟಗಳನ್ನು ಉಂಟುಮಾಡಿದ ಗಲಭೆ ತಾಲ್ಲೂಕಿನಲ್ಲಿ ನಡೆದಿರಲಿಲ್ಲ.

ಗಡಿಭಾಗದ ಅನ್ಯ ಭಾಷಿಕರೆನಿಸಿದ ಜನ ದೌರ್ಜನ್ಯಕ್ಕೊಳಗಾಗಿ ನಿರಾಶ್ರಿತರಾಗುವುದು ಶೋಚನೀಯ. ಪರಸ್ಪರ ಎರಡು ವಿಭಿನ್ನ ಸಮುದಾಯಗಳ ನಡುವೆ ಉಂಟಾಗುವ ಗಲಭೆಗಳಿಗೆ ಕಾರಣವಾಗುವ ಭಾಷೆ, ಸಂಸ್ಕೃತಿ, ಧರ್ಮ, ಭೂಮಿ ಯಾವುದೇ ಆದರೂ ಅದರ ದುಷ್ಪರಿಣಾಮಗಳು ಮತ್ತು ಬಲಿಪಶುಗಳಾಗುವ ಮನುಷ್ಯರು ತಲುಪುವ ಆ ಮನಸ್ಥಿತಿಗೆ ಗಲಭೆಯ ಫಲಿತಾಂಶವಾದ ಸೋಲು-ಗೆಲುವು-ಯಾವುದೂ ಬೇಕಿರುವುದಿಲ್ಲ.

●

## ಆವೇಶದ ಕೂಗು ಏನನ್ನೂ ಸಾಧಿಸಿಲ್ಲ

● ಸ ರಘುನಾಥ

'ಭಾಷಾವಾರು ಪ್ರಾಂತ್ಯ ರಚನೆ'. ಈ ಸಂಯೋಜಿತ ಪದಗಳಲ್ಲಿನ 'ರಚನೆ' ನಿರಂತರತೆಯ ಗರ್ಭ ಧ್ವನಿಯನ್ನು ಮಿಡಿಯುತ್ತಿರುವ ಹೃದಯವನ್ನು ತಟ್ಟುತ್ತಿರುತ್ತದೆ. ಇದು ಒಂದು ನಿರ್ದಿಷ್ಟ ಭೂ ಪ್ರದೇಶದ ಬಹು ಜನರ ಆತ್ಮಗಾನದ ಭಾಷೆಯೊಂದರ ಉಳಿವು, ಬೆಳವುಗಳ,

ಸಂಸ್ಕೃತಿಯ ಬದುಕಿನ ರಚನೆಯೂ ಆಗಿದೆ. ಇದರ ಅರ್ಥವ್ಯಾಪ್ತಿಯಲ್ಲಿ ಆಡಳಿತ ನ್ಯಾಯವೂ ಇದೆ. ಜೊತೆಗೆಯೆ ಭಾಷೆ, ಸಂಸ್ಕೃತಿ ರೂಪಿಸಿದ ಅಥವಾ ಅದನ್ನು ರೂಪಿಸಿಕೊಂಡ ಸಮುದಾಯದ ಸಂರಕ್ಷಣೆ ಮತ್ತದರ ಸ್ವಾತಂತ್ರ್ಯ ಸಾರ್ವಭೌಮತೆಯ ಪರಿರಕ್ಷಣೆಯನ್ನೂ ಒಳಗೊಂಡಿದೆ.

ಹೀಗೆ 'ರಚನೆ'ಗೊಂಡದ್ದರ ಭಾವಿತ ಗಡಿರೇಖೆಯ ಈಚೆಯಂಚು ಮತ್ತದರ ಒಳಮೈಯಾಗಿ ಚಾಚಿಕೊಂಡ ಒಂದು ಭಾಷಾ ಪ್ರಾಂತ್ಯ, ಅದರ ಆಚೆಯ ಅಂಚು ಮತ್ತದರ ಒಳಮೈ ಪರ (ನೆರೆ) ಭಾಷಾ ಪ್ರಾಂತ್ಯವಾಗಿ ಅಸ್ತಿತ್ವದಲ್ಲಿರುತ್ತದೆ. ಇಂಥ ರಚನೆಯ ವಿನ್ಯಾಸದ ಎರಡೂ ಅಂಚಿನಲ್ಲಿ ಈ ಆ ಪ್ರಾಂತ್ಯದ ಭಾಷೆಗಳ ಜನ ಜೀವನ, ಸಂಸ್ಕೃತಿ, ಪರಸ್ಪರ ಪೂರಕವಾಗಿ ಅಥವಾ ಪ್ರಭಾವಿತಗೊಂಡು ಇಲ್ಲವೆ ಪ್ರತ್ಯೇಕತೆಯಲ್ಲಿ ಬದುಕನ್ನು ರೂಪಿಸುತ್ತಿರುತ್ತದೆ. ಇವು ಭಾವ-ಭಾವನೆಗಳ ಪಾತಳಿಯಲ್ಲಿ ಕ್ರಿಯಾಶೀಲವಾಗಿರುತ್ತವೆ. ಇದರ ನಡುವೆಯೆ ಒಂದು ಒಪ್ಪಿಕೊಂಡದ್ದು ಇನ್ನೊಂದು ನಿರಾಕರಿಸಿದ್ದೂ ಆಗಿರುತ್ತಲೇ ಯಾವುದು ನಿರಾಕರಣೆಗೆ ಒಳಪಟ್ಟಿರುವುದೊ ಅದನ್ನು ಈ ಇನ್ನೊಂದಕ್ಕೆ ಒಪ್ಪಿಸುವ ಕೆಲಸ ನಡೆಯುತ್ತಿರುತ್ತದೆ. ಕಾಲ ಘಟನೆಗಳ ಒತ್ತಾಯದಲ್ಲಿ ಇದನ್ನು ಭಾವನಾತ್ಮಕ ಮನಸ್ಸಿನಿಂದಲೆ-ಹಲವು ಹತ್ತು ಕಾರಣಗಳ ಮುಂಚಾಚಿನಲ್ಲಿ ನೋಡುವುದು ಭಾಷಿಕ ಸಂಸ್ಕೃತಿಯ ದೃಷ್ಟಿಯಿಂದ ಅನಿವಾರ್ಯವಾಗಿರುತ್ತದೆ. ಈ ಎರಡೂ ಪ್ರಾಂತ್ಯಗಳ ರಾಜಕೀಯದ್ದು ಇನ್ನೊಂದು ಮಗ್ಗುಲು. ಈ ರಾಜಕೀಯವು ಆಡಳಿತ, ಅಭಿವೃದ್ಧಿಯನ್ನಷ್ಟೇ ಒಳಗೊಂಡಿರದು. ಎಲ್ಲದರಲ್ಲೂ ಇದರ ಇಚ್ಛಾ ಹಸ್ತ ಆಡುವುದನ್ನು ಕಾಣಬಹುದು. ಇದನ್ನು ಮತ್ತಿದರ ಪರಿಣಾಮಗಳನ್ನು ಚರಿತ್ರೆ ಹಾಗೂ ವರ್ತಮಾನದ ನಡವಳಿಕೆಯಲ್ಲಿ ಕಾಣುತ್ತೇವೆ. 'ಉಂಟು ಮಾಡಿಕೊಂಡ' ವಿವಾದ ಹಾಗು ತಗಾದೆಗಳು ಸಾಮಾನ್ಯನಿಗೆ ಅರ್ಥವಾಗದ ಮರ್ಮಗಳನ್ನು ಒಳಗೊಂಡಿರುತ್ತವೆ. ಇಲ್ಲಿ ನಿರ್ಮಾಣಗೊಂಡ 'ಅಡಿ ಸುಳಿ'ಗಳು ಇವನಿಗೆ ಕಾಣುವುದಿಲ್ಲ. ಆದರೆ ಆ ಸೆಳವಿನಿಂದ ದೂರವಂತೂ ಇರಲಾಗುವುದಿಲ್ಲ. ಇಲ್ಲಿರುತ್ತದೆ ಗಡಿಭಾಗದ ಬದುಕಿನ ಸಮಸ್ಯೆಗಳ ಮರೆಯ ಮುಖ. ಇಲ್ಲಿ ರಾಜಕೀಯದ ಮೇಲಾಟದಿಂದಾಗಿ ಸಾಮಾನ್ಯನ (ಇವನೇ ಭಾಷೆಯ ನಿಜ ಬಳಕೆದಾರ ಹಾಗೂ ಮುಖ್ಯ ರಕ್ಷಕ) ಅಭಿಪ್ರಾಯ ತೀರ್ಮಾನಗಳು ಅಸ್ಪೃಶ್ಯವಾಗಿ ದೂರವೇ ಉಳಿಯುತ್ತವೆ. ಇಲ್ಲಿ ಉಂಟಾಗುವ ತೊಡಕುಗಳನ್ನು ಅನುಭವಿಸುವುದು ಎರಡೂ ಭಾಷಿಕರ ನಿತ್ಯ ಜೀವನದ ಪರಿ- ಪಾಡುಗಳಾಗಿರುವುವು. ಈ ಎಲ್ಲಿ ತೊಡಕುಗಳ ಸ್ತರ-ಸ್ವರ ಒಂದೇ ಆಗಿರುವುದಿಲ್ಲ. ಒಂದೊಂದೂ ಬೇರೆ ಬೇರೆಯಾಗಿಯೆ ರೂಪಿಸಿಕೊಂಡವು ಆಗಿ, ಪ್ರತಿಯೊಂದಕ್ಕೂ ಬೇರೆಬೇರೆ ವಿವೇಚನೆಯ ಮಾರ್ಗ ಹಿಡಿಯಬೇಕಾಗುತ್ತದೆ. ಇಲ್ಲಿ 'ಅನ್ಯ' ಎಂಬ ಭಾವ ಉಂಟಾಗುವುದರಿಂದ ಆ ಭಾವದ ಪ್ರೇರಣೆಯಂತೆ ಸಾಮಾಜಿಕ ಜೀವನ ರೂಪುಗೊಳ್ಳುತ್ತಿರುತ್ತದೆ. ಇಲ್ಲಿ ಕಾಲ ಘಟನೆಗಳ ಆಟವಿರುತ್ತದೆ. 'ಅನ್ಯ' ಎಂದು ಪರಿಗಣಿಸುವ ಮನಸ್ಸು, ತನ್ನ ಪರ ಹಾಗು ಹಿತವನ್ನೊಳಗೊಂಡ 'ಹಕ್ಕು' ಬೇಡಿಕೆಯಲ್ಲಿ ಜಾಗೃತಗೊಂಡಿರುತ್ತದೆ. ಆಯೋಗಗಳ ಅಧ್ಯಯನ ವರದಿಗಳು ಮೂಕ ಇಲ್ಲವೆ ಮುಖರಹಿತವಾಗಿಬಿಡುತ್ತವೆ.

ಕಾಸರಗೋಡು ಕೇರಳದ ಜಿಲ್ಲೆಯಾಗಿ, ಅದರ ಬೇರ್ಪಡದ ಹಿಸ್ಸೆಯಾಗಿ ಮಾಡಿಕೊಂಡದ್ದು ಇಲ್ಲಿ ಸ್ಮರಣ ಯೋಗ್ಯ. ಇದು ಪ್ರಾಂತ್ಯ ವಿಸ್ತರಣೆಯ, ತನ್ಮೂಲಕ ಭಾಷಾಂತರಗೊಳಿಸುವ (ಮತಾಂತರ ದಂಧೆ) ಸಂಚೆಂಬುದು ಸ್ಪಷ್ಟ. ಹಾಗು ಇದು ತನ್ನ ನಿಲುವು ಸತ್ಯದ್ದು, ನ್ಯಾಯದ್ದು ಎಂಬ ಏಕಮುಖೀ ವಾದದ ಪರಿಣಾಮ. ಇಂಥ ಸಂದರ್ಭದಲ್ಲಿ ಸಂತ್ರಸ್ತಗೊಳ್ಳುವ (ಭಾಷಿಕ, ಸಾಂಸ್ಕೃತ ಈ ಎರಡರ ಮೂಲಕವಾದ ಸಾಮಾಜಿಕ) ಜನ 'ಹೇರಲಾಗುವ ಭಾಷೆ, ಸಂಸ್ಕೃತಿಗೆ ತಮ್ಮನ್ನು ಒಗ್ಗಿಸಿಕೊಳ್ಳಲಾಗದೆ, ಹಾಗೆಂದು ಹೊರಬರಲಾಗದೆ ಉಸಿರು ಕಟ್ಟಿದಂತೆ ಬದುಕುವ ಅನಿವಾರ್ಯತೆಯ ಒಳಗಾಗುತ್ತಾರೆ. ಇಲ್ಲಿನ ಇಂಥ ಬದುಕಿನ ನೋವಿಗೆ ಧ್ವನಿ ಇರದು. ಬಲವಂತದ ಇಂತಹ ಕ್ರಿಯೆಗಳು ಮಾಡುವ ಗಾಯಗಳು ಮಾಯುವುದಿಲ್ಲ. ಇಂಥ ಸನ್ನಿವೇಶದಲ್ಲಿ ಹೊಂದಿಕೊಳ್ಳುವ ಮಧ್ಯಮ ಮಾರ್ಗವೊಂದು ತೆರೆದುಕೊಳ್ಳುತ್ತದೆ. ಈ ಮಾರ್ಗ ಕಾಲಗತಿಯಲ್ಲಿ ಅಧೀನ ಭಾಷೆ, ಸಂಸ್ಕೃತಿಯನ್ನು ಅಳಿಸಿ ಹಾಕುವ ಕೆಲಸದಲ್ಲಿ ತೊಡಗುತ್ತದೆ. ಹೀಗೆ ಗಡಿನಾಡಿನ ಬದುಕು ಒಳ ನೆಮ್ಮದಿಯನ್ನು ಕದಡಿಕೊಳ್ಳುತ್ತಲೆ ಇರುತ್ತದೆ.

ಭಾಷೆ, ಸಂಸ್ಕೃತಿಗಳನ್ನು ಕಳಕೊಳ್ಳುವಾಗಿನ ದುಗುಡ ನೋವುಗಳು ಮಾತೃ ವಿಯೋಗದಷ್ಟೆ ತೀವ್ರ ತೀಕ್ಷ್ಣವಾದುದು. ಇದನ್ನು ತೆಲುಗು ವಿದ್ವಾಂಸ, ಮೈಸೂರು ನಿವಾಸಿಯಾಗಿದ್ದ ಶ್ರೀ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮರ ಈ ಮಾತುಗಳಿಂದ ಅನುಭವಕ್ಕೆ ತಂದುಕೊಳ್ಳಬಹುದು. ಅವರು ೧೯೩೫ರಲ್ಲಿ ಪ್ರಕಟಗೊಂಡ 'ಶ್ರೀ ಚೌಡೇಶ್ವರೀ ಮಹಾತ್ಮ್ಯಮು' ಎಂಬ ಗ್ರಂಥದ ಪೀಠಿಕೆಯಲ್ಲಿ ಹೀಗೆ ಬರೆಯುತ್ತಾರೆ-

'... ತಲೆಮಾರುಗಳಿಂದ ಬಂದ ಸ್ವಭಾಷೆಯನ್ನೂ ಸಾಹಿತ್ಯವನ್ನೂ ಬಿಟ್ಟು ಇತರ ಭಾಷೆಯನ್ನು ಕಲಿತು ವ್ಯವಹರಿಸತೊಡಗುವುದು ತಮಗೇ ನಷ್ಟ, ಅನ್ಯರಿಗಲ್ಲ. ಕೋಲಾರ ಮುಂತಾದೆಡೆಗಳಲ್ಲಿ ತೆಲುಗುರ ಗತಿ ಹೀಗಾಗಿದೆ.... ಮನೆ, ನೆರೆಯ ಭಾಷೆ ತೆಲುಗಾದರೂ ಕೂಡ ಅವರ ಓದು ಬರಹ ತೆಲುಗಾಗದ ಸ್ಥಿತಿ ಉಂಟಾಗಿದೆ... ಮಕ್ಕಳು ಮರಿ ಬಂದೂ ಬರದ ಕನ್ನಡದಲ್ಲಿ ವ್ಯವಹಾರ ಮಾಡುತ್ತಿರುವರು. ಅನೇಕ ಕಡೆಗಳಲ್ಲಿ ತಂದೆ ಮಕ್ಕಳಿಗೆ ತೆಲುಗು ಲಿಪಿಯಲ್ಲಿ ಕನ್ನಡ ಭಾಷೆಯಲ್ಲಿ ಯೋಗಕ್ಷೇಮದ ಪತ್ರ ಬರೆಯುವಂತಹ ಸ್ಥಿತಿ ಮುಟ್ಟಿದ್ದಾರೆ. ಇದಕ್ಕೆ ಪ್ರತೀಕಾರ(ಪರಿಹಾರ) ಇಲ್ಲವೆ? ಒತ್ತಾಯದಲ್ಲಿ ತೆಲುಗು ಕಲಿತು ಅದರಲ್ಲೆ ವ್ಯವಹರಿಸಬೇಕಾಗಿ ಬಂದಿರುವ ಬಳ್ಳಾರಿ ಮೊದಲಾದ ಸೀಮೆಗಳ ಕನ್ನಡಿಗರ ಸ್ಥಿತಿಯೂ ಇದೇ ಆಗಿದೆಯಲ್ಲ ಎಂದು ಕೆಲವರು ಹೇಳುತ್ತಾರೆ. ಅನುಮಾನವೇನು? ಇಂತಹ ಸ್ಥಿತಿ ಯಾರಿಗೆ ಒದಗಿ ಬಂದರೂ ಶೋಚನೀಯವೆ.'

ರಾಳ್ಳಪಲ್ಲಿಯವರ ಮನದಾಳದ ಈ ದುಗುಡ, ನೋವು ಇಂದಿಗೂ ಪ್ರತಿ ಗಡಿನಾಡಿನ ಬಹುಜನರದ್ದಾಗಿದೆ.

ಗಡಿನಾಡಿನ ಜನ ಜೀವನ ಬರಿ ನೋವು, ಹಪಹಪಿಕೆ, ದುಗುಡಗಳಿಂದಲೇ ತುಂಬಿದೆ ಎಂದರೆ, ಅದು ಸತ್ಯ ದೂರದ ಮಾತೇ ಆಗುತ್ತದೆ. ಬದುಕಿನ ಒಳ ಹರಿವಿನಲ್ಲಿ ಪ್ರೀತಿ,

ಸ್ನೇಹ, ವಿಶ್ವಾಸ, ಹೊಂದಾಣಿಕೆಗಳು ಒಳಸಂಕಟಗಳನ್ನು ಮೀರಿ ದೈನಂದಿನ ವ್ಯವಹಾರಗಳನ್ನು ಕುದುರಿಸುತ್ತವೆ. ಸಂಕೀರ್ಣ ಬದುಕಿನ ಅನೇಕ ಸಂದರ್ಭಗಳು ಪರಸ್ಪರ ಸಖ್ಯ-ಸಹ್ಯತೆಗೆ ಅನುವು ಮಾಡಿಕೊಡುತ್ತವೆ. ಭಾಷಿಕ ನಿಂದೆಯ ಸಂದರ್ಭಗಳು ಹುಟ್ಟಿಕೊಳ್ಳುತ್ತಿದ್ದರೂ ವಿಲಕ್ಷಣ ಹೊಂದಾಣಿಕೆಯ ಪ್ರಜ್ಞೆಯಲ್ಲಿ ಜೀವನ ಸಾಗುತ್ತದೆ. ಗಡಿ ಭಾಗದ ವಿಲಕ್ಷಣ ಗುಣಗಳಲ್ಲಿ 'ಆಡಿಕೊಳ್ಳು'ವುದೂ ಒಂದು. ಇಂಥ ಸನ್ನಿವೇಶದ ಎರಡು ಪ್ರಸಂಗಗಳನ್ನು ಮಾದರಿಗಾಗಿ ನೋಡಬಹುದು.

ನನ್ನ ಗೆಳೆಯನ ತಂಗಿಗೆ ಗಂಡು ನೋಡಿದೆವು. ನಾನೇ ಮುಂದಿನ ಮನುಷ್ಯ. ಹುಡುಗ ಆಂಧ್ರದವನು. ಪರಸ್ಪರ ನೋಡಿ ಒಪ್ಪಿಕೊಂಡದ್ದಾಯ್ತು. ಗೆಳೆಯನ ಮನೆಯವರು ಅನುಕೂಲಸ್ಥರೆಂದು ತಿಳಿದಾಗ ಗಂಡಿನವರು ರಂಗು ಬದಲಿಸಿದರು. ಮೊದಲು ಬಯಸಿರದ ಕೆಲವು ಬೇಡಿಕೆಗಳನ್ನು ಮುಂದಿಟ್ಟರು. ಹುಡುಗಿಯ ತಂದೆ ಸಹನೆ ಕಳಕೊಂಡರು. 'ಆಂಧ್ರ ದವರೇ ಹೀಗೆ. ಆಡೋದೊಂದು, ಮಾಡೋದಿನ್ನೊಂದು. ಎರಡು ನಾಲಗೆ ಜನ. ಮಾತಾಡಿದರೆ ತಕಾರಾರು, ಜಗಳ. ಯಾರಿಗೆ ಬೇಕು ಹೋಗ್ರಿ ನಿಮ್ಮ ಸಂಬಂಧ..' ಗಂಡಿನವರೇನೂ ಹಿಂತೆಗೆದವರಲ್ಲ. 'ಕರ್ನಾಟಕದವರೇನು ಮಹಾ. ಕಂಡಿಲ್ಲವ. ಯಾಮಾರಿದರೆ ಸಾಕು ಲಂಗೋಟಿನೂ ನಮ್ಮದೆ ಅಂತೀರಿ. ಮಾತಾಡೋದು ನಿಯತ್ತಿನೋರ ಥರ. ಕೈಗೆ ಸಿಕ್ಕಿದರೆ ಬಕರ ಮಾಡಿಬಿಡ್ತೀರಿ. ನಮಗೇನು ಬೇರೆ ಹೆಣ್ಣಿಲ್ವ..' ಮುಂದೆ ಸಂಬಂಧ ಕುದುರಿತು; ಮದುವೆಯೂ ಆಯ್ತು. ಒಳ್ಳೆ ಊಟ ಕನ್ನಡಿಗರದು ಎಂಬ ಅಭಿಮಾನದ ಮಾತೂ ಬಂತು. ಈ ರೀತಿಯ ಮಾತುಗಳು ಅನೇಕ ವ್ಯವಹಾರಗಳ ನಡುವೆ ಇಣುಕುತ್ತಲೆ ಇರುತ್ತವೆ. ಹಬ್ಬ ಹರಿದಿನಗಳಲ್ಲಿ, ಜಾತ್ರೆಗಳಲ್ಲಿ ಎರಡೂ ಭಾಷೆಯ ಜನ ಕೂಡಿ (ಸಂಬಂಧಿಗಳ ನಡುವೆಯೂ) ಆಡುವ ಇಂಥ ಜಗಳಗಳಿಗೆ ಕಡಿಮೆ ಇಲ್ಲ. ಆದರೂ ಕೂಡಿ ಬಾಳುವ ಅನಿವಾರ್ಯತೆ ಒಂದೇ ಸಾಮಾಜಿಕ ಸೂರಿನಡಿ ಉಂಟಾಗುತ್ತಿರುತ್ತದೆ.

'ಸ್ಟಾರ್ ಅಭಿಮಾನಿಗಳ ವಾರ್' ಇನ್ನೊಂದು. ಎನ್.ಟಿ.ಆರ್., ನಾಗೇಶ್ವರರಾವುಗಳ ಯುಗ ಮುಗಿದರೇನಂತೆ. ಅವರ ಮಕ್ಕಳು ಬಾಲಕೃಷ್ಣ, ನಾಗಾರ್ಜುನ ಇದ್ದಾರೆ. ಜೊತೆಗೆ ಚಿರಂಜೀವಿ. ಕನ್ನಡದ ರಾಜ್‌ಕುಮಾರ್, ವಿಷ್ಣುವರ್ಧನ್, ದೇವರಾಜ್ ಇವರುಗಳು ಇರುವರು. ಪಕ್ಕಪಕ್ಕ ಕೂತು ಹೋಲಿಕೆ, ತೆಗಳಿಕೆ, ಹೊಗಳಿಕೆಗಳ ಬಾಣಗಳ ಅನುಸಂಧಾನ ನಡೆಸುತ್ತ ಜಗಳ ಕಾಯುವ ಜನ ವಿರಾಮದಲ್ಲಿ ಜೊತೆಯಾಗಿ ಹೊರಬಂದು ಸಿಂಗಲ್ ಟೀ, ಕಾಫಿ ಕುಡಿದೊ, ಗೋಲಿ ಸೋಡ ಕುಡಿದೊ ಬೀಡಿ ದಂ ಎಳೆದು ಹೋಗಿ ಕುಳಿತರೆ ಮತ್ತೆ ಅದೇ ಹಿಂದಿನ ವಾಗ್ಯುದ್ಧ ಶುರು. ಈಗೀಗ ಒಂದೇ ಸಿನೆಮಾದಲ್ಲಿ ಎರಡೂ ಭಾಷೆಯ ನಟರಿರುವುದು ಸಾಮಾನ್ಯವಾಗಿರುವುದರಿಂದ ಅಭಿಮಾನದ ಮಗ್ಗುಲಿಗೆ ಆಡಿಕೊಳ್ಳುವ ಮಾತುಗಳನ್ನೂ ಇಡುತ್ತಾರೆ. ಆದರೆ ಎನ್.ಟಿ.ಆರ್. ಯುಗದ ಬಿರುಸು ಇರದು.

ಇಷ್ಟೆಲ್ಲದರ ನಡುವೆಯೂ ಕನ್ನಡ-ತೆಲುಗು ಭಾಷಿಕರ ಸಂಯಮ ಸಹಿಷ್ಣುತೆ ಇತರ ಭಾಷಾ ಪ್ರಾಂತ್ಯದ ಗಡಿವಾಸಿಗಳಿಗೆ ಮಾದರಿಯಾದುದು. ಇದಕ್ಕೆ ದೀರ್ಘ ಆಡಳಿತ

ಪರಂಪರೆಯ ಇತಿಹಾಸ ಕಾರಣವೆನ್ನಬಹುದು. ಮುಖ್ಯವಾಗಿ ಕೃಷ್ಣದೇವರಾಯನ ಆಡಳಿತ ಇದಕ್ಕೆ ಗಟ್ಟಿ ಅಡಿಪಾಯ ಎನ್ನಲಡ್ಡಿಯಿಲ್ಲ. ಇಂದಿಗೂ ಯಾವೊಬ್ಬ ತೆಲುಗನೂ ಕೃಷ್ಣದೇವ ರಾಯನನ್ನು ಏಕವಚನದಲ್ಲಿ ಸಂಬೋಧಿಸುವುದಿಲ್ಲ. ಕೃಷ್ಣದೇವರಾಯುಲವಾರು, ರಾಯುಲ ವಾರು ಎಂದೇ ಸಂಬೋಧಿಸುವುದು ಮತ್ತು ಬರೆಯುವುದೂ ಕೂಡ. ಅಷ್ಟು ಗೌರವ ಅಭಿಮಾನವನ್ನು ಉಳಿಸಿಕೊಂಡಿದ್ದಾರೆ, ತೆಲುಗರು. ನಮ್ಮ ಸರ್ ಎಂ.ವಿ. ಅವರ ಬಗ್ಗೆಯೂ ಇದೇ ಆದರಾಭಿಮಾನವಿದೆ. ವಿಶೇಷವಾಗಿ ಕರ್ನಾಟಕವಾಸಿಗಳಾಗಿರುವ ತಮಿಳರು ಕನ್ನಡ-ತೆಲುಗರ ಈ ಆದರ್ಶವನ್ನು ತಮ್ಮದಾಗಿಸಿಕೊಳ್ಳಬೇಕಿದೆ. ಎನ್.ಟಿ.ಆರ್.ರವರ ರಾಜಕೀಯ ಪ್ರವೇಶ ಇಲ್ಲಿನ ತೆಲುಗರಿಗೆ ಅಭಿಮಾನದ ವಿಷಯವಾಗಿತ್ತೆ ಹೊರತು ಆತನ ರಾಜಕೀಯ ವರ್ಚಸ್ಸಿನ ಲಾಭ ಪಡೆದು ಬೇರ್ಪಡುವ ಮನೋಭಾವ ಇವರಿಂದ ಪ್ರದರ್ಶಿತವಾಗಲಿಲ್ಲ. ಇದನ್ನು ಚೆನ್ನೈನ ರಾಜಕೀಯದಾಟಕ್ಕೆ ಪ್ರಭಾವಿತರಾಗುವ ಜನ ಅರಿಯಬೇಕು ಮತ್ತು ಇಲ್ಲಿನವರಾಗಬೇಕು.

ಇಷ್ಟಕ್ಕೆ ಎಲ್ಲವೂ ಸರಿಹೋಯಿತೆಂದಲ್ಲ. ಆತಂಕದ ಹರಿವು ಮುಂದುವರೆಯುತ್ತದೆ. ಕರ್ನಾಟಕದಲ್ಲಿ ಶಿಕ್ಷಣ ಹಾಗು ಉದ್ಯೋಗಾವಕಾಶಗಳು ಅನುಕೂಲಕರ ಎಂಬ ನಂಬಿಕೆ ಯಿಂದಾಗಿ ಇಲ್ಲಿನ ತಮ್ಮ ನೆಂಟರ, ಬಂಧುಗಳ ಸಹಕಾರ ಆಶ್ರಯದಲ್ಲಿ ತಮ್ಮ ಮಕ್ಕಳನ್ನು ಗಡಿ ಗ್ರಾಮದವರು ಶಾಲೆಗಳಿಗೆ 'ತೂರಿ'ಸುತ್ತಾರೆ. ವೈವಾಹಿಕ ಸಂಬಂಧಗಳು ಏರ್ಪಡುವುದ ರಿಂದ ಆಂಧ್ರದಿಂದ ತಂದುಕೊಂಡ ಹೆಣ್ಣುಗಳು ಜಾತಿ, ಕುಟುಂಬದ ಪ್ರಭಾವದಲ್ಲಿ ಪಂಚಾಯ್ತಿ ಸದಸ್ಯ ಅಧ್ಯಕ್ಷಗಾದಿ ಏರುವುದುಂಟು. ಕನ್ನಡದ ಕಾಗುಣಿತವನ್ನೂ ಅರಿಯದ ಇಂಥವರು ಒಂದು ಪರಿಚಯ ಪತ್ರಕ್ಕೆ ಸಹಿ ಹಾಕಬೇಕಾದರೂ ಗಂಡ ಅಕ್ಷರಸ್ಥನಾಗಿದ್ದರೆ ಅವನ ಕೈ ಬಾಯತ್ತ ನೋಡುವರು. ಅವನೂ ತೆಲುಗನೇ ಆಗಿದ್ದರೆ ಕನ್ನಡಬಲ್ಲ ನಂಬಿಕಸ್ಥನ ಮೊರೆ ಹೋಗುವರು. ಅವನು ಅಪಾಯವಿಲ್ಲವೆಂದು ಹಸಿರು ನಿಶಾನೆ ತೋರಿಸಿದ ಮೇಲಷ್ಟೇ ದಸ್ಕತ್ತಿನ ಕೃಪೆಯಾಗುವುದು.

ರಾಜಕೀಯ ಮೀಸಲಾತಿಯ ಕೃಪೆ ಒಮ್ಮೊಮ್ಮೆ 'ಹೇರಿಕೆ'ಯಾಗಿ ಕಾಡುವುದುಂಟು. ಹೀಗೆ ಮೀಸಲಾತಿ ಕೃಪೆಯಡಿ ಒಬ್ಬರು ಪಂಚಾಯ್ತಿಯೊಂದರ ಅಧ್ಯಕ್ಷರೂ ಆದರು. ಆಕೆಗೆ ಕನ್ನಡದ ಕಾಗುಣಿತವೂ ತಿಳಿದದ್ದಿಲ್ಲ. ಯಾವುದೇ ಕಾಗದ ಪತ್ರಕ್ಕೆ ರುಜು ಹಾಕಬೇಕಾದರೂ ಗಂಡ ಇರಲೇಬೇಕಿತ್ತು. ಆತನ ಮನೆಯಿಂದ ಹೊರಗಿದ್ದಾಗ ನಿಶಾನೆಯಾಗಿ ಪತ್ರದೊಂದಿಗೆ ಕರವಸ್ತ್ರವನ್ನು ಕಳುಹಿಸುತ್ತಿದ್ದ. ಆತನೂ ಲಭ್ಯವಿಲ್ಲದಿದ್ದಾಗ ಅವರ ನಂಬಿಕಸ್ತನ ಮಧ್ಯಸ್ಥಿಕೆ ಬೇಕಾಗುತ್ತಿತ್ತು. ಕನ್ನಡದಲ್ಲಿ ತಮ್ಮ ಹೆಸರನ್ನೂ ಬರೆಯಲು ಬರದ 'ಪ್ರತಿನಿಧಿ'ಗಳೂ ಇದ್ದಾರೆ. ಸಾಕ್ಷರತಾ ಆಂದೋಲನದ ಕಾಲದಲ್ಲಿ ಇಂಥ ಕೆಲವರು ಒಂದಿಷ್ಟು ಕನ್ನಡವನ್ನು, ಕನ್ನಡದಲ್ಲಿ ಹೆಸರು ಬರೆಯುವುದನ್ನು ಕಲಿತದ್ದುಂಟು. ಇಂಥ ಹೇರಿಕೆಗಳಿಂದಾಗಿ ಸಾಧಿಸಿದ್ದಕ್ಕಿಂತ ಸಾಧಿತವಾಗದೆ ಉಳಿಯುವುದೇ ಹೆಚ್ಚು.

ಈಗ ಇನ್ನೊಂದು ಮಗ್ಗುಲು. ಇಲ್ಲಿ ಮನಸ್ಸು, ಭಾವನೆ ಉದಾರವಾಗಿರುತ್ತದೆ. ಎಲ್ಲಿ

ಅಸಮಾಧಾನಗಳ ತೀವ್ರತೆಯನ್ನು ಕುಗ್ಗಿಸುವ ಗತಿ ಇದು. ಇಲ್ಲಿನ ಮಿಡಿತ ಬಂಧ, ಅನುಬಂಧದ್ದು. ದ್ಯಾವರು ಜಾತ್ರೆಗಳನ್ನು ಒಂದಾಗುವುದು. ಕೂಡಿ ಉತ್ಸವಗಳನ್ನು ನಡೆಸುವುದು. ಕಷ್ಟಕ್ಕೆ ಕೈ ಜೋಡಿಸುವುದು. ಮಾನವೀಯ ಸ್ಪಂದನಗಳು ಭಾಷೆ, ರಾಜಕೀಯ ಭಿನ್ನಾಭಿಪ್ರಾಯಗಳನ್ನು ಸಂದರ್ಭದ ಮಟ್ಟಿಗೆ ತಡೆದಿರುತ್ತವೆ. ಇದು ನೆರೆವೊಂದು ಬಂದು ಒಡ್ಡಿದ ಕಷ್ಟದಲ್ಲಿ ಎಲ್ಲರೂ ಒಂದಾಗಿ ಭಾಗಿಯಾದಂತೆ. ನೆರೆಯಿಳಿದು ಎಲ್ಲ ಸಹಜಸ್ಥಿತಿಗೆ ಬಂದ ಮೇಲೆ ಅದು ಉಳಿಸುವ ಬಗ್ಗಡದಂತೆ. ಹಿಂದಿದ್ದುದೆಲ್ಲ ಮತ್ತೆ ಪುನರಾವತರಿಸುತ್ತದೆ.

ಗಡಿಭಾಗದ ಜೀವನ ಭಾಷೆಯೊಂದಿಗೇ ಉಸಿರಾಡುತ್ತದೆ. ಅಸ್ತಿತ್ವದ ಹೋರಾಟದಲ್ಲಿ ಸದಾ ನಿರತವಾಗಿರುತ್ತದೆ. ಜಲ ನೆಲದ ವಿವಾದಗಳು ಸಂಕಟವನ್ನುಂಟು ಮಾಡುತ್ತಿರುತ್ತವೆ. ಈ ಮೂರನ್ನು ಬೇರ್ಪಡಿಸಿ ಬದುಕಲಾಗದು. ಕೆಡುವುದನ್ನು ಸರಿಪಡಿಸಿಕೊಳ್ಳುತ್ತ, ರಕ್ಷಿಸಿಕೊಳ್ಳುತ್ತ ತನ್ನದು, ತನ್ನತನವನ್ನು ಕಾಯ್ದುಕೊಳ್ಳಬೇಕು. ಸಾಮಾಜಿಕ, ರಾಜಕೀಯ ಮಿತಿಗಳನ್ನು ಗಮನದಲ್ಲಿಟ್ಟುಕೊಂಡು ಭಾಷೆ, ಸಂಸ್ಕೃತಿಯನ್ನು ಉಳಿಸಿ, ಬೆಳೆಸಿಕೊಳ್ಳುತ್ತಲೇ ಸಾಗಬೇಕು. ಗಡಿನಾಡ ಜೀವನ ಸದಾ ಮಾನಸಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಈ ಎಲ್ಲವೂ ಕೂಡಿ ಉಂಟು ಮಾಡುವ ಆರ್ಥಿಕ ಸಂಘರ್ಷಗಳಲ್ಲಿ ತೊಡಗಿರುತ್ತದೆ. ಇಲ್ಲಿ ಚರಿತ್ರೆ ಕಲಿಸುವ ಗುಣಪಾಠದ ನೆರವು ಕೊಂಚ ಇರುತ್ತದೆ.

ಸಾಹಿತ್ಯ, ಸಂಸ್ಕೃತಿ ವಲಯದ ಜನರಿಗೆ ಈ ಎಲ್ಲ ಸಂಘರ್ಷದ ಬೀಸು ಇದ್ದದ್ದೇ ಆದರೂ ವಿಶೇಷ ಪ್ರಯತ್ನವಿಲ್ಲದೆ ಎರಡೂ ಭಾಷೆಗಳ ಸಂಸರ್ಗ ಏರ್ಪಡುತ್ತದೆ. ಇದು ಇಲ್ಲಿನ ಜನರ ಮನೋಭಾವದ ಗತಿಯನ್ನು ಹಿಡಿಯಲು ನೆರವಾಗುತ್ತದೆ. ಇಂಥವರು ಸಹಿಷ್ಣು ಸಂಪರ್ಕ ಸೇತುವೆಯನ್ನು ರಾಯಭಾರಿ ಮನೋಭೂಮಿಕೆಯಲ್ಲಿ ನಿರ್ಮಿಸಲು ಸಾಧ್ಯವಿದೆ. ಇವರಿಗೆ ಎರಡೂ ಭಾಷೆಗಳು 'ದ್ವೈಮಾತುರ' ಸಂಬಂಧವಾಗಿ ತೆರೆದುಕೊಳ್ಳುತ್ತವೆ.

ಕನ್ನಡ, ಕನ್ನಡತನವನ್ನು ಉಳಿಸಿಕೊಳ್ಳುವ ಜರೂರಿಯೊಂದಿಗೆ ಇನ್ನೊಂದು ಹೊಣೆಯೂ ಇಲ್ಲಿನವರಿಗೆ ಇರುತ್ತದೆ. ಬಾಂಧವ್ಯ ಬೆಸೆಯುವ ಹೊಣೆಗಾರಿಕೆ ಅದು. ಇದು ಏಕಮುಖವಾಗ ಬಾರದು. ಹಾಗೇನಾದರೂ ಆದರೆ ಎಡವಟ್ಟುಗಳ ಪರಂಪರೆಯೆ ಸೃಷ್ಟಿಗೊಳ್ಳುವುದು. ಬಾಂಧವ್ಯ ಹದಗೆಡಬಾರದು. ದುರಾಭಿಮಾನ, ದ್ವೇಷಗಳಿಗೆ ಅಡಿಯಾಗಬಾರದು. ಇದು ಧರ್ಮದಷ್ಟೇ ಭಾವನಾತ್ಮಕವೂ, ನಾಜೂಕಿನದೂ ಆದುದು. ಆವೇಶ, ಸಂಶಯಗಳಿಂದ ಕಳೆದುಕೊಳ್ಳುವುದೆ ಹೆಚ್ಚಾಗುತ್ತದೆ. ಆದ್ದರಿಂದ ಸಂಕಲ್ಪ, ದೃಢತೆಯಿಂದಷ್ಟೆ ಸಾಧನೆ ಸಾಧ್ಯ. ಆವೇಶದ ಒಣಕೂಗು ಈ ತನಕ ಏನನ್ನೂ ಸಾಧಿಸಿಲ್ಲ. ಇದು ಉಭಯರ ಅರಿವಿನಲ್ಲಿ ಅರಳಬೇಕು. ಭಾಷೆ, ಸಂಸ್ಕೃತಿಗಳ ನಡುವೆ ನೀಲಗಿರಿ ತೋಪುಗಳನ್ನು ನೆಡುವುದನ್ನು ಬಿಟ್ಟು ಗಂಧ, ಗಿಡಮೂಲಿಕೆಗಳನ್ನು ಹಚ್ಚಿಸಬೇಕು.

ಹೀಗೆ ಒಟ್ಟು ಅನುಭವಗಳನ್ನು ಗ್ರಹಿಸಿಕೊಂಡಾಗ ಗಡಿಭಾಗದ ಬದುಕು ಚೈತ್ರ-ಶ್ರಾವಣ ಸಂಸ್ಕೃತಿಯ ಸಮ್ಮಿಲನವೂ ಕೋಳಿ ಅಂಕದ ಬಿಗುವಿನದೂ ಆಗಿರುವುದು ಗೋಚರಿಸುತ್ತದೆ.



# ಈಗ ಸಾಕಷ್ಟು ಪರಿವರ್ತನೆ ಆಗಿದೆ

● ಜೆ ಬಿ ವಿಸಾಜಿ

ಬೀದರ ಜಿಲ್ಲೆ ಹಾಗೂ ಸುತ್ತಮುತ್ತಲಿನ ಹೈದ್ರಾಬಾದ ಕರ್ನಾಟಕದ ಭಾಗ ರಜಾಕಾರರ ಹಾವಳಿಯಿಂದ ಅತ್ಯಂತ ಕಷ್ಟಕ್ಕೆ ಒಳಗಾಗಿದೆ. ಮೊದಲು ಹಿಂದುಗಳು, ನಂತರ ಮುಸಲ್ಮಾನರು ಕೋಮು ಗಲಭೆಗೆ ಸಿಲುಕಿ ಮುಗ್ಧ ಜನರು ವಿನಾಕಾರಣ ಹಿಂಸಿಸಲ್ಪಟ್ಟಿದ್ದಾರೆ. ಇಡೀ ಭಾರತಕ್ಕೆ ೧೫ ಆಗಸ್ಟ ೧೯೪೭ ರಂದು ಸ್ವಾತಂತ್ರ್ಯ ದೊರಕಿದರೆ, ಈ ಭಾಗಕ್ಕೆ ೧೮ ಸೆಪ್ಟೆಂಬರ್ ೧೯೪೮ ರಂದು ಸ್ವಾತಂತ್ರ್ಯ ದೊರಕಿತು.

ನಾನು ಜನಿಸಿದ (೧೯೪೯) ಬಸವಕಲ್ಯಾಣ ತಾಲೂಕಿನ ಗ್ರಾಮದಲ್ಲಿ ಕೇವಲ ಖಾಸಗಿ ಶಾಲೆ ಇತ್ತು. ಮರಾಠಿಯಲ್ಲಿ ಶಿಕ್ಷಣ ದೊರಕುತ್ತಿತ್ತು. "ಛಡಿ ಲಾಗಲಿ ಛಾಮ ಛಾಮ, ವಿದ್ಯಾ ಲಾಗಲಿ ಘಾಮ ಘಾಮ" ಎಂಬ ಹಾಡು ಹಾಡಿಸುತ್ತಿದ್ದರು. ಸರಕಾರಿ ಶಾಲೆಗಳಲ್ಲಿ ಉರ್ದು ಶಿಕ್ಷಕರೇ ಇದ್ದರು. ೧೯೫೩ ರಿಂದ ಕರ್ನಾಟಕ ಏಕೀಕರಣ ಚಳುವಳಿ ಬಿರುಸಿನಿಂದ ಈ ಭಾಗದಲ್ಲಿ ಮುಂದುವರೆಯಿತು. ನಾನು ಮೂರನೆಯ ತರಗತಿಯವರೆಗೆ ಮರಾಠಿ ಕಲಿತು ನಂತರ ನಾಲ್ಕನೆಯ ತರಗತಿಯಿಂದ ಕನ್ನಡ ಮಾಧ್ಯಮಕ್ಕೆ ಬಂದಿದ್ದೇನೆ. ಆ ಕಾಲದಲ್ಲಿ ಎಷ್ಟೋ ವಿದ್ಯಾರ್ಥಿಗಳು ಮರಾಠಿ, ಉರ್ದುವಿನಿಂದ ಕನ್ನಡಕ್ಕೆ ತಮ್ಮ ಶಿಕ್ಷಣ ಬದಲಾಯಿಸಿ ಕೊಂಡಿದ್ದಾರೆ. ಆಗಿನ ಕಾಲದಲ್ಲಿ ಲಿಂಗವಂತರ ಲಗ್ನಪತ್ರಿಕೆಗಳು ಮರಾಠಿಯಲ್ಲಿಯೇ ಇರುತ್ತಿದ್ದವು. ದನಗಳ ಮಾರಾಟದ ಪತ್ರ, ಸಾಲಪತ್ರಗಳು ಮರಾಠಿಯಲ್ಲಿಯೇ ಇದ್ದುವು. ಸಮಾಜದಲ್ಲಿ ಮರಾಠಿಗೆ ಆಡತಿ ಅಂಗಡಿಗಳಲ್ಲಿಯೂ ಬಳಸುತ್ತಿದ್ದರು. ಆಗಿನ ಕಾಲದಲ್ಲಿ ಖಾನಗಿ ಶಾಲೆಯಲ್ಲಿ ಕಲಿಯುವುದೆಂದರೆ ಆಡತಿ ಅಂಗಡಿಗಳಲ್ಲಿ ಮುನೀಮನಾಗುವುದಕ್ಕಾಗಿಯೇ ಎಂಬ ತಿಳುವಳಿಕೆ ಇತ್ತು.

ಗುಲಬರ್ಗಾದಲ್ಲಿ ೧೯೬೭ರಿಂದ ನಾನು ಸರಕಾರಿ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಬ್ರಾಹ್ಮಣ ಹಾಗೂ ಮರಾಠಿ ವಿದ್ಯಾರ್ಥಿಗಳು ಸಾಮಾಜಿಕವಾಗಿ ಶೈಕ್ಷಣಿಕವಾಗಿ ಮುಂದಿದ್ದರು. ಅವರಿಗೆ ಮರಾಠಿ ಪ್ರಾಧ್ಯಾಪಕರ, ಸಮಾಜದವರ ಬೆಂಬಲವಿರುತ್ತಿತ್ತು. ಆಗ ಲಿಂಗಾಯತ, ಮುಸ್ಲಿಂ ಹಾಗೂ ದಲಿತ ವಿದ್ಯಾರ್ಥಿಗಳು ಒಂದು ಗುಂಪಾಗಿ ಹೋರಾಡುತ್ತಿದ್ದರು. ಒಂದು ಸಲ ಕಾಲೇಜಿನಲ್ಲಿ ಮರಾಠಿ ನಾಟಕವಿತ್ತು. ಸ್ತ್ರೀ ಪಾತ್ರಗಳನ್ನು ಸ್ತ್ರೀಯರೇ ಮಾಡಿದ್ದರು. ಸಮಾಜದ ಪ್ರತಿಷ್ಠಿತ ಜನರು ಕಾರು, ಮೋಟರ್ ಸೈಕಲ್ಲುಗಳ ಮೇಲೆ ಕುಟುಂಬ ಸಹಿತ ನಾಟಕ ನೋಡಲು ಕಿಕ್ಕಿರಿದು ತುಂಬಿದ್ದರು. ವಿದ್ಯುತ್ ಹೋದರೆ ಬೇಕೆಂದು ಪೆಟ್ರೋಮ್ಯಾಕ್ಸ್ ಹಚ್ಚಿಯೇ ಇಟ್ಟಿದ್ದರು. ನಾಟಕ ಆರಂಭವಾದ ಸ್ವಲ್ಪ ಸಮಯದಲ್ಲಿಯೇ ಮರಾಠೇತರ ಗುಂಪು ವಿದ್ಯುತ್ ನಿಲ್ಲಿಸಿದರು, ಪೆಟ್ರೋಮ್ಯಾಕ್ಸ್ ಒಡೆದು ಹಾಕಿದರು, ಕಾರು ಮೋಟರ್ ಸೈಕಲ್ಲುಗಳ ಮೇಲೆ ಕಲ್ಲು ತೂರಿದರು. ಮಹಿಳೆಯರಿಗೆ ತೊಂದರೆ ನೀಡಿದರು. ನಾಟಕ ಅಲ್ಲಿಗೇ ನಿಲ್ಲಿಸಬೇಕಾಯಿತು.

ಇನ್ನೊಮ್ಮೆ ಅದೇ ಸರಕಾರಿ ಕಾಲೇಜಿನಲ್ಲಿ ವಾರ್ಷಿಕೋತ್ಸವ ಭರ್ಜರಿಯಿಂದ ನಡೆದಿತ್ತು. ಬ್ರಾಹ್ಮಣ ವಿದ್ಯಾರ್ಥಿ ವಿದ್ಯಾರ್ಥಿಸಂಘದ ಅಧ್ಯಕ್ಷನಾಗಿ ಆಯ್ಕೆಯಾಗಿದ್ದ. ಮರಾಠಿ ಹುಡುಗಿ ಪ್ರಾರ್ಥನಾ ಗೀತೆ ಹಾಡಲು ಪ್ರಾರಂಭಿಸಿದ್ದಳು. ಮರಾಠೇತರ ವಿದ್ಯಾರ್ಥಿಗಳ ಗುಂಪು ಕೋಳಿ ವೊಟ್ಟೆ, ಟವಮಾಟಾಗಳನ್ನು ವೇದಿಕೆ ಮೇಲೆ ಹೊಡೆದರು. ಫಟಾಕಿ ಹಾರಿಸಿದರು. ವಾರ್ಷೀಕೋತ್ಸವ ಅಲ್ಲಿಗೆ ನಿಲ್ಲಿಸಲಾಯಿತು.

ಸಾಂಸ್ಕೃತಿಕವಾಗಿ, ಭಾಷಿಕವಾಗಿ ಹಿಂದುಳಿದ ವಿದ್ಯಾರ್ಥಿಗಳು ಅನ್ಯಭಾಷಿಕರ ಸೌಭಾಗ್ಯ ವನ್ನು ಸಹಿಸಲಾರದೆ ಇಂಥ ಕಾರ್ಯದಲ್ಲಿ ತೊಡಗುತ್ತಿದ್ದರು.

೧೯೬೮ ರಲ್ಲಿ ನಾನು ಕನ್ನಡ ಎಂ.ಎ. ಪದವಿ ಪಡೆದು ಭಾಲ್ಕಿಯ ಚೆನ್ನಬಸವೇಶ್ವರ ಮಹಾವಿದ್ಯಾಲಯಕ್ಕೆ ಅಧ್ಯಾಪಕನಾಗಿ ಬಂದೆನು. ಭಾಲ್ಕಿಯನ್ನು ಕರ್ನಾಟಕದಲ್ಲಿ ಉಳಿಸಿ ಕೊಳ್ಳಲು ಹೋರಾಟ ಮಾಡಿದ ಭೀಮಣ್ಣ ಖಂಡ್ರೆ ಅವರೇ ಶಿಕ್ಷಣಸಂಸ್ಥೆಯ ಅಧ್ಯಕ್ಷರಾಗಿ ದ್ದರು. ಈ ಭಾಗದಲ್ಲಿ ಕನ್ನಡವನ್ನು ಉಳಿಸಲು ಹಗಲಿರುಳು ಪರಿಶ್ರಮಿಸಿದ ಪೂಜ್ಯ ಚೆನ್ನಬಸವ ಪಟ್ಟದೇವರು ಹಿರೇಮಠ ಸಂಸ್ಥಾನ ಭಾಲ್ಕಿ ಶಿಕ್ಷಣ ಸಂಸ್ಥೆಯ ಸಂಸ್ಥಾಪಕರಾಗಿದ್ದರು. ಕರ್ನಾಟಕ ಏಕೀಕರಣದಲ್ಲಿ ಹೋರಾಡಿದ ಎಸ್. ಎಂ. ಕಪ್ಪಿಕೇರಿ ಅವರು ಪ್ರಾಚಾರ್ಯರಾಗಿ ದ್ದರು. ಹೀಗಾಗಿ ಕನ್ನಡ ಬೆಳೆಯಿಸಲು ನನಗೆ ಒಳ್ಳೆಯ ವಾತಾವರಣ ದೊರಕಿತು.

ಆಗ ಭಾಲ್ಕಿಯಲ್ಲಿ ಸಭೆ ಸಮಾರಂಭಗಳಲ್ಲಿ ಕನ್ನಡ ಹಾಡು ಹಚ್ಚಲು ಧ್ವನಿಮುದ್ರಿಕೆಗಳು ಸಿಗುತ್ತಿರಲಿಲ್ಲ. ಕನ್ನಡ ಪತ್ರಿಕೆಗಳು ಓದುವವರು ಇರಲಿಲ್ಲ. ಕನ್ನಡ ಸಿನಿಮಾ ಬರುತ್ತಿರಲಿಲ್ಲ. ಎಲ್ಲಾ ಕಛೇರಿಗಳಲ್ಲಿ ಬಹಳಷ್ಟು ಜನ ಕನ್ನಡ ಬಾರದ ಅಧಿಕಾರಿಗಳು, ಸಿಬ್ಬಂದಿಗಳೇ ತುಂಬಿದ್ದರು. ಲಿಂಗವಂತರು ಕೂಡ ತಮ್ಮ ಮನೆಗಳಲ್ಲಿ, ಪೇಟೆಯಲ್ಲಿ ಬಹಳಷ್ಟು ಜನರು ಹಿಂದಿ ಮಾತಾಡುತ್ತಿದ್ದರು. ನಾಮಫಲಕಗಳು ಮರಾಠಿಯಲ್ಲಿದ್ದವು. ಮರಾಠಿಗರು ಭಾಷಾವಾರು ಪ್ರಾಂಥ ರಚನೆಯಿಂದ ಕರ್ನಾಟಕದಲ್ಲಿ "ಮಹಾರಾಷ್ಟ್ರ ಏಕೀಕರಣ ಸಮಿತಿ" ರಚಿಸಿಕೊಂಡು "ಮಹಾರಾಷ್ಟ್ರ ಝೂಲಾಚ ಫಾಯಿಜೆ" ಎಂದು ಕೂಗುತ್ತಿದ್ದರು.

ಒಮ್ಮೆ ಚೆನ್ನಬಸವೇಶ್ವರ ಮಹಾವಿದ್ಯಾಲಯದಲ್ಲಿ ಕರ್ನಾಟಕ ರಾಜ್ಯೋತ್ಸವ ಆಚರಿಸುತ್ತಿದ್ದೆವು. ನಮ್ಮ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರ ಮಗಳು, ಪ್ರಾಥಮಿಕ ಶಾಲೆಯ ಹುಡುಗಿ ತಾನೂ ಹಾಡುವುದಾಗಿ ಮುಂದೆ ಬಂದಳು. ಪ್ರಾಚಾರ್ಯರು ಅನುಮತಿ ನೀಡಿದರು. ವೇದಿಕೆಯ ಮೇಲೆ ಬಂದವಳೇ ಕರ್ನಾಟಕ ರಾಜ್ಯೋತ್ಸವ ಸಮಾರಂಭದಲ್ಲಿ "ಜಯ ಹೋ ಮಹಾರಾಷ್ಟ್ರ" ಎಂಬ ಪದ್ಯಹಾಡಿ ಮುಗಿಸಿದಳು. ಸಭೆಯಲ್ಲಿ ನೆರೆದ ಜನ ಅನುಮತಿ ನೀಡಿದ ಪ್ರಾಚಾರ್ಯರಿಗೆ ತರಾಟೆಗೆ ತೆಗೆದುಕೊಂಡರು. ಇದು ಮರಾಠಿ ಶಿಕ್ಷಕರ ಕುಚೋದ್ಯವಾಗಿತ್ತು.

ಚೆನ್ನಬಸವೇಶ್ವರ ಮಹಾವಿದ್ಯಾಲಯದಲ್ಲಿ ಕನ್ನಡ, ಹಿಂದಿ ಮರಾಠಿ ಮತ್ತು ಇಂಗ್ಲಿಶ್ ಭಾಷೆಗಳಲ್ಲಿ ವಿದ್ಯಾರ್ಥಿಗಳ ಸ್ಪರ್ಧೆ, ನಾಟಕ ಸ್ಪರ್ಧೆ ಏರ್ಪಡಿಸುತ್ತಿದ್ದೆವು. ಎಲ್ಲಾ ಭಾಷೆಗಳ ಲೇಖನ, ಕವನಗಳನ್ನು ಕೂಡಿಸಿ ಕಾಲೇಜ್ ಮ್ಯಾಗಝೀನ್ ಪ್ರಕಟಿಸುತ್ತಿದ್ದೆವು. ಕನ್ನಡದ ಬಗ್ಗೆ ಕಾರ್ಯಮಾಡುವಾಗ ಹೆಚ್ಚಿನ ಆನಂದವಾಗುತ್ತಿತ್ತು.

ಒಂದು ಸಲ ಮರಾಠಿ ಪ್ರಾಧ್ಯಾಪಕ ಮರಾಠಿ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ ರೇಡಿಯೊ ನಾಟಕ ಪ್ರದರ್ಶಿಸಿದ. ನಾನು ಕನ್ನಡದಲ್ಲಿ ರೇಡಿಯೊ ನಾಟಕ ವೇದಿಕೆಯ ಮೇಲೆ ಪ್ರದರ್ಶಿಸಿದುದು ನೋಡಿರಲಿಲ್ಲ. ನಾವೂ ಒಂದು ಪ್ರಯೋಗ ಮಾಡೋಣವೆಂದು ಕನ್ನಡ ವಿದ್ಯಾರ್ಥಿ-ವಿದ್ಯಾರ್ಥಿನಿಯರನ್ನು ಸಿದ್ಧಪಡಿಸಿ, ಯಶಸ್ವೀ ಪ್ರಯೋಗ ಮಾಡಿ ತೋರಿಸಿದೆವು. ಇಂತಹ ಸ್ಪರ್ಧೆಯಿಂದ ನಿಜವಾಗಿಯೂ ಕನ್ನಡದ ಸಿರಿವಂತಿಕೆ ಹೆಚ್ಚಿಸಿದೆ.

ಒಮ್ಮೆ ಕರ್ನಾಟಕ ರಾಜ್ಯೋತ್ಸವದ ನಿಮಿತ್ತ ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಬಹುಭಾಷಾ ಕವಿ ಸಮ್ಮೇಲನ ಹಮ್ಮಿಕೊಳ್ಳಲಾಗಿತ್ತು. ಕವಿಸಮ್ಮೇಲನದ ಜವಾಬ್ದಾರಿಯನ್ನು ಮೋಹಸೀನ ಕಮಾಲ ಅವರಿಗೆ ವಹಿಸಲಾಗಿತ್ತು. ಕವಿಸಮ್ಮೇಲನ ಪ್ರಾರಂಭವಾಗುವ ಹೊತ್ತಿಗೆ ನೂರಾರು ಮುಸ್ಲಿಂ ಯುವಕರು ವೇದಿಕೆಯ ಮುಂಭಾಗದಲ್ಲಿ ಬಂದು ಕೂತರು. ಕನ್ನಡ ಅವರಿಗೆ ತಿಳಿಯುತ್ತಿರಲಿಲ್ಲ. ಕನ್ನಡ ಕವನಗಳನ್ನು ಓದುತ್ತಿದ್ದಾಗ ಸುಮ್ಮನೆ "ವಾಹವ್ವಾ ವಾಹವ್ವಾ " ಎಂದು ಚೀರಾಡಿ ಅಡತಡೆ ಉಂಟು ಮಾಡುತ್ತಿದ್ದರು. ಇಂಥ ಪ್ರಸಂಗಗಳನ್ನು ಕನ್ನಡಿಗರು ಎದುರಿಸಬೇಕಾಗುತ್ತಿತ್ತು.

ಭಾಷಾವಾರು ಪ್ರಾಂತ ರಚನೆಯಾಗುವಾಗ ಅನೇಕ ಕನ್ನಡ ಯುವಕರು ಕಲ್ಲು ತೂರಾಟದಲ್ಲಿ ಸಿಲುಕಿಕೊಂಡಿದ್ದಾರೆ. ನಮಗೆ ಬರಬೇಕಾದ ಭಾಗಗಳು ಬರದೆ, ಮಹಾರಾಷ್ಟ್ರ-ಆಂಧ್ರಪ್ರದೇಶಗಳಿಗೆ ಸೇರಿ ಸಾಂಸ್ಕೃತಿಕವಾಗಿ, ಭಾಷಿಕವಾಗಿ ಇಬ್ಬಗೆಯ ಅನುಭವ ಅನುಭವಿಸುತ್ತಿದ್ದಾರೆ.

ಈಗ ಈ ಭಾಗದಲ್ಲಿ ಸಾಕಷ್ಟು ಪರಿವರ್ತನೆ ಆಗಿದೆ. ಕತ್ತಲೆ ಕಳೆದು ಬೆಳಕಿನೆಡೆಗೆ ಬಂದಂತಾಗಿದೆ. ಕನ್ನಡ ಸಂಸ್ಕೃತಿ, ಕನ್ನಡ ಭಾಷೆ ಎಲ್ಲೆಡೆ ಪ್ರಜ್ವಲಿಸುತ್ತಿವೆ. ಮರಾಠಿ, ಉರ್ದು ಜನರು ಮೃದುವಾಗಿದ್ದಾರೆ. ತನ್ನಷ್ಟಕ್ಕೆ ತಾವೇ ಕನ್ನಡ ಕಲಿಯಲು ಪ್ರಾರಂಭಿಸಿದ್ದಾರೆ. ಪ್ರೌಢಶಾಲೆಯಲ್ಲಿ ಮರಾಠಿ ಮಾಧ್ಯಮದಲ್ಲಿ ಓದಿದವರೂ ಕಾಲೇಜಿಗೆ ಬಂದಾಗ ಕನ್ನಡ ಮಾಧ್ಯಮಕ್ಕೆ ಒಲಿಯುತ್ತಿದ್ದಾರೆ. ಐದು-ಹತ್ತು ಕನ್ನಡ ಪತ್ರಿಕೆಗಳೂ ಮಾರಾಟವಾಗುತ್ತಿದ್ದ ಸ್ಥಳದಲ್ಲಿ ಈಗ ಸಾವಿರಾರು ಸಂಖ್ಯೆಯ ಕನ್ನಡ ಪತ್ರಿಕೆಗಳು ಮಾರಾಟವಾಗುತ್ತಿವೆ. ಕಛೇರಿಗಳಲ್ಲಿ ಕನ್ನಡ ಬಲ್ಲ ಅಧಿಕಾರಿಗಳು, ಸಿಬ್ಬಂದಿಗಳು ಹೆಚ್ಚಾಗಿದ್ದಾರೆ. ಓಣಿ ಓಣಿಗಳಲ್ಲಿ ಕನ್ನಡ ನಾಮಫಲಕಗಳು ರಾರಾಜಿಸುತ್ತಿವೆ. ಈಗ ಕರ್ನಾಟಕ ಹೆಸರೂ ಆಗಿದೆ. ಕನ್ನಡ ಉಸಿರೂ ಆಗಿದೆ.

ಇಲ್ಲಿನ ಲೇಖನಗಳು 'ಹೊರನಾಡ ಕನ್ನಡಿಗ'ರಾಗಿ ಬದುಕುವವರು ಎದುರಿಸುವ ಭಾಷೆ ಮತ್ತು 'ಸಂಸ್ಕೃತಿ'ಗಳ ಐಡೆಂಟಿಟಿಯ ಪ್ರಶ್ನೆ ಕುರಿತಂತಿವೆ. ಕನ್ನಡಿಗರು (ಅಂದರೆ ಕರ್ನಾಟಕ ದಲ್ಲಿ ಹುಟ್ಟಿ ಬೆಳೆದ ಉರ್ದು ತುಳು ಕೊಡವ ಮುಂತಾದ ಎಲ್ಲ ಭಾಷಿಕರು) ಉದ್ಯೋಗ್ಯ ಕ್ಕೆಂದು ತಮ್ಮ ಊರುಮನೆ ಬಿಟ್ಟು, ದೂರದ ಅನ್ಯಭಾಷಿಕ ಪ್ರಾಂತ್ಯಗಳಲ್ಲಿ ವಾಸಿಸುತ್ತಿದ್ದಾ ರಷ್ಟೆ. ಅವರಿಗೆ ತಮ್ಮ ಪರಿಸರದಿಂದ ದೂರಹೋಗಿ ಬದುಕುವಾಗ, ಸಾಂಸ್ಕೃತಿಕವಾದ ಭಾಷಿಕವಾದ ಪರಕೀಯತೆ- ಅಭದ್ರತೆ ಕಾಡುತ್ತದೆಯೇ? ಕಾಡಿದರೆ ಅದರ ಸ್ವರೂಪ ಎಂತಹದು? ಅದನ್ನು ತುಂಬಿಕೊಳ್ಳಲು ಬೇರೆಬೇರೆ ಸ್ತರದ ಜನರು ಯಾವ ಬಗೆಯ ಪರ್ಯಾಯಗಳನ್ನು ನಿರ್ಮಿಸಿಕೊಂಡಿದ್ದಾರೆ? ಪರಕೀಯತೆ ಕಾಡದೆ, ಅಲ್ಲಿನ ಪರಿಸರ ದೊಂದಿಗೆ ಸಹಜವಾಗಿ ಹೊಂದಿಕೊಂಡು ನಿಶ್ಚಿಂತೆಯನ್ನು ಕೆಲವರು ಪಡೆದಿರಲೂಬಹುದು. ಇದು ನಿಜವಿದ್ದರೆ, ಹೊಂದಿಕೊಂಡ ಬಗೆ ಯಾವುದು? ಇತ್ಯಾದಿ ಪ್ರಶ್ನೆಗಳನ್ನು ಇಟ್ಟು ಕೊಂಡು ತಮ್ಮ ಅನುಭವ ಮಂಡಿಸಲು ಕೋರಿ ಪಡೆದ ಲೇಖನಗಳಿವು.

ಉತ್ತರ ರೂಪವಾಗಿ ಬಂದ ಎರಡು ಜವಾಬುಗಳು ಅನಿರೀಕ್ಷಿತವಾಗಿದ್ದವು. ಒಬ್ಬರು 'ಈ ವಿಷಯದ ಬಗ್ಗೆ ನೀವು ಕೇಳುವತನಕ ನನ್ನನ್ನು ನಾನು ಹೊರನಾಡ ಕನ್ನಡಿಗರನೆಂದು ಗುರುತಿಸಿಕೊಂಡಿರಲಿಲ್ಲ' ಎಂದು ಹೇಳಿದರು; ಮತ್ತೊಬ್ಬರು 'ನಮ್ಮ ತೊಳಲಾಟವನ್ನು ಈವರೆಗೂ ಯಾರೂ ಕೇಳಿರಲೇ ಇಲ್ಲ. ಈಗ ತೋಡಿಕೊಳ್ಳಲು ಅವಕಾಶ ಒದಗಿಸಿದ್ದೀರಿ' ಎಂದು ಕೃತಜ್ಞತೆ ಸೂಚಿಸಿ ಬರೆದರು. ಮೊದಲನೇ ಅಭಿಪ್ರಾಯ ಬರೆದವರು ಕೇಂದ್ರ ಸರಕಾರದ ಇಲಾಖೆಯಲ್ಲಿ ದೊಡ್ಡ ಅಧಿಕಾರಿಯಾಗಿರುವವರು. ಎರಡನೇ ಅಭಿಪ್ರಾಯ ನೀಡಿದವರು ಕನ್ನಡ ಪ್ರಾಧ್ಯಾಪಕರು. ಈ ಸಂಗತಿಯು 'ಐಡೆಂಟಿಟಿ ಕ್ರೈಸಿಸ್' ಎನ್ನುವುದು ಇದ್ದರೆ, ಅದು ಎಲ್ಲ ಹೊರನಾಡ ಕನ್ನಡಿಗರಿಗೆ ಸಮಾನವಾಗಿ ಕಾಡುವುದಿಲ್ಲ ಎಂಬ ನಿಜವನ್ನು ಸೂಚಿಸುತ್ತದೆ. ಜತೆಗೆ ಈ ನಿಜವು ಕರ್ನಾಟಕದ ಸಾಂಸ್ಕೃತಿಕ ಗುರುತುಗಳನ್ನು ಉಳಿಸಿಕೊಳ್ಳುವಲ್ಲಿ, ಯಾರು ಯಾಕಾಗಿ ಮತ್ತು ಹೇಗೆ ಉಳಿಸಿಕೊಳ್ಳುತ್ತಾರೆ ಎನ್ನುವ ಇನ್ನೊಂದು ಹಂತದ ಪರಿಶೀಲನೆಗೆ ಕರೆದುಕೊಂಡು ಹೋಗುತ್ತದೆ.

ಅಸ್ಮಿತೆಯ ಪ್ರಶ್ನೆಯೆನ್ನುವುದು ಬಹಳ ಜನ ತಿಳಿದಂತೆ, ಕೇವಲ ಭಾವನಾತ್ಮಕ ಸಂಗತಿ ಯಾಗಿಲ್ಲ. ಅದು ಕಟುವಾದ ವಾಸ್ತವತೆಗೆ ಸಿಕ್ಕು ನಂಬಲಾಗದ ಬದಲಾವಣೆಗಳಿಗೆ ಒಳಗಾಗಿ ರುತ್ತದೆ. ಉದಾಹರಣೆಗೆ, ಕನ್ನಡ ಸಾಹಿತ್ಯಕ ಚಟುವಟಿಕೆ ಮೂಲಕವೇ ಕರ್ನಾಟಕದ ಸಂಸ್ಕೃತಿಯ ಸಂಬಂಧ ಉಳಿಸಿಕೊಳ್ಳುವುದು ಎನ್ನುವುದಾದರೆ, ಗುಳೆಹೋಗಿ ವಾಸ್ಕೋ ದಲ್ಲೋ ಪೂನಾದಲ್ಲೋ ಕೂಲಿಕೆಲಸ ಮಾಡಿಕೊಂಡಿರುವವರು ಇಡಿಯಾಗಿ ಕನ್ನಡದ್ರೋಹಿ ಗಳಾಗುತ್ತಾರೆ. ಅಸ್ತಿತ್ವಕ್ಕಾಗಿ ಹೋರಾಟ ಮಾಡುವ ಯಾರೂ ಕೂಡ ನಾವು 'ಸಾಂಸ್ಕೃತಿಕ ಗುರುತು' ಎಂದು ಅಧಿಕೃತಗೊಳಿಸಿರುವ ಸಂಗತಿಗಳನ್ನು ಉಳಿಸಿಕೊಳ್ಳಲು ಪ್ರಜ್ಞಾಪೂರ್ವಕ ವಾಗಿ ಯತ್ನಿಸುವುದಿಲ್ಲ. ಒಂದೊಮ್ಮೆ - ಇಲ್ಲಿನ ಒಂದು ಲೇಖನದಲ್ಲಿ ಹೇಳಿರುವಂತೆ-

ಕೂಲಿಕಾರ ಕನ್ನಡಿಗರು ತಮ್ಮ ಮಕ್ಕಳನ್ನು ಕನ್ನಡಶಾಲೆಗೆ ಕಳಿಸುತ್ತಿದ್ದರೆ ಅಥವಾ ಅವರಲ್ಲಿ ಕನ್ನಡ ಉಳಿದಿದ್ದರೆ, ಅವರು ಕೂಲಿಕಾರರಾಗಿರುವುದೇ ಕಾರಣ ಹೊರತು ಭಾಷಾ ಅಭಿಮಾನ ವಲ್ಲ.

ದೈಹಿಕ ದುಡಿಮೆ ಮಾಡುವ ವರ್ಗದವರ 'ಸಾಂಸ್ಕೃತಿಕ' ನೆನಪುಗಳು ಬಹಳ ಭಿನ್ನವಾಗಿರುತ್ತವೆ. ಅವು ಇಲ್ಲಿನ ಲೇಖನಗಳಲ್ಲಿ ಸಹಜವಾಗಿ ಗೈರುಹಾಜರಾಗಿದೆ. ಅನು ಭವವನ್ನು ಮೌಖಿಕವಾಗಿ ಸಂದರ್ಶನಗಳ ಮೂಲಕ ಪಡೆದುಕೊಳ್ಳುವುದಾಗಿದ್ದರೆ, ಅನಕ್ಷ ರಸ್ಥ ಜನರ ಅನುಭವವು ಸಿಗುತ್ತಿತ್ತು. ಬರೆಹರೂಪದಲ್ಲಿ ಪಡೆದುಕೊಳ್ಳ ಹೋದೊಡನೆ ಇವರೆಲ್ಲ ತಪ್ಪಿಹೋಗುತ್ತಾರೆ. ಅನುಭವ ಹಂಚಿಕೊಳ್ಳುವವರು ಅಕ್ಷರಸ್ಥರಾದರೂ ಸಮಸ್ಯೆ ಬಗೆಹರಿಯಲಿಲ್ಲ. ಅನುಭವ ಇರುವುದು ಬೇರೆ, ಅದರ ಮೇಲೆ ಚಿಂತನೆ ಮಾಡುವುದು ಅಥವಾ ಅದನ್ನು ಭಾಷೆಯಲ್ಲಿ ಅಭಿವ್ಯಕ್ತಿ ಮಾಡುವುದು ಬೇರೆ. ಅನೇಕರಿಗೆ ಬರೆಹ ರೂಪದಲ್ಲಿ ಹಿಡಿಯಲು ಕಷ್ಟವಾಗುತ್ತದೆ. ಹೀಗಾಗಿ ಈಗಾಗಲೇ ಬರವಣಿಗೆ ಮಾಡುತ್ತಿರು ವವರು, ಅದರಲ್ಲೂ ಅಧ್ಯಾಪಕ ವೃತ್ತಿಯಲ್ಲಿರುವವರು ಈ ಹಂಚಿಕೊಳ್ಳುವ ಕೆಲಸದಲ್ಲಿ ಪ್ರಧಾನವಾಗಿ ಭಾಗವಹಿಸಿರುವುದನ್ನು ಗಮನಿಸಿಬಹುದು.

ಸಾಹಿತ್ಯ ಸಂಗೀತಗಳ ಮೂಲಕ ಕರ್ನಾಟಕ ಸಂಸ್ಕೃತಿಯ ಗುರುತುಗಳನ್ನು ಗ್ರಹಿಸು ವುದು ಎನ್ನುವುದಾದರೆ, ಇಂತಹ ಚಟುವಟಿಕೆಗಳು ಅಕ್ಷರಸ್ಥ ನೌಕರಸ್ಥ ಮಧ್ಯಮವರ್ಗ ದವರಲ್ಲಿ ಕಾಣುತ್ತೇವೆ. ಇದಕ್ಕೆ ಕಾರಣ ಆ ವರ್ಗದ ವಿರಾಮಸ್ಥಿತಿ ಮತ್ತು ಸಾಂಸ್ಕೃತಿಕ ಬೇರುಗಳನ್ನು ಪ್ರಜ್ಞಾಪೂರ್ವಕವಾಗಿ ಅರಸುವ ಸೆಳೆತ. ಮುಂಬೈ ನಗರದ ಕನ್ನಡ ಕಾರ್ಯಕ್ರಮಗಳೆಲ್ಲ ಈ ನೆಲೆಯವು. ಬಹುಶಃ ಯಕ್ಷಗಾನ ಮಾತ್ರ ಇದಕ್ಕೆ ಅಪವಾದವಾಗಿದೆ. ಇದು ಮಧ್ಯಮವರ್ಗದಾಚೆ ಕೂಡ ಹೋಗಿ ಹೆಚ್ಚಿನ ತುಳುವರ ಗುರುತಾಗಿ ಉಳಿದಿದೆ. ಇದಕ್ಕೆ ತಮ್ಮ ಸಾಂಸ್ಕೃತಿಕ ಗುರುತುಗಳನ್ನು ಉಳಿಸಿಕೊಳ್ಳುವ ತೌಳವರ ಜಿಗುಟುತನವೂ ಕಾರಣವಿರಬೇಕು. ಆದರೆ ಯಾವುದೇ ಬಗೆಯ 'ಸಾಂಸ್ಕೃತಿಕ' ಗುರುತುಗಳಿರಲಿ, ಅವು ತಲೆಮಾರಿಂದ ತಲೆಮಾರಿಗೆ ಸಹಜವಾಗಿ ಕ್ಷೀಣವಾಗುತ್ತಾ ನಡೆದಿವೆ. ಇದನ್ನು ವೇದನೆಯಿಂದಲೂ ಅಸಹಾಯಕತೆಯಿಂದಲೂ ನಿರ್ಭಾವುಕವಾಗಿಯೂ ಲೇಖನಗಳು ಗುರುತಿಸಿವೆ. ಕೆಲವು ಲೇಖನಗಳು ಹೊರನಾಡ ಕನ್ನಡಿಗರ ಸಮಸ್ಯೆಯನ್ನು ಮಾನವ ನಾಗರಿಕತೆಯಲ್ಲಿ ವಲಸೆಹೋಗುವವರಲ್ಲಿ ರೂಪುಗೊಳ್ಳುವ ಮನಸ್ಥಿತಿಗಳ ವಿಶಾಲ ಭಿತ್ತಿಯಲ್ಲಿಟ್ಟು ಕೂಡ ವಿಶ್ಲೇಷಿಸಿವೆ. ಹೊರನಾಡ ಕನ್ನಡಿಗರು ಎಂಬ ಮಾತು ಬಂದಾಗ, ಬಹುಶ: ಮುಂಬಯಿಯಲ್ಲಿ ಇರುವಷ್ಟು ಕನ್ನಡಿಗರು, ಕನ್ನಡ ಲೇಖಕರು, ಭಾರತದ ಇನ್ನಾವ ನಗರಗಳಲ್ಲೂ ಇಲ್ಲ. ಎಂತಲೇ ಅಲ್ಲಿಂದ ಹೆಚ್ಚು ಲೇಖನಗಳು ಬಂದಿವೆ. ಕೇರಳ ದೆಹಲಿ ಬಂಗಾಳದಲ್ಲಿರುವ ಕನ್ನಡಿಗರ ಲೇಖನಗಳೂ ಬಂದಿದ್ದರೆ, ಹೊರನಾಡ ಕನ್ನಡಿಗರ ಈ ಸರಣಿ ಇನ್ನೂ ವ್ಯಾಪಕವಾಗಿರುತ್ತಿತ್ತು. ಹೊರದೇಶಗಳ ಕನ್ನಡಿ ಗರ ಅನುಭವಗಳನ್ನೂ ಬರೆಯಿಸುವದಾಗಿದ್ದರೆ, ಇನ್ನೊಂದು ಮಜಲು ಸಿಕ್ಕಿರುತ್ತಿತ್ತು.

**- ಸಂಪಾದಕ**

# ಸಂಸ್ಕೃತಿಯನ್ನು ಕಾದುಕೊಂಡಿರುವವರು ಶ್ರಮಿಕರು

● ವಿ ಕೆ ಮಣಿಮಾಲಿನಿ

ಮನುಷ್ಯರು ವಿಶ್ವದ ಯಾವ ಮೂಲೆಯಲ್ಲಿಯೇ ಇದ್ದರೂ, ತಮಗೆ ತುಂಬ ಆಪ್ತವಾದ ಅಂತರಂಗದೊಳಗಿನ ಪುಟ್ಟ ಸಾಂಸ್ಕೃತಿಕ ಜಗತ್ತೊಂದನ್ನು ಸೃಷ್ಟಿಸಿಕೊಂಡಿರುತ್ತಾರೆ. ಕರ್ನಾಟಕ ದಿಂದ ಸಾಕಷ್ಟು ದೂರದಲ್ಲಿ ಬದುಕನ್ನು ಊರಿರುವ ನಾವಾದರೂ ಅಷ್ಟೆ. ನಮ್ಮ ಎಲ್ಲ ವೈಚಾರಿಕ ನಿಲುವುಗಳು, ಸಂವೇದನೆಗಳು, ಇಷ್ಟಾನಿಷ್ಟಗಳೆಲ್ಲವೂ ತಾಯಿ ನೆಲದ ಮುಖ್ಯ ಪ್ರವಾಹಕ್ಕೆ ಸಂವಾದಿಯಾದವುಗಳೇ ಆಗಿವೆ. ಹಾಗೆ ನೋಡಿದರೆ, ಹೊರ ನಾಡಿನ ಕನ್ನಡಿಗರ ಸಾಂಸ್ಕೃತಿಕ ಖಂಡಗಳ ಅನ್ವೇಷಣೆ ಬಹುರೂಪಿಯಾಗಿ ಕಾಣುತ್ತದೆ. ಎಂದರೆ ಜೀವನದ ಮೊದಲ ಹಲವು ವರ್ಷಗಳನ್ನು ಹುಟ್ಟೂರುಗಳಲ್ಲಿಯೇ ಕಳೆದು ಅನಂತರ ಬೇರೆಲ್ಲಿಗೋ ವಲಸೆ ಬಂದವರ ಮನೋಭಾವಗಳಿಗೂ, ಹೊರನಾಡುಗಳಲ್ಲಿಯೇ ಹುಟ್ಟಿ ಬೆಳೆದ ಎರಡು ಮೂರನೆಯ ತಲೆಮಾರಿನವರ ದೃಷ್ಟಿಕೋನಗಳಿಗೂ ವ್ಯತ್ಯಾಸಗಳು ಇವೆ. ತಮ್ಮ ಊರುಗಳ ನೆಂಟಸ್ತನಗಳನ್ನು ಕಡಿದುಕೊಳ್ಳದೆ ಅವಕಾಶ ದೊರೆತಾಗಲೆಲ್ಲ ಅಲ್ಲಿಗೆ ಧಾವಿಸುವ ಕರುಳು ಬಳ್ಳಿಯ ಸೆಳೆತವಿರುವ ವರ್ಗಕ್ಕೂ, ತಾವು ನೆಲೆಸಿದ ಕಾರ್ಯಕ್ಷೇತ್ರಗಳಿಗೆ ತಮ್ಮ ನಡೆಗಳನ್ನು ಮಿತಗೊಳಿಸಿಕೊಂಡ ಮಂದಿಗೂ, ನೆಲ ಮುಗಿಲುಗಳ ಅಂತರವಿದೆ.

ನಾವು ವಾಸಿಸುತ್ತಿರುವ ಮುಂಬಯಿ ನಗರಕ್ಕೆ ಪ್ರಾಯಶಃ ಇತರ ಮಹಾ ನಗರಗಳಲ್ಲಿ ಕಾಣಸಿಗಲಾರದ ಕೆಲವು ವಿಶಿಷ್ಟ ಲಕ್ಷಣಗಳಿವೆ. ಇಲ್ಲಿಯ ಜನಸಂಖ್ಯೆಯ ನಿಷ್ಪತ್ತಿಯ ಪ್ರಕಾರ ಕೂಡ, ಹೊರನಾಡುಗಳಿಂದ ಬಂದವರ ಪ್ರಮಾಣವು ಮಹಾರಾಷ್ಟ್ರೀಯರಿಗಿಂತ ಎಷ್ಟೋ ಹೆಚ್ಚು. ಹೀಗಾಗಿ ನಾವು ಸಂಧಿಸುವವರಲ್ಲಿ ಹೆಚ್ಚಿನವರು ಒಂದಲ್ಲ ಒಂದು ಕಾರಣಕ್ಕಾಗಿ ಇಲ್ಲಿಗೆ ಹೊರಗಿನವರೇ. ಹೊಸತಾಗಿದ್ದ ಮುಂಬಯಿ ತಮ್ಮಲ್ಲಿ ಹುಟ್ಟಿಸಿದ್ದ ಆತಂಕ, ಭೀತಿ, ಅಪರಿಚಿತತನ, ಹಿಂಜರಿಕೆ, ಒತ್ತಡಗಳ ಪ್ರತಿಫಲನವನ್ನೇ ಅವರು ನಮ್ಮಲ್ಲೂ ಕಾಣುವುದ ರಿಂದ, ಅಲ್ಲಿ 'ತಾತ್ಕಾಲಿಕ ಬಾಂಧವ್ಯ'ವೊಂದು ಶೀಘ್ರವಾಗಿ ಅಸ್ತಿತ್ವಕ್ಕೆ ಬರುತ್ತದೆ. ಮುಂಬಯಿ ತನ್ನ ವಿಲಕ್ಷಣ ವೇಗಶೀಲತೆ ಮತ್ತು ಸ್ವೀಕಾರಾರ್ಹತೆಗಳಿಂದ ಬಹುಬೇಗ ನಮ್ಮನ್ನು ತನ್ನ ಗತಿಗೆ ಹೊಂದಿಸಿಕೊಂಡುಬಿಡುತ್ತದೆ. ಒಂದರ್ಥದಲ್ಲಿ, ಈ ಮಹಾಸಿಂಧುವಿನ ಬಿಂದುಗಳಾಗಿ ನಾವು ಪ್ರತ್ಯೇಕತೆಗಳನ್ನು ಕರಗಿಸಿಕೊಳ್ಳುತ್ತೇವೆ. ಇನ್ನೊಂದರ್ಥದಲ್ಲಿ ಆ ಅತಿಗಳಿಗೆ ಒಡ್ಡಿ ಕೊಳ್ಳುತ್ತ ಸ್ವಂತದ ಸ್ವರೂಪಗಳನ್ನು ಸ್ಪಷ್ಟಪಡಿಸಿಕೊಳ್ಳುತ್ತೇವೆ.

ಈ ಹಿನ್ನೆಲೆಯಲ್ಲಿ ಮುಂಬಯಿಯೊಂದಿಗಿನ ನಮ್ಮ ಸಂಬಂಧ, ಎಲ್ಲ

ವೈರುಧ್ಯಗಳೊಂದಿಗೆ ಸಂಕೀರ್ಣವಾಗಿ ರೂಪಾಂತರ ಹೊಂದುತ್ತಿರುತ್ತದೆ. ಇಲ್ಲಿಯ ಮಾಲಿನ್ಯ, ಗೊಂದಲ, ಧಾವಂತ, ಹಿಂಸಾಚಾರ, ಬೆಲೆಯೇರಿಕೆ ಮುಂತಾದವುಗಳಿಗೆ ಶಾಪ ಹಾಕುತ್ತಲೇ ಇರುತ್ತೇವೆ. ಈ ಅನಿಸಿಕೆಯ ಪಕ್ಕದಲ್ಲೇ ಮುಂಬಯಿಯ ಒಡಲೊಳಗೆ ಅವಿತಿರುವ ಅಪಾರ ಅವಕಾಶಗಳನ್ನು, ವ್ಯವಸ್ಥಿತ ಅವ್ಯವಸ್ಥೆಯನ್ನು, ಜನಸಾಗರಕ್ಕೆ ಆಶ್ರಯ ನೀಡಿದರೂ ಅದರ ಮೇರೆಗಳನ್ನು ಸೂಕ್ಷ್ಮವಾಗಿ, ಬಿಗಿಯಾಗಿ ನಿಯಂತ್ರಿಸುವ ಶಕ್ತಿಯನ್ನು ಅಪ್ರಯತ್ನವಾಗಿ ಮೆಚ್ಚಿಕೊಳ್ಳುತ್ತೇವೆ. ಈ ಆಂತರಿಕವಾದ, ಸಮಾಜದ ಕಾಂತಕ್ಷೇತ್ರಗಳೇ ನಮ್ಮ ಸೃಷ್ಟಿಶೀಲ ಮನಸ್ಸುಗಳಿಗೆ, ಕ್ರಿಯಾತ್ಮಕತೆಗಳಿಗೆ, ಸಂಸ್ಕೃತಿಪರವಾದ ಸ್ಪಂದನಗಳಿಗೆ ಚಾಲನೆ ನೀಡುತ್ತವೆ; ಸವಾಲುಗಳೂ ಆಗುತ್ತವೆ. ಅವುಗಳಿಗೆ ಸೃಜನಾತ್ಮಕ ಪ್ರತಿಕ್ರಿಯೆಗಳನ್ನ ಹುಡುಕುವ ಹುರುಪು ತನ್ನಿಂದ ತಾನೇ ಮೂಡಿ ಬೆಳೆಯುತ್ತದೆ.

ಮರಾಠಿ ಜನರು ಸ್ನೇಹಪರರು. ಅತಿ ಮಾತಿನವರಲ್ಲ. ನಮ್ಮ ಅನುವು ಆಪತ್ತುಗಳಿಗೆ ಒದಗುವವರು. ಆದರೆ ಅವರೊಂದಿಗೆ ತೀರಾ ಅತ್ಮೀಯ ನೆಂಟನ್ನು ಬೆಸೆಯುವುದು ಸ್ವಲ್ಪ ಕಷ್ಟವೇ. ನನ್ನ ಅನುಭವದ ಪ್ರಕಾರ, ಅಂಥ ಗಾಢ ಮೈತ್ರಿಯನ್ನು ಅವರು ವಿಶೇಷವಾಗಿ ಪ್ರೋತ್ಸಾಹಿಸುವುದಿಲ್ಲ. ಎಲ್ಲೋ ಮೂಲೆಯಲ್ಲಿ ತೆಳುವಾದ ಅಸಹನೆಯ ಎಳೆಯು ಅವರಲ್ಲಿ ಇದೆಯೇನೋ ಎನ್ನುವ ಅನುಮಾನವೂ ಒಮ್ಮೊಮ್ಮೆ ಮೂಡುತ್ತದೆ.

ಮರಾಠಿ ಮತ್ತು ಕನ್ನಡ ಸಂಸ್ಕೃತಿಗಳು ಪರಸ್ಪರ ಸಹಯೋಗ ಸಾಧಿಸುವ ಅನೇಕ ಸಂದರ್ಭಗಳನ್ನು ನಾವು ಗುರುತಿಸಬಹುದು. ಈ ಮಾತಿಗೆ ಕೆಲವು ನಿರ್ದಿಷ್ಟ ಆವರಣಗಳು ಇವೆಯೆನ್ನುವುದೂ ಇಷ್ಟೇ ಗಮನಾರ್ಹವಾಗಿದೆ. ಅಂದರೆ, ಕರ್ನಾಟಕದಂತೆಯೇ ಇಲ್ಲಿಯ ಸಂಸ್ಕೃತಿಯೂ ಬಹುಮುಖವಾದುದು; ವೈವಿಧ್ಯಮಯವಾದುದು. ಈ ಪರಿಸ್ಥಿತಿಯಲ್ಲಿ ಅವುಗಳ ಸಾದೃಶ್ಯ, ವೈದೃಶ್ಯಗಳನ್ನು ಒಂದೇ ಸೂತ್ರದಲ್ಲಿ ಕಲ್ಪಿಸಿಕೊಳ್ಳುವಂತಿಲ್ಲ. ಬದಲಿಗೆ, ಈ ಪ್ರದೇಶಗಳ ಸಾಂಸ್ಕೃತಿಕ ನೆಯ್ಗೆಯಲ್ಲಿರುವ ಅನೇಕ ಒಳ-ಹೊರ ಹರಿವುಗಳನ್ನು ಕಲ್ಪಿಸಿಕೊಳ್ಳಬಹುದು.

ಈ ನೆಲದಲ್ಲಿ ಕನ್ನಡ ಸಾಂಸ್ಕೃತಿಕ ವಾತಾವರಣದ ಉಪಸ್ಥಿತಿ ಅಥವಾ ಅಭಾವವನ್ನು ನಿಖರವಾಗಿ ನಿಷ್ಕರ್ಷಿಸಲು ನನಗೆ ಕೆಲವು ತೊಡಕುಗಳಿವೆ. ವಿಶ್ವವಿದ್ಯಾಲಯದ ಪರಿಸರದಲ್ಲಿ ವಾಸ ಮಾಡುತ್ತಾ, ಶೈಕ್ಷಣಿಕ ಶಿಸ್ತನ್ನು ಅಳವಡಿಸಿಕೊಂಡು ನೆರೆಕರೆಯವರೊಂದಿಗೆ ಸಂಭಾಷಿಸುತ್ತಾ, ಬೇರೆ ಬೇರೆ ಮಾಧ್ಯಮಗಳ, ಜ್ಞಾನಶಾಖೆಗಳ ಬೌದ್ಧಿಕ ಚಟುವಟಿಕೆಗಳು ನಡೆಯುತ್ತಲೇ ಇರುವ ಸ್ಥಳವೊಂದರಲ್ಲಿ ನಿಂತು, 'ಇದೇ ಮುಂಬಯಿ' ಎನ್ನುವುದು ಅವಸರದ ಹೇಳಿಕೆಯಾಗುತ್ತದೆ. ಈ ಮಟ್ಟದ, ಸ್ವ-ಸಂಸ್ಕೃತಿಯಷ್ಟೇ ಕೊಡಬಲ್ಲ ಸುರಕ್ಷೆಯ ಅನುಭವವನ್ನ ಭಿವಂಡಿಯಂಥ ಪ್ರದೇಶಗಳಲ್ಲಿರುವ ಅಥವಾ ಪಂಚತಾರಾ ಸಂಸ್ಕೃತಿಯಾಗಿರುವ ನರಿಮನ್ ಪಾಯಿಂಟ್‌ನಂಥಲ್ಲಿ ನೆಲಸಿರುವ ಕನ್ನಡಿಗರೂ ಪಡೆಯಬಲ್ಲರೆಂದು ಹೇಳುವಂತಿಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ, ಕರ್ನಾಟಕದ ಪ್ರಾಧ್ಯಾಪಕರು ಸಾಹಿತಿಗಳು ಕಲಾವಿದರು ಬೇರೆ ಬೇರೆ ಕಾರಣಗಳಿಗಾಗಿ ಮುಂಬಯಿಗೆ ಬರುತ್ತಲೇ ಇರುವುದರಿಂದ, ನನ್ನೊಳಗೆ

ಜೋಪಾನವಾಗಿರುವ ಕನ್ನಡದ ಸಾಂಸ್ಕೃತಿಕ ಕಟ್ಟಡಕ್ಕಿನ್ನೂ ಬಿರುಕುಗಳುಂಟಾಗಿಲ್ಲ.

ಮುಂಬಯಿಯಲ್ಲಿರುವ ಕನ್ನಡ ಸಾಹಿತಿಗಳ ಬಳಗಕ್ಕೆ ಈ ದೃಷ್ಟಿಯಿಂದ ಮನ್ನಣೆ ಸಿಗಬೇಕು. ಸ್ವಲ್ಪ ಲಘು ದಾಟಿಯಲ್ಲಿ ಹೇಳುವುದಾದರೆ, ಇಲ್ಲಿಯ ಕನ್ನಡಿಗರು ತಮ್ಮ ಅಸ್ಮಿತೆಯನ್ನು ಗಟ್ಟಿಗೊಳಿಸಿಕೊಳ್ಳುವ ಮಾಧ್ಯಮಗಳಲ್ಲಿ ಒಂದಾಗಿ ಸಾಹಿತ್ಯಿಕ ಅಭಿವ್ಯಕ್ತಿಯನ್ನು ಬಳಸಿಕೊಳ್ಳುತ್ತಾರೆ. ಹೀಗಾಗಿ ನೀವು ಭೇಟಿಯಾಗುವ ಪ್ರತಿ ಎರಡನೆಯ ವ್ಯಕ್ತಿಯೂ ತನ್ನನ್ನು ತಾನು ಸಾಹಿತಿಯೆಂದು ಕರೆದುಕೊಂಡರೆ ಆಶ್ಚರ್ಯಪಡಬೇಡಿ!

ಪ್ರಥಮ ಶ್ರೇಣಿಯ ಹಲವು ಸಾಹಿತಿಗಳಿಗೆ ಮುಂಬಯಿ ನೆಲೆಮನೆಯಾಗಿದೆ. "ಏನವ್ವಾ! ಏನ್ ನಡೆದದ? ವಸಂತಕುಮಾರ ಹೆಂಗದಾರ" ಎಂದು ಧಾರವಾಡ ಕನ್ನಡದ ಕಟು ಮಧುರ ಘಾಟಿನೊಡನೆ ನೆನಪಾದಾಗಲೆಲ್ಲ ವಿಚಾರಿಸುವ ಸನದಿಯವರ ವಾತ್ಸಲ್ಯ, ಹಿರಿಯ ಕವಿಯ ಬಡಿವಾರಗಳನ್ನೆಲ್ಲ ಬದಿಗಿಟ್ಟು, "ಹೊಸ ನಾಟಕ ಪ್ರಕಟ ಆಗಿದೆ. ನಿಮಗೆ ಕೊಡಬೇಕೆಂದು ಮುದ್ದಾಂ ಬಂದೆ" ಎಂದು ನಗು-ಗಾಂಭೀರ್ಯಗಳನ್ನು ಬೆರೆಸಿಕೊಳ್ಳುವ ಅರವಿಂದ ನಾಡಕರ್ಣಿಯವರು, ಬೆಂಗಳೂರಿಗೆ ತೆರಳುವ ವರೆಗೂ ಸಾಹಿತ್ಯಾಸಕ್ತರ ಗುಂಪನ್ನು ಮನೆಯಲ್ಲಿ ಸೇರಿಸುವುದನ್ನೊಂದು ಹವ್ಯಾಸವಾಗಿಟ್ಟುಕೊಂಡಿದ್ದ ಬಲ್ಲಾಳರು, ಇವರೆಲ್ಲರೂ ನಮ್ಮ ಸಾಹಿತ್ಯಿಕ-ಸಾಂಸ್ಕೃತಿಕ ಕಾಳಜಿಗಳನ್ನು ಸಂಗೋಪನೆ ಮಾಡಿದವರೇ; ಮಾಡುತ್ತಿರುವವರೇ.

ಹೀಗೆ ಬರೆಯುವಾಗ ಬಗೆಯ ಬಗಲಿನೆಲ್ಲೆಲ್ಲಿಯೋ ಅಳುಕು ಕಾಡುತ್ತದೆ. ನಾವು ನಾವಷ್ಟೇ ಹಾಯಾಗಿರುವುದೇ ಸಮಾಜದ ಸ್ವಾಸ್ಥ್ಯದ ಲಕ್ಷಣವಾಗಲಾರದಲ್ಲ! ಮುಂಬಯಿಯ ಹೋಟೇಲು ಉದ್ಯಮ (ಇತರ ಹಲವು ಉದ್ಯಮಗಳೊಂದಿಗೆ) ಸಂಪೂರ್ಣ ನಮ್ಮ ಊರವರ ಅಧೀನದಲ್ಲಿದೆ. ಅಲ್ಲಿ ದುಡಿಯುವ ಕನ್ನಡ-ತುಳು ಭಾಷಿಕರಾದ, ಹದಿಹರೆಯವನ್ನಿನ್ನೂ ದಾಟದ ಸಾವಿರಾರು ಕಾರ್ಮಿಕರಿದ್ದಾರೆ. ನಮ್ಮ ಮಾತು ಕೇಳಿಯೇ ಅವರ ಮುಖಗಳು ಅರಳುವ ಕ್ರಮ, ಪರಿಚಯ ಹೇಳಿಕೊಳ್ಳುವ-ಮಾಡಿಕೊಳ್ಳುವ ಉತ್ಸುಕತೆ, ಹೋಟೇಲಿನಲ್ಲಿಯೇ ಆದರೂ ಮನೆಗೆ ಬಂದ ಅತಿಥಿಗಳನ್ನು ಆದರಿಸುವ ಸಂಭ್ರಮೋತ್ಸಾಹಗಳಿಂದ "ಇನ್ನೇನಾದರೂ ಬೇಕಾ" ಎನ್ನುವ ಅವರ ಸೌಜನ್ಯಗಳೆಲ್ಲ ತೀವ್ರವಾಗಿ ತಟ್ಟುತ್ತವೆ. ದಿನದ ದುಡಿಮೆಯಿಂದ ಬಿಡುಗಡೆ ಪಡೆದ ಅನಂತರ, ಇಲ್ಲಿಯ ಕರ್ನಾಟಕ ಸಂಘಗಳಲ್ಲಿ ನಡೆಯುವ ಯಕ್ಷಗಾನ ಬಯಲಾಟಗಳಿಗೆ (ಕೆಲವೊಮ್ಮೆ ನಡುರಾತ್ರೆಯ ಬಳಿಕವೂ!) ಮುಕುರುವ ಆಸ್ಥೆಯೇ ಅವರ ಸಾಂಸ್ಕೃತಿಕ ಸೆಳೆತದ ಸಾಂದ್ರತೆಯ ಸೂಚ್ಯಂಕ.

ಮುಂಬಯಿಯಲ್ಲಿರುವ ಹಲವು ರಾತ್ರಿ ಶಾಲೆಗಳು ಇಂಥ ಅವಕಾಶ ವಂಚಿತರ ಕಣ್ಣುಗಳನ್ನು ಒರೆಸುವ ಕಾರ್ಯವನ್ನು ನಿಷ್ಠೆಯಿಂದ ಮಾಡಿವೆ, ಮಾಡುತ್ತಿವೆ. ಹೀಗೆ ವಿದ್ಯೆಯನ್ನು ಕಲಿತ ಹಲವು ಮಂದಿ ಉನ್ನತ ಮಟ್ಟದ ಉದ್ಯೋಗಪತಿಗಳಾಗಿದ್ದಾರೆ. ಕೆಲವರು ಶಿಕ್ಷಣರಂಗದಲ್ಲಿ ಪ್ರವೃತ್ತರಾಗಿದ್ದಾರೆ. ಇನ್ನಷ್ಟು ಮಂದಿ ಲೇಖನ ವ್ಯವಸಾಯ ಮಾಡುತ್ತಿದ್ದಾರೆ. ಇದು, ಮುಂಬಯಿಯ ಕನ್ನಡ ಜನ, ತಮ್ಮವರ ಹಿತರಕ್ಷಣೆಗಾಗಿ, ಅತಂತ್ರ ಬದುಕುಗಳ ಬೆನ್ನು ಕಾಯುವುದಕ್ಕಾಗಿ ಆಯ್ದುಕೊಂಡ ಮಾರ್ಗಗಳಲ್ಲಿ ಒಂದು ಮಾತ್ರ. ಸಮಾಜಮುಖಿಯಾದ

ಇಂಥ ಹತ್ತು ಹಲವು ವಿಧಾಯಕ ಚಟುವಟಿಕೆಗಳಿಗೆ ಮುಂಬಯಿ ವೇದಿಕೆಯಾಗಿದೆ.

ಇಲ್ಲಿಯ ಹೆಚ್ಚಿನ ಉಪನಗರಗಳೂ (ವಾಶಿ, ಚೆಂಬೂರು, ಗೋರೆಗಾಂ, ಮಾತುಂಗಾ, ಡೊಂಬಿವಿಲಿ, ಇತ್ಯಾದಿ) ಸ್ವತಂತ್ರವಾದ ಕನ್ನಡ ಸಂಘಗಳನ್ನು ಸ್ಥಾಪಿಸಿಕೊಂಡಿವೆ. ಅಲ್ಲಿ ನಡೆಯುವ ಕಾರ್ಯಕ್ರಮಗಳನ್ನು ವಿಶಿಷ್ಟವಾದ ಸಾಂಸ್ಕೃತಿಕ ಆಯಾಮದವುಗಳೆಂದು ಕರೆಯಬಹುದೇ? ಇದನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗಿದೆ. ಇವು ಹೆಚ್ಚಾಗಿ ಭಾಷಿಕ-ಸಾಹಿತ್ಯಿಕ ಚೌಕಟ್ಟುಗಳಿಗೆ ಬದ್ಧವಾಗಿವೆ (ಅಪವಾದಗಳಾಗಿ, ಆಗೊಮ್ಮೆ ಈಗೊಮ್ಮೆ ಅಚ್ಚ ಕರ್ನಾಟಕದ ಸಾಂಸ್ಕೃತಿಕ ಸೊಸೆಯನ್ನು ಪರಿಚಯಿಸುವ ಕಾರ್ಯಕ್ರಮಗಳೂ ನಡೆಯುತ್ತವೆ). ನಮ್ಮ ನೆರೆಯ ಕೇರಳದವರು ಜಾತಿ-ಮತ-ಪಂಗಡಗಳ ಭೇದಗಳನ್ನ ಬೇಲಿಯಾಚೆಗೆ ಇಟ್ಟು 'ಓಣಂ' ಆಚರಿಸುವ ವಿಧಾನವನ್ನು, ಪ್ರಾದೇಶಿಕ ಗಡಿಗಳನ್ನೂ ಒರೆಸಿ ಹಾಕಿ ಗುಜರಾತೀ ಬಾಂಧವರು 'ದಾಂಢೀರಾಸ್' ಮಗ್ನರಾಗುವುದನ್ನು ಕಂಡಾಗ, ಈ ಕೊರಕಲು ಧಾಳಾಗಿ ಕಾಣುತ್ತದೆ.

ಯಾವ ವೈಭವೀಕರಣದ ಗೋಜಿಗೂ ಹೋಗದೆ, ಸದ್ದು ಗದ್ದಲಗಳಿಲ್ಲದೆ, ತಮ್ಮ ಸಂಸ್ಕೃತಿಯ ಸ್ಥೂಲ-ಸೂಕ್ಷ್ಮಾಂಶಗಳನ್ನ ಜತನದಿಂದ ಕಾಯ್ದುಕೊಂಡಿರುವವರು, ಇಲ್ಲಿಯ ಅಸಂಘಟಿತ ಶ್ರಮಿಕ ವರ್ಗದವರು. ನಿಲ್ಲಲು ನಿರ್ದಿಷ್ಟ ನೆಲೆಯಿಲ್ಲದೆ, ರಸ್ತೆ ಕಾಮಗಾರಿ, ಕಟ್ಟಡದ ಕೆಲಸ ಮುಂತಾದುವುಗಳನ್ನೆಲ್ಲ ಮಾಡುವ ಅಲೆಮಾರಿ ಬದುಕು ಇವರದು. ಸುಮ್ಮನೆ, ಅವರ ತಾತ್ಕಾಲಿಕವಾದ ತಗಡಿನ ಸೂರಿನ ಪಕ್ಕದಿಂದ ಹಾದು ಹೋದರೆ ಸಾಕು, ಜೋಳದ ರೊಟ್ಟಿ ಸುಡುವ ಪ್ರಿಯವಾದ ಪರಿಮಳ, ಸೌದೆ ಒಲೆಯ ಮೇಲೆ ಬೇಯುತ್ತಿರುವ ಅವರೆ ಕಾಳಿನ ಸೊಗಡು, ಪುಟ್ಟ ರೇಡಿಯೋ ಅಥವಾ ಧ್ವನಿಮುದ್ರಕಗಳಿಂದ ಹೊರಡುವ ಜಾನಪದ ಸಂಗೀತಗಳೆಲ್ಲ ಕ್ಷಣಕಾಲದವಾದರೂ ನಮ್ಮ ಕಾಲುಗಳನ್ನ ತಡೆದು ನಿಲ್ಲಿಸುತ್ತವೆ.

ಇದೇ ಮಾದರಿಯಲ್ಲಿ, ಇಲ್ಲಿಯ ಕನ್ನಡ ಮಾಧ್ಯಮ ಶಾಲೆಗಳಿಗೆ ಚೈತನ್ಯ ತುಂಬುವವರೂ ಕೆಳ ಮಧ್ಯಮ ಶ್ರೇಣಿಯವರೇ. ಆಂಗ್ಲ ಮಾಧ್ಯಮ ಶಾಲೆಗಳಿಗೆ ಸುರಿಯುವಷ್ಟು ಆರ್ಥಿಕ ಬಲವಿಲ್ಲದವರು- ಪ್ರಾಯಶಃ ಅನಿವಾರ್ಯವಾಗಿ ತಮ್ಮ ಮಕ್ಕಳನ್ನ ಇಂಥ ಶಾಲೆಗಳಿಗೆ ಕಳುಹಿಸುತ್ತಾರೆ. ಅವರು ಒಳ್ಳೆಯ ಅಂಕಗಳನ್ನು ಗಳಿಸಿ ತೇರ್ಗಡೆಯಾಗುತ್ತಾರೆ. ಹಲವು ರೀತಿಯ ತರಬೇತಿ, ಮನೆಪಾಠಗಳಂಥ ಪೂರಕ ವ್ಯವಸ್ಥೆ, ಹೊಟ್ಟೆ-ಬಟ್ಟೆಯ ಚಿಂತೆಯಿಲ್ಲದ ನಿರಾಂತಕ ಭದ್ರ ವಾತಾವರಣಗಳಿಂದ ಬಂದ ಮಕ್ಕಳಷ್ಟೇ ಬೌದ್ಧಿಕ ಪರಿಣತಿಯನ್ನು ಅಂಥ ಯಾವ ಬೆಂಬಲವೂ ಇಲ್ಲದ ಈ ಬಡಮಕ್ಕಳೂ ತೋರಿಸುತ್ತಾರೆ.

ನಮ್ಮ ಸಂಸ್ಕೃತಿಯ ಒಳರಚನೆಯಲ್ಲಿಯೇ ಇರುವ ಹಳ್ಳ-ದಿಣ್ಣೆ, ತಗ್ಗು-ತಿಟ್ಟುಗಳು ಅದರ ಸೌಂದರ್ಯದ ಲಕ್ಷಣಗಳು. ಅವುಗಳನ್ನೆಲ್ಲ ಅಗೆದು ಸಿಗಿದು ನಿರ್ಜೀವವಾದ ಬಯಲನ್ನು ನಿರ್ಮಿಸುವುದು ನಮಗೆ ಶೋಭೆಯಲ್ಲ. ಆದರೆ ಸಮೂಹ ಸನ್ನಿಯ ದಾಳಿಯಿಂದ ಮುಂಬಯಿಯೂ ತಪ್ಪಿಸಿಕೊಳ್ಳುವಂತಿಲ್ಲ. ಎಳೆಯ ಮಕ್ಕಳಂತೂ (ಇದು ಬರಿಯ ಮುಂಬಯಿಯವರಿಗಲ್ಲ, ಬೆನ್ನೆಲುಬುಗಳನ್ನ ಐಚ್ಛಿಕವಾಗಿ ಕಳೆದುಕೊಂಡು ಬದುಕುವ

ಎಲ್ಲರಿಗೂ ಅನ್ವಯವಾಗುವ ಮಾತು) ಕನ್ನಡದ ನೆಲ-ಜನ-ಭಾಷೆ-ಸಾಂಸ್ಕೃತಿಕಾಂಶಗಳನ್ನ ಅಂಟುಜಾಡ್ಯಗಳೆಂಬಂತೆ ಒದರಿಕೊಳ್ಳುತ್ತಾರೆ. ಬಹುಮುಖಿಯಾದ ಬಹುರೂಪಿಯಾದ, ವಿವಿಧ ವರ್ಣಜಾಲಗಳ ಜೀವಂತ ಜಗತ್ತೊಂದನ್ನು, 'ವಿಶ್ವಸಂಸ್ಕೃತಿ'ಯ ಹೆಸರಿನಲ್ಲಿ ಏಕತ್ರ ಗೊಳಿಸುವ ಘೋರ ವಂಚನೆಯನ್ನು, ಇತರೆಲ್ಲರಂತೆ ನಾವು ಕೈಕಟ್ಟಿ, ಕಣ್ಮುಚ್ಚಿ ಸಹಿಸುತ್ತಿದ್ದೇವೆ. ಸಂಸ್ಕೃತಿಯ ಹರಿಕಾರತ್ವವನ್ನ, ಕೇವಲ ತಲೆಹಣ್ಣಾದ ಹಿರಿಯರ ಪಾಲಿಗೆ ಬಿಡದೆ, ಅದರ ವಾರಸುದಾರತ್ವಕ್ಕೆ ತಯಾರಾಗಬಲ್ಲ ಜನವರ್ಗವೊಂದನ್ನು ರೂಪಿಸಬಲ್ಲೆವಾದರೆ, ನಾವು-ಮುಂಬಯಿಯ ಕನ್ನಡಿಗರು-ನಮ್ಮನ್ನ ಹೆತ್ತ ಕರ್ನಾಟಕ ಮತ್ತು ಹೊತ್ತ ಮಹಾರಾಷ್ಟ್ರಗಳೆರಡಕ್ಕೂ ಕಿಂಚಿತ್ ಋಣವನ್ನ ಸಲ್ಲಿಸಿದಂತೆ. ಸದ್ಯ ಭವಿಷ್ಯದಲ್ಲಿ ಹಾಗಾದೀವೆಂಬ ಕನಸಿಗೆ ಉಸಿರು ತುಂಬುತ್ತ, ದಿನಗಳನ್ನ ತುಂಬಿಸುತ್ತಿದ್ದೇವೆ.



## ಹೈದರಾಬಾದಿನಲ್ಲಿ ಪುಟ್ಟಕರ್ನಾಟಕ ಸೃಷ್ಟಿ

● ಲಕ್ಷ್ಮೀ ನಾರಾಯಣ ಕಡೆಕಾರ್

ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರಜ್ಞನಾಗಿರುವ ನಾನು ೧೯೮೧ರಿಂದ ಕರ್ನಾಟಕದ ಹೊರಗಿದ್ದೇನೆ. ಆ ವರ್ಷ ನನಗೆ ದೆಹಲಿ ವಿಶ್ವವಿದ್ಯಾಲಯದ ಡಾಕ್ಟೊರೇಟೋತ್ತರ ಸಂಶೋಧನಾ ವೇತನ ಸಿಕ್ಕಿತು. ಹಾಗಾಗಿ ದೆಹಲಿಗೆ ಹೋದೆನು.

ಕರ್ನಾಟಕ, ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಪ್ರೀತಿಸುವ ವ್ಯಕ್ತಿಗೆ ಹೊರನಾಡಿನಲ್ಲಿ ಜೀವನ ಕಷ್ಟಕರ. ಅವನು ಹೋದಲ್ಲೆಲ್ಲ ಸಾಧ್ಯವಾದರೆ ಒಂದು ಪುಟ್ಟ ಕರ್ನಾಟಕವನ್ನು ಸೃಷ್ಟಿಸಲು ಪ್ರಯತ್ನಿಸುತ್ತಾನೆ. ಇಲ್ಲವೇ ಬೇರೆಯವರು ಈಗಾಗಲೇ ಸೃಷ್ಟಿಸಿದ ಕರ್ನಾಟಕದಲ್ಲಿ ಸಂತೋಷ ಪಡೆಯಲು ಪ್ರಯತ್ನಿಸುತ್ತಾನೆ. ನನಗೆ ದೆಹಲಿ ವಿಶ್ವವಿದ್ಯಾಲಯದಲ್ಲಿ ಮಾರ್ಗದರ್ಶಕರಾಗಿದ್ದವರು. ಪ್ರೊ. ಎಂ.ಎಸ್. ಅನಂತಪದ್ಮನಾಭರಾವ್. ಅವರು ಕನ್ನಡದ ಪ್ರಖ್ಯಾತ ಸಮಾಜಶಾಸ್ತ್ರಜ್ಞರು. ಕರ್ನಾಟಕದಿಂದ ದೂರವಿದ್ದರೂ ಕನ್ನಡದ ಕುಟುಂಬದೊಂದಿಗೆ ನಿಕಟ ಸಂಪರ್ಕದ ಅವಕಾಶ ಸಿಕ್ಕಿತು. ವಿಶ್ವವಿದ್ಯಾಲಯದಲ್ಲಿ ನಮ್ಮದೊಂದು ಸಣ್ಣ ಕನ್ನಡದ ಬಳಗವಿತ್ತು. ಸಮಾಜಶಾಸ್ತ್ರ ವಿಭಾಗದಲ್ಲಿ ಸಂಶೋಧಕರಾಗಿದ್ದ ಹುಬ್ಬಳಿಯ ಬಸವರಾಜ ಚಾವಡಿ, ಬೆಂಗಳೂರಿನ ಶ್ಯಾಮಭಟ್ ಮತ್ತು ಕನ್ನಡ ವಿಭಾಗದ ಡಾ. ಸಾಯಿನಾಥ್ ಆ ಬಳಗದ ಸದಸ್ಯರು. ನಾವು ಬಿಡುವಾದಾಗ ಹಾಸ್ಟೆಲಿನಲ್ಲಿ ರಾತ್ರಿ ಭೋಜನದ ನಂತರ, ಕನ್ನಡದ ಬಗ್ಗೆ ಕರ್ನಾಟಕದ ಬಗ್ಗೆ ಚರ್ಚಿಸುತ್ತಿದ್ದೆವು. ಸಾಧ್ಯವಾದಾಗ ದೆಹಲಿ ಕನ್ನಡ ಸಂಘದ ಮತ್ತು ಕರ್ನಾಟಕ ಭವನದ ಕಾರ್ಯಕ್ರಮಗಳಿಗೆ, ವಿಶ್ವವಿದ್ಯಾಲಯದ

'ಸೆಲ್ಯುಲ್ಯಾಡ್' ಚಲನಚಿತ್ರ ಸೊಸೈಟಿಯ ಚಲನಚಿತ್ರ ಪ್ರದರ್ಶನಗಳಿಗೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಜೊತೆಯಾಗಿ ಹೋಗುತ್ತಿದ್ದೆವು.

೧೯೮೫ರಲ್ಲಿ ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯಕ್ಕೆ ನಾನು ಅಧ್ಯಾಪಕನಾಗಿ ಬಂದೆ. ಇದರಿಂದ ಕರ್ನಾಟಕಕ್ಕೆ ಹತ್ತಿರವಿರಬೇಕೆಂಬ ಆಸೆ ಈಡೇರಿತು. ಐತಿಹಾಸಿಕ ಕಾರಣ ಗಳಿಂದಾಗಿ ಹಾಗೂ ಕರ್ನಾಟಕದೊಂದಿಗಿರುವ ಅತಿ ಉದ್ದದ ಗಡಿಯಿಂದಾಗಿ ಆಂಧ್ರಪ್ರದೇಶ ದಲ್ಲಿ, ಅದರಲ್ಲೂ ಹೈದರಾಬಾದಿನಲ್ಲಿ ಗಣನೀಯ ಕನ್ನಡಿಗರಿದ್ದಾರೆ. ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಾದ ಬೀದರ್, ಗುಲಬರ್ಗಾ ಮತ್ತು ರಾಯಚೂರುಗಳಿಂದ ಅನೇಕ ಕನ್ನಡಿಗರು ಸ್ವಾತಂತ್ರಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬಂದು ನೆಲೆಸಿದರು.

ಸಮಾಜಶಾಸ್ತ್ರಜ್ಞ ಕ್ಲಾಡ್ ಫಿಶರ್ ಹೇಳುವಂತೆ, ನಗರಗಳು ಸಾಂಸ್ಕೃತಿಕವಾಗಿ ಭಿನ್ನವಾಗಿ ರುವ ಗುಂಪುಗಳ (sub cultures) ಉದಯ ಮತ್ತು ಬೆಳವಣಿಗೆಗೆ ಪೂರಕವಾದ ವಾತಾವರಣ ವನ್ನು ಒದಗಿಸುತ್ತವೆ. ನಗರಗಳು, ಅದರಲ್ಲೂ ಮಹಾನಗರಗಳು ಇಂತಹ ಗುಂಪುಗಳ ಉದಯಕ್ಕೆ ಬೇಕಾಗುವ 'ಅವಶ್ಯಕ ಜನಸಮೂಹ' (critical mass)ವನ್ನು ಒದಗಿಸುತ್ತವೆ.

ಹೈದರಾಬಾದಿನಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಕೊರತೆಯನ್ನು ಕಡಿಮೆ ಮಾಡಲು ೧೯೩೬ರಲ್ಲಿ ಕರ್ನಾಟಕ ಸಾಹಿತ್ಯ ಮಂದಿರವನ್ನು ಪ್ರಾರಂಭಿಸಲಾಯಿತು. ಸಂಘದ ಗ್ರಂಥಾಲಯದಲ್ಲಿ ಸುಮಾರು ಹತ್ತು ಸಾವಿರ ಪುಸ್ತಕಗಳಿವೆ. ನಾನು ಸಾಹಿತ್ಯ ಮಂದಿರದ ಆಜೀವ ಸದಸ್ಯ. ಹತ್ತು ದಿನಗಳಿಗೊಮ್ಮೆ ನನ್ನ ತಾಯಿಗೋಸ್ಕರ ಮತ್ತು ನನಗೋಸ್ಕರ ಕನ್ನಡ ಪುಸ್ತಕಗಳನ್ನು ತರಲು ಅಲ್ಲಿಗೆ ಹೋಗುತ್ತೇನೆ. ಸಾಹಿತ್ಯ ಮಂದಿರ ಪ್ರಾರಂಭದಿಂದಲೂ ನಾಡಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತ ಬಂದಿದೆ. ಆಗ ಪ್ರತಿದಿನ ಸಾಹಿತಿಗಳ ಉಪನ್ಯಾಸಗಳು, ಕವಿಗೋಷ್ಠಿಗಳು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಕನ್ನಡದ ಪ್ರಖ್ಯಾತ ಸಾಹಿತಿಗಳನ್ನು ನಾಡಹಬ್ಬಕ್ಕೆ ಆಹ್ವಾನಿಸುತ್ತಾರೆ. ಸಾಹಿತ್ಯ ಮಂದಿರ ೧೯೯೩ ಬಂಡಾಯ ಸಾಹಿತ್ಯ ಸಮ್ಮೇಳನವನ್ನು ಸಂಘಟಿಸಿತು. ಸಾಹಿತ್ಯ ಮಂದಿರವು, ಕನ್ನಡಿಗರು ಹೆಚ್ಚಾಗಿ ನೆಲೆಸಿರುವ ಪ್ರದೇಶಗಳಾದ ಕೋಟೆ, ರಾಮ್‌ಕೋಟೆ, ಕಾಚಿಗೂಡ ಮತ್ತು ಬಾಗ್ ನಿಂಗಂಪಲ್ಲಿಗಳ ಮಧ್ಯಭಾಗದಲ್ಲಿರುವದರಿಂದ ಸಾಕಷ್ಟು ಕನ್ನಡಿಗರನ್ನು ಆಕರ್ಷಿಸುತ್ತದೆ. ೧೯೮೪ರಿಂದ ೧೯೯೧ರವರೆಗೆ ಅದು ಸಾಹಿತ್ಯಿಕ ಮಾಸಿಕ 'ಪರಿಚಯ'ವನ್ನು ಜಿ. ಕಿಶನ್‌ರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿತು. ಕನ್ನಡದ ಪ್ರಖ್ಯಾತ ಲೇಖಕರ ಲೇಖನಗಳು ಅದರಲ್ಲಿ ಪ್ರಕಟವಾಗಿವೆ. ಹೆಗ್ಗೋಡಿನ 'ತಿರುಗಾಟ' ತಂಡದವರು ಕೆಲವು ಸಲ ಸಾಹಿತ್ಯ ಮಂದಿರದ ವತಿಯಿಂದ ತಮ್ಮ ನಾಟಕಗಳನ್ನು ಪ್ರದರ್ಶಿಸುತ್ತಾರೆ. ಕೆಲವು ವರ್ಷಗಳ ಮೊದಲು ಸಾಹಿತ್ಯ ಮಂದಿರ ಹೈದರಾಬಾದ್ ಫಿಲ್ಮ್ ಕ್ಲಬ್‌ನೊಂದಿಗೆ ಗಿರೀಶ್ ಕಾಸರವಳ್ಳಿಯವರ ಎಲ್ಲ ಚಲನ ಚಿತ್ರಗಳನ್ನು ಪ್ರದರ್ಶಿಸಿತು. ಈ ವರ್ಷ ಜಿ.ವಿ. ಅಯ್ಯರ್ ಮತ್ತು ಬಿ.ವಿ. ಕಾರಂತರ ಚಲನ ಚಿತ್ರಗಳನ್ನು ಪ್ರದರ್ಶಿಸುವ ಪ್ರಯತ್ನ ನಡೆಯುತ್ತಿದೆ. ಸಾಹಿತ್ಯ ಮಂದಿರ ಕೆಲವು ಸಾಹಿತ್ಯಿಕ ಮತ್ತು ಬಾಲರಿಗಾಗಿ ಗ್ರಂಥಗಳನ್ನು ಪ್ರಕಟಿಸಿದೆ.

ಕನ್ನಡ ನಾಟಕ, ಯಕ್ಷಗಾನ, ನೃತ್ಯ ಮತ್ತು ಸಂಗೀತವನ್ನು ಪ್ರೋತ್ಸಾಹಿಸಲು 'ಕನ್ನಡ ನಾಟ್ಯರಂಗ' ೧೯೬೮ರಲ್ಲಿ ಅಸ್ತಿತ್ವಕ್ಕೆ ಬಂದಿತು. ೧೯೯೯ರಲ್ಲಿ 'ಮುತ್ತಿನ ಹಬ್ಬ'ವನ್ನು ಪ್ರದರ್ಶಿಸಲಾಯಿತು. ೨೦೦೧ ಮಾರ್ಚಿನಲ್ಲಿ ನಾಟಕೋತ್ಸವವನ್ನು ಏರ್ಪಡಿಸಲಾಯಿತು. ಪ್ರತಿ ತಿಂಗಳು ನಾಟ್ಯರಂಗದ ಒಂದು ಕಾರ್ಯಕ್ರಮವಾದರೂ ಕನಿಷ್ಠ ಇರುತ್ತದೆ. ನಗರದ ಉದಯೋನ್ಮುಖ ಕಲಾವಿದರನ್ನು ಪ್ರೋತ್ಸಾಹಿಸಿ ಅವರಿಂದ ನಾಟಕಗಳನ್ನು, ನೃತ್ಯ ಮತ್ತು ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸುವಲ್ಲಿ ಕನ್ನಡ ನಾಟ್ಯರಂಗ ಮಹತ್ವದ ಪಾತ್ರವನ್ನು ನಿಭಾಯಿಸಿದೆ. ಕಳೆದ ಮೂವತ್ತುಮೂರು ವರ್ಷಗಳಲ್ಲಿ ಅವರು ಮೂವತ್ತೆರಡು ನಾಟಕ ಗಳನ್ನು ದಿಗ್ದರ್ಶಿಸಿ ಪ್ರದರ್ಶಿಸಿದ್ದಾರೆ. ಈ ನಾಟಕಗಳನ್ನು ಕರ್ನಾಟಕದ ವಿವಿಧ ನಗರಗಳಲ್ಲಿ ಮತ್ತು ಇತರ ರಾಜ್ಯಗಳಲ್ಲಿ ಪ್ರದರ್ಶಿಸಿದ್ದಾರೆ. ಕನ್ನಡಿಗರು ಮರೆತಿದ್ದ ಹಲವು ಹಳೆಯ ಕಂಪನಿ ನಾಟಕಗಳು ಅವರ ಪ್ರಯತ್ನದಿಂದಾಗಿ ಪ್ರದರ್ಶಿಸಲ್ಪಟ್ಟಿವೆ. ಹೋಟೆಲ್ ಮಾಲಿಕರು ಅವರ ಪ್ರದರ್ಶನಗಳಿಗೆ ಆರ್ಥಿಕ ಸಹಾಯವನ್ನೊದಗಿಸುತ್ತಾರೆ. ಇದಲ್ಲದೆ ಕರ್ನಾಟಕದ ವಿವಿಧ ನಾಟಕ ಕಂಪನಿಗಳನ್ನು ಆಹ್ವಾನಿಸಿ ಅವರಿಂದ ನಾಟಕಗಳನ್ನು ಏರ್ಪಡಿಸಿದ್ದಾರೆ. ನಾನು ಅದರ ಸದಸ್ಯನಾಗಿ ಸಾಧ್ಯವಾದ ಸಹಾಯವನ್ನು ಮಾಡಲು ಪ್ರಯತ್ನಿಸಿದ್ದೇನೆ.

ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ 'ಕನ್ನಡ ಸಂಘ' ಕೆಲವು ವರ್ಷಗಳಿಂದ ಅಸ್ತಿತ್ವ ದಲ್ಲಿದೆ. ಸಂಘ ಕನ್ನಡದ ಪರಿಸರದ ಕೊರತೆಯ ನಿವಾರಣೆಗಾಗಿ ವಿದ್ಯಾರ್ಥಿಗಳಿಂದಲೇ ಪ್ರಾರಂಭವಾದದ್ದು. ವಿದ್ಯಾರ್ಥಿಗಳ ಮತ್ತು ಶಿಕ್ಷಕರ ನಿರಂತರ ಆಸಕ್ತಿಯಿಂದಾಗಿ ಇಂದಿಗೂ ಕ್ರಿಯಾಶೀಲವಾಗಿದೆ. ಪ್ರತಿವರ್ಷ ಕನಿಷ್ಠ ಎರಡು ಸಲವಾದರೂ ಸದಸ್ಯರೆಲ್ಲ ಒಟ್ಟಾಗುತ್ತಾರೆ. ಹೊಸ ವಿದ್ಯಾರ್ಥಿಗಳನ್ನು ಪರಿಚಯಿಸುವುದು, ಸಾಹಿತ್ಯ ವಾಚನ, ಚಿಕ್ಕ ನಾಟಕಗಳ ಪ್ರಯೋಗ, ನಗರದಲ್ಲಿರುವ ಹಾಗೂ ನಗರಕ್ಕೆ ಬರುವ ವಿದ್ವಾಂಸರ ಉಪನ್ಯಾಸಗಳನ್ನು ಏರ್ಪಡಿಸುವುದು, ಕಲಾತ್ಮಕ ಚಿತ್ರಗಳ ಪ್ರದರ್ಶನಗಳು ಈ ಸಂಘದ ಮುಖ್ಯ ಕಾರ್ಯಕ್ರಮಗಳು. ಈ ವರ್ಷ (೨೦೦೧) ಜನವರಿಯಿಂದ ಏಪ್ರಿಲ್‌ವರೆಗೆ ಡಾ. ಯು.ಆರ್. ಅನಂತಮೂರ್ತಿ ಡಾ. ರಾಧಾ ಕೃಷ್ಣನ್ ಪೀಠದ ಪ್ರಾಧ್ಯಾಪಕರಾಗಿ ವಿಶ್ವವಿದ್ಯಾಲಯದಲ್ಲಿದ್ದರು. ಅವರಿದ್ದಷ್ಟು ದಿನಗಳು ಅವರ ಸಾಹಿತ್ಯ ಜೀವನದ ಅನುಭವಗಳ ಬಗ್ಗೆ, ಅವರ ಕೃತಿಗಳ ಬಗ್ಗೆ ಮತ್ತು ಅವುಗಳ ಚಿತ್ರಣದ ಬಗ್ಗೆ ಪ್ರತಿವಾರ ಉಪನ್ಯಾಸವಿರುತ್ತಿತ್ತು. ಆ ಸಂದರ್ಭದಲ್ಲಿ ಅವರ ಕಾದಂಬರಿ ಮತ್ತು ಸಣ್ಣಕತೆಗಳ ಮೇಲೆ ಆಧರಿಸಿದ ಚಲನ ಚಿತ್ರಗಳನ್ನು ಪ್ರದರ್ಶಿಸಲಾಯಿತು ಮತ್ತು ಅವುಗಳ ಬಗ್ಗೆ ಚರ್ಚಿಸಲಾಯಿತು. ಕನ್ನಡ ಸಂಘದ ಸದಸ್ಯರಿಗೆ ಅವರ ವಾಸ್ತವ್ಯ, ಅವ ರೊಂದಿಗೆ ಮತ್ತು ಇತರ ಸದಸ್ಯರೊಂದಿಗೆ ವ್ಯವಹರಿಸಲು ಒಳ್ಳೆಯ ಅವಕಾಶವನ್ನು ಕೊಟ್ಟಿತು.

ಕರ್ನಾಟಕದ ಹತ್ತಿರವಿರುವುದು ಹಲವು ವಿಧಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ ಯೊಂದಿಗೆ ಸಂಪರ್ಕವಿಟ್ಟುಕೊಳ್ಳಲು ಮತ್ತು ಕನ್ನಡಕ್ಕೆ ಸಾಧ್ಯವಾದ ಅಳಿಲು ಸೇವೆಯನ್ನು ಮಾಡಲು ಅವಕಾಶಕೊಟ್ಟಿದೆ. ಸಾಧ್ಯವಾದಾಗ ಅಖಿಲ ಭಾರತ ಕನ್ನಡ ಸಮ್ಮೇಳನಗಳಲ್ಲಿ ಭಾಗವಹಿಸುತ್ತೇನೆ. ಸಂಪಾದಿತ ಗ್ರಂಥಗಳಿಗೆ, ವಿಶ್ವವಿದ್ಯಾಲಯಗಳ ನಿಯತಕಾಲಿಕೆಗಳಿಗೆ ಮತ್ತು ಪತ್ರಿಕೆಗಳಿಗೆ ಪ್ರಕಟಣೆಗಾಗಿ ಲೇಖನಗಳನ್ನು ಕಳುಹಿಸುತ್ತೇನೆ. ಕನ್ನಡ

ವಿಶ್ವವಿದ್ಯಾಲಯದ 'ಮಾನವ ಮತ್ತು ಸಮಾಜ' ವಿಶ್ವಕೋಶದ ಸಂಪಾದಕನಾಗಿ ಕೆಲಸ ಮಾಡಿದ್ದೇನೆ. ಸಾಧ್ಯವಾದರೆ ಕನ್ನಡದಲ್ಲಿ ಸಮಾಜಶಾಸ್ತ್ರದ ಗ್ರಂಥಗಳನ್ನು ರಚಿಸುವ ಆಶೆಯಿದೆ.

ವೇಳೆಯಿದ್ದಾಗ ಹೈದರಾಬಾದಿನಲ್ಲಿ ಪ್ರಕಟವಾಗುವ 'ಕನ್ನಡ ಪ್ರಭ' ತಂದು ಓದುತ್ತೇನೆ. ಕನ್ನಡದ ವಾರ ಮತ್ತು ಮಾಸಪತ್ರಿಕೆಗಳನ್ನು ತಪ್ಪದೆ ತರಿಸುತ್ತೇನೆ. ಕನ್ನಡದ ಭಾವಗೀತೆಗಳ ಮತ್ತು ಹಳೆಯ ಚಲನಚಿತ್ರಗಳ ಕ್ಯಾಸೆಟ್‌ಗಳ ಸಂಗ್ರಹ ನನ್ನಲ್ಲಿದೆ. ನಮ್ಮ ಕೇಬಲ್ ದೂರ ದರ್ಶನದವರನ್ನು ಒತ್ತಾಯಿಸಿ ಕನ್ನಡ ಮುಖ್ಯ ಚಾನೆಲ್‌ಗಳನ್ನು (ಕಂಪನಪಟ್ಟಿ) ಕೊಡುವಂತೆ ಮಾಡಿದ್ದೇನೆ. ಮನೆಯಲ್ಲಿ ಕನ್ನಡ ಪುಸ್ತಕಗಳ ಪುಟ್ಟ ಗ್ರಂಥಾಲಯವಿದೆ.

ಒಟ್ಟಿನಲ್ಲಿ ಹೇಳುವುದಾದರೆ ನಾವು ಹೈದರಾಬಾದಿನಲ್ಲಿ ಒಂದು 'ಪುಟ್ಟ ಕರ್ನಾಟಕ'ವನ್ನು ಸೃಷ್ಟಿಸಿದ್ದೇವೆ. ಅದು ನಮಗೆ ಕರ್ನಾಟಕದಿಂದ ಹೊರಗಿರುವ ಕೊರತೆಯನ್ನು ಸ್ವಲ್ಪ ಮಟ್ಟಿಗೆ ತುಂಬಿಸಿಕೊಟ್ಟಿದೆ.

●

## ಮರಳಿಗೂಡಿಗೆ ಸೇರುವ ಹಕ್ಕಿಗಳು ಕಡಿಮೆ

● ಕೆ ಸತ್ಯನಾರಾಯಣ

ನನ್ನನ್ನು ನಾನೇ ಅರೆ ಹೊರನಾಡ ಕನ್ನಡಿಗನೆಂದು ಕರೆದುಕೊಳ್ಳಬಹುದೆಂದು ಕಾಣುತ್ತದೆ. ಕರ್ನಾಟಕದಿಂದ ವರ್ಷ, ಎರಡು ವರ್ಷ ಅಂತ ಹೊರಗಡೆ ಇದ್ದದ್ದು ಹೌದಾದರೂ ಹೀಗೆ ಎಂಟು-ಹತ್ತು ವರ್ಷಗಳಷ್ಟು ದೀರ್ಘಕಾಲ ಹೊರಗಡೆ ಇರುವುದು ಈಗಲೇ. ನಲವತ್ತರ ಪ್ರಾಯ ಸಮೀಪಿಸುವ ಹೊತ್ತಿಗೆ ನಾನು ಹೊರಗಡೆ ಬಂದದ್ದು. ಈ ಹೊತ್ತಿಗಾಗಲೇ ನನ್ನ ವ್ಯಕ್ತಿತ್ವ, ವೃತ್ತಿ, ಆಸಕ್ತಿ ಇವುಗಳಿಗೆಲ್ಲ ಒಂದು ನಿಲುಗಡೆ ಬಂದಿತ್ತು. ನನ್ನ ಮುಖ್ಯ ಆಸಕ್ತಿಗಳ ಲ್ಲೊಂದಾದ ಬರವಣಿಗೆಗೆ ಸಂಬಂಧಪಟ್ಟಂತೆ ನಾನು ಪ್ರತಿದಿನವೂ ಕನ್ನಡ ಮಾತನಾಡುವ ಕೇಳಿಸಿಕೊಳ್ಳುವ ಪ್ರದೇಶದಲ್ಲಿರಬೇಕಾದದ್ದು ಅನಿವಾರ್ಯವಾಗಿತ್ತು. ಆದರೆ ಕೇಂದ್ರ ಸರ್ಕಾರದ ನೌಕರಿಯಲ್ಲಿರುವವರು ಇಂತಹ ಸಂಗತಿಗಳ ಬಗ್ಗೆ ಭಾವೋದ್ವೇಗದ ನಿಲುವು ತಳೆಯುವುದು ಹೀಗೆ?

ಹೊರ ಬಂದದ್ದಾದರು ಎಲ್ಲಿಗೆ? ಸುಮಾರು ಇನ್ನೂರು ಇನ್ನೂರಿಪ್ಪತ್ತು ಮೈಲಿ ಮಾತ್ರ ದೂರವಿರುವ ಮದ್ರಾಸಿಗೆ. ಕರ್ನಾಟಕದ ಕೊನೆಯ ಹಳ್ಳಿಯಾದ ನಂಗಲಿಯಿಂದ ಮದ್ರಾಸು ನೂರೈವತ್ತೇ ಮೈಲಿ. ಆಮೇಲೂ ಬೆಂಗಳೂರು-ಮಂಡ್ಯ-ಕರ್ನಾಟಕಗಳ ಸಂಪರ್ಕ ತಪ್ಪಿಲ್ಲ, ತಪ್ಪಿ ಹೋಗಲು ಬಿಟ್ಟಿಲ್ಲ. ನಾನು ಮದ್ರಾಸಿಗೆ ಬರುವ ವೇಳೆಗೆ ಕನ್ನಡಿಗರು ವಲಸೆ ಬಂದು ಐದಾರು ತಲೆಮಾರುಗಳಾದರೂ ಕಳೆದಿವೆ. ತಲೆಮಾರುಗಳು ಕಳೆದಂತೆ, ಕಳೆದಂತೆ ಅವರ

ಭಾವಲೋಕದಲ್ಲಿ ಕನ್ನಡ ಭಾಷೆಯ, ಕನ್ನಡ ಸಂಸ್ಕೃತಿಯ ಪ್ರಭಾವ-ಪರಿಚಯ ಕಡಿಮೆಯಾಗುತ್ತಾ ಹೋಗಿದೆ. ಮೊದಲ ಎರಡು ತಲೆಮಾರುಗಳಲ್ಲಿ ಮಾತ್ರ ಈ ಪ್ರಭಾವ ಗಾಢ. ನಾನು ನಾಗಪುರದಲ್ಲಿದ್ದಾಗ ಮಗಳಿಗೆ ಗಂಡು ಹುಡುಕುತ್ತಿದ್ದವರೊಬ್ಬರು, ವರ ಮೂಲತಃ ಉತ್ತರ ಕರ್ನಾಟಕದವರಾಗಿರಬೇಕು. ಆದರೆ ಓದು--ವಿದ್ಯಾಭ್ಯಾಸವನ್ನೆಲ್ಲ ಮಹಾರಾಷ್ಟ್ರದಲ್ಲಿ ಕಳೆದಿರಬೇಕು ಎಂಬ ಇರಾದೆ ವ್ಯಕ್ತಪಡಿಸಿದ್ದುಂಟು. ಆದರೂ ಇಂತಹವರು ತಮ್ಮನ್ನ ಕನ್ನಡ ಭಾಷಿಕರೆಂದೇ ಗುರುತಿಸಿಕೊಳ್ಳುತ್ತಾರೆ. ಸ್ಥಳೀಯರು ಕೂಡ. ನಮ್ಮ ಆಫೀಸಿನಲ್ಲಿ ಈಗಲೋ ಆಗಲೋ ಸಾಯುವ ಸ್ಥಿತಿಯಲ್ಲಿ ನರಗಳ ದೌರ್ಬಲ್ಯದಿಂದ ನರಳುತ್ತಿದ್ದವರೊಬ್ಬರಿದ್ದರು. ತಿಂಗಳಲ್ಲಿ ಒಂದು ನಿಮಿಷ ಕೂಡ ಕೆಲಸ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಕ್ವಾರ್ಟರ್ಸ್, ಸಂಬಳ ಮುಂತಾದ ಅನುಕೂಲಗಳಿಗಾಗಿ ಆತನನ್ನೂ ಮನೆಯವರು ಕೆಲಸಕ್ಕೆ ಅಟ್ಟುತ್ತಿದ್ದರು. ಆತನಿಂದ ಬೇಸತ್ತು, ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಬೇಕೆಂದು ಗೊಣಗಾಡಿದ್ದೆ. ಒಂದು ದಿನ ನನ್ನ ರೂಮಿಗೆ ಬಂದು ನಡುಗುವ ದೇಹ ಧ್ವನಿಯೊಡನೆ, ನಾನು ಕನ್ನಡದೋನೆ ಸಾರ್, ಬಳ್ಳಾರಿ ಕಡೆಯವನು, ನಮ್ಮ ತಾತನ ಕಾಲದಲ್ಲಿ ಇಲ್ಲಿಗೆ ಬಂದದ್ದು ಎಂದು ಅರ್ಧಂಬರ್ಧ ಕನ್ನಡ-ಇಂಗ್ಲಿಶಿನಲ್ಲಿ ಹೇಳಿದ. ಹಾಗೆ ಹೇಳುವಾಗ ಅವನಿಗೆ ತಾನು ಕನ್ನಡದವನೆಂಬ ಕಾರಣಕ್ಕಾದರೂ ಸೇವೆಯಲ್ಲಿ ಉಳಿಯುವುದಕ್ಕೆ ಬರುವೆಂಬ ಭರವಸೆಯಿತ್ತು.

ಇಂತಹ ಅನುಭವಗಳು ಅಪರೂಪ. ಕರ್ನಾಟಕ ಹತ್ತಿರವಿರುವುದರಿಂದಲೂ, ಟಿ.ವಿ.ಯಲ್ಲಿ ಕನ್ನಡ ಕಾರ್ಯಕ್ರಮಗಳು ಚಿತ್ರಗಳನ್ನು ನೋಡುತ್ತಲೇ ಇರುವುದರಿಂದಲೋ, ಸುದ್ದಿ ಮಾಧ್ಯಮಗಳ ದೆಸೆಯಿಂದಲೋ, ಭಾಷೆಯ ಕಾರಣಕ್ಕೆ, ಇವರು, ಇಗೋ ನಮ್ಮವರು ಎಂಬ ಥ್ರಿಲ್ ಆಗುವುದಿಲ್ಲ. ಮೂವತ್ತು ವರ್ಷಗಳ ಹಿಂದೆ ಬಂದವರಿಗೆ ಕನ್ನಡ ಹೀಗೆ ನಿತ್ಯವು ಎಡತಾಕಿರಲಾರದೇನೋ. ಇವರೆಲ್ಲ ಕನ್ನಡ ಮಾತನಾಡುತ್ತಿದ್ದರು ಕನ್ನಡ ಸಂಸ್ಕೃತಿ, ಕರ್ನಾಟಕದ ಆಸಕ್ತಿಗಳೊಡನೆ ಗುರುತಿಸಿಕೊಳ್ಳುತ್ತಾರೆಯೋ, ಗುರುತಿಸಿಕೊಳ್ಳಬೇಕೇ? ನಾನು ಬಾಲ್ಯದಲ್ಲಿ ಈಗ ವೀರಪ್ಪನ್ ನಾಡಾಗಿರುವ ಕೊಳ್ಳೇಗಾಲ ಸೀಮೆಯಲ್ಲಿದ್ದೆ. ನಮ್ಮ ಊರಾದ ಮಂಡ್ಯದಲಿಲ್ಲ. ಬಹುಕಾಲ ಕಳೆದ ಬೆಂಗಳೂರಿನಲ್ಲು ಕಂಡ ಹಾಗೆ ತಮಿಳರು ಅವರನ್ನ ಅವರ ಭಾಷೆ-ಸಂಸ್ಕೃತಿಯೊಡನೆ ಗುರುತಿಸಿಕೊಳ್ಳುವಷ್ಟು ತೀವ್ರವಾಗಿ, ಅಬ್ಸೆಸೀವ್ ಆಗಿ ಕನ್ನಡಿಗರು ಗುರುತಿಸಿಕೊಳ್ಳುವುದಿಲ್ಲ. ಈ ವಿಷಯದಲ್ಲಿ ದಕ್ಷಿಣ ಕನ್ನಡದಿಂದ ಬಂದ ಕನ್ನಡಿಗರು ಅಪವಾದ. ಎಲ್ಲೇ ಹೋದರೂ ಅವರದ್ದೊಂದು ಪ್ರತ್ಯೇಕವಾದ ಗುಂಪು-ಗೌಜಲು. ಈಗ ಅವರು ಕೂಡ ಒಗ್ಗಟ್ಟಾಗಿಲ್ಲ. ಜಾತಿವಾರು ಒಡೆದುಹೋಗಿದ್ದಾರೆ. ಆದರೂ ಅವರು ಯಾವ ಜಾತಿಯವರೇ ಇರಲಿ, ಎಷ್ಟೇ ದೊಡ್ಡ ಹುದ್ದೆಯಲ್ಲಿರಲಿ ತಮ್ಮನ್ನು ಕನ್ನಡದವರೆಂದೇ ಗುರುತಿಸಿಕೊಳ್ಳುತ್ತಾರೆ. ಹಳೆ ಮೈಸೂರಿನಿಂದ ವಲಸೆ ಬಂದವರ ಪೈಕಿ ಹೀಗೆ ಗುರುತಿಸಿಕೊಳ್ಳುವ ತವಕ ಕೆಳಮಧ್ಯಮವರ್ಗ, ಮಧ್ಯಮವರ್ಗದವರಲ್ಲಿರುತ್ತದೆ. ನಂತರದ ಮೇಲುವರ್ಗಗಳಲ್ಲಿರುವುದಿಲ್ಲ. ಇಲ್ಲಿರುವ ಅಯನಾವರಂ ಕನ್ನಡ ಸಂಘ ಸ್ಕೂಲುಗಳು ಈಗಲೂ ಸಕ್ರಿಯವಾಗಿರಲು ಕಾರಣ, ಇಂಟಿಗ್ರೆಲ್ ಕೋಚ್ ಫ್ಯಾಕ್ಟರಿ ಸ್ಥಾಪನೆಯಾದಾಗ ಬಂದು ಸೇರಿಕೊಂಡು ಒಂದೇ ಪ್ರದೇಶದಲ್ಲಿ ವಾಸಮಾಡಲು ಪ್ರಾರಂಭಿಸಿದ ಮಧ್ಯಮವರ್ಗ,

ಕೆಳವರ್ಗದ ಕಾರ್ಮಿಕರು, ಸಣ್ಣಪುಟ್ಟ ಅಧಿಕಾರಿಗಳು, ತುಂಬಾ ದೊಡ್ಡ ಹುದ್ದೆಯಲ್ಲಿರುವವರ ಪತ್ನಿಗೆ ನಾಟಕ-ಚಿತ್ರಗಳಲ್ಲಿ ಆಸಕ್ತಿ. ಭಾರತದ ನಾನಾ ಭಾಗಗಳಲ್ಲಿದ್ದ ಅವರಿಗೆ ಹತ್ತಾರು ಭಾಷೆಗಳು ಗೊತ್ತು. ಡಬ್ಬಿಂಗ್‌ಗೆ ಧ್ವನಿ ನೀಡುತ್ತಾರೆ. ಆದರೆ ಅವರು ಕನ್ನಡ ಚಿತ್ರ ಟೆಲಿಚಿತ್ರ ಗಳಲ್ಲಿ ಅಭಿನಯಿಸಿದಾಗ, ಕನ್ನಡ ಧ್ವನಿಯನ್ನು ಬೇರೆ ಯಾರಾದರೂ ದಾನ ಮಾಡಬೇಕು.

ಈ ಒಳವ್ಯತ್ಯಾಸ-ಸೂಕ್ಷ್ಮಗಳು ಏನೇ ಇದ್ದರೂ ಇಲ್ಲಿ ವಲಸೆ ಬಂದವರೂ ಕೂಡ ಅಲ್ಲಿಯೇ ಉಳಿದುಕೊಂಡಿರುವವರಂತೆ ಜನಪ್ರಿಯ ಸಂಸ್ಕೃತಿ-ಸಿನಿಮಾ-ರಾಜಕಾರಣದ ಆಶಯಗಳಿಗೇ ಸ್ಪಂದಿಸುತ್ತಾರೆ. ನನ್ನ ಬರವಣಿಗೆಯ ಆಸಕ್ತಿಯನ್ನು ಸಕ್ರಿಯವಾಗಿ ಉಳಿಸಿ ಕೊಳ್ಳಲು ಬಂದ ಹೊಸದರಲ್ಲಿ ಕೆಲ ಸಂಘಟನೆಗಳೊಂದಿಗೆ ಸಂಪರ್ಕ ಬೆಳೆಸಿದ್ದೆ. ಆಗ ನನ್ನ ಅನುಭವಕ್ಕೆ ಬಂದ್ದೆಂದರೆ, ಹೀಗೆ ವಲಸೆ ಬಂದ ಕಾರಣಕ್ಕೇ ಒಬ್ಬರ ಸಾಂಸ್ಕೃತಿಕ ಸಾಹಿತ್ಯಿಕ ಆಸಕ್ತಿಗಳು ತೀವ್ರವಾಗಿರುವುದಿಲ್ಲ, ಆಳವಾಗಿರುವುದಿಲ್ಲ. ಬಹುಶಃ ಇವರೆಲ್ಲ ಕರ್ನಾಟಕ ದಲ್ಲೇ ಉಳಿದಿದ್ದರೂ ಇವರ ಆಸಕ್ತಿ ಆಳಗಳು ಹೀಗೆ ಉಳಿಯುತ್ತಿತ್ತೇನೋ?

ಆದರೆ ಹೊರನಾಡಿನಲ್ಲಿ ವಾಸಿಸುವುದರಿಂದ ಅನ್ಯಭಾಷಿಕರು, ಅನ್ಯ ಸಂಸ್ಕೃತಿಯವರ ಬಗ್ಗೆ ನಾವು ತಳೆಯುವ ನಿಲುವುಗಳಲ್ಲಿ ಬದಲಾಗಬಹುದೆ? ಈ ಪ್ರಶ್ನೆಗೆ ಉತ್ತರ ಹಲವು ಸ್ತರಗಳಿದ್ದು-ಸಹನೆ, ಮೇಲುಸ್ತರದ ಸಂಬಂಧ, ಸ್ನೇಹ ಇವುಗಳ ಮಟ್ಟಿಗೆ ನಾವು ಬದಲಾಗು ತ್ತೇವೆ. ಮೊದಲ ಒಂದೆರಡು ತಲೆಮಾರಿನಲ್ಲಿ ಹೀಗೇ ಇರುತ್ತದೆ. ಅಥವಾ ವಲಸೆ ಬಂದ ಇಪ್ಪತ್ತು-ಮೂವತ್ತು ವರ್ಷಗಳ ತನಕ, ನಂತರ ದೈನಿಕ, ಜೀವನ, ನೆರೆಹೊರೆಯವರ ಸಹವಾಸ, ವೃತ್ತಿ-ವಿದ್ಯಾಭ್ಯಾಸದ ಅಗತ್ಯಗಳು ನಮ್ಮಗಳ ವ್ಯಕ್ತಿತ್ವವನ್ನು, ವಲಯವನ್ನು ಕ್ರಮೇಣವಾಗಿ ವಿಸ್ತರಿಸುತ್ತವೆ. ಈ ವಿಷಯದಲ್ಲಿ ನಮ್ಮ ನಿಲುವುಗಳು ನಮ್ಮ ಮೇಲೆಯೇ ಮಾತ್ರ ಅವಲಂಬಿತವಾಗಿರುವುದಿಲ್ಲ. ಇಲ್ಲಿಯವರು ನಮ್ಮನ್ನ ಹೇಗೆ ನೋಡುತ್ತಾರೆ ಎಂಬುದರ ಮೇಲೂ ನಿರ್ಧಾರವಾಗುತ್ತದೆ. ಈವತ್ತಿಗೂ ಬಾಂಬೆಯ ದಿನನಿತ್ಯದ ಜೀವನದ ಲಯ ಕಾಸ್ಮಾಪಾಲಿಟನ್ ಆದದ್ದು, ಜಾತ್ಯಾತೀತವಾದದ್ದು. ಆದರೆ ಆ ನಗರ ಶಿವಸೇನೆಯಂತ ವರನ್ನು ಸಾಕುತ್ತಿದೆ. ತಮಿಳರು ಆ ಹಂತವನ್ನು ದಾಟಿಬಿಟ್ಟಿದ್ದಾರೇನೋ. ದ್ರಾವಿಡ ಭಾಷೆಗಳು ದ್ರಾವಿಡ ಸಂಸ್ಕೃತಿ ಎಂದರೆ ತಮಿಳುಭಾಷೆ, ತಮಿಳು ಸಂಸ್ಕೃತಿ ಎಂದೇ ಅವರ ಅರ್ಥ. ಮೂವತ್ತು ನಲವತ್ತು ವರ್ಷಗಳ ಹಿಂದೆ ಇಲ್ಲಿಯ ಮತ್ತು ಸೇಲಂ ಧರ್ಮಪುರಿಯಂತಹ ಕಡೆ ಕನ್ನಡವನ್ನು ಕಾಲೇಜು ಹಂತದಲ್ಲಿ ಎರಡನೆಯ ಭಾಷೆಯಾಗಿ, ಐಚ್ಛಿಕ ವಿಷಯವಾಗಿ ಓದಲು ಅನುಕೂಲಗಳಿತ್ತಂತೆ. ಆದರೆ ಕಾಲೇಜುಗಳಲ್ಲಿ ನಿಮಗೆ ಸೀಟು ಸಿಗಬೇಕಾದರೆ ನೀವು ಕನ್ನಡ ಭಾಷೆ ತೆಗೆದುಕೊಳ್ಳಬಾರದು ಎಂದು ಸೂಕ್ಷ್ಮವಾಗಿ ಹಿಂಸಿಸಿ ಕನ್ನಡ ವಿದ್ಯಾರ್ಥಿ ಗಳ ಸಂಖ್ಯೆಯನ್ನು ಹಂತಹಂತವಾಗಿ ಕಡಿಮೆ ಮಾಡಿ, ಕೊನೆಗೆ ಕನ್ನಡ ವಿಭಾಗಗಳನ್ನೇ ಮುಚ್ಚಲಾಯಿತಂತೆ. ಕನ್ನಡಬಲ್ಲ. ಕರ್ನಾಟಕಕ್ಕೆ ಹತ್ತಿರವಾಗಿದ್ದ ಸೇಲಂ ಇರೋಡಿನಿಂದ ಬಂದ ರಾಜಾಜಿ, ರಾಮಸ್ವಾಮಿ ನಾಯ್‌ಕರ್ ಅಂತವರು ಕೂಡ ಕನ್ನಡದ ಬಗ್ಗೆ, ಕನ್ನಡಿಗರ ಬಗ್ಗೆ ಅಂತಹ ಆರೋಗ್ಯಕರವಾದ ನಿಲುವನ್ನೇನು ತಳೆದಿರಲಿಲ್ಲ. ನಾವೆಲ್ಲ ವಿದ್ಯಾರ್ಥಿಗಳಿ ದ್ದಾಗ ಕನ್ನಡದ ಕತೆಗಳನ್ನು ಇಂಗ್ಲಿಶಿಗೆ, ತಮಿಳಿಗೆ ಅನುವಾದಿಸಿದ್ದ ರಾಜಾಜಿ ಕನ್ನಡದ

ಬಗ್ಗೆ ಕೀಳಾಗಿ ಮಾತಾಡಿ ದೊಡ್ಡ ಗಲಾಟೆಯೇ ಆಗಿತ್ತು. ಮೂರು ನಾಲ್ಕು ತಲೆಮಾರುಗಳಿಂದ ಇಲ್ಲೇ ಇದ್ದವರು. ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ ಹೋಟಲು ಮಾಲಿಕರುಗಳನ್ನು ಬ್ರಾಹ್ಮಣರು ಎಂಬ ಕಾರಣಕ್ಕೆ ರಾಮಸ್ವಾಮಿ ನಾಯ್‌ಕರ್ ಅನುಯಾಯಿಗಳು ದೈಹಿಕ ಹಿಂಸೆ, ಹಲ್ಲೆಗೆ ಒಳಪಡಿಸಿದ್ದರಂತೆ. ೨೦೦೧ನೇ ಇಸವಿಯಲ್ಲಿ ಇದನ್ನೆಲ್ಲ ಬಹಳ ಮಾಡಿ ತಮಿಳರು ಮಾತ್ರ ಇತರರ ಬಗ್ಗೆ ಅಸಹನೆ-ಪ್ರತಿರೋಧ ಉಳ್ಳವರು ಎಂದು ಹೇಳುವ ಧೈರ್ಯವು ನನಗಿಲ್ಲ. ಏಕೆಂದರೆ ಈವತ್ತಿನ ನಾಗರಿಕತೆ ಐಡೆಂಟಿಟಿ ಮತ್ತು ಎತ್ನಿಕ್ ಪಾಲಿಟಿಕ್ಸ್ ಹಿಡಿತಕ್ಕೆ ಸಿಕ್ಕಿಕೊಂಡಿದೆ. ನಮ್ಮದಲ್ಲದ್ದು, ನಾವೇ ಅಲ್ಲದ್ದು ಯಾವುದು ಕೂಡ ಈ ಜಗತ್ತಿನಲ್ಲಿರ ಬಾರದೆಂದು ಹೇಳುವ ಹಂತ ತಲುಪಿದ್ದೇವೆ. ಹೆಚ್ಚಿನ ಸಂಖ್ಯೆಯಲ್ಲಿರುವ, ಆರ್ಥಿಕವಾಗಿ ತಂಪಾಗಿರುವ ತೆಲುಗರ ಬಗ್ಗೆ ಇಲ್ಲಿ ಸ್ಪರ್ಧೆಯ ಭಾವನೆಯಿದೆ, ಕನ್ನಡಿಗರ ಬಗ್ಗೆ ಘೋಷಿತ ವಿರೋಧವಿಲ್ಲ ನಿಜ, ಆದರೆ ಅವರನ್ನು ಫಾರ್ ಗ್ರ್ಯಾಂಟೆಡ್.

ಕನ್ನಡ ನಾಡಿನಿಂದ ಬರುವ ಮಂತ್ರಿಗಳು, ಸಾಹಿತಿಗಳು, ಜನನಾಯಕರು- ಇವರುಗಳೇ ಹೊರನಾಡ ಕನ್ನಡಿಗರ ಬಗ್ಗೆ ಹೆಚ್ಚು ಭಾವುಕವಾಗಿ ಮಾತನಾಡುತ್ತಾರೆ. ಸಭೆ-ಸಮಾರಂಭಗಲ್ಲಿ ನಮ್ಮ ಕನ್ನಡದ ಬೇರುಗಳನ್ನು ನೆನಪಿಸುತ್ತಾರೆ. ಆದರೆ ಕನ್ನಡದ ಒಂದು ಸಣ್ಣಪುಟ್ಟ ಕೆಲಸ ವಾಗಬೇಕಾದರೂ ವಿಧಾನಸೌಧ, ಮಂತ್ರಿಗಳ ಮನೆ ಬಾಗಿಲಿಗೆ ಎಡತಾಕಲೇಬೇಕು. ಹೋಗಲಿ, ತಿರುಗೋಣವೆಂದರೂ, ಹೊರನಾಡ ಕನ್ನಡಿಗರಿಗೆ ಒಂದು ರೀತಿಯ ರಿಯಾಯತಿ,ದಾನ ನೀಡಿದೆವು ಎನ್ನುವ ಭಾವನೆ ನಾಯಕ ವರ್ಗದಲ್ಲಿ ಇರುತ್ತದೆ. ಇಲ್ಲಿರುವ ಕೆಲವರಾದರೂ ಇದೆಲ್ಲ ನಮ್ಮ ಹಕ್ಕು, ತಾಯಿನಾಡಿನಿಂದ ನಾವು ಏನು ಬೇಕಾದರೂ ಪಡೆಯಬಹುದು, ಪಡೆಯಬೇಕು ಎಂದು ನಿಲುವಿನವರಾಗಿರುತ್ತಾರೆ.

ವೃತ್ತಿಗಾಗಿ, ವ್ಯಾಪಾರಕ್ಕಾಗಿ ವಲಸೆ ಹೋಗಬೇಕಾಗಿ ಬರುವ ನಮ್ಮ ಭಾಷಿಕರ ಬಗ್ಗೆ ನಮ್ಮ ನಿಲುವು ಏನಿರಬೇಕೆಂದು ಯಾರೂ ಗಂಭೀರವಾಗಿ ಯೋಚಿಸಿಲ್ಲ. ಹಾಗೆ ಕುಳಿತು ಯೋಚಿಸಿ ನಿಲುವುಗಳನ್ನು ತಲುಪುವಂತಹ ಸಂಗತಿಯೂ ಇದಲ್ಲ. ನಮ್ಮ ಬೇರುಗಳು ಎಷ್ಟೇ ಚೆನ್ನಾಗಿದ್ದರೂ, ಆಳವಾಗಿದ್ದರೂ ಒಮ್ಮೆ ವಲಸೆ ಬಂದ ಮೇಲೆ, ನಾವು ವಾಸಿಸುವ ವಾತಾವರಣದ ದಿನನಿತ್ಯಜೀವನದ ಲಯವನ್ನು ನಾವು ನಿರಾಕರಿಸಲು ಸಾಧ್ಯವಾಗುವುದಿಲ್ಲ. ಸಾಧ್ಯವಾಗಬಾರದು. ಹೀಗೆ ವಲಸೆ ಬಂದವರಲ್ಲಿ ಎಷ್ಟು ಜನ ಮತ್ತೆ ಕರ್ನಾಟಕಕ್ಕೆ ಹಿಂತಿರುಗಬಹುದು. ನನಗೆ ತಿಳಿದ ಹಾಗೆ ಮರಳಿ ಅದೇ ಗೂಡಿಗೆ ಸೇರುವ ಹಕ್ಕಿಗಳು ಕಡಿಮೆ. ಹಾಗೆ ಸೇರಿದರೂ ಇಳಿವಯಸ್ಸಿನಲ್ಲೇ. ನಮ್ಮ ನಾಡಿಗೆ ನಾವು ಹಿಂತಿರುಗಿ ಹೋಗೇ ಹೋಗುತ್ತೇವೆ ಎಂಬ ಆಸೆ ಮತ್ತು ಭರವಸೆ ಎಂದೂ ಇದ್ದರೆ ಮಾತ್ರ ನಮ್ಮನ್ನು ನಾವು ನೋಡಿಕೊಳ್ಳುವ ಕ್ರಮ ಬೇರೆಯಾದೀತು. ಹಾಗೆ ನಾವು ಹಿಂತಿರುಗಿದರೂ ನಮಗೆ ಮತ್ತೆ ಸಿಗುವ ಕರ್ನಾಟಕ ಮತ್ತು ಕನ್ನಡ ನಾವು ಬಿಟ್ಟು ಬಂದದ್ದಾಗಿರುವುದಿಲ್ಲ. ಹಾಗೆ ನಾವು ಹಿಂತಿರುಗುವ ಕ್ಷಣದಲ್ಲೇ ಮತ್ತೆ ಇನ್ನಷ್ಟು ಜನ ವಲಸೆ ಹೊರಟಿರಬಹುದು. ತನ್ನ ಬೇರುಗಳ ಬಗ್ಗೆ ಅಪಾರವಾದ ಕಾಳಜಿ ಮತ್ತು ಗೀಳಿರುವ ನೈಪಾಲ್ 'ಎ ಹೌಸ್ ಆಫ್ ಬಿಸ್ವಾಸ್' ಕಾದಂಬರಿಯಲ್ಲಿ ಸೃಷ್ಟಿಸುವ ಮನೆಯ ವಾತಾವರಣ, ಲಯ, ನಿಟ್ಟುಸಿರೆಲ್ಲ ಭಾರತದ ಕೆಳ

ಮಧ್ಯಮವರ್ಗಗಳ ಮನೆಯಂತೆಯೇ ಇದೆ. ಆದರೆ ಆ ಮನೆ ಟ್ರಿನಿಡಾಡ್‌ನಲ್ಲಿದೆ ಎಂಬುದನ್ನು ನಾವು ಮರೆಯಬಾರದಷ್ಟೇ. ಝುಂಪಾಲಹರಿಯ ಪ್ರಕಾರ ಒಮ್ಮೆ ಪ್ರಾರಂಭವಾದ ವಲಸೆಗೆ ಓಮ್ಮು ಖವಾದ ಚಲನೆ ದುರ್ಲಭ. ಆದರೆ ಅವಳ ಪ್ರಕಾರ ಈ ವಲಸೆ, ಖಂಡಾಂತರ ಚಲನೆಗಳೆಲ್ಲ ಸಾಧಾರಣ ಆಸೆಗಳಿಂದ ಪ್ರೇರಿತವಾದವು ಮತ್ತು ಅದೇ ಕಾರಣಕ್ಕೆ ಅನನ್ಯವಾದುವು. ಏಕೆ ಅನನ್ಯವೆಂದರೆ ಯಾರೂ ಮತ್ತೆ ಗೂಡಿಗೆ ಹಿಂದಿರುಗುವುದಿಲ್ಲ ಎಂಬ ಕಾರಣಕ್ಕಲ್ಲ; ಅವಳ ಕತೆಯಲ್ಲಿ ಪೂರ್ವ ಪಾಕಿಸ್ತಾನದವನೊಬ್ಬ, ಬಂಗ್ಲಾದೇಶ ಜನ್ಮ ತಳೆಯುತ್ತಿದ್ದಾಗ ಅಮೆರಿಕಾದಲ್ಲಿ ಎರಡು ಗಡಿಯಾರಗಳನ್ನು ಕಟ್ಟಿಕೊಂಡಿರುತ್ತಾನೆ. ಒಂದು ಬಾಂಗ್ಲಾ ಕಾಲಮಾನದದ್ದು. ಇನ್ನೊಂದು ಅಮೆರಿಕಾ ಕಾಲಮಾನದ್ದು. ಮೊತ್ತೊಂದು ಕತೆಯಲ್ಲಿ ತುಂಬಾ ಗಾಢವಾದ ಬೇರುಗಳಿದ್ದ ಬಂಗಾಳಿಯೊಬ್ಬ ತನ್ನ ಮಗ ಬಂಗಾಳಿ ಭಾರತೀಯ ಸಂಸ್ಕೃತಿಯ ಬೇರುಗಳಿಲ್ಲದೆಯು ಅಮೆರಿಕಾದಲ್ಲಿ ಸಂತೋಷವಾಗಿ ಬದುಕಬಲ್ಲ ಎಂಬ ತೀರ್ಮಾನಕ್ಕೆ ಯಾವ ರೀತಿಯ ಹಳಹಳಿಯು ಇಲ್ಲದೆಯು ಬರುತ್ತಾನೆ. ನಮ್ಮ ಭಾಷೆ, ನಮ್ಮ ಬೇರುಗಳೇ ಅಲ್ಲದೆ ಇಂತಹ ಆಲೋಚನೆಗಳು ಕೂಡ ಮನುಷ್ಯ ಸಂಸ್ಕೃತಿ ಮತ್ತು ಮನುಷ್ಯ ಚರಿತ್ರೆಯನ್ನು ಬೆಳೆಸುತ್ತವಷ್ಟೇ.

ಇನ್ನೂ ಸ್ವಂತಕ್ಕೆ ಬಂದರೆ ವ್ಯಾಸರಾಯ ಬಲ್ಲಾಳರ ಯಾವ ಪಾತ್ರಗಳೂ ಮುಂಬೆಯಿಂದ ಉಡುಪಿ-ಕುಂದಾಪುರಕ್ಕೆ ಹಿಂತಿರುಗಿದಂತಿಲ್ಲ. ಮುಂಬೈ ಬಗ್ಗೆ ಎಷ್ಟೇ ಗೊಣಗಾಡಿದರೂ ಹನೇಹಳ್ಳಿಯನ್ನು ಎಷ್ಟೇ ಧ್ಯಾನಿಸಿದರೂ ಚಿತ್ತಾಲರ ಪಾತ್ರಗಳು ಕೂಡ ಮುಂಬೈ ಬಿಟ್ಟಿಲ್ಲ.

ವೈಯಕ್ತಿಕವಾಗಿ ನನಗೆ ಮತ್ತೆ ಬೆಂಗಳೂರಿಗೆ ಕರ್ನಾಟಕಕ್ಕೆ ಯಾವ ಕ್ಷಣದಲ್ಲಾದರೂ ಸರಿಯೇ ಹೋಗಿ ಸೇರಿಕೊಳ್ಳುವ ಆಸೆಯಾದರೂ ನನ್ನ ಮಕ್ಕಳ ಬಗ್ಗೆ ಏನು ಹೇಳಬಲ್ಲರು. ನೀವು ಅವರನ್ನು ಕೇಳಿದರೆ, ಶಿಕ್ಷಣಕ್ಕೆ, ಸ್ನೇಹಿತರಿಗೆ, ನೆಮ್ಮದಿಯಿಂದ ಇರುವುದಕ್ಕೆ ಮದ್ರಾಸೇ ಸರಿ ಎನ್ನುತ್ತಾರೆ. ಸಂತೋಷವೂ ಅವರದೇ, ಸ್ವಾತಂತ್ರ್ಯವೂ ಕೂಡ.

●

## ಮುಂಬಯಿಯಲ್ಲಿ ಕನ್ನಡ ಸಾಯಲಿಲ್ಲ

● ಶ್ರೀನಿವಾಸ ಜೋಕಟ್ಟೆ

ಮುಂಬಯಿಯ ಜನಸಂಖ್ಯೆ ಒಂದೂವರೆ ಕೋಟಿಯನ್ನು ದಾಟಿದರೆ, ಇವರಲ್ಲಿ ಹದಿನೈದು ಲಕ್ಷ ಹೆಚ್ಚು ಕನ್ನಡಿಗರಿದ್ದಾರೆ. ಮುಂಬಯಿ ಕನ್ನಡಿಗರು ಕನ್ನಡದ ಸಂಸ್ಕೃತಿಯನ್ನು ಎಂದೂ ಕೈ ಬಿಡಲಾರರು ಎನ್ನುವುದಕ್ಕೆ ಇಲ್ಲಿಯೇ ಪ್ರಕಟವಾಗುತ್ತಿರುವ ಅನೇಕ ಪತ್ರಿಕೆಗಳು, ಇಲ್ಲಿ ಹುಟ್ಟಿರುವ ಸಂಘ ಸಂಸ್ಥೆಗಳು, ಅವುಗಳ ಚಟುವಟಿಕೆಗಳು, ರಾತ್ರಿ ಶಾಲೆಗಳು... ಹೀಗೆ ವಿವಿಧ ರಂಗಗಳಲ್ಲಿ ತಮ್ಮನ್ನು ಕನ್ನಡಿಗರು ಗುರುತಿಸಿಕೊಂಡಿರುತ್ತಾರೆ. ೧೯೮೮ರಲ್ಲಿ ಆಗಿನ

ಕರ್ನಾಟಕ ಮುಖ್ಯಮಂತ್ರಿ ಶ್ರೀ ಎಸ್.ಆರ್. ಬೊಮ್ಮಾಯಿಯವರು ಗೌರವಾರ್ಥ ಸನ್ಮಾನ ಸಮಾರಂಭ ಮಾಡಿದಾಗ ನೂರರಷ್ಟು ಕನ್ನಡ ಸಂಘಗಳು ಸಂಸ್ಥೆಗಳು, ೧೯೯೧ರಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ಶ್ರೀ ವಿ.ಕೃ.ಗೋಕಾಕರ ಸನ್ಮಾನದಲ್ಲಿ ೮೨ ರಷ್ಟು ಕನ್ನಡ ಸಂಘ ಸಂಸ್ಥೆಗಳು ಭಾಗವಹಿಸಿದ್ದವು. ಇಂದು ಮುಂಬಯಿ ಮತ್ತು ಪಕ್ಕದ ಥಾಣೆ ಜಿಲ್ಲೆಯಲ್ಲಿ ನೂರೈವತ್ತುಕ್ಕೂ ಹೆಚ್ಚು ಕನ್ನಡಿಗರ ಸಂಘ ಸಂಸ್ಥೆಗಳನ್ನು ಗುರುತಿಸಬಹುದು.

೧೮೭೮ ರಲ್ಲಿ ಮುಂಬಯಿಯಲ್ಲಿ ಸ್ಥಾಪಿಸಲ್ಪಟ್ಟ ಶ್ರೀ 'ಮದ್ಭಾರತ ಮಂಡಳಿ'ಯೇ ಮುಂಬಯಿಯಲ್ಲಿ ಪ್ರಥಮ ಕನ್ನಡಿಗರ ಸಂಸ್ಥೆಯೆಂದು ಗುರುತಿಸಲಾಗುತ್ತದೆ. ಇಂದು ಕರ್ನಾಟಕ ಸಂಘ, ಮುಂಬಯಿ, ಗೋರೆಗಾಂವ್ ಕರ್ನಾಟಕ ಸಂಘ, ಬಸವೇಶ್ವರ ಫಿಲಾಸಫಿಕಲ್ ಆಯಂಡ್ ಕಲ್ಚರಲ್ ಸೊಸೈಟಿ, ಮೈಸೂರು ಎಸೋಸಿಯೇಶನ್, ಮುಂಬಯಿ ಕನ್ನಡ ಸಂಘ, ರಾಷ್ಟ್ರೀಯ ಕನ್ನಡ ಶಿಕ್ಷಣ ಸಮಿತಿ, ಮುಳುಂಡ್ ವಿದ್ಯಾ ಪ್ರಸಾರಕ ಮಂಡಳಿ, ಡೊಂಬಿವಲಿ ಕರ್ನಾಟಕ ಸಂಘ, ಚೆಂಬೂರು ಕರ್ನಾಟಕ ಸಂಘ, ಮೊಗವೀರ ಮಹಾಮಂಡಳಿ, ಬಿಲ್ಲವರ ಎಸೋಸಿಯೇಶನ್, ಬಿ.ಎಸ್.ಕೆ.ಬಿ. ಎಸೋಸಿಯೇಶನ್, ಬಂಟರ ಸಂಘ, ಕನ್ನಡ ಕಲಾ ಸಂಘ, ಇತ್ಯಾದಿ ನೂರಾರು ಕನ್ನಡಿಗ ಸಂಘ ಸಂಸ್ಥೆಗಳು ವೈವಿಧ್ಯಪೂರ್ಣ ಕಾರ್ಯಕ್ರಮಗಳ ಮೂಲಕ, ನಾಡಿನ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿವೆ. ತಮ್ಮದೇ ಆದ ಗ್ರಂಥಾಲಯ, ವಾಚನಾಲಯಗಳನ್ನೂ ಇವು ಹೊಂದಿವೆ. ಅನೇಕ ಪ್ರಮುಖ ಸಂಸ್ಥೆಗಳು ತಮ್ಮದೇ ಆದ ಕಟ್ಟಡವನ್ನೂ ಹೊಂದಿವೆ. ಕೆಲವು ಸಂಘಗಳು ಕನ್ನಡ ಶಾಲೆಗಳನ್ನು ನಡೆಸುತ್ತವೆ.

ಈ ಕನ್ನಡ ಸಂಘಗಳ ಜೊತೆ ಕನ್ನಡಿಗರದ್ದೇ ಆದ ಭಜನಾ ಮಂಡಳಿಗಳು, ನಾಟಕ ತಂಡಗಳು, ಯಕ್ಷಗಾನ ಮಂಡಳಿಗಳು, ಧಾರ್ಮಿಕ ಸಂಘಟನೆಗಳು, ಜಾತಿ ಸಂಘಗಳು... ಕೂಡಾ ಇದ್ದು, ಅವು ಕೂಡಾ ಕರ್ನಾಟಕದ, ಕನ್ನಡದ ಸಂಸ್ಕೃತಿಯನ್ನು ಉಳಿಸಿವೆ, ಬೆಳೆಸಿವೆ. ಹೆಚ್ಚಿನ ಕನ್ನಡ ಸಂಘ ಸಂಸ್ಥೆಗಳ ಚಟುವಟಿಕೆಗಳನ್ನು ಹೇಳುವುದಾದರೆ, ಕನ್ನಡ ಶಾಲೆಗಳ ಮಕ್ಕಳಿಗೆ ಪುಸ್ತಕ, ಸಮವಸ್ತ್ರ ವಿತರಣೆ, ನಾಡಹಬ್ಬ ಆಚರಣೆ, ಪುರಂದರ ದಾಸರ ಆಚರಣೆ, ಗಣೇಶೋತ್ಸವ, ಬಸವ ಜಯಂತಿ, ಸದಸ್ಯರ ಪಿಕ್ನಿಕ್, ಕರ್ನಾಟಕದಿಂದ ಬಂದ ಸಾಹಿತಿಗಳ ಜೊತೆ ಸಂವಾದ, ಯಕ್ಷಗಾನ ಪ್ರದರ್ಶನ... ಇತ್ಯಾದಿಗಳನ್ನು ಕಾಣಬಹುದು.

ಆದರೆ ಗೋರೆಗಾಂವ್ ಕರ್ನಾಟಕ ಸಂಘ ಅಥವಾ ಕರ್ನಾಟಕ ಸಂಘ, ಮುಂಬಯಿ.. ಇಂತಹ ಕೆಲವೇ ಕೆಲವು ಪ್ರಮುಖ ಸಂಘಗಳು ವೈವಿಧ್ಯಪೂರ್ಣ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿವೆ. ಗೋರೆಗಾಂವ್ ಕರ್ನಾಟಕ ಸಂಘದ ವಿಚಾರ ಭಾರತಿ ಸಮ್ಮೇಳನವಾಗಲಿ, ಮಹಿಳಾ ಸಾಹಿತ್ಯ ಸಮ್ಮೇಳನವಾಗಲಿ ಈ ದಿನಗಳಲ್ಲಿ ಮುಂಬಯಿ ಕನ್ನಡಿಗರ ಮನೆಮಾತು. ಅಂತೆಯೇ ಕುವೆಂಪು ಸ್ಮಾರಕ ಅಖಿಲ ಭಾರತ ಕನ್ನಡ ಏಕಾಂಕ ನಾಟಕ ಸ್ಪರ್ಧೆಯ ಮೂಲಕ, ಕಲಾಭಾರತಿ ಯ ಮೂಲಕ ಕರ್ನಾಟಕದ ಸಂಘ, ಮುಂಬಯಿ ತನ್ನದೇ ಆದ ಪ್ರತಿಷ್ಠೆ, ಕೀರ್ತಿ ಗಳಿಸಿಕೊಂಡಿದೆ.

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗವೂ ಅನೇಕ ಸಂಘ ಸಂಸ್ಥೆಗಳ ಜೊತೆ ಸೇರಿ ದತ್ತಿ ಉಪನ್ಯಾಸ, ಇನ್ನಿತರ ಚಟುವಟಿಕೆಗಳನ್ನು ಹಮ್ಮಿಕೊಂಡಿರುತ್ತದೆ. ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಮಾಡದಂತಹ ಅಪೂರ್ವವೆನಿಸುವ ಯಕ್ಷಗಾನ ಸಾಹಿತ್ಯ ಸಮ್ಮೇಳನ'ವನ್ನು ಎರಡು ವರ್ಷಕ್ಕೊಮ್ಮೆ 'ಪದವೀಧರ ಯಕ್ಷಗಾನ ಸಮಿತಿ' ಹಮ್ಮಿಕೊಂಡು ಬಂದಿದೆ. ಈ ಸಲ ಕರ್ನಾಟಕ ಸಂಘವು ಜನವರಿಯಲ್ಲಿ (೨೦೦೨) ಸಾಹಿತ್ಯ ಸಮ್ಮೇಳನದ ಯೋಜನೆಯನ್ನೂ ಹಾಕಿಕೊಂಡಿದೆ. ಈಗಾಗಲೇ ಐದು ಸಾಹಿತ್ಯ ಸಮ್ಮೇಳನ ನಡೆದಿವೆ.

ಮುಂಬಯಿಯಲ್ಲಿ ಅರುವತ್ತಕ್ಕೂ ಹೆಚ್ಚು ಕನ್ನಡ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಿವೆ. ಆದರೆ ಕನ್ನಡ ವಿದ್ಯಾರ್ಥಿಗಳ ಸಂಖ್ಯೆ ಕ್ಷೀಣಿಸುತ್ತಿದೆ. ಇತ್ತೀಚೆಗೆ ಅಧಿಕಾರಿಯೊಬ್ಬರ ಜೊತೆ ಮಾತನಾಡಿದಾಗ "ಈಗಿನ ಮಹಾನಗರಪಾಲಿಕೆಯ ಕನ್ನಡ ಶಾಲೆಗಳಲ್ಲಿ ಶೆಟ್ಟಿ, ಪೂಜಾರಿ, ಬಂಗೇರ.. ಇಂತಹ ಸರ್ ನೇಮ್‌ಗಳ (ಹೆಚ್ಚಾಗಿ ದ.ಕ., ಉಡುಪಿ ಜಿಲ್ಲೆ) ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ. ವಿಜಾಪುರ, ಗುಲ್ಬರ್ಗಾ, ಧಾರವಾಡ ಕಡೆಯ ಮಕ್ಕಳು ಹೆಚ್ಚಾಗಿ ಬರುತ್ತಿದ್ದಾರೆ. "-ಎಂದಿದ್ದರು. ಅರ್ಥಾತ್ ಹೆಚ್ಚಿನ ಕನ್ನಡಿಗರ ಮಕ್ಕಳು ಇಂಗ್ಲಿಶ್ ಮಾಧ್ಯಮಕ್ಕೆ ಹೋಗುತ್ತಿದ್ದಾರೆ. ಮನೆಯಲ್ಲಿ ಇವರ ಮಾತೃಭಾಷೆ 'ತುಳು' ಇರುವುದರಿಂದ ಕನ್ನಡ ಅರ್ಥವಾಗದ ಸ್ಥಿತಿ ಎದುರಾಗುತ್ತಿದೆ. ಇದಕ್ಕೆಂದೇ ವಿ.ವಿ.ಯ ಕನ್ನಡ ವಿಭಾಗದಲ್ಲಿ, ಕರ್ನಾಟಕ ಸಂಘದಲ್ಲಿ ಮತ್ತಿತರ ಕಡೆ ಕನ್ನಡ ಕಲಿಕೆಯ ಕೋರ್ಸುಗಳು ಇಂತಹ ಮಕ್ಕಳಿಗಾಗಿ ಶುರು ಮಾಡಲಾಗಿದ್ದು ಸಾಕಷ್ಟು ಪ್ರೋತ್ಸಾಹವೂ ಸಿಗುತ್ತಿದೆ.

ಇಂದು ಮುಂಬಯಿಯಲ್ಲಿ ಹತ್ತಕ್ಕೂ ಹೆಚ್ಚು ಮಾಸಪತ್ರಿಕೆಗಳು ಕನ್ನಡಭಾಷೆಯಲ್ಲಿ ಹೊರಬರುತ್ತಿವೆ.; ಎರಡು ಕನ್ನಡ ದೈನಿಕಗಳು ಮುಂಬಯಿಯಲ್ಲೇ ಮುದ್ರಣಗೊಳ್ಳುತ್ತಿವೆ. (ಉದಯವಾಣಿ ಮತ್ತು ಕರ್ನಾಟಕ ಮಲ್ಲ) ವಿಶೇಷತೆಯೆಂದರೆ ಈ ಕನ್ನಡ ಮಾಸ ಪತ್ರಿಕೆಗಳ ಒಡೆಯರು ಜಾತಿ ಸಂಘಗಳಾಗಿದ್ದರೂ ಕನ್ನಡದ ಕುರಿತಂತೆ ಇವರ ಅಭಿಮಾನವನ್ನು ಶ್ಲಾಘಿಸಲೇಬೇಕು. ಬಿಲ್ಲವರ ಎಸೋಸಿಯೇಶನ್‌ನ 'ಅಕ್ಷಯ' ಮಾಸಪತ್ರಿಕೆ, 'ಕರ್ನಾಟಕ ಮಲ್ಲ' ದೈನಿಕ ತನ್ನ ಲೇಖಕರಿಗೆ ಸಂಭಾವನೆಯನ್ನು ನೀಡುತ್ತದೆ.

ಹೀಗಿದ್ದೂ ಕೆಲವು ಪ್ರಮುಖರಾದ, ಹಿರಿಯರಾದ ಕನ್ನಡಿಗರನ್ನು ಸಂದರ್ಶಿಸುವಾಗ ನನಗೆ ತಿಳಿದು ಬಂದ ಸಂಗತಿಯನ್ನು ಇಲ್ಲಿ ಹೇಳಬೇಕೆನಿಸುತ್ತದೆ.

ಮುಂಬಯಿಯಲ್ಲಿ ಕನ್ನಡ ಕಾರ್ಯಕ್ರಮಗಳನ್ನು ಗಂಭೀರವಾಗಿ ಸ್ವೀಕರಿಸುವುದು. ಈಗೀಗ ಕಡಿಮೆಯಾಗುತ್ತಿದೆ. ಹವ್ಯಾಸದ ರೂಪದಲ್ಲಿ ಇದನ್ನು ಕಾಣುತ್ತಿದ್ದಾರೆ. ಸದುದ್ದೇಶದಿಂದ ಇದನ್ನೆಲ್ಲ ಬೆಳೆಸಬೇಕು ಎನ್ನುವ ದೃಷ್ಟಿ ಕಡಿಮೆ. ಕೇವಲ ವೇದಿಕೆಗಳಲ್ಲಿ ಭಾಷೆ-ಸಂಸ್ಕೃತಿಯನ್ನು ಉಳಿಸುವ ಮಾತನಾಡಲಾಗುತ್ತದೆ. ಪತ್ರಿಕೆಗಳೂ ಇಂದು ಬೆಳೆದಿದ್ದು ಪ್ರಚಾರ ಕೂಡಾ ಜಾಸ್ತಿ ಸಿಗುತ್ತಿದೆ. ಈಗಿರುವ ಮೂರನೇ ಜನಾಂಗ 'ಕನ್ನಡ'ವಾಗಿ ಉಳಿದಿಲ್ಲ. ಮೊದಮೊದಲು ಕನ್ನಡದ ಜನಗಳಲ್ಲಿ ಆರೋಗ್ಯಕರವಾದ ಪೈಪೋಟಿ ಇತ್ತು. ಇಂದು 'ಪೊಲಿಟಿಕ್ಸ್'

ಶುರುವಾಗಿದೆ. ಮುಂಬಯಿಯಲ್ಲಿ ಅನೇಕ ಕನ್ನಡ ಸಂಘಗಳಿಗೆ 'ಪ್ರಾಪರ್ಟಿ' ಇದೆ. ಇದನ್ನು ಉಳಿಸಲು ಏನು ಮಾಡಲಾಗಿದೆ? ಈಗಿನ ಯುವ ಪೀಳಿಗೆಗೆ ಆಸಕ್ತಿ ಇಲ್ಲದಿದ್ದರೆ ಈ ಕಟ್ಟಡ ಯಾರು ಕಾಪಾಡಬೇಕು? ಟಿ.ವಿ. ಮಾಧ್ಯಮ ಕೂಡಾ ಹೊಸ ಪೀಳಿಗೆಯನ್ನು ಕನ್ನಡ ಸಂಘಗಳತ್ತ ಬರಲು ಬಿಡುತ್ತಿಲ್ಲ!

ಹೀಗಿದ್ದರೂ ಮುಂಬಯಿಯಲ್ಲಿ ಕನ್ನಡ ಸಾಯುವುದಿಲ್ಲ. ಕನ್ನಡ ಸಂಸ್ಕೃತಿ ತನ್ನ ವೈಶಿಷ್ಟ್ಯತೆಯನ್ನು ನಿರಂತರ ಈ ನೆಲದಲ್ಲಿ ಹರಿಸುತ್ತಲೇ ಇರುವುದು.

●

## ನಮ್ಮನ್ನು ನಮ್ಮೊಳಗೊಬ್ಬರಂತೆ ನೋಡುವುದಿಲ್ಲ

● ಹರಿಕೃಷ್ಣ ಭರಣ್ಯ

ಹೊರನಾಡ ಬದುಕೆಂದರೆ ನಾವು ಹುಟ್ಟಿ ಬೆಳೆದ ಜಾಯಮಾನ, ಪರಿಸರಗಳಿಗೆ ಭಿನ್ನವಾದ ಜಾಗ-ಸಂಸ್ಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಬದುಕು. ಇದು ಭಾಷೆ, ಹವಾಮಾನ, ಸಂಸ್ಕೃತಿ, ಆಚಾರ-ವಿಚಾರ, ಧರ್ಮ, ನಂಬಿಕೆ, ಆಹಾರ-ವಿಹಾರಗಳೊಂದಿಗೆ ಮಾಡಿಕೊಳ್ಳುವ ಅನಿವಾರ್ಯ ಒಪ್ಪಂದ. ಹುಟ್ಟಿದೂರಿನಿಂದ ದೂರವಾಗಿ ಬೇರೆ ಊರಿನಲ್ಲಿ, ಅಲ್ಲೂ ಅರಗಿಸಿಕೊಂಡು ಎರಡು ರೀತಿಯಲ್ಲಿ ಬದುಕಿ ಪರಸ್ಪರ ಸಂಸ್ಕೃತಿಗಳಿಗೆ ಸೇತುವೆಯಂತೆ ಬದುಕಿ ಬಾಳಬಹುದಾದ ಅಪೂರ್ವ ಸ್ಥಿತಿಯೂ ಹೌದು.

ಹೊರನಾಡಿನಲ್ಲಿರುವಾಗ ನಮ್ಮೊಳಗೆ ಅಸ್ತಿತ್ವದೊಂದಿಗೆ ಹೋರಾಟ ಮತ್ತು ಅಭಿವ್ಯಕ್ತಿಗಾಗಿ ಹೋರಾಟವೆಂಬ ಇಬ್ಬಗೆಯ ಕಾರ್ಯಪ್ರವೃತ್ತತೆ ಬರುತ್ತದೆ. ಉದಾಹರಣಗೆ, ಕನ್ನಡ ಸಾಹಿತ್ಯದಲ್ಲಿ ಏನಿದೆ ಎಂದು ಅಲ್ಲಿನವರು ಕೇಳುತ್ತಾರೆ ಎಂದಿಟ್ಟುಕೊಳ್ಳೋಣ. ಆಗ ನಾವು ಕನ್ನಡ ಸಾಹಿತ್ಯದ ಮಹತ್ವಗಳನ್ನು ಹೇಳಲೇ ಬೇಕಲ್ಲ? ಹೇಗೆ ಹೇಳೋಣ? ಯಾವ ಭಾಷೆಯಲ್ಲಿ ಹೇಳೋಣ? ಆಯಾ ಊರಿನ ಭಾಷೆಯಲ್ಲಿ ಅಥವಾ ಇಂಗ್ಲಿಶಿನಲ್ಲಿ ಹೇಳಬೇಕಾಗುತ್ತದೆ. ಎಂದರೆ, ನಮ್ಮ ಭಾಷೆಯ ವಿಚಾರವನ್ನು ನಮ್ಮದಲ್ಲದ ಭಾಷೆಯಲ್ಲಿ ಹೇಳಬೇಕಾಗುತ್ತದೆ. ಕರ್ನಾಟಕದೊಳಗಾದರೆ ಇಂಥ ಸಂದರ್ಭಗಳು ಬರುವುದು ತೀರಾ ಕಡಿಮೆ.

ಇದರೊಂದಿಗೆ ಹಲಮಂದಿ ನಮ್ಮ ಕನ್ನಡಿಗರ ಭಾಷಾ ಪ್ರೇಮದ ಬಗ್ಗೆ ಹೇಳಲೇಬೇಕು. ಕನ್ನಡಿಗರು, ತಮಿಳುನಾಡಿನಲ್ಲಿ-ತಮಿಳಿನಲ್ಲಿ ಮಾತನಾಡುತ್ತಾರೆ. ಕೇರಳದಲ್ಲಿ ಮಲಯಾಳದಲ್ಲಿ ಮಾತನಾಡುತ್ತಾರೆ, ಆಂಧ್ರದಲ್ಲಿದ್ದರೆ ತೆಲುಗಿನಲ್ಲಿ ಹೀಗೆ. ಆದರೆ, ಇಬ್ಬರು ಕನ್ನಡಿಗರು ಪರಸ್ಪರ ಮಾತನಾಡಿಕೊಳ್ಳುವುದು ಇಂಗ್ಲಿಶಿನಲ್ಲಿ! ಮಾತ್ರವಲ್ಲ, ಕನ್ನಡ (ಕ್ಯಾನರೀಸ್) ಗೊತ್ತಿದೆ ಎಂಬುದಾಗಿ ಇಂಗ್ಲಿಶಿನಲ್ಲಿ ಉದ್ಗರಿಸುತ್ತಾರೆ! ಇದು ನಮ್ಮೆಲ್ಲರ ಕನ್ನಡಾಭಿಮಾನ!

**ತಮಿಳುನಾಡಿನಲ್ಲಿ**

ನಮ್ಮ ಭಾರತದೇಶದಲ್ಲಿ ಸಂಸ್ಕೃತ ಭಾಷೆಯನ್ನು ಬಿಟ್ಟರೆ ತಮಿಳು ಅತ್ಯಂತ ಪ್ರಾಚೀನವಾದ ಭಾಷೆ. ಸಾಹಿತ್ಯಿಕವಾಗಿಯೂ ಸಂಪದ್ಭರಿತವಾದ ಭಾಷೆ. ಪಂಚ ದ್ರಾವಿಡಗಳಲ್ಲಿ ಮೊದಲನೆಯದು ಮತ್ತು ಪ್ರಧಾನವಾದುದು. ಕನ್ನಡಕ್ಕೂ ಇದಕ್ಕೂ ಸೋದರ ಸಂಬಂಧ. ಸಾಮಾನ್ಯವಾಗಿ ಹೊರನಾಡಿನಲ್ಲಿ ಎಲ್ಲೆಲ್ಲ ಕನ್ನಡಿಗರಿರುತ್ತಾರೋ ಅಂತಹ ಪಟ್ಟಣಗಳೆಲ್ಲೆಲ್ಲಾ ಕನ್ನಡ ಸಂಘಗಳಿದ್ದು ಕನ್ನಡದ ಚಟುವಟಿಕೆಗಳು ನಡೆಯುತ್ತಿರುತ್ತವೆ. ತಮಿಳುನಾಡಿನ ಮದರಾಸಿನಲ್ಲೇ (ಚೆನ್ನೈ) ಹಲವಾರು ಕನ್ನಡ ಸಂಘಗಳಿವೆ. ಮಧುರೆ, ಕೊಯಮತ್ತೂರು, ನೈವೇಲಿಗಳಲ್ಲಿಯೂ ಕನ್ನಡ ಸಂಘಗಳಿದ್ದು ಕನ್ನಡದ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತಿರುತ್ತವೆ.

ಮದುರೈ ಮಹಾನಗರದ ಸುತ್ತುಮುತ್ತಲಿನ ಬೋಡಿನಾಯಕನೂರು, ದಿಂಡುಗಲ್ಲು, ಗುಡಲೂರು, ಚಿನ್ನಮಣಲೂರು, ಚಿನ್ನಾಳಪಟ್ಟ, ಕಂಬಮ್, ತೇನಿ, ಆರುಪ್ಪುಕೋಟೆ ಮೊದಲಾದೆಡೆಗಳಲ್ಲಿ ಕನ್ನಡ ಮನೆಮಾತಾಗಿರುವ ಅನೇಕ ಕುಟುಂಬಗಳಿವೆ. ಇವರು ಮುಖ್ಯವಾಗಿ ಬಟ್ಟೆ, ನೆಯ್ಗೆ, ಕೃಷಿ, ಹಾಗೂ ವ್ಯಾಪಾರವೇ ಮುಖ್ಯ ಕಸುಬಾಗಿ ಉಳ್ಳವರು. ಇವರಿಗೆ ಕನ್ನಡವು ಕೇವಲ ಮನೆಮಾತು ಅಷ್ಟೇ. ಅವರ ಕನ್ನಡವೆಂದರೆ ತಮಿಳು ಮಿಶ್ರಿತ ನುಡಿ, ಕನ್ನಡದ ವಿಶಿಷ್ಟವಾದ ಉಪಭಾಷೆಯಂತೆ ಇದೆ. ಈ ಭಾಷೆಯ ಬಗೆಗೆ ಅಲ್ಲಲ್ಲಿ ಸಂಶೋಧನೆಗಳೂ ನಡೆದಿವೆ.

ಮಧುರೆಯಲ್ಲಿ ಕನ್ನಡದ ಚಟುವಟಿಕೆಗಳು ನಡೆಯುವುದು ಮುಖ್ಯವಾಗಿ ಎರಡು ಕಡೆ. ಒಂದು ಮಧುರೆಯ ಕರ್ನಾಟಕ ಸಂಘದ ಆಶ್ರಯದಲ್ಲಿ, ಇನ್ನೊಂದು ಇಲ್ಲಿನ ಕಾಮರಾಜ ವಿಶ್ವವಿದ್ಯಾನಿಲಯದೊಳಗಿರುವ ಕನ್ನಡ ಪೀಠದಲ್ಲಿ. ಕರ್ನಾಟಕ ಸಂಘದ ಆಶ್ರಯದಲ್ಲಿ ಕನ್ನಡ ರಾಜ್ಯೋತ್ಸವ, ಬಸವ ಜಯಂತಿ, ನಾಡಹಬ್ಬ ಪುರಂದರದಾಸ ಜಯಂತಿ ಹೀಗೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರೆ ವಿ.ವಿ.ಯ ಕನ್ನಡ ವಿಭಾಗದೊಳಗೆ ಶೈಕ್ಷಣಿಕವಾಗಿ ವಿಚಾರ ಸಂಕಿರಣಗಳು, ಸಾಹಿತ್ಯ ಉಪನ್ಯಾಸ, ಅಧ್ಯಯನ-ಸಂಶೋಧನೆ ಹಾಗೂ ಇತರ ಚಟುವಟಿಕೆಗಳು ನಡೆಯುತ್ತಿರುತ್ತವೆ.

ತಮಿಳುನಾಡಿನೊಳಗೆ ಅನೇಕಮಂದಿ ಕನ್ನಡದ ಬರಹಗಾರರಿದ್ದಾರೆ. ಮದರಾಸಿನಿಂದ ಪ್ರಕಟಗೊಳ್ಳುತ್ತಿರುವ ಲಹರಿ ಕನ್ನಡ ಮಾಸ ಪತ್ರಿಕೆಯು ಈ ನಿಟ್ಟಿನಲ್ಲಿ ಕನ್ನಡಕ್ಕೆ ಅನೇಕ ಮಂದಿ ಬರಹಗಾರರನ್ನು ಪರಿಚಯಿಸಿದೆ ಎಂಬುದನ್ನು ನಾವಿಲ್ಲಿ ನೆನೆಯಬೇಕು. ಇಂದು ಕನ್ನಡದಲ್ಲಿ ಬರೆಯುತ್ತಿರುವ ಅನೇಕ ಯುವ ಸಾಹಿತಿಗಳು ಮೊದಮೊದಲು 'ಲಹರಿ' ಪತ್ರಿಕೆಯ ಮೂಲಕವೇ ಮೊದಮೊದಲಿಗೆ ತಮ್ಮ ಬರೆಹಗಳನ್ನು ಪ್ರಕಟಿಸಿದವರು ಎಂಬುದನ್ನ ನೋಡಿದರೆ ಈ ಪತ್ರಿಕೆಯ ಮಹತ್ವದ ಪಾತ್ರವು ಗೊತ್ತಾದೀತು. ಜೊತೆಗೆ, ಹೊರನಾಡಿನಲ್ಲಿ ಕನ್ನಡ ಪತ್ರಿಕೆಯನ್ನು ಪ್ರಕಟಿಸುತ್ತಾ ಬರುವುದು ಎಷ್ಟು ಕಷ್ಟಕರ ಎಂಬುದೂ ಗೊತ್ತಾಗುತ್ತದೆ. ಮದರಾಸು ಹಾಗೂ ಮಧುರೈ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳಲ್ಲಿ ಕನ್ನಡ ಚಟುವಟಿಕೆಗಳು, ಪುಸ್ತಕ ಪ್ರಕಟಣೆ ಮುಂತಾದ ಚಟುವಟಿಕೆಗಳು ನಡೆಯುತ್ತಿರುತ್ತವೆ.

ಹೊರನಾಡಿನಲ್ಲಿರುವಾಗಲೇ ನಮ್ಮ ನಡೆ, ನುಡಿ, ಸಂಸ್ಕೃತಿಗಳ ಬಗೆಗೆ ಹೆಚ್ಚು ಹೆಚ್ಚು ಅಭಿಮಾನವು ಉಕ್ಕಿ ಹರಿಯುತ್ತದೆ. ಮಾತ್ರವಲ್ಲ ನಮ್ಮ ಭಾಷೆಯ ಸೊಗಸುಗಾರಿಕೆ, ಸೊಗಡುಗಳು ಅರಿವಾಗಿ ಸಂತೋಷವೆನಿಸುತ್ತದೆ. ತಮಿಳಿನಲ್ಲಿ ಎಲ್ಲ ಪರಭಾಷೆಯ ಪದಗಳನ್ನು ತಮಿಳಿನಲ್ಲೇ ಟಂಕಿಸಿ ಪ್ರಚಾರ ಪಡಿಸುತ್ತಾರೆ. ಕನ್ನಡದಲ್ಲೂ ಇಂಥಾ ಪ್ರವೃತ್ತಿ ಇನ್ನಷ್ಟು ವ್ಯಾಪಕವಾಗಬೇಕಾದ್ದಿದೆ. ತಮಿಳರು ತಮ್ಮ ಭಾಷೆಯೊಳಗೆ ಇತರ ಭಾಷೆಗಳ ಪದಗಳನ್ನು ಮಿಶ್ರಮಾಡಿಕೊಂಡು ಬಳಸುವುದನ್ನು ಸಾಮಾನ್ಯವಾಗಿ ಇಷ್ಟಪಡುವುದಿಲ್ಲ. ತಮಿಳರ ಭಾಷಾ ಪ್ರೇಮದ ಅತಿರೇಕವನ್ನು ಹೀಯಾಳಿಸುವುದರಲ್ಲೇ ಕಾಲವನ್ನು ವ್ಯಯಿಸದೇ, ಅವರಿಂದಲೂ ಒಳ್ಳೆಯ ಹಾಗೂ ರಚನಾತ್ಮಕ ಕೆಲಸವಾದೀತು ಎಂದು ಹೇಳಬಹುದು.

**ಕನ್ನಡ ಕಲಿಸುವಿಕೆ**

ತಮಿಳುಭಾಷೆಯ ಬಗೆಗೆ ನನಗೆ ಆದರವಿದೆ, ಪ್ರೀತಿಯಿದೆ. ಆ ಭಾಷೆಯ ನಾಡಿಮಿಡಿತವನ್ನು ಒಂದು ಹಂತದವರೆಗೆ ನಾನು ಬಲ್ಲೆ. ಇದು ನನ್ನ ಪಾಲಿಗೆ ಅನಿವಾರ್ಯದ ಕೆಲಸವಾಗಿತ್ತು. ಎಂದರೆ, ಇಲ್ಲಿ ವಿ.ವಿ.ಯಲ್ಲಿ ಸೇರಿಕೊಂಡ ಹೊಸದರಲ್ಲಿ ನಮ್ಮಲ್ಲಿದ್ದುದು ಕನ್ನಡೇತರಿಗೆ ಕನ್ನಡವನ್ನು ಕಲಿಸುವ ಕೆಲಸ ಮಾತ್ರವೇ. ಹಾಗಾಗಿ ನಾನು ಮೊದಲು ಮಾಡಿದ್ದು ಈ ಕೆಲಸವನ್ನೇ. ನಮ್ಮ ಭಾಷೆಯನ್ನು ಗೊತ್ತಿಲ್ಲದವರಿಗೆ ಹೇಳಿಕೊಡುವುದು. ಇಂಥಾ ಸಂದರ್ಭದಲ್ಲಿ ನಮಗಿದಿರಾಗುವ ಸಮಸ್ಯೆಗಳು ಹಲವು. ಒಂದನೆಯದಾಗಿ ಇಲ್ಲಿ ಕನ್ನಡವನ್ನು ಕಲಿಯಲು ಬರುವವರು ಹೆಚ್ಚಿನವರೂ ತಮಿಳರು. ಅವರಲ್ಲಿ ಹಲವರಿಗೆ ತಮಿಳು ಮಾತ್ರವೇ ಗೊತ್ತಿರುವ ಏಕೈಕ ಭಾಷೆ. ಇಂಗ್ಲಿಶಿನ ಮೂಲಕವಾದರೂ ಕಲಿಸಿಕೊಡೋಣವೆಂದರೆ ಅದು ಹೇಗೆ ಸರಿಯಾದೀತು? ಎರಡನೆಯದಾಗಿ, ತಮಿಳು ಭಾಷೆಯ ಮೂಲಕವೇ ಹೇಳಿಕೊಡಬೇಕಾದರೆ ತಮಿಳು ನಮಗೆ ಚೆನ್ನಾಗಿ ಗೊತ್ತಿರಬೇಕಾಗುತ್ತದಲ್ಲವೆ? ಆದರೆ, ಇದರಿಂದ ಇಬ್ಬಗೆಯ ಲಾಭ ನಮಗಾಗುತ್ತದೆ. ಒಂದು ನಾವು ತಮಿಳನ್ನು ಸ್ಪಷ್ಟವಾಗಿ ಕಲಿತಂತಾಗುವುದು, ಇನ್ನೊಂದು ನಾವು ನಮ್ಮದೇ ಭಾಷೆಯನ್ನು ವ್ಯವಸ್ಥಿತವಾಗಿ ಕಲಿಸಿಕೊಡುವ ಮಟ್ಟಿಗೆ ಆ ಭಾಷೆಯನ್ನು, ನಮ್ಮದರಲ್ಲೂ ತಿಳಿದುಕೊಂಡಂತಾಗುವುದು.

ತಮಿಳಿನ ಮೂಲಕವಾಗಿ ಬೇರೆ ಬಾಷೆಗಳನ್ನು ಕಲಿಸಿಕೊಡುವುದು ತುಂಬ ಕಷ್ಟಕರ. ಎಂದರೆ, ತಮಿಳಿನಲ್ಲಿ ಉಚ್ಚಾರಣೆಯ ವಿಧಾನಗಳೇ ಬೇರೆ. ಎಂದರೆ, ನಮ್ಮ ಇತರ ಭಾಷೆಗಳಲ್ಲಿರುವಂತೆ, ತಮಿಳಿನಲ್ಲಿ ಮಹಾಪ್ರಾಣಾಕ್ಷರವಿಲ್ಲ, ಅದರ ಉಚ್ಚಾರಣೆಯೂ ಇಲ್ಲ. ವರ್ಗದಲ್ಲಿನ ಪ್ರಥಮ ವ್ಯಂಜನ (ಕಚಟತಪ) ಮಾತ್ರವೇ. ವರ್ಗ ದ್ವಿತೀಯ, ತೃತೀಯ, ಚತುರ್ಥ- ವ್ಯಂಜನಗಳೇ ಇಲ್ಲ. ಇಂಥಾ ವ್ಯಂಜನ ವ್ಯವಸ್ಥೆ- ಉಚ್ಚಾರ ವ್ಯವಸ್ಥೆಯುಳ್ಳ, ಭಾಷೆಯನ್ನಾಡುವವರಿಗೆ, ಇತರ ಭಾಷೆಗಳನ್ನು ಕಲಿಸುವುದು ತುಂಬಾ ಪ್ರಯಾಸಕರವೆನಿಸುತ್ತದೆ. ಇದಕ್ಕಾಗಿಯೇ ನಾವು ಆ ಭಾಷೆಯ ವರ್ಗವ್ಯವಸ್ಥೆ, ಉಚ್ಚಾರಣೆ, ಜಾಯಮಾನಗಳನ್ನು ಕೂಲಂಕಷವಾಗಿ ತಿಳಿದ ಅನಂತರವೇ ಅವರಿಗೆ ಕನ್ನಡವನ್ನ ಕಲಿಸಬೇಕಾಗುತ್ತದೆ. ಇದು ಕನ್ನಡದಂಥ ಇತರ ಭಾಷಾ ಅಧ್ಯಾಪಕರಿಗೆಲ್ಲರಿಗೂ ಒಂದು ದೊಡ್ಡ ಸವಾಲೇ ಆಗಿಬಿಡುತ್ತದೆ.

ಜೊತೆಗೆ, ತಮಿಳಿನ ಬಗೆಗೆ ಸಮಗ್ರವಾಗಿ ತಿಳಿದುಕೊಳ್ಳುವುದಕ್ಕೆ ಉತ್ತಮ ಅವಕಾಶವೂ ಆಗಿಬಿಡುತ್ತದೆ.

ಮಧುರೆಯಲ್ಲಿರುವಂಥ ಅಪ್ಪಟ ತಮಿಳರಲ್ಲಿ ಹೆಚ್ಚಿನವರಿಗೂ ಕನ್ನಡವೆಂಬ ಒಂದು ಭಾಷೆ ಇದೆ ಎಂಬುದೇ ಗೊತ್ತಿಲ್ಲ ಎಂದರೆ ಅದು ಆಶ್ಚರ್ಯಕರ ವಿಷಯವೇನೂ ಅಲ್ಲ. ಇಲ್ಲಿನ ಕೆಲ ಜನರ ಬಾಯಲ್ಲಿ ಕನ್ನಡ ಎಂದರೆ ತೆಲುಗು, ತೆಲುಗು ಎಂದರೆ ಕನ್ನಡ- ಎರಡನ್ನೂ ಒಂದೇ ಎಂಬುದಾಗಿ ಭಾವಿಸಿದವರೇ ಹೆಚ್ಚು. ಇಂಥವರು ನಮ್ಮ ಕರ್ನಾಟಕದ ಹಲವೆಡೆಗಳಲ್ಲೂ ಇರುತ್ತಾರೆ.

**ಸಮಸ್ಯೆಗಳು-ಇತ್ಯಾದಿ**

ಕರ್ನಾಟಕದೊಳಗೆ ನಡೆಯುವ ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳು ದೈನಂದಿನ ಆಗು-ಹೋಗುಗಳು, ಹೊರನಾಡಿನಲ್ಲಿ ನೆಲೆಸಿರುವವರಿಗೆ ತಿಳಿಯಲು ತುಂಬಾ ಕಷ್ಟವೆನಿಸುತ್ತದೆ. ಆಗೆಲ್ಲಾ, ಯಾಕಾದರೂ ಹೊರನಾಡಿಗೆ ಬಂದೆನೋ ಎಂಬುದು ಪುಟ್ಟ ಬರಹಗಾರನಾದ ನನ್ನ ಪ್ರಾಮಾಣಿಕ ಅನ್ನಿಸಿಕೆ. ಒಬ್ಬ ಬರಹಗಾರನಾಗಿ, ಬರೆಯುವುದೇನೋ ಬರೆಯಬಹುದು. ಆದರೆ, ಪ್ರಕಟಣೆ, ಪುಸ್ತಕ, ಅಚ್ಚು ಹಾಕಿಸುವುದು, ಕರಡು ತಿದ್ದುವುದು, ಪುಸ್ತಕಗಳ ಬಟವಾಡೆ-ವಿಲೆವಾರಿಗಳು-ಇತ್ಯಾದಿಗಳಂತೂ ತುಂಬ ತುಂಬಾ ತ್ರಾಸದಾಯಕವೇ ಸರಿ. ಕೆಲವೊಮ್ಮೆ ಕರ್ನಾಟಕದೊಳಗಿನ ಕೆಲಮಂದಿ ಪ್ರಕಾಶಕರು, ನಮ್ಮ ಈ ಅಸಹಾಯಕ ಪರಿಸ್ಥಿತಿಯನ್ನು ದುರುಪಯೋಗ (ಸದುಪಯೋಗ?) ಪಡಿಸಿಕೊಂಡು ನಮ್ಮನ್ನ ವಂಚಿಸಿದ /ಶೋಷಿಸಿದ ಎಷ್ಟೋ ಉದಾಹರಣೆಗಳಿವೆ.

ಹೊರನಾಡಿನಲ್ಲಿರುವಾಗ ಕೆಲವೊಮ್ಮೆ ಅನಿವಾರ್ಯವಾದ ಸಂಕಟಗಳಿಗೆ ನಾವು ಎದುರಾಗ ಬೇಕಾಗಿರುತ್ತದೆ. ಭಾಷಾ ವೈಷಮ್ಯ, ಗಡಿ ತಕರಾರುಗಳು, ಅಂತರ ರಾಜ್ಯ ಜಲವಿವಾದಗಳು ಇತ್ಯಾದಿ ಇತ್ಯಾದಿ. ರಾಜಕಾರಣಿಗಳ ಅಪ್ರಬುದ್ಧ, ಬೇಜವಾಬುದಾರಿಯ, ಕೆಟ್ಟ ಸ್ವಾರ್ಥದ, ಹೇಳಿಕೆಗಳನ್ನು ಮುಗ್ಧ ಜನರು ಹಾಗೆಯೇ ಎತ್ತಿಕೊಂಡು ಅಮಾಯಕರನ್ನ ಹಿಂಸಿಸುತ್ತಾರೆ, ತೊಂದರೆಗಳಿಗೆ ಒಳಪಡಿಸುತ್ತಾರೆ. ಕಾವೇರಿ ಜಲವಿವಾದವೊಂದೇ ಸಾಕು ಈ ರೀತಿಯ ದುರ್ಘಟನೆಗಳನ್ನು ರುಜುವಾತುಪಡಿಸಲು ಇವು ಎಂದಿಗೂ ಮುಗಿಯದ ಸಮಸ್ಯೆಗಳೇನೋ ಎಂಬಂತೆ ಕಾಣಿಸುತ್ತಾ, ಸಾಮಾನ್ಯ ನಾಗರಿಕರು ಇದಕ್ಕೆ ಬಲಿಪಶುವಾಗಿ ಬಿಡುವುದು ನಿಜವಾಗಿಯೂ ಖೇದಕರ ವಿಷಯ.

ಹೊರನಾಡಿನ ಕನ್ನಡಿಗನಾಗಿ ಬದುಕುವುದು ಒಂದು ಅನಿವಾರ್ಯವಾದ ಅನುಭವವೂ ಹೌದು, ಬೇಡದ ಅನುಭವವೂ ಹೌದು. ಹೋದಲ್ಲಿ ಅಲ್ಲಿನಂತಿರು ಎನ್ನುವುದೇ ಒಳ್ಳೆಯ ಹಾಗೂ ಪ್ರಸ್ತುತ ಆದರ್ಶ. ಆದರೆ, ಹೊರನಾಡಿನ ಕನ್ನಡಿಗರನ್ನ ಕರ್ನಾಟಕದೊಳಗೆ ನಮ್ಮೊಳ ಗೊಬ್ಬರಂತೆ ನೋಡುವುದು ಕಡಿಮೆ. ನಮ್ಮ ಅಸ್ತಿತ್ವಕ್ಕೆ ಗುರುತಿಲ್ಲ. ನಮ್ಮ ಅದೆಷ್ಟೋ ಅಪ್ಪಟವಾದ ಅಹವಾಲು-ಸಮಸ್ಯೆಗಳಿಗೆ ಕರ್ನಾಟಕ ಸರಕಾರವು ಸ್ಪಂದಿಸುವುದೇ ಇಲ್ಲ. ಮಾತ್ರವಲ್ಲ, ನಾನು ನನ್ನ ಸ್ವಂತ ಊರಿಗೆ ಬಂದಾಗಲೆಲ್ಲ ನನ್ನನ್ನು ಗುರುತಿಸುವುದು

ಮಧುರೆಯವನೆಂದು, ತಮಿಳ್ನಾಡಿನವನೆಂದು. ಮಧುರೆಯಲ್ಲಿ ನಾನಿರುವಾಗ ಇಲ್ಲಿನವರು ನನ್ನನ್ನು ಗುರುತಿಸುವುದು ಕನ್ನಡಿಗನೆಂದು. ಆದರೆ, ನನ್ನ ನಿಜವಾದ ಅಸ್ತಿತ್ವವೇನು?- ಎಂಬ ವಿಷಾದ ಮನದೊಳಗೆ ಯಾವತ್ತೂ ಸುಳಿದಾಡುತ್ತಿರುತ್ತದೆ.

ಹೊರದೇಶಗಳಲ್ಲಿರುವವರೂ ಸೇರಿದಂತೆ, ಕರ್ನಾಟಕದ ಹೊರಗಿರುವ ಎಲ್ಲಾ ಕನ್ನಡಿಗರೂ ಹೊರನಾಡಿನ ಕನ್ನಡಿಗರೇ ಆಗುತ್ತಾರಲ್ಲವೇ? ಇಂಥವರಲ್ಲಿ ಹಲವರು ನನ್ನಂತೆ ಕನ್ನಡದ ಕೆಲಸವನ್ನೇ ಮಾಡುವವರೂ ಇರುತ್ತಾರೆ. ಮಾತ್ರವಲ್ಲ ಕನ್ನಡದಲ್ಲಿ ಸೃಜನಶೀಲ/ ಸೃಜನೇತರ ಇತ್ಯಾದಿ ಸಾಹಿತ್ಯಿಕ ಬರವಣಿಗೆಗಳನ್ನು ಮಾಡುತ್ತಿರುವವರೂ ಇದ್ದಾರೆ. ಆದರೆ ಇವರೆಲ್ಲಾ ಆಯಾಯ ರಾಜ್ಯಗಳಲ್ಲಿ, ಭಾಷಾ ಅಲ್ಪಸಂಖ್ಯಾತರ ಗುಂಪಿನೊಳಗೆ ಸೇರುತ್ತಾರೆ. ಹೊರನಾಡಿನ ಸುದ್ದಿಗಾಗಿ ಕನ್ನಡದ ಕೆಲವೊಂದು ಪತ್ರಿಕೆಗಳು ಜಾಗವನ್ನು ನಿಗದಿಪಡಿಸಿರುತ್ತವೆ. ಎಂದರೆ, ಇವುಗಳಲ್ಲಿ ಬರುತ್ತಿರುವ ಸುದ್ದಿಗಳಷ್ಟೇ ಹೊರನಾಡಿನಲ್ಲಿರವಂಥವು ಎಂದರ್ಥ ವಲ್ಲ. ಕನ್ನಡ ಸಂಘ ಸಂಸ್ಥೆಗಳಿಗೆ ಶಾಲೆ, ಗ್ರಂಥಾಲಯ, ತರಗತಿ, ಪಠ್ಯಪುಸ್ತಕಗಳು, ಅರ್ಹ ವಿದ್ಯಾರ್ಥಿ/ಸಂಶೋಧಕರಿಗೆ ಮೊದಲಾಗಿ ಹೊರನಾಡಿನ ಕನ್ನಡಿಗರಿಗೆ ಒಳನಾಡಿನಿಂದ ಹೇಳಿ ಕೊಳ್ಳುವಂಥ ಯಾವುದೇ ರೀತಿಯ ಸಹಕಾರವೂ ಸಿಗುತ್ತಿಲ್ಲವೆಂಬುದು ವಿಷಾದಕರ ಸಂಗತಿ.

ಮಧುರೆಯಂಥ ಅಪ್ಪಟ ತಮಿಳುನಾಡಿನಲ್ಲಿರುವ ಕನ್ನಡಿಗರ ಮಗಳಿಗೆ ಕನ್ನಡದಲ್ಲಿ ವಿದ್ಯಾಭ್ಯಾಸವನ್ನು ಕೊಡಿಸುವ, ಬಿಡಿ, ಕನ್ನಡ ಒಂದು ಭಾಷೆಯನ್ನಷ್ಟೇ ಕಲಿಸುವ ಅವಕಾಶ ವಿರುವ ಶಾಲೆಯೂ ಇಲ್ಲ. ಒಂದೋ ಇಂಗ್ಲಿಶು ಅಲ್ಲದಿದ್ದರೆ ತಮಿಳು. ಕನ್ನಡವನ್ನು ಮನೆ ಯೊಳಗೆ ಹೇಳಿಕೊಟ್ಟರೆ ಉಂಟು, ಇಲ್ಲದಿದ್ದರೆ ಇಲ್ಲ. ಮದರಾಸು ಇದಕ್ಕೆ ಅಪವಾದ, ಅಲ್ಲಿ ಕನ್ನಡವನ್ನು ಕಲಿಸುವ ಕೆಲವಾದರೂ ಶಾಲೆಗಳಿವೆ.

ಹೊರನಾಡಿನ ಕನ್ನಡ ಬರಹಗಾರರ ಬಗ್ಗೆ ಕೆಲಮಂದಿ ಕನ್ನಡದ ಸಾಹಿತಿವರೇಣ್ಯರು ಅಸಡ್ಡೆ/ಅವಜ್ಞೆಗಳನ್ನು ತೋರಿದ್ದಿದೆ. ಹೊರನಾಡಿನ ಕನ್ನಡ ಬರಹಗಾರರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳದೆ ಹೀಗೆ ಮಾಡುತ್ತಾರೆ. ಹಾಗೆಯೇ ನಮ್ಮ ಸಮಸ್ಯೆಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ಸಹಾನುಭೂತಿಯನ್ನಾದರೂ ವ್ಯಕ್ತಪಡಿಸಿದವರೂ ಕೆಲಮಂದಿ ಇದ್ದಾರೆ. ಹಿಂದೆ ಹಿರಿಯ ಸಾಹಿತಿಗಳೊಬ್ಬರು ಹೊರನಾಡು-ಗಡಿನಾಡುಗಳಲ್ಲಿ ನಡೆಯುವಷ್ಟು ಕನ್ನಡದ ಬಗ್ಗೆ ಕಾಳಜಿ-ಕೆಲಸಗಳು ಒಳನಾಡಿನಲ್ಲೇ ನಡೆಯುತ್ತಿಲ್ಲವೆಂಬುದಾಗಿ ಹೇಳಿದ್ದರು. ಇದರಲ್ಲಿ ಪೂರ್ತಿ ಸತ್ಯಾಂಶವಿದೆಯೆಂದಲ್ಲ. ಆದರೂ, ಹೊರಗಡೆಯೇ ಇದ್ದರೂ ಅವರೆಲ್ಲ, ಮಾಡುತ್ತಿರುವ ಕೆಲಸ ಕನ್ನಡದ್ದೇ ಎಂಬುದಾಗಿ ಪೂರ್ವಾಗ್ರಹ ಪೀಡೆಯಿಲ್ಲದೆ ಸ್ವೀಕರಿಸುವ ದೊಡ್ಡತನವನ್ನು ತೋರಿದರೆ ಸಾಕು.

ಎಂದರೆ, ಕನ್ನಡದ ಬರಹಗಾರನಿಗೆ ಕರ್ನಾಟಕದೊಳಗೆ ಸಿಗಬಹುದಾದ ಸೌಕರ್ಯ, ಸವಲತ್ತುಗಳು ಹೊರಗಡೆಯಾಗಲೀ, ಗಡಿನಾಡಿನಲ್ಲಾಗಲೀ ಯಾವತ್ತೂ ಸಿಗಲಾರವು. ಅನೇಕಾ ನೇಕ ಕನ್ನಡದ ಸೃಜನಶೀಲ ಸಂಶೋಧಕ, ವಿಮರ್ಶಕ ಲೇಖಕರುಗಳು ಹೊರನಾಡುಗಳಲ್ಲಿದ್ದು, ಅಲ್ಲಲ್ಲಿನ ಸಂಸ್ಕೃತಿಯೊಂದಿಗೆ ಬೆರೆತು ಅಲ್ಲಿನ ಸತ್ಯವನ್ನ ಹೀರಿಕೊಂಡು ಕನ್ನಡದ ಕಣಜವನ್ನು

ತುಂಬಿದವರಿದ್ದಾರೆ. ಇನ್ನು ಎಷ್ಟೋ ಮಂದಿ ಇಂಥ ನಮ್ಮ ಸಂಸ್ಕೃತಿಯ ರೂವಾರಿಗಳ ಹೆಸರು ಕೂಡಾ ಚರಿತ್ರೆಯೊಳಗೆ ನಮೂದಾಗಲೇ ಇಲ್ಲವೆಂಬುದು ನಮಗೆ ಶೋಭೇ ತರುವ ವಿಚಾರವಲ್ಲವೇ ಅಲ್ಲ. ಕನ್ನಡದ ಈ ಪುಟ್ಟ ಪುಟ್ಟ ಮನೆಗಳೊಳಗೆ, ನಾವೆಷ್ಟೇ ಮಂದಿ ಇದ್ದರೂ, ಏನನ್ನೇ ಮಾಡಿದರೂ, ಇದೆಲ್ಲಾ ಭಾಷಾ ಅಲ್ಪಸಂಖ್ಯಾತರ ಪಟ್ಟಿಯೊಳಗಷ್ಟೆ ಸೀಮಿತಗೊಳ್ಳುತ್ತದೆ. ಈ ರೀತಿಯಾಗಿ ಯಾರಾದರೂ ನಮ್ಮನ್ನು ನೋಡಿದಾಗ ಒಂದು ರೀತಿಯ ಕೆಟ್ಟ ಅಸಹಾಯಕತೆ, ಆಂತರಿಕ ವೇದನೆ, ಅನಾಥ ಪ್ರಜ್ಞೆಗಳು ಬಂದು ಬಿಡುತ್ತವೆ.

●

# ವಿಶ್ವವಿದ್ಯಾಲಯದಲ್ಲಿ ಹತ್ತು ವರ್ಷ: ನನ್ನ ಅನುಭವ

● ರಹಮತ್ ತರೀಕೆರೆ

## ಮೊದಲ ದಿನಗಳ ಸ್ವಾತಂತ್ರ್ಯ ಹಾಗೂ ಆತಂಕ

ಶಿವಮೊಗ್ಗದ ಸಣ್ಣ ಕಾಲೇಜೊಂದರಲ್ಲಿ ಅಧ್ಯಾಪಕನಾಗಿದ್ದ ನಾನು ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದ ಹೊತ್ತಲ್ಲಿ, ಕೂಡಲೇ (೧೯೯೨) ನನ್ನಲ್ಲಿ ಎರಡು ಭಾವನೆಗಳು ಮನಸ್ಸನ್ನು ಆವರಿಸಿದವು. ಕೆಲಸ ಮಾಡಲು ಇಷ್ಟೊಂದು ಸ್ವಾತಂತ್ರ್ಯ ಹಾಗೂ ಅವಕಾಶಗಳಿವೆ ಯಲ್ಲ ಎಂಬ ಸಂತೋಷದ ಭಾವನೆ ಒಂದಾದರೆ, ಏನು ಮಾಡಬೇಕು ಹೇಗೆ ಮಾಡಬೇಕು ಎಂದು ಖಚಿತವಾಗದ ದಿಕ್ಕೆಟ್ಟತನ ಇನ್ನೊಂದು. ಕನ್ನಡ ವಿಶ್ವವಿದ್ಯಾಲಯ ನಿರ್ವಹಿಸಬೇಕಾದ ಜವಾಬ್ದಾರಿಗಳ ದೊಡ್ಡಪಟ್ಟಿಯನ್ನು ಕರ್ನಾಟಕದ ಎಲ್ಲ ಕಡೆ  ಜನ ಮಂಡಿಸುತ್ತಿದ್ದರು. ಆಗ ತಾನೇ ಹುಟ್ಟಿರುವ ಸಂಸ್ಥೆಯೊಂದರ ಮೇಲೆ ಕನ್ನಡಿಗರು ನಿರ್ದಯವಾಗಿ ಹೊರಿಸುತ್ತಿದ್ದ ಅಸಂಖ್ಯ ಹೊಣೆಗಳನ್ನು ಕಂಡು ಗಾಬರಿಯಾಗುತ್ತಿತ್ತು. ಕರ್ನಾಟಕದ ಅನೇಕ ಕಡೆಗಳಿಂದ ಕನ್ನಡ ವಿಶ್ವವಿದ್ಯಾಲಯಕ್ಕೆ ಒಂದು ಆದರ್ಶಕ್ಕಾಗಿ ಬಂದಂತಿದ್ದ ಹತ್ತು ಜನ ಅಧ್ಯಾಪಕರು ಇದ್ದರು. ಅವರಲ್ಲಿ ನಾನೂ ಒಬ್ಬ. ಎಲ್ಲರಲ್ಲೂ ಯಾವುದೋ ಮಹತ್ತಾದ ಉದ್ದೇಶಕ್ಕೆ ಸೇರಿದ್ದೇವೆ ಎಂಬ ಉತ್ಸಾಹ ಶ್ರದ್ಧೆಗಳಿದ್ದವು. ಪ್ರತಿನಿತ್ಯ ನಾವೆಲ್ಲ ಸೇರಿ, ಕರ್ನಾಟಕದ ಸಂಸ್ಕೃತಿಯ ಶೋಧ ಮಾಡುವ ಬಗೆ ಯಾವುದು? ಕರ್ನಾಟಕ ಬಹುಮುಖಿಯಾದ ಈ ಸಂಸ್ಕೃತಿಯನ್ನು ಡೆಮಾಕ್ರೆಟಿಕ್ ಹಾಗೂ ಸೆಕ್ಯುಲರ್ ನೆಲೆಯಲ್ಲಿ ಗ್ರಹಿಸುವುದಕ್ಕೆ ಬೇಕಾದ ತಾತ್ವಿಕತೆ ಯಾವುದು, ಎಂದು ಚರ್ಚಿಸುತ್ತಿದ್ದೆವು.

ಅಧ್ಯಾಪಕರ ಗುಂಪಿನಲ್ಲೇ ಬೌದ್ಧಿಕ ಸಿದ್ಧತೆ ಕಡಿಮೆಯುಳ್ಳ ನನ್ನಲ್ಲಿ ಒಂದು ಬಗೆಯ ತಳಮಳ ಹೊಯ್ದಾಡುತ್ತಿತ್ತು. ಚೆನ್ನಾಗಿ ನೆನಪಿದೆ- ನಾನು ವಿಶ್ವವಿದ್ಯಾಲಯಕ್ಕೆ ಬಂದೊಡನೆ ನನ್ನ ಈ ತಳಮಳ ಗೊಂದಲಗಳನ್ನು 'ನಮ್ಮ ನಡುವಿನ ಬಿಕ್ಕಟ್ಟುಗಳು' ಎಂಬ ಲೇಖನದಲ್ಲಿ ಬರೆದು ಪ್ರಕಟಿಸಿದೆ. ಮಹಾ ಅಪರಾಧಿ ಪ್ರಜ್ಞೆಯಲ್ಲಿ ಬರೆದ ಲೇಖನವದು ಅಥವಾ ಮೈಮೇಲೆ ಸಲ್ಲದ ಜವಾಬ್ದಾರಿಗಳನ್ನು ಆವಾಹಿಸಿಕೊಂಡು, ಅವನ್ನು ನಿರ್ವಹಿಸಲು ದಾರಿ ತೋರದ ಹೊತ್ತಲ್ಲಿ ಹುಟ್ಟಿದ ಲೇಖನವದು. ನನ್ನಲ್ಲಿ ಈ ತಳಮಳವನ್ನು ಹುಟ್ಟಿಸಿದ್ದು ಪ್ರತಿನಿತ್ಯ ಹಂಪಿಗೆ ನಾವು ಹಾದು ಹೋಗುತ್ತಿದ್ದ ಗಾಳೆಮ್ಮನಗುಡಿ, ಮಲಪನಗುಡಿ ಎಂಬ ಹಳ್ಳಿಗಳು. ಸಂಶೋಧಕರೆನಿಸಿ ಕೊಂಡಿರುವ ನಾವು, ಈ ಹಳ್ಳಿಗಳ ಜನರ ಸಂಸ್ಕೃತಿಯ ಬಗ್ಗೆ ಕೆಲಸ ಮಾಡಬೇಕಾಗಿದೆಯೇ? ಆದರೆ ಕಪ್ಪು ಗಾಜಿನ ಬಸ್ಸಿನೊಳಗೆ ಕುಳಿತು ಗಾಳಿಯಲ್ಲಿ ತೇಲಿ ಹೋಗುತ್ತಿರುವ ನಮಗೂ, ತಮ್ಮ ನಾಯಿ ದನ ಕೋಳಿಗಳ ಸಮೇತ ಬಸ್ಸಿಗೆ ಅಡ್ಡಬರುವ

ನೆಲದಮೇಲಿನ ಈ ಜನಕ್ಕೂ, ನಡುವೆ ಎಷ್ಟೊಂದು ಕಂದಕಗಳಿವೆ? ನಿಜಕ್ಕೂ ಇವರ ಬದುಕಿನಲ್ಲಿ ನಮ್ಮ ಸಂಶೋಧನೆಗೆ ಯಾವ ಸ್ಥಾನವಿದೆ? ಯಾವ ಸ್ಥಾನವೂ ಇಲ್ಲದಿದ್ದರೆ ಸಂಶೋಧನೆ ಮಾಡಬೇಕು ಯಾಕೆ? ಕರ್ನಾಟಕ ಅಧ್ಯಯನಗಳು ಎಂದರೆ ಏನು? ಕಾಲೇಜಿನಲ್ಲಿ ಪಾಠಮಾಡುವಾಗ ಹುಟ್ಟದ ಪ್ರಶ್ನೆಗಳು ಇಲ್ಲಿ ಬಂದು ಕಾಡತೊಡಗಿದವು.

**ಬಿಸಿಲಸೀಮೆ ಕಲಿಸಿದ ಮೊದಲ ಪಾಠ**

ಇದೇ ಹೊತ್ತಿನಲ್ಲಿ ಭಾರತ ದೇಶವು ಇಪ್ಪತ್ತನೇ ಶತಮಾನದ ತನ್ನ ಚರಿತ್ರೆಯಲ್ಲಿಯೇ ಎರಡನೇ ದೊಡ್ಡ ಕೋಮುಸಂಘರ್ಷಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿತ್ತು. ಬೆಚ್ಚಿಬೀಳಿಸುವಂತಹ ಸುದ್ದಿಗಳು ಬರುತ್ತಿದ್ದವು. ಡಿಸೆಂಬರ್ ೬ ಬಂದಾಗಲಂತೂ ದೇಶದ ಅನೇಕ ಭಾಗಗಳು ಕೋಮು ಗಲಭೆಯಲ್ಲಿ ಪತಂಗದಂತೆ ಉರಿಯತೊಡಗಿದವು. ಶಿವಮೊಗ್ಗದಂತಹ ಜ್ವಾಲಾಮುಖಿ ಮೇಲೆ ಬದುಕಿಬಂದ ನಾನು, ಇಲ್ಲಿ ಬಾಯಲ್ಲಿ ಅಕ್ಕಿಕಾಳನ್ನು ಹಾಕಿಕೊಂಡು ಏನಾದರೂ ಆಗಬಹುದು ಎಂದು ನಿರೀಕ್ಷಿಸಿದ್ದೆ. ಯಾವ ಮಧ್ಯಕಾಲೀನ ಚರಿತ್ರೆಯ ರಾಜಪ್ರಭುತ್ವದ ಕೃತ್ಯವೊಂದನ್ನು ನೆಪವಾಗಿಸಿಕೊಂಡು ಈ ಗಲಭೆ ಶುರುವಾಗಿತ್ತೋ, ಅಂತಹುದೇ ಇನ್ನೊಂದು ಕೃತ್ಯದ ಉದಾಹರಣೆ ಎನ್ನಲಾಗುವ ವಿಜಯನಗರದ ರಥ ಬೀದಿಯಲ್ಲೇ ನಮ್ಮ ವಿಶ್ವವಿದ್ಯಾಲಯವಿತ್ತು. ಆದರೆ ಹಂಪಿ ವಿಶ್ವವಿದ್ಯಾಲಯ ಇರುವ ಹಂಪಿ ಸೀಮೆ, ಅಷ್ಟೇಕೆ ಜಿಲ್ಲೆಗೆ ಬಳ್ಳಾರಿ ಜಿಲ್ಲೆಯೆ, ಅಯೋಧ್ಯೆಯ ಪ್ರಕರಣಕ್ಕೆ ರಕ್ತಪಾತಕ ಪ್ರತಿಕ್ರಿಯೆ ಯನ್ನೇ ಸೂಚಿಸಲಿಲ್ಲ. ತುಂಗಭದ್ರೆ ಅಮಾಯಕವಾಗಿ ಹರಿಯುತ್ತಿದ್ದಳು. ಮಲೆನಾಡಿನ ನಾನು ಬಳ್ಳಾರಿ ಜಿಲ್ಲೆಗೆ ಹೊರಟಾಗ ಯಾವುದೋ ಆಫ್ರಿಕಾದ ಮರುಭೂಮಿಗೆ ಕಳಿಸಿಕೊಡುವಂತೆ ಗೆಳೆಯರೂ ನೆಂಟರೂ ಬೀಳುಕೊಟ್ಟಿದ್ದರು. ನಾನು ಹಂಪಿಗೆ ಬಂದ ದಿನಗಳೋ ಬೇಸಿಗೆ ಕೆಂಡ ಸುರಿಯುವ ದಿನಗಳು. ಆದರೂ ಈ ಜಿಲ್ಲೆಯ ಜನ ಡಿಸೆಂಬರ್ ೬ರ ಪ್ರಕರಣಕ್ಕೆ ನೀಡಿದ ಪ್ರತಿಕ್ರಿಯೆ, ನನಗೆ ಕರ್ನಾಟಕ ಸಂಸ್ಕೃತಿಯನ್ನು ನೋಡುವ ಮೊದಲ ಪಾಠವನ್ನು ಕಲಿಸಿಕೊಟ್ಟಿತು. ಅದು ನನ್ನ ದೃಷ್ಟಿಕೋನವನ್ನು ಆಮೂಲಾಗ್ರವಾಗಿ ಬದಲಿಸಿತು. ಜನರ ಹತ್ತಿರ ಹೋಗಿ ಅವರ ತಿಳುವಳಿಕೆಯನ್ನು ಪಡೆದುಕೊಳ್ಳುವ ಮೂಲಕವೇ ಕರ್ನಾಟಕ ಸಂಸ್ಕೃತಿಯ ಸ್ವರೂಪವನ್ನು ದರ್ಶನ ಮಾಡಬೇಕು ಎಂಬ ವಿನಯವನ್ನು ಕಲಿಸಿತು.

**ಪ್ರಶ್ನೆ ಸರಳ, ಉತ್ತರ ಕಷ್ಟ**

ಕನ್ನಡ ವಿಶ್ವವಿದ್ಯಾಲಯದಲ್ಲಿರುವುದು ವರವೂ ಹೌದು ಶಾಪವೂ ಹೌದು. ಮೊದಮೊದಲು ಕೆಲವರು ವಿಶ್ವವಿದ್ಯಾಲಯವನ್ನು ಸಾಯಲೆಂದು ಹುಟ್ಟಿದ ವಿಚಿತ್ರ ಕರುವನ್ನು ನೋಡುವಂತೆ, ಕರುಣೆಯಿಂದ ನೋಡುತ್ತಿದ್ದರು. ಕರ್ನಾಟಕ ಸಂಸ್ಕೃತಿ ಅಧ್ಯಯನಕ್ಕೆಂದೇ ಒಂದು ವಿಶ್ವವಿದ್ಯಾಲಯ ಶುರುವಾಗಿರುವುದು, ಅವರಿಗೆ ತಮಾಶೆಯ ವಿಷಯವಾಗಿತ್ತು. ಕನ್ನಡಕ್ಕೆ ಸಾಂಸ್ಥಿಕವಾಗಿ ದೊಡ್ಡ ಕೆಲಸ ಮಾಡಿರುವ ಹಾ ಮಾ ನಾಯಕ ಅವರಂತಹ ಜನಪ್ರಿಯ ವಿದ್ವಾಂಸರು 'ಇದು ಅನಗತ್ಯವಾಗಿತ್ತು' ಎಂದು ಖಡಕ್ಕಾಗಿ ಪ್ರತಿಪಾದಿಸುತ್ತಿದ್ದರು. ಹೀಗಾಗಿ ಹೊರಗೆ ಹೋದಾಗಲೆಲ್ಲ " ಕನ್ನಡ ವಿಶ್ವವಿದ್ಯಾಲಯ ಏನು ಮಾಡುತ್ತಿದೆ?" ಎಂಬ ಪ್ರಶ್ನೆಗೆ

ತಲೆಗೊಡಲೇ ಬೇಕಿತ್ತು. ಹೆಚ್ಚಿನವರು ಪ್ರಾಮಾಣಿಕ ಕುತೂಹಲದಿಂದಲೇ ಕೇಳುತ್ತಿದ್ದರು. ಈಗಲೂ ಈ ಪ್ರಶ್ನೆ ಕೇಳುವವರಿದ್ದಾರೆ. ನಾವೇನು ಮಾಡುತ್ತೇವೆ ಎನ್ನುವುದನ್ನು ಜನರಿಗೆ ಮನವರಿಕೆ ಮಾಡಿಕೊಡುವಲ್ಲಿ ಇರುವ ಮಿತಿಯೋ, ಇಂತಹ ವಿಶ್ವವಿದ್ಯಾಲಯಗಳ ಕೆಲಸಗಳು ನಿಜವಾಗಿ ಜನರ ಬಾಳಿನಲ್ಲಿ ಕೆಲಸ ಮಾಡುವ ವಿಧಾನದ ಸಮಸ್ಯೆಯೋ ಅಥವಾ ಜನರ ಸಿನಿಕತೆಯೋ ತಿಳಿಯದು. ಪ್ರಶ್ನೆ ಸರಳವಾಗಿತ್ತು, ಉತ್ತರಿಸುವುದು ಕಷ್ಟವಾಗಿತ್ತು. ಆಗ ಈಗಿನಷ್ಟು ವಿಶ್ವವಿದ್ಯಾಲಯವು ತನ್ನ ಕೈಕಾಲನ್ನು ಹರಡಿಕೊಂಡಿರಲಿಲ್ಲ. ಬಿಎ, ಎಂಎ ಪದವಿಗಳಿಲ್ಲದ, ವಿದ್ಯಾರ್ಥಿಗಳ ಗೌಜಿಲ್ಲದ ಕೇವಲ ಸಂಶೋಧನೆಯ ವಿಶ್ವವಿದ್ಯಾಲಯ! ಇದು ಕೆಲವರಿಗೆ ಅರ್ಥವಾಗುತ್ತಿರಲಿಲ್ಲ. ಆದರೆ ಪ್ರಶ್ನೆಗೆ ಉತ್ತರಿಸಲೇಬೇಕಿತ್ತು. ಅದು ನಮ್ಮ ಹೊಣೆಗಾರಿಕೆಯಾಗಿತ್ತು. ಹೀಗೆ ಉತ್ತರಿಸಬೇಕಾದ ಇಕ್ಕಟ್ಟುಗಳು ಕೂಡ ನಮ್ಮನ್ನು ಸದಾ ಎಚ್ಚರದಲ್ಲಿ ಹುಡುಕಾಟದಲ್ಲಿ ಇಟ್ಟವು.

**ವಿದ್ಯೆ ಸೃಷ್ಟಿಸುವ ಹಮ್ಮು**

ಕನ್ನಡ ವಿಶ್ವವಿದ್ಯಾಲಯದ ಪ್ರಣಾಳಿಕೆಗಳಲ್ಲಿ 'ಇದು ವಿದ್ಯೆಯನ್ನು ಸೃಷ್ಟಿಸುವ ಕೆಲಸ ಮಾಡುತ್ತಿದೆ' ಎಂಬ ಮಾತಿದೆ. ಇದನ್ನು ಅಹಂಕಾರದ ಮಾತು ಎಂದು ಅನೇಕರು ಪ್ರತಿಕ್ರಿಯಿಸಿದ್ದಾರೆ. ಇದು ಸಹಜ. ವಿಶ್ವವಿದ್ಯಾಲಯವೆಂಬ ಉನ್ನತ ಶಿಕ್ಷಣದ ಉಪ್ಪರಿಗೆಯಲ್ಲಿರುವ ಯಾವತ್ತೂ ಸಮಸ್ಯೆಯೆಂದರೆ, ಅದು ಹೇಗೋ ಪ್ರತಿಷ್ಠಿತ ಭಾವನೆ ಹುಟ್ಟಿಸಿಬಿಡುತ್ತದೆ. ಜನಸಮುದಾಯದಿಂದ ದೂರಗೊಳಿಸಿಬಿಡುತ್ತದೆ. ಜನರ ಹತ್ತಿರ ಹೋದರೂ 'ಕಲಿಸಲು ವಿನಾ ಕಲಿಯಲು ಅಲ್ಲ' ಎಂಬ ಅಹಂಕಾರ ಉಂಟುಮಾಡುತ್ತದೆ. ಈ ಭಯ ನಮಗೆಲ್ಲ ಇತ್ತು. ಈ ಭಯದ ಗರ ಹಿಡಿಯದಂತೆ ನಿರಂತರವಾಗಿ ಸೆಣಸಾಡಬೇಕಿತ್ತು. ಅಂದರೆ ಜನರೆಂಬ ಮಂತ್ರವಾದಿಗಳ ಬಳಿ ಸುಳಿದಾಡುತ್ತಿದ್ದಂತೆ ಈ ಗರ ದೂರಸರಿಯಿತು. ಜನರೊಂದಿಗೆ ಬೆರೆಯುವ ಅವಕಾಶಗಳನ್ನು ಕಳೆದುಕೊಳ್ಳದಂತೆ ಉಪಾಯವಾಗಿ ತಯಾರಿ ಮಾಡಿಕೊಂಡೆವು. ನಮ್ಮ ಅಧ್ಯಯನ ವಿಧಾನಗಳು ಸಣ್ಣಗೆ ರೂಪುಗೊಳ್ಳತೊಡಗಿದವು. ಗರದ ಭಯವನ್ನು ನಿಧನಿಧಾನವಾಗಿ ಗೆಲ್ಲತೊಡಗಿದೆವು. ಇಂತಹ ಸಿದ್ಧತೆಯೇ ವೈಯಕ್ತಿಕವಾಗಿ ನನ್ನನ್ನು ಕರ್ನಾಟಕ ಸೂಫಿಗಳ ಅಧ್ಯಯನಕ್ಕಾಗಿ ಬೀದಿಗೆ ಬೀಳುವಂತೆ ಮಾಡಿತು.

ಹೀಗಾಗಿ ಈಗ, ಕಳೆದ ಹತ್ತು ವರುಷಗಳ ನಡಿಗೆಯ ಬಳಿಕ ನೋಡುವಾಗ, ಕನ್ನಡ ವಿಶ್ವವಿದ್ಯಾಲಯ ಬೆಳೆದ ವಿಧಾನ, ಅದು ಸಂಶೋಧನೆಗೆ ಅರಸಿದ ಹಾದಿ, ಮಾಡಿದ ಕೆಲಸ- ಇವೆಲ್ಲ ಸ್ಪಷ್ಟವಾಗಿ ಹೇಳುತ್ತವೆ. ವಿಶ್ವವಿದ್ಯಾಲಯವು ಸಮುದಾಯಗಳಲ್ಲಿರುವ ವಿದ್ಯೆಯನ್ನು ಅರಸಲು ಅದು ಹೆಚ್ಚು ಯತ್ನಿಸಿದೆಯೇ ವಿನಾ, ವಿದ್ಯೆ ನಿರ್ಮಿಸುವುದಕ್ಕಲ್ಲ -ಎಂದು. ವಿದ್ಯೆಯನ್ನು ನಿರ್ಮಿಸುವ ಕೆಲಸ, ಯಾರೋ ಕೆಲವರು ಏಕಾಂತದಲ್ಲಿ ಕುಳಿತು ಮಾಡುವ ತಪಸ್ಸಿನಿಂದ ಆಗುವುದಲ್ಲ. ನಮಗಾದರೂ ನಾವು ವಿದ್ಯೆಯನ್ನು ನಿರ್ಮಿಸಿದ್ದೇವೆ ಅನಿಸಿಲ್ಲ. ಕಲಿತಿದ್ದೇವೆ ಅನಿಸಿದೆ. ವಿದ್ಯೆ- ಜ್ಞಾನಗಳ ಹುಟ್ಟು ಮತ್ತು ಪ್ರಕಟಣೆ ಅಂತಿಮವಾಗಿ ಕೆಲವು ವ್ಯಕ್ತಿಗಳ ಮೂಲಕ ಸಂಭವಿಸುವುದಾದರೂ, ಅದಕ್ಕೆ ಬೇಕಾದ ಪ್ರೇರಣೆಗಳು ಮಾತ್ರ ವಿಶಾಲ

ನೆಲದ ತುಂಬಾ ಹರಡಿರುತ್ತವೆ ತಾನೇ? ಒಂದು ವೇಳೆ ವಿದ್ಯೆ ನಿರ್ಮಿಸಿದ್ದೇ ನಿಜವಾದರೆ, ಅದು ಜನಸಮುದಾಯದ ತಿಳುವಳಿಕೆಯನ್ನು ಬಳಸಿ ನಾಡಿನ ವಿದ್ವಾಂಸರ ಜತೆ ಸಂವಾದಮಾಡಿ ನಿರ್ಮಿಸಿದ್ದು. ಹೀಗೆ ಹೇಳುವಾಗ ವಿಶ್ವವಿದ್ಯಾಲಯಗಳ ಆಚೆ, ಸಾಂಸ್ಥಿಕ ನೆರವಿಲ್ಲದೆ, ನೂರಾರು ಜನ ವೈಯಕ್ತಿಕ ನೆಲೆಯಲ್ಲಿ ಕನ್ನಡದ ಕೆಲಸಗಳನ್ನು ಮಾಡುತ್ತಿದ್ದಾರೆ ಎಂಬುದನ್ನು ಮರೆಯುಂತಿಲ್ಲ.

**ಸಂಸ್ಕೃತಿಯ ವ್ಯಾಖ್ಯೆಯ ವಿಸ್ತರಣೆ**

ಕನ್ನಡ ವಿಶ್ವವಿದ್ಯಾಲಯವು ಎಷ್ಟೋ ಜನರ ಭಾಗವಹಿಸುವಿಕೆ ಸಹಕಾರ ಹಂಬಲಗಳ ಜತೆ, ಸಕಾರಣವಾದ ಟೀಕೆ-ವಿಮರ್ಶೆಗಳ ಜತೆ, ಕೆಲವರ ಸಿನಿಕತಾತ್ಸಾರಗಳ ನಡುವೆ ಕೆಲಸ ಮಾಡುತ್ತಾ ಹೋಯಿತು. ವಿಶ್ವವಿದ್ಯಾಲಯವನ್ನು ಹೊರಗಿನಿಂದ ಬೆಳೆಸಲು ಇವೆಲ್ಲ ಕಾರಣ ವಾಗಿವೆ. ಆದರೆ ವಿವಿಯನ್ನು ಆಂತರಿಕ ಬೆಳೆಸಿದ್ದು ಎರಡು ಸಂಗತಿಗಳು. ಮೊದಲನೆಯದಾಗಿ 'ದಿನಮಾತು' ಎಂಬ ಕಾರ್ಯಕ್ರಮ. ಇದರೊಳಗೆ ಪ್ರತಿದಿನ ಎಲ್ಲ ವಿಭಾಗಗಳ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಒಂದೆಡೆ ಸೇರಿ ಚರ್ಚಿಸುತ್ತಿದ್ದರು. ಎರಡನೆಯದಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕರ್ನಾಟಕದ ಎಲ್ಲ ಭಾಗಗಳಿಂದ ಪ್ರತಿನಿಧಿಗಳಂತೆ ಬಂದು ಸೇರಿದ ಗೆಳೆಯರು. ಈ ಅರ್ಥದಲ್ಲಿ ಕನ್ನಡ ವಿಶ್ವವಿದ್ಯಾಲಯ ಒಂದು ಮಿನಿ ಕರ್ನಾಟಕವಾಗಿತ್ತು. 'ದಿನಮಾತಿ'ನಲ್ಲಿ ಒಂದು ಶಬ್ದದ ಬಗ್ಗೆಯೋ ಒಂದು ಆಚರಣೆಯ ಬಗ್ಗೆಯೋ ಮಾತು ಶುರುವಾದರೆ, 'ನಮ್ಮ ಕಡೆ ಹೀಗಿದೆ, ಹೀಗಿಲ್ಲ' ಎಂದು ಎಲ್ಲರೂ ಬಾಯಿ ಹಾಕುತ್ತಿದ್ದರು. ಆಗ ಇಡೀ ಕರ್ನಾಟಕವೇ ಅಂಗೈಯ್ಯಲ್ಲಿದ್ದಂತೆ ಅನಿಸುತ್ತಿತ್ತು. ಅದರಲ್ಲೂ ದಕ್ಷಿಣ ಕರ್ನಾಟಕದಿಂದ ಬಂದಿದ್ದವರಿಗೆ 'ರಾಶಿಬುತ್ತಿ' 'ಮೈಲಾರ' 'ಹುಲಿಗೆಮ್ಮ' ಬಗ್ಗೆ ಕೇಳುತ್ತಾ ಅಚ್ಚರಿಯಾಗುತ್ತಿದ್ದರೆ, ಉತ್ತರ ಕರ್ನಾಟಕದವರಿಗೆ ಭೂತಾರಾಧನೆ ಮಂಟೇಸ್ವಾಮಿ ಮಾದೇಶ್ವರ ಕಾವ್ಯಗಳ ಬಗ್ಗೆ ಸೋಜಿಗವಾಗುತಿತ್ತು. ಉತ್ತರ ಕರ್ನಾಟಕ, ಹೈದರಾಬಾದು ಕರ್ನಾಟಕ ಹಾಗೂ ಮೈಸೂರು ಕರ್ನಾಟಕಗಳ ನಡುಬಿಂದುವಾದ ಹಂಪಿಯಲ್ಲಿ ವಿಶ್ವವಿದ್ಯಾಲಯ ಸ್ಥಾಪನೆಯಾಗಿದ್ದು ಕೂಡ, ನಮ್ಮ ಸಂಶೋಧನೆಗಳ ಸ್ವರೂಪವನ್ನು ನಿರ್ಣಾಯಕವಾಗಿ ರೂಪಿಸಿದೆ ಎಂದು ನನಗನಿಸಿದೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ಸಾಮಾಜಿಕವಾಗಿ ಕೆಳಸ್ತರದಿಂದ ಬಂದವರು ಹೆಚ್ಚಿನವರಾಗಿದ್ದರಿಂದ, ಅನುಭವದ ಕಣಜದಲ್ಲಿ ಇದ್ದಂತೆ ಅನಿಸುತ್ತಿತ್ತು. ಇದು ಕರ್ನಾಟಕ ಸಂಸ್ಕೃತಿಯ ವಿರಾಟ್ ದರ್ಶನಕ್ಕೆ ನಮ್ಮ ಬಗೆ ಯನ್ನು ಕೊಂಚವಾದರೂ ಸಿದ್ಧಗೊಳಿಸಿತು.

**ಸೆರಗಿನ ಕೆಂಡಗಳು**

ಬಹಳ ಜನ ಕನ್ನಡ ವಿಶ್ವವಿದ್ಯಾಲಯವನ್ನು ಕೇವಲ ಸಾಹಿತ್ಯಕ ಕೆಲಸ ಮಾಡುವ ಸಂಸ್ಥೆ ಯೆಂದು ಈಗಲೂ ತಿಳಿದಿದ್ದಾರೆ. ಇದಕ್ಕೆ ಬಹುಶಃ ಕಾರಣ- ಕರ್ನಾಟಕ ಸಂಸ್ಕೃತಿಯ ಬಗ್ಗೆ ಪ್ರಚಲಿತವಾಗಿರುವ ಜನಪ್ರಿಯ ವ್ಯಾಖ್ಯೆಯೇ. ಈ ವ್ಯಾಖ್ಯೆ ಸಾಹಿತ್ಯ ಸಂಗೀತ ಮುಂತಾದ ಲಲಿತಕಲಾ ಕೇಂದ್ರಿತ ವಾದುದು. ಹೀಗಾಗಿ ಕರ್ನಾಟಕ ಸಂಸ್ಕೃತಿಯ ವ್ಯಾಖ್ಯೆಯನ್ನು ಮೊದಲಿಗೆ

ಖಚಿತಪಡಿಸಿಕೊಳ್ಳಬೇಕಿತ್ತು. ಅದು ಕರ್ನಾಟಕದ ಜನ ಸಮುದಾಯಗಳ ಆರ್ಥಿಕತೆ ರಾಜಕೀಯ ಸಮಾಜಗಳ ಅಧ್ಯಯನಗಳನ್ನು ಒಳಗೊಂಡಿರುತ್ತದೆ. ಅದು ಜಾಗತೀಕರಣ ವಿಕೇಂದ್ರೀಕರಣ ಮುಂತಾದ ವಿದ್ಯಮಾನಗಳಿಂದ ಕರ್ನಾಟಕದ ಜನಸಮುದಾಯಗಳ ಆರ್ಥಿಕ ಸಾಮಾಜಿಕ ಬದುಕಲ್ಲಿ ನಡೆದಿರುವ ಬಲಾವಣೆಗಳನ್ನು ಪರಿಶೀಲಿಸುತ್ತದೆ ಎಂದು ವಿಸ್ತರಿಸಿಕೊಳ್ಳಬೇಕಿತ್ತು. ಈ ವ್ಯಾಖ್ಯೆಯನ್ನು ನಮ್ಮ ಕೆಲಸಗಳ ಮೂಲಕವೇ ಸಾಬೀತುಪಡಿಸ ಬೇಕಿತ್ತು. ಸಾಹಿತ್ಯದ ಮೂಲದಿಂದ ಬಂದವರೇ ಕುಲಪತಿಗಳಾಗುವ ಹಾಗೂ ಸಾಹಿತ್ಯದ ವಿದ್ಯಾರ್ಥಿಗಳೇ ಹೆಚ್ಚಾಗಿ ಇರುವ ವಿಶ್ವವಿದ್ಯಾಲಯ ದಲ್ಲಿ ಇದೊಂದು ಸವಾಲಾಗಿತ್ತು. ಈ ಒತ್ತಡವೇ ಕನ್ನಡ ವಿಶ್ವವಿದ್ಯಾಲಯದ ಪ್ರಧಾನ ಸಂಶೋಧನೆಯು ಸಮಾಜ ವಿಜ್ಞಾನಗಳ ಕ್ಷೇತ್ರದತ್ತ ವಾಲಿಕೊಳ್ಳಲು ಕಾರಣವಾಗಿರಬೇಕು.

ಕನ್ನಡ ವಿಶ್ವವಿದ್ಯಾಲಯದ ಮೂಲಭೂತ ತತ್ವವೆಂದರೆ, ಕರ್ನಾಟಕದ ಮೇಲಿನ ಸಂಶೋಧನೆಯನ್ನು ಕನ್ನಡ ಭಾಷೆಯ ಮೂಲಕವೇ ಮಾಡುವುದು. ಪ್ರತಿಯೊಂದು ರಾಜ್ಯವು ತಂತನ್ನ ಜನಭಾಷೆಗಳ ಮೂಲಕ, ಜನಸಮುದಾಯದ ಶೈಕ್ಷಣಿಕ ಸಾಮಾಜಿಕ ಸಾಂಸ್ಕೃತಿಕ ಏಳಿಗೆಯನ್ನು ಪಡೆದುಕೊಳ್ಳುವುದು ಅದರ ಸಹಜ ಹಕ್ಕಾಗಿದೆ. ಭಾಷಾವಾರು ಪ್ರಾಂತ್ಯಗಳ ಮುಖ್ಯ ಆಶಯ ಕೂಡ ಇದೇ ತಾನೇ? ಆದರೆ ಜನಭಾಷೆಯಲ್ಲಿ ಜ್ಞಾನದ ಚಟುವಟಿಕೆ ಮಾಡುವಾಗ ವಿಚಿತ್ರವಾದ ನೈತಿಕ ಸರಿತನ ಮನೆಮಾಡಿರುತ್ತದೆ. ಈ ಸರಿತನ ಅತಿಯಾದಾಗ, ಆತ್ಮವಿಮರ್ಶೆ ಕಳೆದುಕೊಂಡು ಮೂಲಭೂತವಾದಿ ಕೂಡ ಆಗಬಲ್ಲದು. ಕನ್ನಡ ಭಾಷೆ-ಸಾಹಿತ್ಯ -ಎಂಬ ಭಾವುಕ ಜಪವು ಸೆಕ್ಟೇರಿಯನ್ ಆಗಿ, ಕನ್ನಡವಲ್ಲದ ಭಾಷೆಗಳ ವಿಷಯದಲ್ಲಿ ಒಂದು ಬಗೆಯ ಎದುರಾಳಿ ಮನೋಭಾವವನ್ನು ಬೆಳೆಸಿಬಿಡಬಹುದು. ಈ ತಾತ್ವಿಕ ಭಯದ ಜತೆಗೆ, 'ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಗೆ ತಾವು ಕಾರಣರು' ಎಂದುಕೊಂಡ ಅನೇಕ ವಿದ್ವಾಂಸರು, 'ನಮ್ಮ ಅಪೇಕ್ಷೆಯಂತೆ ಈ ವಿಶ್ವವಿದ್ಯಾಲಯ ಬೆಳೆಯುತ್ತಿಲ್ಲ' ಎಂದು ಕಾಲ ಕಾಲಕ್ಕೆ ಶರಾ ಬರೆಯುತ್ತಿದ್ದರು. ಅವರಲ್ಲೆ ಕೆಲವರು, ಕನ್ನಡದ ದುರಭಿಮಾನಿಗಳೂ ಧಾರ್ಮಿಕ ವಾಗಿ ಸಂಕುಚಿತವಾದಿಗಳೂ ಆಗಿದ್ದರು. ಕರ್ನಾಟಕದ ಜನಭಾಷೆಗಳ ವಿಷಯದಲ್ಲಿ ಕನ್ನಡಪರ ಚಳುವಳಿಗಾರರ ಜನಪ್ರಿಯ ನಿಲುವು ಸಾಮಾನ್ಯವಾಗಿ ಮೂಲಭೂತವಾದಿಯಾಗಿದೆ. ಇದು ಕರ್ನಾಟಕದ ರಾಜಕಾರಣಕ್ಕೆ ಹತ್ತಿರವಿರುವ ಕನ್ನಡಕ್ಕೆ, ಉಳಿದ ಭಾಷೆಗಳೆದುರು 'ನಾ ಹೇಳಿದಂತೆ ಕೇಳಿಕೊಂಡಿರು' ಎಂಬ ಯಜಮಾನಿಕೆಯ ಪ್ರವೃತ್ತಿಯನ್ನು ಕೂಡ ಬೆಳೆಸಿದೆ. ಹೀಗಾಗಿ ಕನ್ನಡವನ್ನು ಬೆಳೆಸುತ್ತಲೇ ಅದನ್ನು ಕೀಳರಿಮೆಯಲ್ಲಿಟ್ಟು ದಮನಿಸಬಲ್ಲ ಸಂಸ್ಕೃತ ಇಂಗ್ಲಿಶಿನಂತಹ ಭಾಷೆಗಳ ಯಜಮಾನಿಕೆಯ ಬಗ್ಗೆ ಎಚ್ಚರದ ನಿಲುವನ್ನು ತಾಳಬೇಕಿತ್ತು; ಅದೇ ಕಾಲಕ್ಕೆ ಕನ್ನಡದ ಜತೆ ಸಹಬಾಳ್ವೆ ಮಾಡುತ್ತಿರುವ ಕರ್ನಾಟಕದ ಜನಭಾಷೆಗಳಾದ ಕೊಂಕಣಿ ತುಳು ಕೊಡವ ಉರ್ದುಗಳ ವಿಷಯದಲ್ಲಿ ಸ್ನೇಹಪರ ನಿಲುವನ್ನು ಕಾಪಾಡಿಕೊಳ್ಳ ಬೇಕಿತ್ತು. ಅಂದರೆ, ಕನ್ನಡ ಭಾಷಿಕ ಸಂಸ್ಕೃತಿಯನ್ನು ಮಾತ್ರ ಸಂಶೋಧಿಸುವುದರಿಂದ ಪಾರಾಗಿ, ಕರ್ನಾಟಕದ ಇತರ ಜನಭಾಷೆಗಳಾದ ತುಳು ಉರ್ದು ಕೊಡವ ಭಾಷಿಕ ಸಂಸ್ಕೃತಿಯನ್ನು

ಕುರಿತು ತನ್ನನ್ನು ವಿಸ್ತರಿಸಿಕೊಳ್ಳಬೇಕಿತ್ತು. ನಾಡಿನ, ಸಮಾಜದ ಎಲ್ಲ ಸ್ಥರಗಳ, ಅದರಲ್ಲೂ ನಿರ್ಲಕ್ಷಿತ ಜನಸಮುದಾಯಗಳ ಭಾಷೆ ಬದುಕು ಸಾಹಿತ್ಯ ಕಲೆಗಳ ಕುರಿತು ಗಮನ ಹರಿಸ ಬೇಕಿತ್ತು. ಸಾವಿರಾರು ವರುಷಗಳ ಪ್ರಾಚೀನತೆಯುಳ್ಳ, ನಾಡಿನ ಅನೇಕ ಜಾತಿ ಧರ್ಮಗಳಿಗೆ ಸೇರಿದ, ಅಸಂಖ್ಯಾತ ದುಡಿಯುವ ಜನರು ಕಲಾವಿದರು ಒಟ್ಟಾಗಿ ಸೇರಿ ಸೃಷ್ಟಿಸಿರುವ, ಕಾಲಕಾಲಕ್ಕೆ ಹೊರಗಿಂದ ಬಂದ ಅನೇಕ ಸಂಗತಿಗಳನ್ನು ಜೀರ್ಣಿಸಿಕೊಂಡಂತಹ, ಕರ್ನಾಟಕದ ಬಹುಮುಖಿ ಸಂಸ್ಕೃತಿಯನ್ನು ಸರಳೀಕರಿಸದೆ ಹಿಡಿವ ಹಾದಿಗಳನ್ನು ಹುಡುಕಬೇಕಿತ್ತು. ಈ ಹಾದಿಯಲ್ಲಿ ಈಗಾಗಲೇ ನಡೆದವರ ಹೆಜ್ಜೆ ಗುರುತನ್ನು ಅರಸಬೇಕಿತ್ತು.

ಈ ದಿಕ್ಕಿನಲ್ಲಿ ನಾವು ಸಮೂಹವಾಗಿ ಪಡೆಯಬೇಕಾದಷ್ಟು ಸ್ಪಷ್ಟತೆಯನ್ನು ಪಡೆದಿದ್ದೇವೆ ಅನಿಸುತ್ತಿಲ್ಲ. ಅದರಲ್ಲೂ ಕನ್ನಡ ವಿಶ್ವವಿದ್ಯಾಲಯದ ದೇಶೀಯತೆಯ ಪರಿಕಲ್ಪನೆಯಲ್ಲಿ ಅನೇಕ ಸಮಸ್ಯೆಗಳಿವೆ. ಅದು ಆತ್ಮವಿಮರ್ಶೆಯಿಲ್ಲದ 'ಸ್ವ'ವನ್ನು ಬೆಳೆಸುವ ಅಪಾಯಗಳಿಂದ ಕೂಡಿದೆ. ಹೀಗಾಗಿ 'ಜನರೊಂದಿಗೆ ನಾವು ಬೆರೆಯುತ್ತೇವೆ, ಅವರ ಸಂಸ್ಕೃತಿಯನ್ನು ಶೋಧಿಸು ತ್ತೇವೆ' ಎನ್ನುವುದೇ ಒಂದು ಸಂಭ್ರಮವಾಗಿ, ಜನರ ಆಚರಣೆ ನಂಬಿಕೆಗಳನ್ನು ಅವಿಮರ್ಶಾ ತ್ಮಕ ಕೊಂಡಾಡುವ ಭಯದಿಂದ ತಪ್ಪಿಸಿಕೊಳ್ಳಬೇಕಿದೆ. ಹಾಗೆ ತಪ್ಪಿಸಿಕೊಂಡು ಕೆಲಸ ಮಾಡಬಲ್ಲ ಛಾತಿಯುಳ್ಳ ಅನೇಕ ವಿದ್ವಾಂಸರನ್ನು ಕನ್ನಡ ವಿಶ್ವವಿದ್ಯಾಲಯ ತನ್ನಲ್ಲಿ ಉಳಿಸಿ ಕೊಳ್ಳಲಾರದೇ ಹೋಯಿತು. ವಿಶ್ವವಿದ್ಯಾಲಯವು ಅನೇಕ ಬಗೆಯ ಕಾಮೆಂಟುಗಳನ್ನು ಕಳೆದ ಹತ್ತು ವರುಷಗಳಲ್ಲಿ ತೆರೆದೆದೆಯನ್ನು ಇಟ್ಟುಕೊಂಡೇ ಕೇಳಿಸಿಕೊಂಡಿದೆ. ಸಮಸ್ಯೆಯೆಂದರೆ, ಕಾಮೆಂಟು ಮಾಡುವ ಎಲ್ಲರೂ ತಂತಮ್ಮ ಕಲ್ಪನೆಯ ವಿಶ್ವವಿದ್ಯಾಲಯವನ್ನೇ ಮಂಡಿಸು ತ್ತಾರೆ. ಇದು ಸಹಜ. ಆದರೆ ಬರುವ ಕಾಮೆಂಟುಗಳಿಗೆಲ್ಲ ತನ್ನನ್ನು ಬದಲಿಸಿ ಕೊಳ್ಳುತ್ತಾ ಹೋದರೆ ಅದು ಎಲ್ಲಿಗೆ ಮುಟ್ಟಬಹುದು? ಕನ್ನಡ ವಿಶ್ವವಿದ್ಯಾಲಯದ ಉಪಯುಕ್ತತೆಯ ಬಗ್ಗೆ ಅನೇಕರು ಪ್ರಶ್ನೆ ಕೇಳುತ್ತಾರೆ. ಈ ಪ್ರಶ್ನೆ ಕೂಡ ಒರಟಾದುದು. ಅನೇಕ ಕೆಲಸಗಳ ಉಪಯುಕ್ತತೆ ತಕ್ಷಣ ಸಾಬೀತು ಪಡಿಸಲು ಬರುವುದಿಲ್ಲ. ಪಠ್ಯಪುಸ್ತಕದ ಉಪಯಪಕ್ತತೆಗಿಂತ ಜನಪದ ಮಹಾಕಾವ್ಯಗಳ ಪ್ರಕಟನೆಯ ಉಪಯುಕ್ತತೆ ಭಿನ್ನವಾದುದು. ಆದರೂ ನನಗೆ ಯಾವ ಶೈಕ್ಷಣಿಕ ಅರ್ಹತೆಗಳಿಲ್ಲದೆಯೂ ಯಾರೋ ಒಬ್ಬ ರೈತ, ಒಬ್ಬ ಕಲಾವಿದ, ತನ್ನ ಅನುಭವ ತಿಳುವಳಿಕೆಗಳನ್ನು ಮಂಡಿಸಿ ಡಿಲಿಟ್ ಪಡೆದಾಗ, ಯಾರೋ ಮಂಡ್ಯ ಜಿಲ್ಲೆಯ ಹಳ್ಳಿಯ ಒಬ್ಬ ಪಿಯುಸಿ ವಿದ್ಯಾರ್ಥಿನಿ 'ನಿಮ್ಮ ವಿಶ್ವವಿದ್ಯಾಲಯ ಸಿದ್ಧಪಡಿಸಿದ ಪಠ್ಯಪುಸ್ತಕ ವಿಲ್ಲದಿದ್ದರೆ ನಾನು ಪಾಸಾಗುತ್ತಿರಲಿಲ್ಲ' ಎಂದು ಬರೆದಾಗ ಆನಂದವಾಗುತ್ತದೆ.

### ಎದುರಿಸಬೇಕಾದ ಸವಾಲು

ಜಾಗತೀಕರಣದ ಓಟದಲ್ಲಿ ಕನ್ನಡವನ್ನು ಒಳಗೊಂಡಂತೆ ಎಲ್ಲ ಜನಭಾಷೆಗಳು ಹುಟ್ಟಿದೆ. ಆದರೆ ಇದೇ ಹೊತ್ತಲ್ಲಿ ವಿಚಿತ್ರ ಆತಂಕವನ್ನು ಎದುರಿಸುತ್ತಿವೆ. ಇದು ಎಲ್ಲರ ಮೇಲೂ ಬಂದಿರುವ ಆಪತ್ತು ಅಥವಾ ಸವಾಲು. ಈ ಆತಂಕಕ್ಕೆ ಕಾರಣ ಮಾತ್ರ ಇನ್ನು ಸ್ಪಷ್ಟವಾಗಿಲ್ಲ. ಇಂತಹ ಸಂಕ್ರಮಣದ ಹೊತ್ತಲ್ಲಿ ವಿಶ್ವವಿದ್ಯಾಲಯವು ಕನ್ನಡ ಭಾಷೆಯು ಶಿಕ್ಷಣ ಆಡಳಿತ,

ಸಾಹಿತ್ಯ ಮುಂತಾದ ಬದುಕಿನ ಅನೇಕ ಕ್ಷೇತ್ರಗಳಲ್ಲಿ ಪ್ರವೇಶಿಸಲು ಹಾಗೂ ಆಧುನಿಕವಾದ ಬೆಳವಣಿಗೆಗಳನ್ನು ಅರ್ಥಪೂರ್ಣವಾಗಿ ಜೀರ್ಣಿಸಿಕೊಳ್ಳಲು ಯತ್ನಿಸುತ್ತಿದೆ. ಜಾಗತೀಕರಣದ ಒತ್ತಡದಿಂದ ಉನ್ನತ ಶಿಕ್ಷಣಕ್ಕೆ ಸರಕಾರ ಪ್ರಾಮುಖ್ಯತೆ ಕಡಿಮೆ ಮಾಡಿದೆ. ಧನ ಸಹಾಯವನ್ನು ಕಡಿಮೆ ಮಾಡುವ ಸರಕಾರ ಕನ್ನಡಿಗರ ಸರಕಾರ ಯಾಕಾಗಬೇಕು? ಅಥವಾ ಹಣಕಾಸು ಬಿಕ್ಕಟ್ಟು ಹಾಗೂ ಸಂಶೋಧನೆಗೆ ಆತಂಕದ ಗಂಟು ಹಾಕುವುದು ಸರಿಯೇ? ಈ ನಾಡಿನಲ್ಲಿ ಸಾಂಸ್ಥಿಕ ಹಣಕಾಸಿನ ನೆರವಿಲ್ಲದೆ ಎಷ್ಟೊಂದು ಜನ ಸೇವೆ ಸಲ್ಲಿಸುತ್ತಿಲ್ಲ? ಜನಪರವಾಗಿ ಚಿಂತಿಸಿದ ಕೆಲಸ ಮಾಡಿದ ನೂರಾರು ವಿದ್ವಾಂಸರು, ಪ್ರಭುತ್ವದ ವಿರೋಧಿಗಳಾಗಿದ್ದಾರೆ ಹಾಗೂ ಪ್ರಭುತ್ವದ ಹಣ ಸಹಕಾರ ನೆಮ್ಮದವರಾಗಿದ್ದಾರೆ. ಸಮೃದ್ಧ ಕರ್ನಾಟಕದ ಕನಸು ಕಾಣುವ ವಿಶ್ವವಿದ್ಯಾಲಯವೊಂದು ಹಣ ಉಳ್ಳವರಿಗೆಲ್ಲಾ ಕೈಯೊಡ್ಡಿಕೊಂಡು ಹೋಗುವುದು ಸರಿಯೇ? ಈ ಅವಲಂಬನೆ ಎಲ್ಲಿಗೆ ಕರೆದೊಯ್ಯಬಹುದು? ಒಂದು ವೇಳೆ ಸರ್ಕಾರವು ಧನ ಸಹಾಯ ಕಡಿಮೆ ಮಾಡದು ಎಂದುಕೊಂಡರೂ, ಸರ್ಕಾರವು ನಾಡಿನ ಬಹುಸಂಖ್ಯಾತ ಜನರ ಬದುಕನ್ನು ನಿರ್ಣಾಯಕವಾಗಿ ಕೆಟ್ಟದಿಸೆಗೆ ಬದಲಿಸಿಬಿಡಬಲ್ಲ ತೀರ್ಮಾನ ಕೈ ಗೊಂಡಾಗ, ಏನೂ ಪ್ರತಿರೋಧ ಮಾಡಲಾಗದೆ, ಆ ಜನರ ಭಾಷೆ ಸಂಸ್ಕೃತಿ ಬಗ್ಗೆ ಸಂಶೋಧನೆ ಮಾಡುವುದು ವ್ಯಂಗ್ಯವಲ್ಲವೇ? 'ಒಬ್ಬರ ಹಣ' -ಇನ್ನೊಬ್ಬರ ಪರವಾದ ಚಿಂತನೆ ಇವು ಎಷ್ಟು ದೂರ ಜತೆಯಲ್ಲಿ ಹೋಗಬಲ್ಲವು? ಈ ವೈರುಧ್ಯ ಬಗೆಹರಿಯಲಾಗದ್ದೇನು? ನಿಜ ವಾಗಿಯೂ ಜನತೆಗೆ ಬದ್ಧವಾದ ಸಂಶೋಧನೆ ಮಾಡುವುದು ಎಂದರೆ ಹೇಗೆ ಮತ್ತು ಏನು? ಇವು ಕಾಡುತ್ತಿವೆ.

ಸರಕಾರ, ಯುಜಿಸಿ ಸಮಿತಿ ಎಲ್ಲವೂ ಆಕ್ಷೇಪಣೆಯ ದನಿಯಲ್ಲಿ ಹೇಳುತ್ತಿರುವ ಮಾತೆಂದರೆ - 'ಕನ್ನಡ ವಿಶ್ವವಿದ್ಯಾಲಯ ಬದಲಾದ ಸನ್ನಿವೇಶಕ್ಕೆ ತಕ್ಕಂತೆ ತನ್ನನ್ನು ಇನ್ನೂ ಸಿದ್ಧಗೊಳಿಸಿಕೊಂಡಿಲ್ಲ. ತನ್ನ ಸಂಪನ್ಮೂಲ ತಾನೇ ರೂಢಿಸಿಕೊಳ್ಳುತ್ತಿಲ್ಲ'. ಸಂದರ್ಭಕ್ಕೆ ತಕ್ಕಂತೆ ಬದಲಾಗುವುದು ಎಂದರೇನು? ಬದಲಾದ ತಂತ್ರಜ್ಞಾನಕ್ಕೆ ತಕ್ಕಂತೆ ಎಂದರೆ ಒಂದು ಅರ್ಥ; ಬದಲಾದ ಜಾಗತಿಕ ಸನ್ನಿವೇಶಕ್ಕೆ ತಕ್ಕಂತೆ ಎಂದರೆ ಇನ್ನೊಂದು ಅರ್ಥ. ಈ ಎರಡನೇ ಅರ್ಥವು ಮಲಪನಗುಡಿ ಗಾಳೆಮ್ಮನಗುಡಿಯ ಜನರ ಮೂಲಕ ಲೋಕವನ್ನು ನೋಡಲು ನಿರಾಕರಿಸುವುದಾಗಿರಬಹುದು ಎಂಬುದೇ ಆತಂಕ. ಹೀಗಾಗಿ ಬಹಳ ಸಲ ನನಗನಿಸಿದೆ - ಕನ್ನಡ ವಿಶ್ವವಿದ್ಯಾಲಯ ಪ್ರವಾಹದ ವಿರುದ್ಧ ಈಜುತ್ತಿರುವ ಒಂದು ಸಂಸ್ಥೆಯಿರಬಹುದು ಎಂದು. ಭಾಷೆ ಸಂಸ್ಕೃತಿಗಳ ಏಕರೂಪೀಕರಣಕ್ಕೆ ಪ್ರೇರಿಸಬಲ್ಲ ಜಾಗತೀಕರಣದ ಹೊತ್ತಲ್ಲಿ, ಕನ್ನಡದಂತಹ ಜನಭಾಷೆಯ ಮೂಲಕ ಆ ಪ್ರದೇಶದ ಸಂಸ್ಕೃತಿಯ ಶೋಧಕ್ಕೆಂದು ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಯಾಗಿರುವುದು ಒಂದು ವ್ಯಂಗ್ಯವಿರಬಹುದೇ ಎಂಬ ಅನುಮಾನವೂ ಬರುತ್ತದೆ. ಇದು ಆರಂಭವಾದ ವರ್ಷವು (೧೯೯೧) ಭಾರತ ಸರ್ಕಾರವು ಅಧಿಕೃತವಾಗಿ ಜಾಗತೀಕರಣ ಪ್ರಕ್ರಿಯೆಗೆ ಸಹಿ ಮಾಡಿದ ವರ್ಷ ಎಂಬುದು ಆಕಸ್ಮಿಕ ವಿರಲಿಕ್ಕಿಲ್ಲ. ಒಂದು ನಾಡು ತನ್ನ ಸಾಂಸ್ಕೃತಿಕ ಗುರುತು - ಚರಿತ್ರೆ- ಪರಂಪರೆಗಳನ್ನು

ಸಂರಕ್ಷಿಸಬೇಕು ಎನ್ನುವ ಮನೋಭಾವದಲ್ಲಿ (ಅಂಥ ಸಂರಕ್ಷಣೆ ವಾಸ್ತವದಲ್ಲಿ ಸಾಧ್ಯವಿಲ್ಲ,) ಸಂಶೋಧನೆ ಮಾಡುವುದಕ್ಕೆ ನಾವು ತೊಡಗುವ ದಿನಗಳಲ್ಲೆ, ಇದೇ ಈ ಭಾಷೆ 'ಸಂಸ್ಕೃತಿ ಪರಂಪರೆಗಳ ನಿರ್ಮಾತೃಗಳಾದ ಜನರ ಬದುಕೇ ಹೊಸದೊಂದು ಅರಿಯದ ಆಪತ್ತಿಗೆ ಬಿದ್ದು ಬದಲಾವಣೆಗೊಳ್ಳಲು ಆರಂಭಿಸಿದೆ. ಒಂದು ಜೀವಿಯನ್ನು ಎನ್‌ಡೇಂಜರ್ ಸ್ಥಿತಿಗೆ ತಂದು, ಅದು ಕಣ್ಮರೆಯಾಗುವ ಮುನ್ನ ಅದರ ಜೀವನ ಕ್ರಮ ದಾಖಲಿಸಿ ಎಂದ ಹಾಗೆ, ನಮ್ಮ ಸಂಶೋಧನೆ ಆಗುತ್ತಿದೆಯೇ ಎಂಬ ಪ್ರಶ್ನೆ ಕಾಡುತ್ತಿದೆ. ಜನರೇ ಕಷ್ಟಕ್ಕೆ ಬಿದ್ದಾಗ ಅವರ ಸಂಸ್ಕೃತಿ ಅಧ್ಯಯನ ಎಂದರೇನು? ಅದಕ್ಕೆಂದೇ ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತೇ? ಒಂದು ಜನಸಮುದಾಯದ ಬದುಕು ಹಾಗೇ ಯಾರೋ ಕೆಲವರ ಯೋಜನೆಯಿಂದ ಅವರಿಗಿಷ್ಟವಾದ ರೂಪಕ್ಕೆ ಬದಲಾಗಿ ಬಿಡುತ್ತದೆಯೇ?

ಮಾರುಕಟ್ಟೆ ಅರ್ಥಶಾಸ್ತ್ರವು ಒಂದು ಪರಮಮೌಲ್ಯವಾಗಿ ಬೆಳಯುತ್ತಿರುವ ಈ ದಿನಗಳಲ್ಲಿ, ದೇಶೀಯ ಭಾಷೆಗಳಲ್ಲಿ ಅವುಗಳ ಸಂಸ್ಕೃತಿಗಳ ಅಧ್ಯಯನಗಳ ಈ ಪ್ರಶ್ನೆಗಳನ್ನು ಎದುರಿಸಲೇಬೇಕಾಗಿದೆ. ಎಂತಲೇ ನಮಗೆ ಸಂಶೋಧನೆ ಎಂದರೆ, ಕೇವಲ ಸಂಗ್ರಹ ಅಥವಾ ವಿಶ್ಲೇಷಣೆಗಳಲ್ಲ, ಸಮೃದ್ಧ ಕರ್ನಾಟಕದ ಕನಸಿಗೆ ತಕ್ಕನಾದ ರಾಜಕೀಯ ಪ್ರಜ್ಞೆಯನ್ನು ಬೆಳೆಸುವುದು ಕೂಡ ಎಂದು ಮನವರಿಕೆಯಾಗುತ್ತಿದೆ. ಈ ಕೆಲಸವೇ ನಿಜವಾದರೆ, ಸಂಶೋಧನೆಯೊಳಗೆ ಕೇವಲ ಗತಕಾಲದ ಕಥನವಿರದು. ಬದಲಿಗೆ ಚರಿತ್ರೆಯ ಸಮ್ಮುಖದಲ್ಲಿ ವರ್ತಮಾನದ ವಿದ್ಯಮಾನಗಳ ಮೇಲೆ ವಿಶ್ಲೇಷಣೆ ಇರುವುದು; ಇದರೊಳಗೆ ಸಮೃದ್ಧ ಕರ್ನಾಟಕದ ಕನಸಿನ ಪರಿಕಲ್ಪನೆಯನ್ನು ಸೃಷ್ಟಿಸುವಿಕೆಯೂ ಇರುವುದು. ಇಂತಹದನ್ನು ನಾವು ಎಷ್ಟರಮಟ್ಟಿಗೆ ಮಾಡಿದ್ದೇವೆ-ಮಾಡುತ್ತಿದ್ದೇವೆ -ಇದರ ಪರೀಕ್ಷೆಯನ್ನು ಪ್ರಜ್ಞಾವಂತ ಕನ್ನಡಿಗರು ಮಾಡಬೇಕು. ಅವರು ಪಾಸು ಮಾಡಿದರೆ, ಉಳಿದ ಆತಂಕಗಳನ್ನು ಎದುರಿಸುವುದೇನು ಕಷ್ಟವಲ್ಲ.

●

# ಈ ಸಂಚಿಕೆ ಲೇಖಕರು

೧. ಡಾ. ಅನಿಲ ಕಮತಿ, ವೈದ್ಯಾಧಿಕಾರಿ, ಯಕ್ಸಂಬಾ, ೫೯೧೨೪೪ (ಬೆಳಗಾವಿ ಜಿಲ್ಲೆ)
೨. ಅಬ್ದುಲ್ ರಶೀದ್, ಆಕಾಶವಾಣಿ, ಮಂಗಳೂರು-೫೭೫೦೦೧
೩. ಡಾ. ಅಮರೇಶ ನುಗಡೋಣಿ, ಅಧ್ಯಾಪಕರು, ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪. ಡಾ. ಅರವಿಂದ ಮಾಲಗತ್ತಿ, ನಿರ್ದೇಶಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-೫೭೦೦೦೬
೫. ಆನಂದ ಝುಂಜರವಾಡ, 'ಸ್ನೇಹದೀಪ', ಆನಂದ ನಗರ, ಮುಧೋಳ-೫೮೭೩೧೩
೬. ಉದಯಕುಮಾರ್ ಇರ್ವತ್ತೂರು, ಎಫ್‌ಎಪಿ ಸಂಶೋಧಕರು, ಬಿಜಿನೆಸ್ ಅಡ್ಮಿನಿಸ್ಟ್ರೇಶನ್ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ-೫೭೪೧೯೯
೭. ಡಾ. ಒಡೆಯರ ಡಿ. ಹೆಗಡೆ, ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಸರ್ ಎಂವಿ ಸ್ನಾತಕೋತ್ತರ ಕೇಂದ್ರ, (ಮೈಸೂರು ವಿವಿ) ಮಂಡ್ಯ-೫೭೧೪೦೨
೮. ಕಯ್ಯಾರ ಕಿಞ್ಞಣ್ಣರೈ, Peradala, KASARAGOD-670551
೯. ಡಾ. ಬಿ ಕೃಷ್ಣಮೂರ್ತಿ, ೧೧ನೇ ಕ್ರಾಸು, ಸಪ್ತಾಪುರ ಧಾರವಾಡ-೫೮೦೦೦೧
೧೦. ಕೋ ಚೆನ್ನಬಸಪ್ಪ, ೧೨೭, ವೆಸ್ಟ್ ಆಫ್ ಕಾರ್ಡ್ ರಸ್ತೆ, ರಾಜಾಜಿನಗರ, ಬೆಂಗಳೂರು-೫೬೦೦೮೬
೧೧. ಕೆ ಟಿ ಗಟ್ಟಿ, 'ವನಶ್ರೀ' ಉಜಿರೆ-೫೭೪೨೪೦ (ದಕ)
೧೨. ಟಿ ಆರ್ ಚಂದ್ರಶೇಖರ, ಮುಖ್ಯಸ್ಥರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೩. ಡಾ. ಸಿ ಆರ್ ಚಂದ್ರಶೇಖರ್, ಪ್ರಾಧ್ಯಾಪಕ, ಮನೋರೋಗ ವಿಜ್ಞಾನ ವಿಭಾಗ, ನಿಮ್ಹಾನ್ಸ್ ಬೆಂಗಳೂರು-೫೬೦೦೨೯
೧೪. ಚಂದ್ರಶೇಖರ ತಾಳ್ಯ, ತರ್ಕಶಾಸ್ತ್ರ ಉಪನ್ಯಾಸಕ, ಕೆ ಎನ್ ಪಿಯು ಕಾಲೇಜು, ಹೊಳಲ್ಕೆರೆ-೫೭೭೫೨೬
೧೫. ಚಂದ್ರಕಾಂತ ಪೋಕಳೆ, ಜ್ಯೂನಿಯರ್ ಕಾಲೇಜು, ಬೇಡಕಿಹಾಳ-೫೯೧೨೧೪
೧೬. ಡಾ. ಚನ್ನೇಶ್, ವಿಜ್ಞಾನಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಮಂಡಳಿ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಬೆಂಗಳೂರು-೫೦೦೦೧೨

೧೭. ಡಿ ಎಸ್ ಚೌಗಲೆ, ಗುರುರಾಜ ನಿವಾಸ, ಸೆಕ್ಟರ್ ೮, ಪ್ಲಾಟ ನಂ.೧೭೭೯, ಸತ್ಯಮಾರ್ಗ, ಆಂಜನೇಯ ನಗರ, ಬೆಳಗಾವಿ-೫೯೦೦೧೬

೧೮. ಜಂಬಣ್ಣ ಅಮರಚಿಂತ, ೧೦-೫-೯೭, ಮೊಕ್ತಲಪೇಟೆ, ರಾಯಚೂರು- ೫೮೪೧೦೨

೧೯. ಎಸ್ ದುಂಡಿರಾಜ, Senor Manager, Corporation Bank, Eagle Flight, III Floor, AK Road, Andheri (E), MUMBAI-400043

೨೦. ನಾಗೇಶಹೆಗಡೆ, ಸಹಾಯಕ ಸಂಪಾದಕ, ಪ್ರಜಾವಾಣಿ, ೭೫, ಮಹಾತ್ಮಗಾಂಧಿ ರಸ್ತೆ, ಬೆಂಗಳೂರು-೫೬೦೦೦೧

೨೧. ಡಾ. ಎಸ್ ಜೆ ನಾಗಲೋಟಿಮಠ, ನಿರ್ದೇಶಕರು, ಬವಿ ಸಂಘದ ವೈದ್ಯಕೀಯ ಕಾಲೇಜು, ಬಾಗಲಕೋಟ

೨೨. ಪಿ ಎಸ್ ಪಾಟೀಲ, 'ಸತ್ಯಾಶ್ರಯ', ಅಕ್ಕಮಹಾದೇವಿ ಕ್ರಾಸ್, ಬಿಜಾಪೂರ-೫೮೬೧೦೧

೨೩. ಫಕೀರ್ ಮುಹಮ್ಮದ್ ಕಟ್ಪಾಡಿ, ಭಾರತೀಯ ಸ್ಟೇಟ್ ಬ್ಯಾಂಕ್, ಲೋಕಲ್ ಹೆಡ್ ಆಫೀಸ್, ೧ನೇಮಹಡಿ, ೬೫, ಸೆಂಟ್ ಮಾರ್ಕ್‌ರಸ್ತೆ, ಬೆಂಗಳೂರು-೫೬೦೦೦೧

೨೪. ಕೆ ಫಣಿರಾಜ, ಸಿ-೧(ಎ), ಕೈಲಾಸ ಮನೆಗಳು, ಮಣಿಪಾಲ-೫೭೬ ೧೧೯

೨೫. ಡಾ. ಬಂಜಗೆರೆ ಜಯಪ್ರಕಾಶ, ರಂಗನಾಥ ಬಡಾವಣೆ, ಹಾರೋಹಳ್ಳಿ-೫೬೨೧೧೨ (ಬೆಂಗಳೂರು ಗ್ರಾಮಾಂತರ)

೨೬. ಬಸವರಾಜ ಕುಕ್ಕರಹಳ್ಳಿ, ಎಂಐಜಿ ೭೨, ಇ ಅಂಡ್ ಎಫ್ ಬ್ಲಾಕ್, ರಾಮಕೃಷ್ಣನಗರ, ಮೈಸೂರು-೫೭೦೦೨೩

೨೭. ಬಾಲಸುಬ್ರಹ್ಮಣ್ಯ ಕಂಜರ್ಪಣೆ, ವಕೀಲರು, 'ಸಿರಿ' ಬ್ರಾಹ್ಮಿನ್ ವ್ಯಾಲಿ, ಮಡಿಕೇರಿ-೫೭೧೨೦೧

೨೮. ಬಿದರಹಳ್ಳಿ ನರಸಿಂಹಮೂರ್ತಿ, 'ಅನಿಮಿಷ', ದುರ್ಗಿಗುಡಿ, ಹೊನ್ನಾಳಿ-೫೭೭೨೧೭

೨೯. ಎಸ್ ಮಂಜುನಾಥ್, ೩ನೇಕ್ರಾಸ್, ರಾಮಬ್ಲಾಕ್, ಕೆಆರ್ ನಗರ-೫೭೧೬೦೨

೩೦. ಡಾ. ವಿ ಕೆ ಮಣಿಮಾಲಿನಿ, 12/C/3, University Quarters, Vidyanagari, MUMBAI-400098

೩೧. ಮಹದೇವ ಶಂಕನಪುರ, ನಂ. ೧-೯೧೯, ಜಿಪಿ ಮಲ್ಲಪ್ಪಪುರಂ, ಹುಚ್ಚಾಲಮ್ಮಗುಡಿ ಎದುರು ಹೊಸಬಡಾವಣೆ, ಕೊಳ್ಳೇಗಾಲ-೫೭೧೪೪೦

೩೨. ಎಂ ಆರ್ ಎನ್ ಮೂರ್ತಿ, ಮಾಲಿಕ್ಯುಲರ್ ಬಯೋಫಿಸಿಕ್ಸ್ ಶಾಖೆ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು-೫೬೦೦೧೨

೩೩. ಸ ರಘುನಾಥ, ಬಾಲಾಂಜನೇಯಸ್ವಾಮಿ ಗುಡಿಯ ಪೂರ್ವ, ರಾಮಕೃಷ್ಣ ಬಡಾವಣೆ, ಶ್ರೀನಿವಾಸಪುರ-೫೬೩೧೩೫

೩೪. ರಾಘವೇಂದ್ರಪಾಟೀಲ, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ-೫೭೭೫೩೧ (ಚಿತ್ರದುರ್ಗ ಜಿಲ್ಲೆ)

೩೫. ಡಾ. ರಾಜಾರಾಮ ತೋಳ್ಪಾಡಿ, ರಾಜ್ಯಶಾಸ್ತ್ರ ಪ್ರಾಧ್ಯಾಪಕರು, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ-೫೭೪೧೯೯

೩೬. ಡಾ. ಸಿ ಎನ್ ರಾಮಚಂದ್ರನ್, ೬೯೭, ಪ್ರೇಮಸಾಗರ್ ಅಪಾರ್ಟ್‌ಮೆಂಟ್, ಮಣ್ಣುಗುಡ್ಡೆ, ಮಂಗಳೂರು-೫೭೫೦೦೩

೩೭. ಬಿ ಆರ್ ಲಕ್ಷ್ಮಣರಾವ್, ಮಾರುತಿ ಸ್ಟುಡಿಯೋ, ಕೆ ಆರ್ ಬಡಾವಣೆ, ಚಿಂತಾಮಣಿ-೫೬೩೧೨೫

೩೮. ಡಾ. ಕೆ ಲಕ್ಷ್ಮೀನಾರಾಯಣ ಕಡೆಕಾರ್, Dept. of Sociology, University of Hyderabad, HYDERABAD-500034

೩೯. ವಸುಮತಿ ಉಡುಪ, ೪ನೇ ಕ್ರಾಸ್ ಎ, ಗಾಂಧಿನಗರ ಬಡಾವಣೆ, ಶಿವಮೊಗ್ಗ-೫೭೭೨೦೧

೪೦. ಡಾ. ಜಿ ಬಿ ವಿಸಾಜಿ, ತಹಸೀಲ ಕಛೇರಿ ಹತ್ತಿರ, ಭಾಲ್ಕಿ-೫೮೫೩೨೮

೪೧. ಕುಂ ವೀರಭದ್ರಪ್ಪ, ಲೇಖಕರು, ಕೊಟ್ಟೂರು-೫೮೩ ೧೩೪ (ಬಳ್ಳಾರಿ ಜಿಲ್ಲೆ)

೪೨. ಡಾ. ಎಚ್ ಎಸ್ ವೆಂಕಟೇಶಮೂರ್ತಿ, ನಂ.೩೦, 'ಸಂಕಲ್ಪ', ಪುಷ್ಪಗಿರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫

೪೩. ವ್ಯಾಸರಾಯ ಬಲ್ಲಾಳ, 'ಉತ್ತರಾಯಣ' ೧೦೬೪, ಕುಮಾರಸ್ವಾಮಿ ಲೇಔಟ್, ೧ನೇಹಂತ, ೫೦ಅಡಿ ರಸ್ತೆ, ಬೆಂಗಳೂರು-೫೬೦೦೭೮

೪೪. ಡಾ. ಶರತ್ ಅನಂತಮೂರ್ತಿ, ರೀಡರ್, ಭೌತಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬

೪೫. ಡಾ. ಬಿ ಎಸ್ ಶೈಲಜ, ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು-೫೬೦೦೦೧

೪೬. ಶ್ರೀನಿವಾಸ ಜೋಕಟ್ಟೆ, ಅಂಚೆ ಜೋಕಟ್ಟೆ, ವಯಾ ಬಜ್ಪೆ-೫೭೪೧೭೩ (ದಕ)

೪೭. ಕೆ ಸತ್ಯನಾರಾಯಣ, 503/1, Central Revenue Quarters, 15th Main Road, Annanagar, CHENNAI-600040

೪೮. ಡಾ. ಜೆ ಎಸ್ ಸದಾನಂದ, ಮುಖ್ಯಸ್ಥರು, ರಾಜ್ಯಶಾಸ್ತ್ರವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ-೫೭೭ ೪೫೧

೪೯. ಸವಿತಾ ನಾಗಭೂಷಣ, ಅಂಚೆ ಅಧೀಕ್ಷಕರ ಕಛೇರಿ, ಚಿತ್ರದುರ್ಗ-೫೭೭೫೦೧

೫೦. ಡಾ. ಸಿಪಿಕೆ, ೨೨೬೫,'ಭಾರತಿ' ೬ನೇ ಕ್ರಾಸ್, ವಿನಾಯಕ ನಗರ, ಮೈಸೂರು-೫೭೦೦೧೨

೫೧. ಪ್ರೊ. ಎಸ್ ಜಿ ಸಿದ್ಧರಾಮಯ್ಯ, 'ಹೊಂಬೆಳಕು' ನಲಂದಶಾಲೆ ಪಕ್ಕ, ರಾಘವೇಂದ್ರನಗರ, ತುಮಕೂರು-೫೭೨೧೦೨

೫೨. ಎಸ್ ಸುಂದರ್, ಆಟೋಮೊಬೈಲ್ ಅಧ್ಯಾಪಕರು, ಡಿವಿಎಸ್ ಪದವಿಪೂರ್ವ ಕಾಲೇಜು, (ಪಾಲಿಟೆಕ್ನಿಕ್ ವಿಭಾಗ) ಶಿವಮೊಗ್ಗ-೫೭೭೨೦೧

೫೩. ಡಾ. ಹರಿಕೃಷ್ಣಭರಣ್ಯ, Dept. of Kannada, Madhurai Kamaraja University, MADHURAI-625021

# ಕನ್ನಡ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯವು, ತಾನೊಂದು ಸಂಶೋಧನ ಸಂಸ್ಥೆಯಾಗಿ ಪ್ರಕಟಿಸುತ್ತಿರುವ ಹಲವು ನಿಯತಕಾಲಿಕೆಗಳಲ್ಲಿ, 'ಕನ್ನಡ ಅಧ್ಯಯನ'ವು ಒಂದು ವಿದ್ವತ್ ಪತ್ರಿಕೆಯಾಗಿದೆ. ಇದು ಕರ್ನಾಟಕದ ಅಧ್ಯಯನಗಳಿಗೆ ಮೀಸಲಾದ ಪತ್ರಿಕೆ. ಕರ್ನಾಟಕದ ಜನ, ಸಮಾಜ, ಭಾಷೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಧರ್ಮ, ಆರ್ಥಿಕತೆ, ರಾಜಕಾರಣ, ಪರಿಸರ, ಕಲೆ -ಮುಂತಾದ ಕ್ಷೇತ್ರಗಳಲ್ಲಿ ನಡೆಯುವ ಚರ್ಚೆ-ಶೋಧಗಳು ಇಲ್ಲಿ ಪ್ರಕಟವಾಗುತ್ತವೆ. 'ಕನ್ನಡ ಅಧ್ಯಯನ'ವು ಏಕಕಾಲಕ್ಕೆ ನಾಡಿನ ಗತದ ತಡಕಾಟವನ್ನು, ವರ್ತಮಾನದ ಮುಖಾಮುಖಿಯನ್ನು ಹಾಗೂ ಭವಿಷ್ಯದ ಕನಸು ಕಟ್ಟುವಿಕೆಯನ್ನು ಮಾಡಬಯಸುತ್ತದೆ. ಈ ಮೂಲಕ ವಿದ್ವಾಂಸರಿಗೆ ಸಾಂಸ್ಕೃತಿಕ ವೇದಿಕೆಯಂತೆಯೂ, ಓದುಗರಿಗೆ ಬೌದ್ಧಿಕ ಸಂಗಾತಿಯಂತೆಯೂ ಕೆಲಸ ಬೇಕೆಂಬುದು ಇದರ ಹಂಬಲ.

'ಕನ್ನಡ ಅಧ್ಯಯನ'ವು ಸೊಲ್ಲು, ಲೇಖನ, ಹಿಂದಣ ಹೆಜ್ಜೆ, ಕನ್ನಡಿ, ಎಲೆಮರೆ, ಮುಖಾಮುಖಿ, ಹೊಳಹು, ಪುಸ್ತಕ ಪರಿಚಯ, ಆಕರಸೂಚಿ -ಮುಂತಾದ ವಿಭಾಗಗಳಲ್ಲಿ ಬರಹಗಳನ್ನು ಒಳಗೊಂಡಿರುತ್ತದೆ. ಪತ್ರಿಕೆಯ ಪ್ರತಿ ಸಂಪುಟದಲ್ಲಿ ಮಳೆ, ಚಳಿ, ಗಾಳಿ, ಬಿಸಿಲು ಎಂಬ ಹೆಸರಿನ ನಾಲ್ಕು ಸಂಚಿಕೆಗಳು ಇರುತ್ತವೆ.

**Reg. No. 05999/23/AL/93/TL**